# ಸಾಹಿತ್ಯ ವಾರ್ಷಿಕ 1971





ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು





ಕನ್ನಡ ಅಧ್ಯಯನ ಕೇಂದ್ರದ ಪ್ರಕಟಣಮಾಲೆ 10



# ಸಾಹಿತ್ಯ ವಾರ್ಷಿಕ 1971

ಸಂಪಾದಕರು :

ಜಿ. ಎಸ್. ಶಿವರುದ್ರಪ್ಪ

ವಿಶೇಷ ಸಹಾಯ :

ಎನ್. ವಿ. ವಿಮಲ

ಸಹಕಾರ :

ಬೆಂಗಳೂರು ವಿಶ್ವವಿದ್ಯಾಲಯದ
ಗ್ರಂಥಭಂಡಾರದ ಅಧಿಕಾರಿವರ್ಗ

ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

SAHITYA VARSHIKA 1971 (Year Book of Literature, 1971)
A review of Kannada books on literature, published in 1971.
Edited by Dr. G. S. Sivarudrappa
Centre of Kannada Studies Series. No. 10
Published by the Bangalore University, Bangalore
Pp. 318 + xii. 1973

ಪ್ರಧಾನ ಸಂಪಾದಕರು: ಡಾ॥ ಜಿ. ಎಸ್. ಶಿವರುದ್ರಪ್ಪ



ಪ್ರಕಾಶಕರು :
ಕೆ. ಸಿ. ಶಿವಪ್ಪ
ಕೋ–ಆರ್ಡಿನೇಟರ್
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು



ಬೆಲೆ : ರೂ. 6=50

ಮುದ್ರಕರು :
ಡಬ್ಲ್ಯು. ಕ್ಯು. ಜಡ್ಜ್ ಪ್ರೆಸ್, ಬೆಂಗಳೂರು

## ಮೊದಲ ಮಾತು

ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟಣ ವಿಭಾಗ ಕನ್ನಡ ಮಾಧ್ಯಮದ ಆವಶ್ಯಕತೆಯನ್ನು ಪೂರೈಸುವ ಸಲುವಾಗಿ ಈಗಾಗಲೇ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿ ಪ್ರಕಟಿಸುತ್ತಿದೆ. ಇದರ ಜೊತೆಗೆ ವಿಶ್ವವಿದ್ಯಾಲಯವು ಸಾರ್ವಜನಿಕರಿಗಾಗಿ ವರ್ಷಾದ್ಯಂತವೂ ಏರ್ಪಡಿಸುವ ಪ್ರಚಾರೋಪನ್ಯಾಸಗಳನ್ನೂ, ವಿಶೇಷೋಪನ್ಯಾಸಗಳನ್ನೂ ಪುಸ್ತಕರೂಪದಲ್ಲಿ ಪ್ರಕಟಿಸುತ್ತಿದೆ. ಈ ಪಂಕ್ತಿಗೆ ಇದೀಗ ಬೆಂಗಳೂರು ವಿಶ್ವವಿದ್ಯಾಲಯದ ವಿವಿಧ ಅಧ್ಯಯನ ಶಾಖೆಗಳು ಕೈಕೊಳ್ಳುವ ವೈಯಕ್ತಿಕ ಹಾಗೂ ಸಾಮೂಹಿಕ ಸಂಶೋಧನಾತ್ಮಕ ವ್ಯವಸಾಯಕ್ಕೆ ಗ್ರಂಥರೂಪದ ಅಭಿವ್ಯಕ್ತಿಯನ್ನು ಕೊಡುವ ಕಾರ್ಯವು ಸೇರುತ್ತಿದೆ. ಇದರಿಂದಾಗಿ ವಿಶ್ವವಿದ್ಯಾಲಯದ ಒಂದೊಂದು ಅಧ್ಯಯನಶಾಖೆಯ ಅಧ್ಯಾಪಕರ ಸಂಶೋಧನಾತ್ಮಕ ಪ್ರವೃತ್ತಿಗಳಿಗೆ ತಕ್ಕಮಟ್ಟಿನ ಪ್ರೇರಣೆಯೂ ದೊರೆಯುತ್ತದೆ. ಈ ರೀತಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರ ಇಂಥ ಕೃತಿಗಳನ್ನು ಪ್ರಕಟನೆಗೆ ಸಿದ್ಧಪಡಿಸುತ್ತಿರುವುದು ಪ್ರಶಂಸನೀಯವಾಗಿದೆ. ಪ್ರತಿಯೊಂದು ವಿಭಾಗವೂ ಹೀಗೆ ತನ್ನ ವಿಭಾಗದ ಹೆಸರಿನಲ್ಲಿ ಕೃತಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟಣ ಶಾಖೆಯ ಮೂಲಕ ಹೊರತರಲು ಮುಂದೆ ಬರುವುದೆಂದು ನಂಬಿದ್ದೇನೆ.

ವಿಶ್ವವಿದ್ಯಾಲಯದ ನಿಜವಾದ ಹಿರಿಮೆ ಅದರ ಬೌದ್ಧಿಕ ಸಾಧನೆ ಹಾಗೂ ಅಭಿವ್ಯಕ್ತಿಗಳಲ್ಲಿದೆ. ಆದರೆ ಈ ಕಾರ್ಯದಲ್ಲಿ ಆತುರ ಸಲ್ಲದು ; ವಿಶ್ವವಿದ್ಯಾಲಯ ಪ್ರಕಟಿಸುವ ಕೃತಿಗಳು ಅದರ ಮತ್ತು ವಿವಿಧ ಅಧ್ಯಯನ ವಿಭಾಗಗಳ ಘನತೆಯನ್ನು ಕಾಯ್ದುಕೊಳ್ಳುವಂತಿರಬೇಕು. ಈ ಕಾರ್ಯದಲ್ಲಿ ನಾವು ಹೊರತರುವ ಕೃತಿಗಳ ಸಂಖ್ಯೆ ಮುಖ್ಯವಲ್ಲ; ಗಾತ್ರ ಮುಖ್ಯವಲ್ಲ; ಗುಣ ಮುಖ್ಯ.

ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಸಂಶೋಧನ ಸಹಾಯಕರು ಸೇರಿ ಸಿದ್ಧಪಡಿಸಿರುವ ಈ 'ಸಾಹಿತ್ಯ ವಾರ್ಷಿಕ – 1971', ಕನ್ನಡದಲ್ಲಿ 1971 ರಲ್ಲಿ ಪ್ರಕಟವಾದ ಸಾಹಿತ್ಯಕೃತಿಗಳನ್ನು ಕುರಿತ ವಿಮರ್ಶಾತ್ಮಕ ಸಮೀಕ್ಷೆಯಾಗಿದೆ. ವರ್ಷವರ್ಷವೂ ಈ ಬಗೆಯ 'ಸಾಹಿತ್ಯ ವಾರ್ಷಿಕ'ವನ್ನು ಸಿದ್ಧಗೊಳಿಸಿ ಪ್ರಕಟಿಸುವ ಈ ಯೋಜನೆ, ಕನ್ನಡ ಸಾಹಿತ್ಯ ವಿಮರ್ಶೆಯ ಬೆಳವಣಿಗೆಯಲ್ಲಿ ಮೌಲಿಕವಾದ ಪಾತ್ರವನ್ನು ವಹಿಸುವುದೆಂಬ ನಂಬಿಕೆ ಇದೆ. ಈ ಕಾರ್ಯಕ್ಕಾಗಿ ಕನ್ನಡ ಅಧ್ಯಯನ ಕೇಂದ್ರವನ್ನು ಅಭಿನಂದಿಸುತ್ತೇನೆ.

**ಎಚ್. ನರಸಿಂಹಯ್ಯ**

ಉಪಕುಲಪತಿ

ಬೆಂಗಳೂರು ವಿಶ್ವವಿದ್ಯಾಲಯ

## ಮುನ್ನುಡಿ

### ಸಾಹಿತ್ಯ ವಾರ್ಷಿಕ 1971

ಇದು 1971ನೆಯ ಸಾಲಿನಲ್ಲಿ ಪ್ರಕಟವಾದ ಸಾಹಿತ್ಯಕೃತಿಗಳ ಒಂದು ವಿಮರ್ಶಾತ್ಮಕ ಸಮೀಕ್ಷೆ. ಇದನ್ನು ನಡೆಯಿಸಿದವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಮತ್ತು ಸಂಶೋಧನ ಸಹಾಯಕರು. ಇದೊಂದು ಸಾಮೂಹಿಕ ಪ್ರಯತ್ನ.' ಈ ಪ್ರಯತ್ನ ಪ್ರತಿ ವರ್ಷವೂ ಮುಂದುವರಿಯುತ್ತದೆ. ಈಗಾಗಲೇ 'ಸಾಹಿತ್ಯ ವಾರ್ಷಿಕ 1972' ಸಿದ್ಧವಾಗುತ್ತಿದೆ. ಹೀಗೆ ಪ್ರತಿ ವರ್ಷವೂ ಕನ್ನಡದ ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಪ್ರಕಟವಾಗುವ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆಯನ್ನು ಸಿದ್ಧಪಡಿಸಿ ಪ್ರಕಟಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ಇದು ಸುಲಭವಾದ ಕಾರ್ಯವೇನಲ್ಲ. ಬಹು ಸಂಖ್ಯೆಯಲ್ಲಿ ವರ್ಷವರ್ಷವೂ ಪ್ರಕಟವಾಗುವ ಸಾಹಿತ್ಯಕೃತಿಗಳ ಜಾಡು ಹಿಡಿದು ಗುರುತಿಸುವುದು, ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವುದು ಮೊದಲನೆಯ ಕಷ್ಟ. ಅವುಗಳನ್ನು ತೀರಾ ಮುಖಾಮುಖಿಯಾಗಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಕೃತಿಗಳಿಗೆ, ಕೃತಿಕಾರರಿಗೆ ತೀರ ಸಮೀಪದಲ್ಲಿಯೆ ನಿಂತು, ಅಂದಂದಿನ ಕೃತಿಗಳನ್ನು ಅಂದಂದೇ ವಿಮರ್ಶಿಸುತ್ತೇನೆಂದು ಹೊರಡುವುದೂ ಪ್ರಿಯವಾದ ಕಾರ್ಯವೇನಲ್ಲ. ಆದರೂ ಅಗತ್ಯವಾಗಿ ಮಾಡಬೇಕಾಗಿರುವ ಕಾರ್ಯ; ತಪ್ಪೋ ಒಪ್ಪೋ, ಯಾರಾದರೂ ಮಾಡಲೇಬೇಕಾದ ಕಾರ್ಯ. ಅದನ್ನು ನಾವು ಮಾಡಲು ಹೊರಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು. ಪ್ರಯತ್ನ ಪ್ರಾಮಾಣಿಕವಾದದ್ದು – ಎಂಬುದೇ ನಮ್ಮ ಬೆಂಬಲಕ್ಕಿರುವ ಧೈರ್ಯ.

ಇದು ಆಯಾ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಪರ್ಯವಸಾನವಾಗುವ ರೂಪದ್ದಲ್ಲ; ಆಗಲೇ ಹೇಳಿರುವಂತೆ ಆಯಾ ವರ್ಷದ ಸಾಹಿತ್ಯಕೃತಿಗಳನ್ನು ಸಮೀಕ್ಷಿಸುವ ಸ್ವರೂಪದ್ದು. ಇಲ್ಲಿರುವ ಒಂದೊಂದು ಸಾಹಿತ್ಯ ಪ್ರಕಾರದ ಪರಿಶೀಲನೆಯಲ್ಲಿ ಆಯಾ ಲೇಖಕರ ಪರಿಮಿತಿಗಳನ್ನೂ, ಪರಿಶೀಲನಾ ಸಾಮರ್ಥ್ಯದ ತರತಮಗಳನ್ನೂ ಓದುಗರು ಗುರುತಿಸಬಹುದು. ಆಯಾ ವಿಭಾಗದ ಸಮೀಕ್ಷೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರು ಜವಾಬ್ದಾರರು.

ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯ ಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ 'ಸಾಹಿತ್ಯ ವಾರ್ಷಿಕ'ಗಳಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಯಾವ ಯಾವ ವರ್ಷ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ, ಸಾಹಿತ್ಯದ ಯಾವಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ, ಯಾವ ದೃಷ್ಟಿ-ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ

ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೆ ಪ್ರತಿಯೊಂದು ವರ್ಷದ ಸಾಹಿತ್ಯಿಕ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ. ಮತ್ತು ಸಾಹಿತ್ಯ ಚರಿತ್ರೆಯ ಲೇಖಕನಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ.

ಈ ಕಾರ್ಯದಲ್ಲಿ ನಾವು ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನು ಮಾತ್ರ, ಅದರಲ್ಲೂ 1971 ರಲ್ಲಿ ಮೊದಲ ಮುದ್ರಣವನ್ನು ಕಂಡ ಕೃತಿಗಳನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದ್ದೇವೆ. ಕನ್ನಡದಲ್ಲಿ ಪ್ರಕಟವಾಗುವ ವೈಜ್ಞಾನಿಕ, ಮಾನವಿಕ, ಶೈಕ್ಷಣಿಕ ಇತ್ಯಾದಿ ಬೇರೆ ಬೇರೆ ವಿಷಯಗಳನ್ನು ಪರಿಗಣಿಸಿಲ್ಲ. ಅದಕ್ಕೆ ಕಾರಣ, ಈ ಕಾರ್ಯದಲ್ಲಿ ತೊಡಗಿರುವ ನಮಗೆ ಸಾಹಿತ್ಯೇತರ ವಿಷಯಗಳನ್ನು ಕುರಿತು ಪರಿಶೀಲಿಸಲು ಅಥವಾ ವಿಮರ್ಶಿಸಲು ಸಾಮರ್ಥ್ಯವಾಗಲಿ, ಅಧಿಕಾರವಾಗಲಿ ಇಲ್ಲ. ಹೀಗಾಗಿ ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳ ಪರಿಶೀಲನೆಯನ್ನು ಈ 'ಸಾಹಿತ್ಯ ವಾರ್ಷಿಕ' ದಲ್ಲಿ ಕಾಣಬಹುದು. ಹಾಗೆಯೆ ಇಲ್ಲಿ 1971 ರಲ್ಲಿ ಪ್ರಕಟವಾದ ಎಲ್ಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನೂ ಗಮನಿಸಿದ್ದೇವೆ ಎಂದು ಹೇಳುವ ಧೈರ್ಯವಿಲ್ಲ. ಯಾಕೆಂದರೆ, ಆಯಾ ವರ್ಷ ಪ್ರಕಟವಾದ ಸಮಸ್ತ ಸಾಹಿತ್ಯಕೃತಿಗಳನ್ನೂ ಸಕಾಲದಲ್ಲಿ ಗುರುತಿಸಿ ಒಂದೆಡೆ ಕೂಡಿಸುವ ವ್ಯವಸ್ಥೆ ಸಾಧ್ಯವಾಗುತ್ತಿಲ್ಲ. ಅಲ್ಲದೆ 1971 ರಲ್ಲಿ ಪ್ರಕಟವಾದ ಎಷ್ಟೋ ಕೃತಿಗಳು 1972 ರ ವರ್ಷಾಂತ್ಯದವರೆಗೂ ಕಾರಣಾಂತರದಿಂದ ಕಾಣಲು ದೊರೆಯುವುದಿಲ್ಲ. ಆದರೂ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಭಂಡಾರದ ಅಧಿಕಾರಿಗಳು ನಮಗೆ ಒತ್ತಾಸೆಯಾಗಿ ನಿಂತು, ಸಾಧ್ಯವಾದಷ್ಟುಮಟ್ಟಿಗೆ ಆಯಾ ವರ್ಷ ಪ್ರಕಟವಾಗುವ ಕೃತಿಗಳನ್ನು ದೊರಕಿಸಿಕೊಟ್ಟಿದ್ದಾರೆ. ನಮ್ಮ ಕೋರಿಕೆಯ ಮೇಲೆ ಪ್ರಜಾವಾಣಿ ಹಾಗೂ ಸುಧಾ ಪತ್ರಿಕೆಯವರು, ಪ್ರತಿವಾರದ 'ಸಾದರ ಸ್ವೀಕಾರ' ವಿಭಾಗದಲ್ಲಿ, ಸ್ವೀಕಾರವಾದ ಕೃತಿಗಳು ಪ್ರಕಟವಾದ ವರ್ಷವನ್ನು ಕಾಣಿಸಿ, ಈ ಒಂದು ಯೋಜನೆಯಲ್ಲಿ ಸಹಕರಿಸಿದ್ದಾರೆ. ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಆಗಾಗ ಬಂದ ಪುಸ್ತಕ ವಿಮರ್ಶೆಯೂ ಸಹ ನಮ್ಮ ಈ ಪರಿಶೀಲನೆಗೆ ನೆರವಾಗಿದೆ. ಹೀಗೆ ಲೇಖಕರ, ಪ್ರಕಾಶಕರ, ವಿಮರ್ಶಕರ, ಪತ್ರಿಕೆಗಳ ಮತ್ತು ಗ್ರಂಥಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂಥ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ನಮಗೆ ತಿಳಿದಮಟ್ಟಿಗೆ, 'ಸಾಹಿತ್ಯ ವಾರ್ಷಿಕ' ದಂಥ ಯೋಜನೆಯನ್ನು ಬಹುಶಃ ಯಾವ ಒಂದು ಭಾರತೀಯ ವಿಶ್ವವಿದ್ಯಾಲಯವೂ ಕೈಕೊಂಡಂತೆ ತೋರುವುದಿಲ್ಲ. ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ ಪಾಲುಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ ಎಂದು ನಾವು ಭಾವಿಸಿದ್ದೇವೆ.

ಇಂಥ ಒಂದು ಯೋಜನೆಯನ್ನು, ಎರಡು ವರ್ಷಗಳ ಹಿಂದೆ ವಿಶ್ವವಿದ್ಯಾಲಯದ ಮುಂದಿರಿಸಿದಾಗ, ಅದು ನಿರ್ವಿಘ್ನವಾಗಿ ನಡೆದುಕೊಂಡು ಹೋಗುವಂಥ ಅನುಕೂಲ

ಗಳನ್ನು ಒದಗಿಸಿಕೊಟ್ಟ ಬೆಂಗಳೂರು ವಿಶ್ವವಿದ್ಯಾಲಯದ ಅಂದಿನ ಉಪಕುಲಪತಿಗಳಾಗಿದ್ದ ಶ್ರೀ ಟಿ. ಕೆ. ತುಕೋಳ್ ಅವರಿಗೆ, ಈ ಪ್ರಯತ್ನದಲ್ಲಿ ಜತೆಜತೆಯಾಗಿ ನಿಂತು ಸಹಕರಿಸುತ್ತಿರುವ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಭಂಡಾರದ ಅಧಿಕಾರಿ ವರ್ಗಕ್ಕೆ – ಅದರಲ್ಲೂ ಶ್ರೀ ಸಿ. ಕೆ. ಪಟ್ಟಣಶೆಟ್ಟಿ ಮತ್ತು ಶ್ರೀಟಿ. ವಿ. ವೆಂಕಟರಮಣಯ್ಯನವರಿಗೆ, ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಶೀಲಿಸುವ ಶ್ರಮತೆಗೆದುಕೊಂಡ ಕನ್ನಡ ಅಧ್ಯಯನ ಕೇಂದ್ರದ ನನ್ನ ಸಹೋದ್ಯೋಗಿ ಮಿತ್ರರಿಗೆ, ಈ ಕೃತಿಯ ಪ್ರಕಟನೆಯ ಹೊಣೆಯನ್ನು ಉತ್ಸಾಹದಿಂದ ಹೊತ್ತ, ಪ್ರಕಟಣ ವಿಭಾಗದ ಸಂಘಟಕರಾದ ಶ್ರೀ ಕೆ. ಸಿ. ಶಿವಪ್ಪನವರಿಗೆ ನಾನು ಕೃತಜ್ಞನಾಗಿದ್ದೇನೆ.

**ಜಿ. ಎಸ್. ಶಿವರುದ್ರಪ್ಪ**
ನಿರ್ದೇಶಕರು
ಕನ್ನಡ ಅಧ್ಯಯನ ಕೇಂದ್ರ

ಜನವರಿ 30, 1973

## ಪರಿವಿಡಿ

1. ಕಾವ್ಯ– ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ 1
2. ನಾಟಕ – ಕೆ. ಮರುಳಸಿದ್ದಪ್ಪ 33
3. ಸಣ್ಣಕಥೆ – ಹು. ಕಾ. ಜಯದೇವ್ 58
4. ಕಾದಂಬರಿ – ಜಿ. ಎಸ್. ಶಿವರುದ್ರಪ್ಪ 99
5. ವಿಮರ್ಶೆ – ಕೆ. ವಿ. ನಾರಾಯಣ 134
6. ಜೀವನಚರಿತ್ರೆ ಮತ್ತು ಪ್ರಬಂಧ – ಎಸ್. ವಿದ್ಯಾಶಂಕರ್ 149
7. ಪ್ರವಾಸ ಸಾಹಿತ್ಯ – ಸಿ. ವೀರಣ್ಣ 167
8. ನಗೆಬರಹಗಳು ಮತ್ತು ಹರಟೆಗಳು – ಸಿ. ವೀರಣ್ಣ 175
9. ಗ್ರಂಥಸಂಪಾದನೆ, ಸಂಪಾದಿತ ಕೃತಿಗಳು – ಎಸ್. ಶಿವಣ್ಣ 179
10. ಲಕ್ಷಣಗ್ರಂಥಗಳು – ಹೆಚ್. ಪಿ. ನಾಗರಾಜಯ್ಯ 199
11. ಇತಿಹಾಸ, ಸಂಸ್ಕೃತಿ ಮತ್ತು ವಿಶ್ವಕೋಶ – ಎಂ. ಚಿದಾನಂದಮೂರ್ತಿ 218
12. ಜಾನಪದ – ಚಂದ್ರಶೇಖರ ಕಂಬಾರ 235
13. ಶಿಶುಸಾಹಿತ್ಯ – ಕೃಷ್ಣಪರಮೇಶ್ವರಭಟ್ಟ 246
14. ಅನ್ಯಸಾಹಿತ್ಯದಿಂದ – ಹೆಚ್. ಪಿ. ನಾಗರಾಜಯ್ಯ 274

**ಅನುಬಂಧ :** 1971 ರಲ್ಲಿ ಪ್ರಕಟವಾದ ಪುಸ್ತಕಗಳು – ಎನ್. ವಿ. ವಿಮಲ 287

# ಕಾವ್ಯ

## ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಈ ಪ್ರಬಂಧದಲ್ಲಿ ಪರಿಶೀಲನೆಗೆ ದೊರೆತಿರುವ ಕೃತಿಗಳು ಒಟ್ಟು ನಲವತ್ತೊಂದು. ಇವುಗಳಲ್ಲಿ ಸ್ವಂತ ಕವನ ಸಂಗ್ರಹಗಳಿವೆ; ಬೇರೆ ಬೇರೆಯವರ ಕವನಗಳನ್ನು ಸಂಗ್ರಹಿಸಿರುವ ಆ್ಯಂಥಾಲಜಿಗಳಿವೆ; ಮುನ್ನೂರು, ಆರುನೂರು ಪುಟಗಳ ಎರಡು ಸುದೀರ್ಘ ಕಾವ್ಯಗಳಿವೆ. ಒಂದು ಪದ್ಯಸಂಕಲನವನ್ನೂ ಪ್ರಕಟಿಸದವರಿಂದ ಹಿಡಿದು ಐದನೆಯ ಸಂಕಲನ ಪ್ರಕಟಿಸುತ್ತಿರುವವರ ಕೃತಿಗಳವರೆಗೆ ಈ ವರ್ಷದ ಕಾವ್ಯ ವೈವಿಧ್ಯಮಯವಾಗಿದೆ.

ಇದು ಇವುಗಳ ಹೊರವೈವಿಧ್ಯ. ಸತ್ವದ ದೃಷ್ಟಿಯಿಂದಲೂ ಇವುಗಳಲ್ಲಿ ಅಚ್ಚರಿ ತರುವಷ್ಟು ಭೇದವಿದೆ. ಮಲಗಿದ ಅನುಭವಗಳ ಮಬ್ಬು ಆಕೃತಿಗಳನ್ನು ಮಾತಿನ ಬೆಳಕಿನಿಂದ ಎಚ್ಚರಕ್ಕೆ ತೆರೆಯುತ್ತ ಹೋಗುವ ಅಸಾಧಾರಣ ಕವನಗಳ ಜೊತೆಗೆ ಮಾತಿನ ದುರುಪಯೋಗದಲ್ಲಿ ನಿರುಪಮವೆನ್ನಿಸುವಂಥ ಕಳಪೆ ಬರೆಹಗಳೂ ಇವೆ. ತನ್ನನ್ನು ಕಂಡುಕೊಳ್ಳುವ ಮಾಧ್ಯಮವಾಗಿ ಕಾವ್ಯವನ್ನು ಬಳಸಿದವರ ಜೊತೆಗೆ ಆವೇಶದ ಉದ್ಗಾರಗಳನ್ನು, ವಿಶೇಷಣಗಳ ಸರಮಾಲೆಯನ್ನು ಪದ್ಯವೆಂದು ಹೆಣೆದವರೂ ಇದ್ದಾರೆ. ಹೀಗಾಗಿ ಭಾರಿ ಮೊತ್ತದ ಈ ಕೃತಿರಾಶಿ ಕಸರಸಗಳ ಕಲಬೆರಕೆಯಾಗಿದೆ.

**ಮಹಾಪ್ರಸ್ಥಾನ** ಕೆ. ವಿ. ತಿರುಮಲೇಶರ ಮೂರನೆಯ ಕವನ ಸಂಕಲನ. ತಮ್ಮ ಮುಂಚಿನ ಕಾವ್ಯಕೃತಿಗಳಾದ 'ಮುಖವಾಡಗಳು' ಮತ್ತು 'ವಠಾರ'ಗಳಲ್ಲಿ ಭಾಷೆ ಲಯಗಳ ದೃಷ್ಟಿಯಿಂದ ಕೆಲವು ವಿಶಿಷ್ಟ ರೇಖೆಗಳನ್ನು ಮಿಂಚಿದ ತಿರುಮಲೇಶರು ಈ ಸಂಗ್ರಹದಲ್ಲಿ ಗಟ್ಟಿಮುಟ್ಟಾದ ಒಂದು ತಾತ್ವಿಕ ನಿಲುವನ್ನು ಗಳಿಸಿಕೊಳ್ಳುತ್ತಿದ್ದಾರೆ ಎನ್ನಿಸುತ್ತದೆ. ಈ ಕೃತಿಯ ಬಹುಪಾಲು ಕವನಗಳೆಲ್ಲ ಸಂವೇದನೆ ಅಭಿವ್ಯಕ್ತಿಗಳ ದೃಷ್ಟಿಯಿಂದ ಗಮನಾರ್ಹವೇ ಆಗಿದ್ದರೂ ಸಂಕಲನಕ್ಕೆ ಶೀರ್ಷಿಕೆಯಾಗಿ ಬಳಕೆಯಾಗಿರುವ ಮಹಾಪ್ರಸ್ಥಾನ ಕವನ ಇವೆಲ್ಲಕ್ಕೂ ಮೀರಿದ. ತಿರುಮಲೇಶರ ಈ ವರೆಗಿನ ಒಟ್ಟು ಬರೆಹದಲ್ಲೇ ಶ್ರೇಷ್ಠವಾದ ಕವನವಾಗಿದೆ. ಉತ್ತರ ಮಹಾಭಾರತದ ಸ್ವರ್ಗಾರೋಹಣ ಪರ್ವದ ವಸ್ತುವೇ 'ಮಹಾಪ್ರಸ್ಥಾನ'ದ ವಸ್ತುವೂ ಆಗಿದೆ. ಗೆಲುವಿನ ಜಯಘೋಷ ಅಡಗುತ್ತಿರುವಂತೆಯೇ ವಿಜಯಿಗಳ ಎದೆಯನ್ನು ಕವಿಯತೊಡಗಿದ ಪಾಪದ ಅರಿವು, ತಾತ್ವಿಕ ವಿಷಾದ, ಆತ್ಮನಿರೀಕ್ಷಣೆ, ಏಕಾಕಿತನ, 'ಸ್ವಂತ ಗುರುತಿಗಾಗಿ, ಸ್ವಂತ ಸ್ವರ್ಗಕ್ಕಾಗಿ' ಅವರು ತೊಡಗಿದ ಅನ್ವೇಷಣೆ–ಇವು ಉತ್ತರ ಮಹಾಭಾರತದ ವಸ್ತು. ಪ್ರಾಪಂಚಿಕ ವೈಭವದ ನಶ್ವರತೆಯನ್ನೂ ಮರ್ತ್ಯನ ಅಹಂಕಾರದ ಅಲ್ಪತೆಯನ್ನೂ ಗಂಭೀರವಾಗಿ ಧ್ವನಿಸುವ ಈ ಕಥೆಯಲ್ಲಿ ಭಾರತೀಯ ತತ್ವದರ್ಶನದ ಸಾರವೇ ಅಡಗಿದೆ.

'ಮಹಾಪ್ರಸ್ಥಾನ' ಯಕ್ಷಗಾನದ ವೀರ ಪಾತ್ರವೊಂದರ ಆಟೋಪದ ವರ್ಣನೆಯಿಂದ ಆರಂಭವಾಗುತ್ತದೆ. ಪಾತ್ರದ ಕಣ್ಣುಕುಕ್ಕುವ ಶೃಂಗಾರ. ಪರಾಕ್ರಮ ಪ್ರದರ್ಶನದ ಅಬ್ಬರ, 'ತೇಗಿ ಡರ್ರನೆ ಸೋಮರಸ ಅಹಹ ತನ್ನಿರೋ ಖಡ್ಗ' ಎಂದು ವಿಜೃಂಭಿಸುವ ಅಟ್ಟಹಾಸ–ಇವು ಭೋಗ. ಅಹಂಕಾರ, ಸೊಕ್ಕುಗಳಿಂದ ಬೀಗುವ ಮನುಷ್ಯಮದವನ್ನು ಅದರ ಶಿಖರ ಸ್ಥಿತಿಯಲ್ಲಿ ನಾಟಕೀಯವಾಗಿ ಹಿಡಿಯುತ್ತವೆ. ಆದರೆ ತನ್ನ ಪರಿಚಯ ಮಾಡಿಕೊಡಲು ತೊಡಗುತ್ತಿದ್ದಂತೆ ಪಾತ್ರದ ಅಟ್ಟಹಾಸ ಕರಗುತ್ತ ಸಾಗಿ ಸ್ವಂತ ವ್ಯಥೆಯ ಒಳದನಿಯೊಂದು ಹುಟ್ಟಿ ಪಾತ್ರ ಅಂತರ್ಮುಖಿಯಾಗತೊಡಗುತ್ತದೆ. ಹಸ್ತಿನಾವತಿ ಗೆದ್ದು, ಒಡ್ಡೋಲಗ ಸಮೆದು, ಸಿಂಹಾಸನವೇರಿ ಕುಳಿತ ಮತ್ತೇಭನ ಕಣ್ಣೆದುರು ತೆರೆಯುವುದು ವಂದಿ ಮಾಗಧ ಸಾಮಂತರಿಂದ ತುಂಬಿ ತನ್ನ ಪರಾಕ್ರಮ ಸ್ತುತಿಸುವ ಸಭೆಯಲ್ಲ; ತನ್ನ ಗೆಲುವಿನ ಭಯಂಕರತೆಯನ್ನೂ, ಅಲ್ಪತೆಯನ್ನೂ ಕೂಗಿ ಹೇಳುವ ಖಾಲಿ ಮಹಾಲು, ಮುಚ್ಚಿರುವ ಬಾಗಿಲು ಬಿಚ್ಚುವ ಶೂನ್ಯ, ಹಾಳುಬಿದ್ದ ಪಾಳೆಯ, ಮುರಿದ ಕೋಟೆ, ಅರಕ್ಷಿತ ಬಾಲವೃದ್ಧರ ಮುಖಗಳು. ಮುಂದಿನ ಇಪ್ಪತ್ತು ಸಾಲುಗಳಲ್ಲಿ ಸಾವು ತಿಂದು ಬಿಕ್ಕಿದ ಮರ್ತ್ಯವೈಭವದ ದಾರುಣ ಚಿತ್ರ ಸದ್ದಡಗಿದ ಸೂಕ್ಷ್ಮ ವ್ಯಂಗ್ಯದೊಂದಿಗೆ ಆಶ್ಚರ್ಯಕರವಾಗಿ ಮೂಡಿದೆ. ಕವನದ ಎರಡನೆಯ ಭಾಗದಲ್ಲಿ "ನಗರದ ಹೊರಬಾಗಿಲಿಗೆ ಬೆನ್ನುಹಾಕಿ" ಸ್ವರ್ಗಾನ್ವೇಷಿಯಾಗಿ ಹೊರಟ ವ್ಯಕ್ತಿ ಆಪ್ತ ಸಂಬಂಧಗಳನ್ನೆಲ್ಲ ಕಳಚುತ್ತ ಮುಂದೆ ಸಾಗುತ್ತಾನೆ. "ಬದುಕು ಶತಛಿದ್ರ ಕುಂಭದ ಕಥೆಯಾದರೆ ಈ ಅನ್ವೇಷಣೆ ಸಿಸಿಫಸನ ಕಥೆಯಾದರೆ" ಬಾಳಿನ ತೊಡಗುವಿಕೆಯ ಅರ್ಥವಾದರೂ ಏನು ಎಂಬ ಪ್ರಶ್ನೆ ಅವನನ್ನು ತಿನ್ನುತ್ತಿರುವಂತೆಯೇ ಅವನು ತನ್ನನ್ನು ಹುಡುಕಿಕೊಳ್ಳುತ್ತಿದ್ದಾನೆ. ಹೀಗೆ "ಹುಡುಕುತ್ತಿರುವಂತೆ ಸರಿಯುತ್ತಿರುವ ದಿಗಂತಗಳ" ಕಂಗೆಡಿಸುವ ಚಿತ್ರದೊಡನೆ ಮೂರನೆಯ ಭಾಗದಲ್ಲಿ ಕವನ ಕೊನೆಯಾಗುತ್ತದೆ. ಆರಂಭದಲ್ಲಿದ್ದ ಅಬ್ಬರದ ದನಿ ಬೆಳೆಯುವ ಚಿತ್ರಗಳ ಅರ್ಥಕ್ಕನುಗುಣವಾಗಿ ಖಿನ್ನವಾಗುತ್ತ ಕ್ಷೀಣವಾಗುತ್ತ ಹೋಗುತ್ತದೆ. ಅಸ್ಪಷ್ಟ ಅನುಭವಗಳನ್ನು ನಿವೇದಿಸಲೆಳಸುತ್ತಿರುವ ಭಾಗದಲ್ಲಿ ವಾಕ್ಯಗಳೆಲ್ಲ ಪ್ರತಿಪಾದನೆಯ ಧಾಟಿ ಬಿಟ್ಟು ಸಂದೇಹ ಪ್ರಶ್ನೆಗಳ ಕ್ರಮದಲ್ಲೇ ಮೂಡುತ್ತವೆ. ಸುತ್ತಿಸುತ್ತಿ ಸಾಗುವ ನಿಲುಗಡೆಯಿಲ್ಲದ ಹುಡುಕಾಟವನ್ನು ಹೇಳುವ ಈ ಕವನದಲ್ಲಿ ಎಲ್ಲಿಯೂ ವಿರಾಮ ಚಿಹ್ನೆಗಳಾಗಲೀ ಕಡೆಯ ವಾಕ್ಯದಲ್ಲಿ ಕ್ರಿಯಾಪದವಾಗಲೀ ಇಲ್ಲದಿರುವ ಮಟ್ಟಿಗೆ ಇಡೀ ಕಾವ್ಯ ಶರೀರ ಆದ್ಯಂತ ಧ್ವನಿಮಯವಾಗಿದೆ.

ದ್ವಾರಕೆ ಮುಳುಗಿದಾಗ, ಪಾರ್ಟಿ ಕಳೆದ ಮೇಲೆ, ತಿರುವನಂತಪುರ 71, ಮಹಾನಗರ, ಕೇರಳದ ಹುಡುಗಿಯರು ಈ ಸಂಕಲನದ ಇತರ ಮುಖ್ಯ ಕವನಗಳು. ಇವುಗಳಲ್ಲಿ ಮೊದಲಿನೆರಡು ರಚನೆಗಳು ತಮಗೆ ತಾವೇ ಪ್ರತ್ಯೇಕ ಕವನಗಳಾಗಿದ್ದರೂ ಮಹಾಪ್ರಸ್ಥಾನ ಓದಿಯಾದ ಮೇಲೆ ಅದರ ಅಂಗವೆಂಬಂತೆ ಭಾಸವಾಗುತ್ತವೆ. ವೈಭವಪೂರ್ಣವಾದ ಯುಗವೊಂದು, ಮನುಷ್ಯನ ಕಾದಾಟದಲ್ಲಿ ಕೊನೆಗೊಂಡು ಶ್ರೇಷ್ಠ ಮೌಲ್ಯಗಳ ಸಂಕೇತವೆಂಬಂತಿದ್ದ ಕೃಷ್ಣನೂ ಅಸುನೀಗಿದ ನಂತರದ ಸ್ಥಿತಿಯನ್ನು "ದ್ವಾರಕೆ ಮುಳುಗಿದಾಗ" ಚಿತ್ರಿಸುತ್ತದೆ. ಮನುಷ್ಯಧ್ವನಿ ಕೇಳದೆ, ಸಮುದ್ರ ಕೊರೆದು ಹೊಡೆವ ಧ್ವನಿ

ಮಾತ್ರ ಕೇಳುವ ಚಿತ್ರ ಭಯಂಕರವಾಗಿದೆ. "ಪಾರ್ಟಿ ಕಳೆದ ಮೇಲೆ" ಕವನ ಓದುವಾಗ ಮಹಾಪ್ರಸ್ಥಾನದ "ಇಲ್ಲಿ ಇದ್ದವರು ಎದ್ದುಹೋದಂತೆ ಅರ್ಧದಲ್ಲೇ ಎದ್ದುಹೋದ ವರು ಹೋದಲ್ಲೇ ಒಲೆಯ ಮೇಲಿಟ್ಟ ಮಡಕೆಗಳು ಇಟ್ಟಲ್ಲೇ" ಇತ್ಯಾದಿ ಸಾಲುಗಳಲ್ಲಿನ ಅನುಭವವೇ ಜಾಗೃತವಾಗುತ್ತದೆ. ತಿರುವನಂತಪುರ ಮತ್ತು ಮಹಾನಗರಗಳು ಪರ ಸ್ಪರ ಪೂರಕವಾದ ಕವನಗಳು. ಯಾವ ಸ್ಮಂತಿಕೆಗಳನ್ನೂ ಬೆಳೆಯಗೊಡದ, ಅರ್ಥಹೀನ ವ್ಯಾಪಾರಗಳ ಕಲಸುಮೇಲೋಗರವಾಗಿರುವ ನಗರದಲ್ಲಿ ವ್ಯಕ್ತಿ ಕಸಕ್ಕಿಂತ ಕಡೆಯಾಗಿ ನಗರದ ರಾಕ್ಷಸಪಾದದಡಿಯಲ್ಲಿ ಸಿಕ್ಕಿರುವುದನ್ನು ತಿರುವನಂತಪುರ ನಿರೂಪಿಸುತ್ತದೆ. ಕೆಲವು ಪದಗಳು ಮತ್ತೆ ಮತ್ತೆ ಪುನರಾವೃತ್ತಿಯಾಗುತ್ತ, ಮಾತು ಸುತ್ತಿ ಸುತ್ತಿ ಸಾಗುತ್ತ, ನಗರ ಜೀವನದ ಯಾಂತ್ರಿಕತೆ, ಬೋರು, ಚರ್ವಿತಚರ್ವಣಗಳನ್ನು ಪರಿಣಾಮಕಾರಿ ಯಾಗಿ ಮನಸ್ಸಿಗೆ ತರುತ್ತದೆ. ಇಂಥ ನಗರಕ್ಕೂ ಅದರ ಸ್ವಭಾವಕ್ಕೆ ಹೊಂದದ ತನಗೂ ಇರುವ ಸಂಬಂಧ ಅನೈತಿಕವೆಂದು ತಿಳಿದು, ಅದರಿಂದ ಪಾರಾಗಲು ಯತ್ನಿಸಿ ಸಾಗದೆ, ಸತ್ತರೂ ಅಲ್ಲೇ ಸಂತಾನವಾಗಿ ಬೆಳೆಯುವ ಭಯ ಕಳವಳಗಳಿಂದ ತುಡಿಯುವ ಇನ್ನೊಂದು ಸೊಗಸಾದ ಕವನ ಮಹಾನಗರ. ತನ್ನ ಅನೈತಿಕಗಳಿಗೆ ಒಗ್ಗಿಕೊಳ್ಳದವರನ್ನು ಅಪರಾಧಿ ಯೆಂದು ಕರೆದು ಕಟಕಟೆ ಹತ್ತಿಸಿ ತಲೆ ತೆಗೆಯುವ ಜಗತ್ತಿನ ನ್ಯಾಯವಿಧಾನವನ್ನು ಹೇಳುವ 'ತೀರ್ಪು' ಈ ಸಂಕಲನದಲ್ಲಿರುವ ಚಿಕ್ಕ ಕವನಗಳಲ್ಲೆಲ್ಲಾ ಶ್ರೇಷ್ಠವಾದದ್ದು ಎನ್ನಿಸುತ್ತದೆ.

"ಕೇರಳದ ಹುಡುಗಿಯರು" ತುಂಬ ಆಕರ್ಷಕವಾದ ಮಾತುಗಾರಿಕೆ ಮತ್ತು ಉತ್ಸಾಹ ಉಕ್ಕುವ ಲಯಗಳಿಂದ ಕೂಡಿದೆ. ತೀರ ಚಿಂತನಪರವಾದ, ಉದ್ದಕ್ಕೂ ವ್ಯಥೆ ಬೇಯುವ ಇತರ ಕವನಗಳಿಗೂ ಉತ್ಸಾಹ ಬೆರಗು ಪುಟಿಯುವ ಈ ಕವನಕ್ಕೂ ನಡಿಗೆ ಯಲ್ಲಿ ಕೂಡ ವ್ಯತ್ಯಾಸವಿದೆ. ತಿರುಮಲೇಶರಲ್ಲಿ ಲಯ ಅರ್ಥಾನುಸಾರಿಯಾಗುವು ದೆನ್ನುವುದಕ್ಕೆ ಇದೊಂದು ನಿದರ್ಶನ. ಈ ಕವನದ ನಾಲ್ಕಾರು ಸಾಲುಗಳಲ್ಲಿ ಲಯದ ದೃಷ್ಟಿಯಿಂದ ಲಂಕೇಶರ ಪ್ರಭಾವವಿದ್ದರೂ ತಿರುಮಲೇಶರು ಅದನ್ನು ಜೀರ್ಣಿಸಿಕೊಂಡು ಮಿಕ್ಕಿದ್ದಾರೆ.

ಈ ಸಂಕಲನದ ಮೂರು ರಚನೆಗಳಲ್ಲಿ ಮಹಾಭಾರತದ ಯುದ್ಧೋತ್ತರ ಭಾಗ ಗಳಿಂವಲೇ ಸೂಚನೆಗಳಿವೆ. ಉದ್ಯೋಗಪರ್ವ ಕವನದಲ್ಲಿ ಬರುವ "ಮಾರಕಾಸ್ತ್ರ ಪ್ರಯೋ ಗದಿಂದ ಗರ್ಭಕ್ಕೆ ಯಾತರ ರಕ್ಷೆ" ಎಂಬ ಮಾತು: ದ್ವಾರಕೆ ಮುಳುಗಿದಾಗ ಕವನದಲ್ಲಿನ "ಕಳೆದ ಕಲ್ಪದ ಅರೆಮರೆವಿನಲ್ಲಿ ಚಳಿಗೆ ಗಾಳಿಗೆ ಸ್ವಲ್ಪ ಸ್ವಲ್ಪವೇ ಸವೆದು ಅನಾಥ ಶಿಲ್ಪ ಗಳಾಗಿ ಉಳಿಯುವ" ಮಾತು; ಮಹಾಪ್ರಸ್ಥಾನ ಕವನದಲ್ಲಿ ಯುದ್ಧೋತ್ತರ ಭಗ್ನ ಜಗತ್ತಿನ ವರ್ಣನೆ: 'ಗ್ರಹಣ'ದಲ್ಲಿ "ಫ್ಯಾಕ್ಟರಿಗಳ ಚಿಮಣಿಗಳ ದಟ್ಟ ನೆರಳುಗಳ ಹಿರೋ ಷಿಮಾ ಅಣುಬೆಗಳ ಪಾಷಾಣ ಮೋಡಗಳ ಕೆಳಗೆ" ನಿಂತ ಮಂದಿ "ಮೇಲಕ್ಕೆ ನೋಡಿ ಮಳೆ ಬೆಳೆಯ ಭವಿಷ್ಯ ಗುಣಿಸು"ವ ವ್ಯಂಗ್ಯ -ಇವು ಕವಿಯ ಮನಸ್ಸು ಈ ಎಲ್ಲ ಕವನಗಳಲ್ಲೂ ಪರಸ್ಪರ ಸಂಬಂಧವಿರುವ ಒಂದು ಸ್ಪಷ್ಟ ನಿಲುವಿನ ಎಳೆಗಳನ್ನು ನೇಯುತ್ತಿದೆ ಎನ್ನುವು ದನ್ನು ತೋರಿಸುತ್ತದೆ.

ಅನಂತಮೂರ್ತಿಯವರು ಹೇಳುವಂತೆ "ತಿರುಮಲೇಶರ ಕವನಗಳು ನಮಗೆಲ್ಲ ರಿಗೂ ಈಚೆಗೆ ಬೇಜಾರಾಗುತ್ತಿರುವ ಐರನಿಯ ಧಾಟಿಯಿಲ್ಲದೆ ಕಳಕಳಿಯಿದ್ದೂ ವಾಚಾಳಿ ಯಾಗದೆ ಇಡೀ ಮನುಷ್ಯನ ಮಾತಾಗಲು ಹವಣಿಸುತ್ತಾ ನಮ್ಮನ್ನು ತಮ್ಮ ವ್ಯಾಕುಲದ ಲೋಕದಲ್ಲಿ ಒಳಪಡಿಸುತ್ತವೆ. ಇನ್ನೇನು ಬಿರಿಯುತ್ತವೆ ಎನ್ನಿಸಿ ಬಿರಿಯದೆ, ಹರಿದು ಬಿಡುತ್ತವೆ ಎನ್ನಿಸಿ ಹರಿಯದೆ ಎಲ್ಲೂ ಹರಟೆಯಾಗದೆ ಶಕ್ತಿಪೂರ್ಣ ಸಂಯಮದಿಂದ, ತೋರಿಕೆ ಪೋಜುಗಳಿಲ್ಲದ ಕಳಕಳಿಯಿಂದ ತಿರುಮಲೇಶ್" ಬರೆಯುತ್ತಾರೆ. ಸದ್ಯಕ್ಕೆ ಕನ್ನಡದಲ್ಲಿ ಬರೆಯುತ್ತಿರುವ ತರುಣ ಕವಿಗಳಲ್ಲಿ ತಿರುಮಲೇಶರು ಅತ್ಯಂತ ಸಮರ್ಥರೆನ್ನು ವುದನ್ನು, ಮಹಾಪ್ರಸ್ಥಾನ, ತೋರಿಸಿಕೊಟ್ಟಿದೆ.

**ಗೋಪಿ ಮತ್ತು ಗಾಂಡಲೀನ** ಈಚೆಗೆ ಬಂದ ಆಕರ್ಷಕ ಕವನ ಸಂಕಲನ ಗಳಲ್ಲಿ ಒಂದು.

ಸದ್ಯಕ್ಕೆ ಕಾವ್ಯದ ಹೆಸರಿನಲ್ಲಿ ಬರುತ್ತಿರುವ ಹೆಚ್ಚಿನ ಬರೆಹಗಳೆಲ್ಲ ಕೆಟ್ಟ ಗದ್ಯದ ಜಾಡಿಗೆ ಬೀಳುತ್ತ ಬರಿ 'ಬೋರಿನ ಸೀರೋಗಾನ'ವಾಗುವ ಅಪಾಯ ಹೆಚ್ಚುತ್ತಿರುವಾಗ ಲಕ್ಷ್ಮಣರಾಯರಂಥ ಎಲ್ಲೋ ಕೆಲವರು ಹೊಸತನದಿಂದ ಕೂಡಿದ ಉತ್ತಮ ಕವನ ಗಳನ್ನು ಬರೆಯುತ್ತಿದ್ದಾರೆ. ಈಚಿನವರಲ್ಲಿ ಕೆಲವರು ಆಕರ್ಷಕವಾಗಿ ಬರೆಯಬಲ್ಲರು; ಆದರೆ ಅಲ್ಲಿ ಅನುಭವದ ಖೋಟಾತನ ಕಣ್ಣಿಗೆ ಬಡಿಯುವಂತಿರುತ್ತದೆ. ಸತ್ವವಿರುವ ಎಷ್ಟೋ ಬರೆಹಗಳಲ್ಲಿ ಸೆಳೆಯುವ ಶಕ್ತಿಯೇ ಸತ್ತಿರುತ್ತದೆ. ಲಕ್ಷ್ಮಣರಾಯರ ಬರೆಹ ಎರಡಕ್ಕೂ ಹೊರತಾದದ್ದು. ಅಲ್ಲಿ ಪ್ರೌಢ ಮನಸ್ಸನ್ನು ಗಾಢವಾಗಿ ಕಾಡುವ ಸಂವೇದನೆ ಗಳು ಇರದಿರಬಹುದು. ಆದರೆ ಇರುವ ಸಂವೇದನೆಗಳ ಸಾಚಾತನ ಮೆಚ್ಚುವಂಥದು. ಅಲ್ಲದೆ ಕವನ ತನ್ನನ್ನು ವಿವಕ್ಷಿತ ಅನುಭವದ ಒರೆಗೆ ತಿದ್ದಿಕೊಳ್ಳುತ್ತ ಮಾತು ಲಯಗಳ ಹದವಾದ ಮೈತ್ರಿಯಲ್ಲಿ ಸುಂದರವಾಗಿ ಮೈಕಡೆದುಕೊಳ್ಳುವ ವಿಧಾನ ಬಹಳ ಅಪೇಕ್ಷ ಣೀಯವಾದದ್ದು.

ಗೋಪಿ ಮತ್ತು ಗಾಂಡಲೀನ, ಫೋಟೋಗ್ರಾಫರ್, ಹಸಿರು ಹಾವು, ವಿಜ್ಞಾನ, ಸಖೀಗೀತ–ಮೊದಲಾದುವು ಈ ಸಂಕಲನದಲ್ಲಿ ಕಲೆಗಾರಿಕೆಯ ದೃಷ್ಟಿಯಿಂದ ತುಂಬ ಉತ್ತಮ ಪದ್ಯಗಳು. ಮೊದಲಿನದು ಲಯದ ನೃತ್ಯಗತಿಗೆ ಬಿಚ್ಚಿಕೊಳ್ಳುವ ಗಾಂಡ ಲೀನಳ ಮಾದಕ ಚಿತ್ರದ ಜೊತೆಗೆ ಗೋಪಿಯ ಗಾಂಪತನವನ್ನೂ ನಾಟಕೀಯವಾಗಿ ಹಿಡಿಯುತ್ತ 'ನೀತಿಬದ್ಧ' ಮುಗ್ಧ ಯುವಕನ ಬೆರಗು ಭಯಗಳನ್ನೆಲ್ಲ ಗರಿಗರಿಯಾಗಿ ಬೆಳೆ ಯುತ್ತದೆ. ನೀತಿ ತನ್ನ ಗಡಿಮೀರಿದ ನೆಲೆಯಲ್ಲಿ ಅಸಂಬದ್ಧವಾಗಿ ಕಾಣಿಸಿಕೊಂಡು ಕೌತುಕ ದಿಂದ ಹಾಸ್ಯಕ್ಕೆ ಹಾಯುವ ಈ ಕವನ ಲಕ್ಷ್ಮಣರಾಯರ ಕಾವ್ಯ ವೈಶಿಷ್ಟ್ಯಗಳೆಲ್ಲವನ್ನೂ ಒಳಗೊಂಡ ಪ್ರಾತಿನಿಧಿಕ ಕವನ ಎನ್ನಬಹುದು. ಫೋಟೋಗ್ರಾಫರ್ ಈ ಸಂಕಲನದ ಮತ್ತೊಂದು ಗಮನಾರ್ಹ ಕವನ. ಲಂಕೇಶರು ಹೇಳುವಂತೆ "ಈ ಪದ್ಯದ ಉದ್ದಕ್ಕೂ ಬರುವ ಲೈಂಗಿಕ ವಿವರಗಳು ಒಂದು ಚೆಂದ; ಉದ್ದಕ್ಕೂ ಕವಿಯ ಒಬ್ಬಂಟಿತನ, ಪರ ಕೀಯತೆಯ ಪೊರೆ ಬಿಚ್ಚಲು ನಡೆಸುವ ರೊಮಾನ್ಸ್‌ಗಳು ಮತ್ತು ಆ ಭ್ರಮೆ ಒಂದು

ಚೆಂದ; ಉದ್ದಕ್ಕೂ ಪಸರಿಸುವ ವ್ಯವಹಾರ ಪ್ರಜ್ಞೆ ಮತ್ತು ಅದನ್ನು ಮೋಗಲಾಡಿಸಲು ಹೆಣಗಿ ಸೋಲುವ ದುರಂತ ಇನ್ನೊಂದು ಚೆಂದ; ಪದ್ಯ ಕೇವಲ ಕವಿಯ ಅನುಭವದ ಹೇಳಿಕೆಯಾಗಿ ನಿಲ್ಲದೆ ತನ್ನದೇ ಆದ ಜಗತ್ತು, ಜೀವ ಪಡೆಯುತ್ತದೆ". ವಿಜ್ಞಾನ ಮತ್ತು "ಹಸಿರುಹಾವು" ಗಳಲ್ಲಿ ಕವಿ ತನ್ನ ಅನುಭವಗಳನ್ನು ಇಡಿಯಾದ ಸಂಕೇತಗಳಲ್ಲಿ ಹಿಡಿದು ಕೊಡುತ್ತಾರೆ. ಇಲ್ಲಿ ಪ್ರಸ್ತಾಪಿಸದ ಬೇರೆ ಪದ್ಯಗಳಲ್ಲಿಯೂ ಮಾತು ಲಯಗಳ ಅಭಿಜ್ಞತೆಯಿಂದ ಹುಟ್ಟುವ ವಿಶಿಷ್ಟ ರೀತಿಯ ಪ್ರಸನ್ನತೆಯಿದೆ. ಅಪ್ಪ ಎಂಬ ಸಾಮಾನ್ಯ ಪದ್ಯದ ಮಾರ್ಮಿಕ ಅಂತ್ಯ, ಶಶಿಯ ಮೊರೆ ಎಂಬ ಲಘು ಧಾಟಿಯ ಪದ್ಯ ಕಡೆಯಲ್ಲಿ ಸಾಧಿಸುವ ಕೆನ್ನೆಗೆ ಬಾರಿಸುವ ವ್ಯಂಗ್ಯ, 'ಸಾಕು' ಕವನದ ಕಡೆಯ ಆರೇಳು ಸಾಲುಗಳಲ್ಲಿ ಥಟ್ಟನೆ ವರ್ತಮಾನವಾಗಿ ಒದಗಿ ಬಿಡುವ ಪುರಾಣ ಸ್ಪರ್ಶ– ಇಂಥ ಅನೇಕ ವಿಶೇಷತೆಗಳು ಇತರ ರಚನೆಗಳಲ್ಲೂ ಸಿಗುತ್ತವೆ. ಬಾ, ಒಬ್ಬಂಟಿ ಎಂಬಂಥ ಪದ್ಯಗಳು ಹೊಸ ಆಕಾರಕ್ಕೆ ನಡೆಸಿದ ತಡಕಾಟಗಳಂತಿವೆ. ಅನೇಕ ಕವನಗಳಲ್ಲಿ ಮಾತನ್ನು ಮುರಿಮುರಿದು ಅರ್ಥ ಬೆದಕುತ್ತ ಭಾಷೆಯನ್ನು ಜಗಿಯುವ ರೀತಿ ಬೆಳೆಯುವ ಕವಿ ಭಾಷೆಯನ್ನು ಅರಗಿಸಿಕೊಳ್ಳುವ ಬಗೆಯನ್ನು ಸೂಚಿಸುತ್ತದೆ.

'ಕೆಲಸ' ಮತ್ತು 'ಮರ' ಈ ಸಂಕಲನದಲ್ಲಿರುವ ಎರಡು ಅನುವಾದಗಳು. ಎರಡೂ ಅನುವಾದಗಳಿಗೆ ಮಾದರಿ ಎಂಬಂತೆ ಮೈ ಬದಲಿಸಿವೆ. 'ಮರ' ಸುಂದರವಾದ ಬಿಡಿ ಚಿತ್ರಗಳಿಂದ ಕೂಡಿದ್ದರೂ ಅವು ಪರಸ್ಪರ ಹೊಂದಿಕೊಳ್ಳುವುದಿಲ್ಲವಾಗಿ ಒಂದು ಕೆಟ್ಟ ಪದ್ಯ. ಇದನ್ನು ಅನುವಾದಕ್ಕೆ ಯಾಕೆ ಆರಿಸಿಕೊಂಡರೋ! ಆದರೆ ಅನುವಾದದ ರೀತಿ ಮಾತ್ರ ಈ ತಪ್ಪನ್ನು ಮರೆಸುವಷ್ಟು ಮೋಹಕವಾಗಿದೆ.

ಇಷ್ಟಾದರೂ ಈ ಸಂಕಲನದ ಪದ್ಯಗಳು ಮೊತ್ತದಲ್ಲಿ ಸ್ಪರ್ಶಾನುಮೇಯವಾದ ಒಂದು ಗಟ್ಟಿ ನಿಲುವನ್ನು ನೀಡುವುದಿಲ್ಲ. ಹಾಗೆಂದೇ ಇಲ್ಲಿ ಸುಣ್ಣಕ್ಕೆ ಬಣ್ಣ ಹೆಚ್ಚು, ಖಾರ ಕಡಿಮೆ. ಎಲ್ಲ ಪದ್ಯಗಳೂ ಯುವಕನ ಕಾಮುಕ ದೃಷ್ಟಿಯ ಕಾವಿನಲ್ಲೇ ಅರಳುತ್ತವೆ. "ಕೆಲವಂತು ಕವಿಯ ತೀಟೆಗಳನ್ನು ಮಾತ್ರ ಹೇಳುತ್ತವೆ." ಇಲಿಗಳ ಪರದಾಟ, ಕೇಳಿ–ಇಂಥ ಕಿಲಾಡಿ ಪದ್ಯಗಳು ಬರಿಯ ಪೋಲಿ ಚಕ್ಕಳಗುಳಿ. 'ಚಳಿ' ಪದ್ಯ ರಾಮಾನುಜನ್ನರ 'ನ್ಯೂಯಾರ್ಕಿನಲ್ಲಿ ಗಾಳಿ' ತುಂಬ ತಡವಾಗಿ ಹೆತ್ತ ಮರಿ. ಹಸಿರು ಹಾವು ಪದ್ಯದ ಮೇಲೆ ರಾಮಾನುಜನ್ನರ ಕಥನಧಾಟಿಯ ಹೆಜ್ಜೆಗುರುತುಗಳಿವೆ. ಅಲ್ಲದೆ ಕವನದ ಮೊದಲರ್ಧ ಸೊಗಸಾಗಿ ಧ್ವನಿಸಿದ್ದನ್ನು ಕಡೆಯ ಘಟ್ಟ ರಾವಣ ವಾಚ್ಯಕ್ಕೆ ತಿರುಗಿಸುತ್ತದೆ. ಆದರೆ ಲಕ್ಷ್ಮಣರಾಯರ ವಿಶಿಷ್ಟತೆ ಎನ್ನಬಹುದಾದ ಮಾತಿನ ಪ್ರಸನ್ನತೆ, ನೈಜ ಲಯಗತಿಗಳು ಈ ಪದ್ಯಗಳನ್ನು ಹಿತವಾಗಿಸುತ್ತವೆ.

"ಶ್ರೀರಾಮ ಪರೀಕ್ಷಣಂ" ಕೃತಿಯಲ್ಲಿ ರಾಮ ಪಾತ್ರದ ನಡವಳಿಕೆಗಳಿಗೆ ಸಂಬಂಧಿಸಿದ ಕೆಲವು ಜಟಿಲ ಸಂಗತಿಗಳನ್ನು ಸೂಕ್ಷ್ಮವಾಗಿ ವಿವೇಚಿಸಿದ ಡಿ. ವಿ. ಜಿ. ಯವರು **ಶ್ರೀಕೃಷ್ಣ ಪರೀಕ್ಷಣಂ** ಕೃತಿಯಲ್ಲಿ ವಿವಾದಾತ್ಮಕವಾದ ಕೆಲವು ಶ್ರೀಕೃಷ್ಣ ಪ್ರಕರಣಗಳನ್ನು ಪ್ರಸ್ತಾಪಿಸಿ ಅವುಗಳ ಸಾಧುತ್ವವನ್ನು ತರ್ಕಬದ್ಧವಾಗಿ ಪ್ರತಿಪಾದಿಸಲು ಯತ್ನಿಸಿದ್ದಾರೆ.

ಪಾಶ್ಚಾತ್ಯ ವಿದ್ವಾಂಸರಿಗಿರಲಿ ಸನಾತನಿಗಳಾದ ಹಿರಿಯ ವಿದ್ವಾಂಸರಿಗೇ ಭಾಗವತದಲ್ಲಿ ಬರುವ ಕೃಷ್ಣಪಾತ್ರದ ಕೆಲವು ನಡವಳಿಕೆಗಳು ಧರ್ಮಾವಿರುದ್ಧವಾದುವೆಂದು ಅನ್ನಿಸಿಲ್ಲ. ಕೃಷ್ಣನ ತತ್ವಬೋಧೆ ನಿರ್ದುಷ್ಟವಾದುದೆಂದು ಒಪ್ಪುವವರಿಗೂ ಕೃಷ್ಣಚಾರಿತ್ರ ನುಂಗಲಾರದ ತುತ್ತಾಗಿದೆ. ಪರಿಣಾಮವಾಗಿ ಹರಿಕಥೆ ದಾಸರ ಬಾಯಲ್ಲಿ "ಜಾರಚೋರ ಶಿಖಾಮಣಿ"ಯಾಗಿರುವ ಕೃಷ್ಣನನ್ನು ಆ ಅಪವಾದದಿಂದ ಮುಕ್ತಗೊಳಿಸಲು ಡಿ. ವಿ. ಜಿ ಭಾಗವತದ ಮಾತುಗಳನ್ನೇ ಆಧರಿಸಿ ವಾದಮಾಡುತ್ತಾರೆ. ಚೋರತನದಿಂದ ಅವನು ಪಾರಾಗಲು ವಾದದ ಅಗತ್ಯವೇ ಇಲ್ಲ. ಬಾಲ್ಯದಲ್ಲಿ ಗೋಪಬಾಲರನ್ನು ಕಟ್ಟಿಕೊಂಡು ಕೃಷ್ಣ ನಡೆಸುತ್ತಿದ್ದ ಕಳ್ಳತನವೆಲ್ಲ ಅವನ ಮುಂದಿನ ಸಾಹಸಪೂರ್ಣ ವ್ಯಕ್ತಿತ್ವವನ್ನು ಮಿಂಚುತ್ತಿದ್ದ ಕ್ಷಮ್ಯವಾದ ತುಂಟಾಟಗಳೆಂದು ಕೈಬಿಡಬಹುದೇನೋ. ತನ್ನನ್ನು ತುಂಬ ಪ್ರೀತಿಸುವ ಜನಗಳ ಬೆದರಿಕೆಗೆ ಸಗ್ಗದೆ ಒಂದಿಷ್ಟು ಹಾಲು, ಬೆಣ್ಣೆ ಕದ್ದ ಪೋರನನ್ನು ಕೋರ್ಟಿಗೆಳೆಯಬೇಕಾಗಿಲ್ಲ. ರಗಳೆ ಇರುವುದು ಇಲ್ಲಲ್ಲ. ಗಂಡಂದಿರಿದ್ದ ನೂರಾರು ಗೋಪಿಯರೊಡನೆ ಭಗವಂತ ನಡೆಸಿದ ರಾಸಕ್ರೀಡೆಗಳಲ್ಲಿ. ಪೂರ್ಣಾವತಾರಿಯ ಈ ನಡವಳಿಕೆ. ಉಳಿದವರಿಗಿರಲಿ, ಕಥೆ ಹೇಳುತ್ತಿದ್ದ ಅವನ ತಂಗಿಯ ಮೊಮ್ಮಗ ಪರೀಕ್ಷಿತನಿಗೇ ವಿಚಿತ್ರವೆನಿಸಿ, ಇದರ ತಾತ್ಪರ್ಯವೇನು ಎಂದು ಶುಕರನ್ನೇ ಕೇಳಿದ! ಇಂಥ ಪ್ರಶ್ನೆಗಳು ಬಂದಾಗ ಗೋಪೀಕೃಷ್ಣರ ಸಂಗವನ್ನು ಒಂದು ಆಧ್ಯಾತ್ಮಿಕ ರಹಸ್ಯವೆಂದೋ ಅಥವಾ ಅವತಾರ ಪುರುಷರ ಲೀಲೆಗಳನ್ನು ನಾವು ತಿಳಿದೇವೇ?– ಎಂಬ ಹಾರಿಕೆ ಮಾತಿನಿಂದಲೋ ತಳ್ಳಿಬಿಡುವುದು ರೂಢಿ. ಇಂಥ ಮಾತು ಭಕ್ತಿಭಾರರಾದ ಹಿಂದಿನ ತಲೆಮಾರಿನವರ ಬಾಯಿ ಮುಚ್ಚಿಸಿದ್ದಿರಬಹುದು. ಆದರೆ ಮುಂದಿನ ಮಕ್ಕಳು ಮಾತ್ರ ಈ ದೇವತಾ ಪ್ರಕರಣಗಳನ್ನು ಕ್ರೈಸ್ತ ಮಿಷನರಿಗಳೂ ಬೆರಗಾಗುವಂತೆ ಖಂಡಿಸಿಯಾರು. ಹಾಗೆಂದೇ ಇಂಥ ಘಟನೆಗಳನ್ನು ನ್ಯಾಯಸಮ್ಮತವಾಗಿ ವಿವರಿಸಹೊರಡುವ ಪ್ರಯತ್ನ ಸ್ತುತ್ಯವಾದದ್ದು.

ಡಿ. ವಿ. ಜಿ. ಭಾಗವತವನ್ನು ಇಡಿಯಾಗಿ ಒಪ್ಪಿದ್ದಿದ್ದರೆ ರಗಳೆ ಬರುತ್ತಿರಲಿಲ್ಲ. ಭಾಗವತದ ಧಾಟಿಯೇ ಬೇರೆ. ಬಹುಮಟ್ಟಿಗೆ ಅದ್ಭುತಗಳಲ್ಲೇ ಜಲಿಸುವ ಆ ಕೃತಿಯನ್ನು ಸಾಮಾನ್ಯ ವಸ್ತುತರ್ಕದಿಂದ ಅಳೆಯಬೇಕಾಗಿರಲಿಲ್ಲ. ಆದರೆ ಕೃಷ್ಣ ಬಾಲಕನಾಗಿದ್ದಾಗ ಭಯಂಕರ ರಾಕ್ಷಸರನ್ನು ಕೊಂದದ್ದನ್ನೆಲ್ಲ ಕಾವ್ಯವಿಶಿಷ್ಟವಾದ ಉತ್ಪ್ರೇಕ್ಷೆಗಳೆಂದು ಬದಿಗೆ ಸರಿಸಿದ ಡಿ. ವಿ. ಜಿ. ಯವರು ಅವನ ಗೋಪೀ ಪ್ರಕರಣವನ್ನು ಸಂಭಾವ್ಯವಾಗಿ ಸ್ವೀಕರಿಸಿ ಅದರ ಸಾಧುತ್ವವನ್ನು ಸಮರ್ಥಿಸಲು ಪ್ರಯತ್ನಿಸುತ್ತಾರೆ. ಅವರು (ಭಾಗವತವನ್ನು ಆಧರಿಸಿ) ಹೇಳುವ ಪ್ರಕಾರ ಕೃಷ್ಣ ಮನೋವಿಕಾರಗಳನ್ನು ಗೆದ್ದ 'ಈಶ್ವರ'. ಅವನದು ಅತಿಮಾನುಷ ವ್ಯಕ್ತಿತ್ವ. ಗೋಪಿಯರೋ ಮಾನುಷ ಪತಿಯ ಜೊತೆಗೆ ಇಂಥ ಅತಿಮಾನುಷ ಪತಿಯನ್ನು ಅಪೇಕ್ಷಿಸಿ ಕಾಮಾರ್ತರಾದವರು. ಅವರ ಕಾಮವನ್ನು ಬೇರೆ ರೀತಿಯಲ್ಲಿ ಗುಣಪಡಿಸಲಾಗದ ಒಂದು ವ್ಯಾಧಿಯೆಂಬಂತೆ ಕಂಡು ಕೃಷ್ಣ ಅವರಿಗೆ ವಶನಾದ. ಕೃಷ್ಣನಂಥ "ಈಶ್ವರರು" ಲೋಕಾನುಗ್ರಹದ ಸಲುವಾಗಿ ಅಸಾಧಾರಣವಾದ ನಡವಳಿಕೆಗಳನ್ನು ತೋರಬಹುದು. ನಮಗೆ ಪ್ರಮಾಣ ಅವರ ಮಾತೇ ಹೊರತು ನಡತೆಯಲ್ಲ.

ಇದು ಡಿ. ವಿ. ಜಿ. ಯವರ ವಾದ. ವಾದವೇನೋ ಒಂದು ರೀತಿಯಲ್ಲಿ ಚೆನ್ನಾಗಿದೆ. ಆದರೆ ಅವಕ್ಕೆ ಕೃಷ್ಣನ ಮಾತೇ ವಿರುದ್ಧವಾಗಬಾರದಲ್ಲವೆ? "ಯದ್ಯದಾಚರತಿ ಶ್ರೇಷ್ಠಸ್ತತ್ತ ದೇವೇತರೋ ಜನಾಃ. ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ" ಎಂದು ಗೀತೆ ಹೇಳುವುದಿಲ್ಲವೆ? ಶ್ರೇಷ್ಠರಾದವರು ನಡೆದುಕೊಳ್ಳುವ ರೀತಿ ಸಾಮಾನ್ಯರಿಗೆ ಪ್ರಮಾಣ ವರ್ತನೆಯಾಗುತ್ತದೆ. ಲೋಕ ಅದನ್ನೇ ಅನುಸರಿಸೀತು. ಅಂಥವರು ಸರಿಯಾಗಿ ನಡೆಯಲಿ ಎನ್ನುವುದು ಆ ಶ್ಲೋಕದ ಸಾರ. ಈ ಮಾತಿಗೆ ಡಿ. ವಿ. ಜಿ. ಯವರ ತರ್ಕ ವಿರುದ್ಧವಾಗುವುದಿಲ್ಲವೆ? ಈ ಎರಡರಲ್ಲಿ ಯಾವುದು ಸರಿ – ಕೃಷ್ಣ ವಚನವೋ ಕೃಷ್ಣ ಸಮರ್ಥನೆಯೋ?

ತರ್ಕಬದ್ಧವಾದ ನಿರೂಪಣೆಗೆ ಹೊರಟಮೇಲೆ ಅದ್ಭುತಗಳನ್ನು ವಾಸ್ತವ ಘಟನೆಗಳೆಂಬಂತೆ ಸ್ವೀಕರಿಸುವುದು ಅಪಾಯಕರವೆನ್ನಿಸುತ್ತದೆ. "....ಏಕಕಾಲದಲ್ಲಿ ಸಾವಿರಾರು ಕಡೆ ಸಾವಿರಾರು ಆಕಾರಗಳನ್ನು ತಾಳಿರಬಲ್ಲ ಅಸಾಧಾರಣ ಮಹಿಮೆಯೂ ಶ್ರೀಕೃಷ್ಣನಲ್ಲಿತ್ತು" (ಪುಟ ೪೦) ಎಂದು ಡಿ. ವಿ. ಜಿ. ಹೇಳಿಬಿಡುವುದನ್ನು ನೋಡಿದಾಗ, ಉಳಿದದ್ದನ್ನೆಲ್ಲ ಇವರು ಬುದ್ಧಿಗೆ ಒಮ್ಮತವಾಗುವಂತೆ ವಾದಿಸಹೋದದ್ದರ ಪ್ರಯೋಜನವೇನು ಎನ್ನಿಸುವುದಿಲ್ಲವೇ? ಕೃಷ್ಣ ಇಂಥ ಶಕ್ತನಾದ ಮೇಲೆ ಗೋಪಿಯರ ರೋಗಕ್ಕೆ ಧರ್ಮವಿರುದ್ಧವೆಂದು ತೋರುವ ಚಿಕಿತ್ಸೆಯನ್ನು ಮಾಡಬೇಕಿತ್ತೇಕೆ? ಕೇವಲ ಒಂದು ಕೈಸನ್ನೆಯಿಂದ ಅವರ ವ್ಯಾಧಿ ನಿವಾರಣೆ ಮಾಡಬಹುದಿತ್ತಲ್ಲವೆ?

"ದ್ರೌಪದಿಗೆ ಪತಿಪಂಚಕದಂತೆ ಗೋಪಿಯರಿಗೆ ಪತಿದ್ವಯ" ಎಂದು ಇಬ್ಬರನ್ನೂ ಹೋಲಿಸಲಾಗಿದೆ. ಈ ಹೋಲಿಕೆ ಸರಿಯಾದೀತೆ? ಬಹುಪತಿತ್ವ ಇಬ್ಬರಿಗೂ ಸಾಮಾನ್ಯ ನಿಜ. ಆದರೆ ಗೋಪಿಯರು ಅದನ್ನು ಬಯಸಿ ಪಡೆದರು. ದ್ರೌಪದಿಗೆ ಅದು ಅನ್ಯರ ಕಾರಣದಿಂದ ಅನಿವಾರ್ಯವಾಗಿ ಬಂತು. ನಡತೆಗಳಲ್ಲಿ ಸಾದೃಶ್ಯವಿದ್ದರೂ ಅವುಗಳ ಹಿಂದಿನ ಆಶಯಗಳಿಂದ ಅರ್ಥ ಬೇರೆಯಾಗುವುದಿಲ್ಲವೆ?

ಒಪ್ಪಲು ಕೆಲವರಿಗೆ ಕಷ್ಟಕರವಾಗಬಹುದಾದ ಈ ಗೋಪೀ ಪ್ರಕರಣದ ಸಮರ್ಥನೆಯನ್ನು ಬಿಟ್ಟರೆ ಕೃತಿಯ ಉಳಿದ ಭಾಗ ತುಂಬ ಹೃದ್ಯವಾಗಿದೆ. ರಾಮಕೃಷ್ಣರ ಚಾರಿತ್ರಿಕತೆ, ಅವರಿಬ್ಬರ ಕಾಲದ ವ್ಯತ್ಯಾಸ, ಅದರ ಪ್ರಭಾವ, ಸತ್ಯ ಸೌಂದರ್ಯಗಳ ದಾಂಪತ್ಯ, ರಕ್ತಿಭಕ್ತಿಗಳ ಸಂಬಂಧ ಮೊದಲಾದ ವಿಷಯಗಳ ವಿವೇಚನೆ ಎಂಥವರನ್ನೂ ತಲೆದೂಗಿಸುವಂಥದು. ಅರ್ಥಖಚಿತತೆ, ಭಾವಗೌರವಗಳ ಸಂಪನ್ನತೆಗೆ ಎಂದೂ ಹೆಸರಾದ ಡಿ.ವಿ.ಜಿ. ಯವರ ಗದ್ಯಕ್ಕೆ ಈ ಕೃತಿ ಇನ್ನೊಂದು ನಿದರ್ಶನ. ಮೊದಲು ಗದ್ಯದಲ್ಲಿ ನಡೆಸಿದ ವಿಚಾರಗಳಿಗೆ ಪುಷ್ಟಿಕೊಡುವಂತೆ ತುದಿಗೆ ಒಂಬತ್ತು ದೃಶ್ಯಗಳ ಒಂದು ಗೀತನಾಟಕ ಮತ್ತು ಕಾವ್ಯರೂಪದ ನಾರದ ಕೃಷ್ಣ ಸಂವಾದಗಳಿವೆ. ಅಲ್ಲಲ್ಲಿ ಕೃಷ್ಣವೃತ್ತಾಂತಗಳಿಗೆ ಸಂಬಂಧಿಸಿದ ಹದಿಮೂರು ಸುಂದರ ಚಿತ್ರಗಳಿವೆ.

ಸೋಮಶೇಖರ ಇಮ್ರಾಪೂರರ **ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ** ಕೃತಿಯಲ್ಲಿ ಗ್ರಾಮಜೀವನದ ಶೃಂಗಾರ ಸನ್ನಿವೇಶಗಳು. ಸಾಂಸಾರಿಕ ಜೀವನದ ಮೃದು ಬಿರುಸುಗಳು ಕಣ್ಣು ಪಡೆದಿವೆ. ಕೃತಿಯ ಬೆನ್ನುತಟ್ಟಿರುವ ಚನ್ನವೀರ ಕಣವಿಯವರು ಈ

ಕವಿತೆಗಳು "ಹಳ್ಳಿಯ ಹಾಡಿನ ಗತಿ–ಗತ್ತು, ಗಾಡಿ–ಮೋಡಿ, ಬೆಡಗು–ಬಿನ್ನಾಣಗಳನ್ನು ಸಜೀವವಾಗಿ ಸೆರೆಹಿಡಿದು ದೇಸಿಯ ಸೊಗಡಿನಿಂದ ಹೊಡಕರಿಸುತ್ತವೆ" ಎಂದು ಹೇಳಿರುವುದು ಕೇವಲ ಪ್ರಶಂಸೆಯಾಗಿರದೆ ನಿಜವಾದ ವಿಮರ್ಶೆಯಾಗಿದೆ. ಭಾವಮಯವಾದ ಬಣ್ಣದ ಮಾತಿನಿಂದ, ಅಲ್ಲಲ್ಲಿ ಕೀಲಿಸಿರುವ ಕಾಂತಿಮಯವಾದ ಉಪಮೆಗಳಿಂದ, ಉತ್ತರ ಕರ್ನಾಟಕದ ಮರ್ಮವತ್ತಾದ ಭಾಷೆಯಿಂದ ಹಾಡಿನ ಧಾಟಿಯಲ್ಲೇ ಮೂಡಿರುವ ಈ ಕವನಗಳು ಪರಿಮಳಿಸುತ್ತವೆ. ಹರೆಯ, ಮುತ್ತಿಕೊಡತಾಳ, ಆಕಿ–ಆತ, ಅವಾ ಪ್ರಾಣಾ –ಇಂಥ ಕೆಲವು ಕವಿತೆಗಳಲ್ಲಿ ಮನೋಜ್ಞವಾದ ಸಾಲುಗಳು ಸಿಗುತ್ತವೆ. 'ಸುಂದರಿ' ಕವನ, 'ನಾರೀ ನಿನ್ನ –ಮಾರೀ ಮ್ಯಾಲೆ' ಕವನದ ಪ್ರಭಾವಕ್ಕೆ ಸಿಕ್ಕಿದೆ. 'ಸೆಡುವ್ಯಾಕ ನನ ಗೆಳತಿ' ಕವನದ

> ಬ್ಯಾಸರದ ಬ್ಯಾಸಗಿ ಬೆನ್ಹತ್ತಿ ತುಳಿವಾಗ
> ಬೇಸೂರು ಆತೇನ ನನ ಮಾತು ಏ ಗೆಳತಿ
> ಬಾಸುಂದಿ ಬಾಯಾಗ ಇಸ ಆತು

ಎನ್ನುವ ಭಾಗ ಬೇಂದ್ರೆಯವರ

> ಸವಿ ಸತ್ತ ತಾಂಬೂಲ ಸೊಪ್ಪಾತು ದವಡ್ಯಾಗ
> ಅದರ ಸವಿರಸ ಕಹಿವಿಷ ಆಗಿತ್ತ
> ನುಂಗಲುಗುಳಲು ಎಡೆಯಿಲ್ಲ

ಎಂಬ ಕವನಭಾಗದ ಅನುಕರಣೆಯಾಗುತ್ತದೆ. ಜಾನಪದ ಶೈಲಿಯಲ್ಲಿ ಬರೆದೂ ಬೇಂದ್ರೆಯವರಿಂದ ಭಿನ್ನವಾಗಿರಲು ಸಾಧ್ಯವಿದೆ. 'ಮುದುಕಾ–ಮುದುಕಿ'ಯಂಥ ಹಾಸ್ಯ ಕೊಂಚ ಅತಿರೇಕವಾಯಿತೇನೋ ಎನ್ನಿಸಿದರೂ ಅದರ ಚುರುಕುತನವನ್ನು ಅಲ್ಲಗಳೆಯುವಂತಿಲ್ಲ.

**ಜೀವ ಜೀವಂತ** ವೇಣುಗೋಪಾಲ ಸೊರಬರ ಎರಡನೆಯ ಕವನ ಸಂಕಲನ. ಈಚೆಗೆ ಕೆಲವು ಗಮನಾರ್ಹ ಕವಿತೆಗಳನ್ನು ಬರೆದ ತರುಣ ಕವಿಗಳಲ್ಲಿ ಸೊರಬರೂ ಒಬ್ಬರು. ಈ ಸಂಗ್ರಹದ ಇಪ್ಪತ್ತೆಂಟು ಕವಿತೆಗಳಲ್ಲಿ ಪ್ರಯೋಗ ಕುತೂಹಲದಿಂದ ಹಿಡಿದು ಪರಿಣತಿಯವರೆಗೆ ಅವರ ರಚನೆಗಳ ಎಲ್ಲ ಮಾದರಿಗಳಿವೆ. ಇವುಗಳಲ್ಲಿ ಕಿವಿಮಾತು, ಯೂರೋಪಿಗೆ ನೆಗಡಿಯಾದಾಗ, ನಕ್ಸಲೀಯನಿಗೊಂದು ಪತ್ರ, ಕ್ರುದ್ಧ ಯುವಜನ ಮತ್ತು ಗೋಪುರ ಕವಿತೆಗಳು ಈ ಸಂಕಲನದ ಉತ್ತಮ ಬರಹಗಳೆನ್ನಿಸುತ್ತದೆ.

'ಕಿವಿಮಾತು' ಕನ್ನಡದ ಉತ್ತಮ ಗಾಂಧಿ ಕವನಗಳಲ್ಲಿ ಒಂದು. ಗಾಂಧೀಜಿಯನ್ನು ಪ್ರಿಯ ಮೋಹನದಾಸ್ ಎಂದು ಸಂಬೋಧಿಸಿ ಆರಂಭವಾಗುವ ಈ ಕವನ ಸಂಬೋಧನೆಯ ರೀತಿಯಲ್ಲಿಯೇ ಗಾಂಧಿ ವ್ಯಕ್ತಿತ್ವದ ಬಗ್ಗೆ ತನ್ನ ನಿಲುವನ್ನು ಸೂಚಿಸಿಕೊಳ್ಳುತ್ತದೆ. ಆ ವ್ಯಕ್ತಿತ್ವದ ಭೋಳೇ ಪ್ರಶಂಸೆಗೆ ಹೊರಡದೆ ಅಥವಾ ಅದಕ್ಕೆ ಹೋಲಿಸಿಕೊಂಡು ತನ್ನ ಕುಬ್ಜತೆಗೆ ಅಳುತ್ತ ಕೂರದೆ ಈ ದೇಶದ ಕ್ರೂರ ವಾತಾವರಣದ ನಡುವೆ ಗಾಂಧಿ ಎಷ್ಟು ಸತ್ಯವಾಗುತ್ತಾರೆ ಎಂದು ವಿವೇಚಿಸುವ ಪ್ರಬುದ್ಧತೆ ಇಲ್ಲಿ ಕಾಣುತ್ತದೆ.

"ರಾಜಕೀಯದ ಹಸಬೆ ಚೀಲವನು ಹೆಗಲಿಗೇರಿಸಿ
ವಜನ ಹೆಚ್ಚಾಗಿ ಜಗ್ಗಿದರೂನು
ತಲೆಯೆತ್ತಿ ನಡೆದಿರಿ, ಇಲ್ಲ ಅಂದರೆ
ನಿಮ್ಮ ಹೃದಯ ವೈಶಾಲ್ಯ ಪ್ರಾಯೋಗಿಕ ಕುತೂಹಲ
ಬಳಸಿ ಬ್ರಹ್ಮಚಾರಿ ನಿಷ್ಠೆ ಆಗೀಗಿನ ಕುಚೇಷ್ಟೆ
ಯಾರಿಗೆ ಸ್ವಾಮೀ ಪ್ರಿಯವಾಗುತ್ತಿತ್ತು?"

ಎನ್ನುವಲ್ಲಿ ಹಲವರಿಗೆ ಬಹು ಪ್ರಿಯವಾಗಿ ತೋರಿದ ಗಾಂಧಿ ವ್ಯಕ್ತಿತ್ವದ ಕೆಲವು ವೈಚಿತ್ರ್ಯಗಳನ್ನು ಅನುಮಾನಿಸಿ ನೋಡುತ್ತದೆ ಕವನ. ಕುಟುಂಬ ಯೋಜನೆಯ ಪ್ರಚಾರದಂತೆ ಗಾಂಧೀಜಿಯ ಚಿತ್ರ ಎಲ್ಲೆಲ್ಲೂ ಕಾಣಸಿಗುವುದು, ಗಾಂಧಿ ಎಂದರೆ ಮನೆ ಜಗಲಿಯಷ್ಟು ಬಳಕೆಯಾಗುವುದು–ಇಲ್ಲೆಲ್ಲ ಎಂಥ ಸೂಕ್ಷ್ಮವಾದದ್ದನ್ನೂ ಬೀದಿ ಜಾಹೀರಾತಿಗಿಳಿಸಿ, ಅಗ್ಗವಾಗಿಸಿ ಮೆರೆಸುವ ಭಾರತೀಯ ವಿದ್ಯೆಯ ಗೇಲಿಯಿದೆ.

"ನನ್ನ ಕೇಳಿದರೆ ನಿಮ್ಮ ಆಳ ವೈಶಾಲ್ಯ ಘನವಾದದ್ದೆ
ಸಾಗರ ಎಷ್ಟೇ ದೊಡ್ಡದಾದರೇನು ಅದಕ್ಕೆ ತಕ್ಕಂತೆ
ನೀವು ಒಂದು ಮತ್ಸ್ಯವೊ ಕೂರ್ಮವೊ ಇದ್ದೀರ.
ಭೀಷ್ಮನ ಅವಸಾನ ನಿಮಗೆ ಕೈಸೆರೆಯಾಗಿ......
ನೀವೂ ನೊಂದ ನೋವೇ ನಿಮಗೆ ದೊಡ್ಡ ಕೊಡುಗೆ
ಶಿಖಂಡಿಗಳ ಹಿಂಡು ನಮ್ಮ ಕೊಡುಗೆ"

ಎಂಬಲ್ಲಿ ಗಾಂಧಿ, ಭಾರತ, ಗತ ಅವತಾರಗಳನ್ನೆಲ್ಲ ತಗಲಿಕೊಂಡು ಹೋಗುತ್ತದೆ ವಿಡಂಬನೆ.

"ಯೂರೋಪಿಗೆ ನೆಗಡಿಯಾದಾಗ" ಎಂಬ ಕವನ ಈ ದೇಶದ ಭಾವೀ ಚರ್ಯೆಯನ್ನು ಎಲ್ಲರಿಗಿಂತ ಮುಂಚೆಯೇ ಅಭಿನಯಿಸತೊಡಗುವ ಬಂಗಾಳೀ ಅತಿರೇಕಗಳನ್ನು ವಾಚ್ಯವಾಗಿ, ಆದರೂ ಶಕ್ತಿಪೂರ್ಣವಾಗಿ ಹೇಳುತ್ತದೆ. "ನಕ್ಸಲೀಯನಿಗೊಂದು ಪತ್ರ"ದಲ್ಲಿನ ಭಾವತೀವ್ರತೆ, ಬಿರುಸು ಪದ್ಯಕ್ಕೆ ಕಾಂತಿ ಕೊಡುತ್ತವೆ. ಪ್ರಶ್ನೆಯ ಭಂಗಿಯಲ್ಲೇ ಉದ್ವಕ್ಕೂ ಛೇಡಿಸುತ್ತ ಹರಿಯುವ ಮಾತಿನ ಚುರುಕಿನಿಂದ ಪದ್ಯ ಮೊನೆಗೊಳ್ಳುತ್ತದೆ. ಆದರೆ ಪಕ್ಷಪಾತವನ್ನು ಗೆದ್ದುಕೊಳ್ಳಲಾಗದ ಮನಸ್ಥಿತಿಯಿಂದಾಗಿಯೋ ಏನೋ ಕೊಂಚ ಬೈಗುಳದತ್ತ ವಾಲುತ್ತದೆ. ಅಧ್ಯಾತ್ಮ, ಸಾಹಿತ್ಯ, ಕಲೆಗಳಲ್ಲಿ ಬಂಗಾಳ ಸಾಧಿಸಿದ ಕ್ರಾಂತಿಗೂ, ಕಿಟಕಿ ಬಾಗಿಲು ಮುರಿದು ಬೀದಿಗೆ ಚಾಚಿರುವ ರಾಕ್ಷಸಹಸ್ತದ ವಿಕೃತಚೇಷ್ಟೆಗೂ ಆಳದಲ್ಲಿ ಸಂಬಂಧವಿದೆಯೆ ಎಂಬ ಅನುಮಾನದಲ್ಲಿ ಕವನ ಹೆಚ್ಚು ಅರ್ಥವಾಗುತ್ತಿತ್ತೇನೋ. ಶೀರ್ಷಿಕೆಯ ಅರ್ಥವನ್ನು ಕವನದ ಮುದ್ರಿತ ಆಕಾರದಲ್ಲಿಯೂ ತೋರಿಸುವ ಯತ್ನ ಸಾಹಿತ್ಯಕ್ಕೆ ಹೊಸದೇನಲ್ಲವಾದರೂ "ಗೋಪುರ ಕವಿತೆ" "ಬಿರುಸು ಮಳೆ"ಗಳ ಬಂಧ ಶೀರ್ಷಿಕೆಯ ಅರ್ಥಕ್ಕನುಗುಣವಾಗಿದೆ. ಆದರೆ "ಬೀಜ ಕವನ"ಗಳನ್ನು ಅಚ್ಚಿಟ್ಟಿರುವ ರೀತಿಯಲ್ಲಿ ಈ ಔಚಿತ್ಯ ಕಾಣುವುದಿಲ್ಲ.

**ನವಮಾನವ** ರಂ. ಶ್ರೀ. ಮುಗಳಿಯವರ ಐದನೆಯ ಕವನ ಸಂಕಲನ. ನವಮಾನವ ಎಂಬ ನೀಳ್ಗವನವೂ ಸೇರಿ ಇದರಲ್ಲಿ ಮೂರು ಕವನಗಳಿವೆ. ಮೊದಲ ಎರಡು ಕವನಗಳು ಆತ್ಮ ವೃತ್ತಾಂತಗಳಿಂದ ಕೂಡಿದ್ದು ಕವಿಜೀವ ಅನುಭವಿಸಿದ ಹಿಗ್ಗು ಕುಗ್ಗುಗಳ ಕಾವ್ಯಮಯ ವರ್ಣನೆಯಾಗಿದೆ. ನವಮಾನವನಾಗಬೇಕೆನ್ನುವ ಆಕಾಂಕ್ಷೆ, ಅದಕ್ಕಾಗಿ ನಡೆಸಿದ ಸಾಧನೆ. ಶೋಧ. ಆ ಶೋಧದ ಸೋಲುಗೆಲುವುಗಳು ಕವಿಯ ಲೌಕಿಕ ಜೀವನದ ಘಟನೆಗಳೊಡನೆ ಬೆರೆತು ಅದು ಕೇವಲ ವ್ಯಕ್ತಿಚರಿತ್ರೆಯಾಗದಂತೆ ಮಾಡಿವೆ. ಭಾವಮಯವಾದ ಮಾತಿನ ರೀತಿ ಹೃದ್ಯವಾಗಿದ್ದು ಕೆಲವು ಭಾಗಗಳು ಮನಸ್ಸನ್ನು ತಟ್ಟುತ್ತವೆ. "ಜಗದ ತಾಯಿಯೀವ ದಿವ್ಯದಾನಗಳೀ ಮಕ್ಕಳು" ಎಂದು ನಲಿವ ತಂದೆ ತನ್ನ ಮಗುವನ್ನು ದೂರದಲ್ಲಿರುವಾಗ ಕಳೆದುಕೊಂಡ ಪ್ರಸಂಗದ ಕೆಲವು ಸಾಲುಗಳನ್ನು ಇಲ್ಲಿ ನಿದರ್ಶನಕ್ಕಾಗಿ ನೋಡಬಹುದು.

ಆರು ತಿಂಗಳಲ್ಲಿ ಆರಿತೇನೊ ದೇಹದೀಪವು
ಎನಲು ಮೈಯ ಕಾಂತಿ ಕುಂದಿ ಬಂತು ಬೇನೆ ತಾಪವು
ದಿನವು ನಿನಗೆ ಉಣಿಸನಿತ್ತು ದಣಿಯದಿರುವ ಕೈಯಿದು
ಕೊನೆಯ ಚಣದಿ ಸನಿಯದಲ್ಲಿ ಎಂತು ಸುಳಿಯದಾದುದು
ಏನೊ ಕರ್ಮ ಯಾವ ಶಾಪ ಹೇಗೆ ಇರಲಿ ನಮ್ಮೆಡೆ
ನೀನು ಬಂದೆ ಹೋದೆ ಮರಳಿ ಕಾಣದಂಥ ಬಾನೆಡೆ
ಬೇಡಿ ಬಯಸಿ ಒಲಿದು ಕರೆದ ಮನೆಯೆ ಮುನಿಯಿತೆ
ಜನ್ಮಬಂಧ ಬದುಕು ನರಕ ಮರಣಮುಕ್ತಿಯಾಯಿತೆ?

ಎರಡನೆಯ ಕವನ 'ಚಾತಕವ್ರತ' ಚಾತಕ ಪಕ್ಷಿಯ ಸಂಕೇತದಲ್ಲಿ ಉನ್ನತ ಆದರ್ಶಗಳಿಗೆ ಮುಖಮಾಡಿ ನಿಂತ ಜೀವಿಗಳ ಸಾಧನೆಯನ್ನು ಬಣ್ಣಿಸಿ ಹಾಡುತ್ತದೆ. "ಜಗದ ನೀರು ಹರಿದು ಬಂದು ಕರೆದರೂ ಮುಗಿಲ ಹನಿಯ ಪಡೆವವರೆಗೆ ತಡೆದಿರು"ವ ಸಂಕಲ್ಪ ತೊಟ್ಟು ನಿಂತ ಚಾತಕ ಕೊನೆಯುಸಿರೆಳೆಯುವ ಸ್ಥಿತಿ ಬಂದರೂ ತನ್ನ ಸಂಕಲ್ಪಕ್ಕೆ ಅಂಟಿಕೊಳ್ಳುತ್ತದೆ. ಅದರ ವ್ರತಕ್ಕೆ ಕರುಣಿಸಿ ಬಂತೋ ಎಂಬಂತೆ ಮಳೆ ಹನಿಯುತ್ತದೆ. ಅದನ್ನು ಕುಡಿಯುತ್ತಲೇ ವ್ರತಸಿದ್ಧಿಯಾದ ಸಂತಸದಿಂದ ಚಾತಕದ ಪ್ರಾಣ ಹಾರುತ್ತದೆ. ಮೂರು ಮಾತ್ರೆಯ ಲಯವನ್ನು ವಿಶಿಷ್ಟ ರೀತಿಯಲ್ಲಿ ಬಳಸುವ ಈ ಕವನದಲ್ಲಿ ಬಿಗಿ ಹೆಣಿಗೆಯಲ್ಲಿ ಮೂಡುವ ದೇಸಿಕನ್ನಡ ವಿಶೇಷವಾಗಿ ರುಚಿಸುತ್ತದೆ.

ಜಕ್ಕವ್ವ ಜಾಣೆ ಎಂಬ ಕಡೆಯ ಕವನ ಹಲಸಂಗಿಯ ಕೋಟೆಗೆ ಸಂಬಂಧಿಸಿದ ಒಂದು ಐತಿಹ್ಯವನ್ನು ಆಧಾರವಾಗಿಟ್ಟುಕೊಂಡು ರಚಿಸಿರುವ ಕವನ. ತನ್ನ ಊರಿನ ಕೋಟೆ ನಿಲ್ಲಲೆಂದು ನೆಲದೊಳಗಿನ ಕತ್ತಲ ಮನೆಯನ್ನು ಹೊಕ್ಕ ಗರ್ಭಿಣಿಯ ತ್ಯಾಗವನ್ನು ಬಣ್ಣಿಸುವ ಈ ಕಥೆ ಜಾನಪದ ಧಾಟಿಯಲ್ಲಿಯೇ ರಚಿತವಾಗಿದ್ದು ತುಂಬ ಮನೋಜ್ಞವಾಗಿದೆ.

**ಕಪ್ಪು ದೇವತೆ** ಪ್ರೇಮಕುಮಾರಿಯ ಜಾತಕದಿಂದ ಕಾವ್ಯಲೋಕಕ್ಕೆ ಪರಿಚಿತರಾದ ಸುಮತೀಂದ್ರ ನಾಡಿಗರ ಎರಡನೆಯ ಕವನ ಸಂಕಲನ. ಇದರಲ್ಲಿ ಇಪ್ಪತ್ತನಾಲ್ಕು ಕವನ

ಗಳಿದ್ದು ಅವುಗಳನ್ನು ಮೂರು ಭಾಗಗಳಾಗಿ ಮಾಡಲಾಗಿದೆ. "ಇಲ್ಲಿನ ಕವನಗಳೆಲ್ಲ ಮುಖ್ಯವಾಗಿ ಚಾತುರ್ಯ ಪ್ರಧಾನವಾಗಿ ಆದರೂ ಅಸಹಜ. ಕೇವಲ ಬುದ್ಧಿಜನ್ಯ ಎನ್ನಿಸದಂತೆ ರೂಪುಗೊಂಡಂಥ"ವಾದರೂ ಸಂಕಲನದ ಸಫಲ ಕವನಗಳ ಮುಖ್ಯ ಲಕ್ಷಣ ಗಳನ್ನು ಅಡಿಗರ ಮಾತಿನಲ್ಲಿ ಹೀಗೆ ಹೇಳಬಹುದು: "ತನ್ನೊಂದು ಭಾವವನ್ನೋ ಒಂದು ವಿಶಿಷ್ಟ ಮನಸ್ಥಿತಿಯನ್ನೋ ತನ್ನಿಂದ ಹೊರಗೆ ದೂರದಲ್ಲಿಟ್ಟು ನೋಡಿ ಅದರಲ್ಲಿ ಸೇರಿ ಕೊಂಡಿರಬಹುದಾದ ಅನವಶ್ಯವೂ ಬಾಲಿಶವೂ ಆದ ಭಾವಾತಿರೇಕವನ್ನು ಚಿಂತನದ ಬೆಂಕಿಯಲ್ಲಿ ಸುಟ್ಟು ತೆಗೆದು ಬಡಿದು ಬಾಗಿಸಿ ... ಕುಟ್ಟಿ ತಟ್ಟಿ ನಿರ್ದಿಷ್ಟವಾದ ಆಕಾರ ವನ್ನು ರೂಢಿಸಿಕೊಳ್ಳುವ ಕ್ರಿಯೆ ... ನಮ್ಮ ಸಾಮಾನ್ಯ ಭಾವಗೀತ ಕಾವ್ಯದಲ್ಲಿ ಕಾಣದೆ ಇರುವಂಥ ಗುಣ. ಈ ಗುಣದ ಮೂಲಕವೇ ಇಲ್ಲಿ ಕೆಲವು ತೀರ ತೆಳ್ಳಗಿನವು ಎನ್ನುವಂಥ ಕವನಗಳೂ ಪ್ರೌಢತೆಯ ಲಕ್ಷಣಗಳನ್ನು ಪಡೆದು ನಮ್ಮ ಮನಸ್ಸಿಗೆ ತೃಪ್ತಿಕೊಡಲು ಸಮರ್ಥವಾಗುತ್ತವೆ. ಇದರಿಂದ ಹುಟ್ಟುವ ಈ ಕವನಗಳಿಗೆಲ್ಲ ಸಾಮಾನ್ಯವಾಗಿರುವ ಗುಣ ಎಂದರೆ ಕಷಾಯಗುಣ. ಮನಸ್ಸಿನ, ಭಾವನೆಯ ಆರೋಗ್ಯಕ್ಕೆ ಅತ್ಯವಶ್ಯಕವಾಗಿ ರುವ ಈ ಗುಣ ವ್ಯಂಗ್ಯವಾಗಿ, ವಿಡಂಬನವಾಗಿ, ಪ್ರತಿದ್ವಂದ್ವಿ ಪ್ರಜ್ಞೆಯ ಅಂಶವಾಗಿ ವ್ಯಕ್ತಗೊಂಡು ಯಾವುದೂ ಅತಿಯಾಗಲು ಬಿಡದೆ ಹತೋಟಿಯಲ್ಲಿಟ್ಟು ಒಟ್ಟು ಕವನ ದಲ್ಲಿ ಒಂದು ಆರೋಗ್ಯಕರವಾದ ಜೀವನದೃಷ್ಟಿಯನ್ನು ಮೂಡಿಸಲು ಸಮರ್ಥವಾಗು ತ್ತದೆ."

ಕಪ್ಪುದೇವತೆ, ಉಲೂಪಿ, ನೆನಪು ಈ ಕವನಗಳು ವಿಶೇಷವಾಗಿ ಮನಸೆಳೆಯು ತ್ತವೆ. ಒಂದು ಸಂಕೇತದ ಮೂಲಕವೇ ಅನುಭವವನ್ನು ಶೋಧಿಸಿ ಹಿಡಿಯುವ ಪ್ರಯತ್ನ ಇಲ್ಲಿ ಕಾಣುತ್ತದೆ. ಕ್ರೂರವಾಗಿ ಶಿಕ್ಷಿಸಿದರೂ ಮೇರೆಯಿಲ್ಲದೆ ಪ್ರೀತಿಸುವ (ನಾಯಕನ ಬಾಲ್ಯದ) ಕರಿಮುದುಕ ಸತ್ತರೂ ಕಪ್ಪುದೇವತೆಯಾಗಿ ಬಾಲ್ಯದ ತೀವ್ರಾನುಭವಗಳ ಪ್ರತೀಕವಾಗಿ ನಾಯಕನ ಅಂತರಂಗದಲ್ಲಿ ನಿಂತು ಕಾಡುವ ಚಿತ್ರಣ ಕಪ್ಪುದೇವತೆಯಲ್ಲಿ ಮನೋಜ್ಞವಾಗಿ ಬಂದಿದೆ. ನೆನಪು ಉಲೂಪಿಗಳು ನಾಗಕನ್ಯೆಯಾದ ಉಲೂಪಿಗೆ ಕಾತರಿ ಸುವ ಅರ್ಜುನ ವಿರಹವನ್ನು ವರ್ತಮಾನದ ವ್ಯಾಘ್ರಬಾಧೆಗೆ ಮೂರ್ತಿ ನಿಲ್ಲಿಸುವ ಸುಂದರ ಕವನಗಳು. ಅನ್ಯಭಾಷೆಯ ಬಿಗಿಯಾದ ಕವನಗಳನ್ನು ನಾಡಿಗರು ಸೊಗ ಸಾಗಿ ಅನುವಾದ ಮಾಡಬಲ್ಲರು ಎನ್ನಲು "ನಾಚುವ ಪ್ರೇಯಸಿಗೆ" ಕವನ ನಿದರ್ಶನ. ನೀನು, ಗುಟ್ಟು ಮೊದಲಾದ ಪದ್ಯಗಳಲ್ಲಿ ಮೂರು ಸಾಲಿನ ಬಂಧ(stanza)ಗಳ ಹೊಸ ಉತ್ತಮ ಛಂದೋವಿಧಾನದ ಪ್ರಯತ್ನವಿದೆ. ಹೊಸ ಕಾವ್ಯ ಕೇವಲ ಶೃಂಗಾರದ ಬೆನ್ನು ಹತ್ತಿದೆ ಎನ್ನುವ ಮಾತಿಗೆ 'ಅಬ್ದುಲ್ ಹಮೀದ' ಉತ್ತರವೆನ್ನಬಹುದು. ವಿಡಂಬನೆಗಳಲ್ಲಿ ಕವಿಭೂಪ, ವಸಂತಾಶಾಸ್ತ್ರಿ – ಇವು ದ್ವಿಪದಿಯ ಸಮರ್ಥ ಬಳಕೆಗೆ ಮತ್ತು ನಾಡಿಗರ ಮೊನೆಮಾತಿನ ಕಸುವಿಗೆ ಉತ್ತಮ ಸಾಕ್ಷಿಗಳು.

ಪರಿವೃತ್ತ ಕವನಸಂಕಲನದಲ್ಲಿ ಕೆಲವು ಉತ್ತಮ ಪದ್ಯಗಳಿಂದ ತಮ್ಮ ಕಾವ್ಯಶಕ್ತಿಯ ಬಗ್ಗೆ ಭರವಸೆ ಹುಟ್ಟಿಸಿದ ಎಚ್. ಎಸ್. ವೆಂಕಟೇಶಮೂರ್ತಿ ಎರಡನೆ ಸಂಕಲನ **ಬಾಗಿಲು ಬಡಿವ ಜನ**ದಲ್ಲಿ ಆ ಭರವಸೆಯನ್ನು ನಿಜಮಾಡಿ ತೋರಿಸಿದ್ದಾರೆ. ಇವರ ಎಲ್ಲ

ಕವನಗಳಲ್ಲೂ ಎದ್ದು ತೋರುವ ಒಂದು ಅಂಶವೆಂದರೆ ಮೊದಲಿಂದ ಕಡೆವರೆಗೆ ತೊಡಕಿಲ್ಲದೆ ಓದಿಸಿಕೊಂಡು ಹೋಗುವ ಅವುಗಳ ವಾಚನೀಯತೆ. ನಮ್ಮ ದೈನಂದಿನ ವ್ಯವಹಾರಗಳ ನಿರ್ವಹಣೆಗೆ ಒದಗುವ ಮಾತುಗಳಲ್ಲಿಯೇ ಇವರ ಕವನಗಳ ಪೂರ್ಣಬಂಧ ಸಿದ್ಧವಾಗುತ್ತದೆ. ಮಾತಿನ ಬಳಕೆಯಲ್ಲಿ ತೋರುವ ಚಾತುರ್ಯದಿಂದಾಗಿ ಹೆಜ್ಜೆಹೆಜ್ಜೆಗೂ ಮಾತು ವಾಚ್ಯಾನ್ಯವಾದ ಲಕ್ಷಣ ವ್ಯಂಗ್ಯಗಳನ್ನು ಪ್ರಕಟಿಸುತ್ತದೆ. ಧಾರಾವಾಹಿ, ಹುತ್ತದ ಹಾಡು ಇಂಥ ಕವನಗಳಲ್ಲಿ ಇದಕ್ಕೆ ಉದ್ದಕ್ಕೂ ನಿದರ್ಶನಗಳಿವೆ. ಇಡೀ ಕವನ ವ್ಯವಸ್ಥಿತವಾದ ಸಂಕೇತದ ಬೆನ್ನಮರೆಯಲ್ಲಿ, ಕಂಡಿತೋ ಇಲ್ಲೋ ಎಂಬಂತೆ ವಾಚ್ಯವನ್ನು ಅಲ್ಲಲ್ಲಿ ಕೊಂಚ ತೋರುತ್ತ ಸಾಗುತ್ತದೆ. ಪ್ರಸನ್ನವಾದ ಮಾತಿನ ಹೆಣಿಗೆ, ತಾಳಮುಕ್ತವಾದ ಮಾತಿನಿಂದ ಕೊಂಚ ಮೇಲಕ್ಕೆತ್ತಿ ತೋರಲು ಬೇಕಾದ ವಾಕ್ಯಲಯ. ಸತಾಯಿಸದ ಸರಳಸಂಕೇತ – ಇವುಗಳಿಂದ ಇವರ ಬರೆಹ ಕಾವ್ಯವನ್ನು ವಿಶೇಷ ಅಭ್ಯಾಸ ಮಾಡದವರಿಗೂ ಆಪ್ಯಾಯಮಾನವಾಗುತ್ತದೆ. ಆದರೆ ಕವನದಲ್ಲಿ ವ್ಯಕ್ತವಾಗುವ ಅನುಭವ ಕುದಿದುಕ್ಕುವ ತೀವ್ರತೆಯಲ್ಲಿ ಪ್ರತ್ಯಕ್ಷವಾಗುವುದಕ್ಕಿಂತ ಚುರುಕಾದ ಪ್ರೇಕ್ಷಕ ವಿವರಣೆಯಂತೆ ಬರುವುದೇ ಹೆಚ್ಚು. ಪರಿವೃತ್ತ ಸಂಕಲನದ ಬಗ್ಗೆ ಹೇಳುತ್ತ "ಲಯ ಭಾಷೆಗಳ ಮೇಲೆ ಇವರಿಗೆ ಲಭಿಸಿರುವ ಹಿಡಿತ ನಿಜವಾಗಿಯೂ ಶ್ಲಾಘನೀಯ" ಎಂಬ ಅಡಿಗರ ಮಾತು 'ಬಾಗಿಲು ಬಡಿವ ಜನ'ಕ್ಕೂ ಅನ್ವಯವಾಗುತ್ತದೆ. ಎಲ್ಲ ಕವನಗಳ ಉದ್ದಕ್ಕೂ ವ್ಯಂಗ್ಯ ಬಲದಿಂದ ಸಾಧ್ಯವಾಗುವ ಲಘುವಿನೋದದ ತೆಳುಗೆರೆಯೊಂದು ಅಂಚು ಹೆಣೆದು ಬರುತ್ತದೆ. ಕಡೆಯ ಪದ್ಯವಾದ 'ವನವಿಹಾರವೆಂಬ ಖಂಡಕಾವ್ಯವು' ಎಂಬ ಪದ್ಯದಲ್ಲಂತೂ ಹಾಸ್ಯಸಿಂಚಿತವಾದ ವಿಡಂಬನೆ ಕೊಂಚ ದಟ್ಟವಾಗಿಯೇ ಬರುತ್ತದೆ.

ವೆಂಕಟೇಶಮೂರ್ತಿಯವರಿಗೆ ಶಬ್ದದ ನಾದ ಅರ್ಥಗಳ ಕಡೆಗೆ ವಿಶೇಷ ಲಕ್ಷ್ಯವಿದೆ. ಇದರಿಂದಾಗಿ ಗದ್ಯಗಂಧಿಯಾದ ಬರೆಹದಲ್ಲೂ ಹಿತವಾದ ನಾದಯೋಜನೆಯಿರುವುದು, ಸಾಮಾನ್ಯವಾಗಿ ತೋರುವ ಮಾತಿನ ಒಡಲಿನಿಂದಲೂ ವಿಶೇಷ ಅರ್ಥ ಸ್ಫುರಿಸುವುದು ಕಾಣುತ್ತದೆ. ಒಬ್ಬ ಸಹಜಕವಿಗೆ ಬೇಕಾದ ಕಾರಯಿತ್ರೀ ಪ್ರತಿಭೆಯ ಭಾಷಾಪರಿಕರಗಳೆಲ್ಲ ಸಾಕಷ್ಟು ಪ್ರಮಾಣದಲ್ಲಿ ಇವರಿಗೆ ಒದಗಿವೆ. ಸಂಕೇತಗಳನ್ನು ತುಂಬ ಹಿಂಜುವುದನ್ನು ಬಿಡುವುದರ ಜೊತೆಗೆ ಅನುಭವವನ್ನು ಇನ್ನಷ್ಟು ತೀವ್ರವಾಗಿ ಪ್ರಕಟಿಸಬಲ್ಲ ರಕ್ತವತ್ತಾದ ಭಾಷೆಯನ್ನು ಬೆಳೆಸಿಕೊಂಡರೆ ಇನ್ನೂ ಉತ್ತಮವಾದ ಕವಿತೆಗಳನ್ನು ಇವರು ಸೃಷ್ಟಿಸಬಲ್ಲರು.

**ನಾಕು ಹೆಜ್ಜೆ-ನೂರು ಮೆಟ್ಟಿಲು** ನಲ್ಲಿ ಒಂದು ನೀಳ್ಗವನವೂ ಸೇರಿ ಏಳು ಕವನಗಳಿವೆ. ಇವುಗಳಲ್ಲಿ "ಬಸವಣ್ಣನ ಬಾಸಿಂಗಬಲ" ಎನ್ನುವ ಕೃತಿ ಹಳ್ಳೂರ ಬಸವಣ್ಣನ ಬಾಸಿಂಗೋತ್ಸವವನ್ನು ನೆನೆದು ಬರೆದದ್ದು. ಜಾನಪದ ಶೈಲಿಯಲ್ಲಿ ರಚಿತವಾಗಿರುವ ಈ ಹಾಡಿನಲ್ಲಿ ಮನಸೆಳೆಯುವ ನಾಲ್ಕಾರು ಸಾಲುಗಳಿವೆ. "ತೂಗು ತೊಟ್ಟಿಲಾ" ಎನ್ನುವ ಪದ್ಯ ಕೂಡ ಹಾಡಾಗಿ ಹೇಳಲು ಬರುವಂಥದು. ಆದರೆ ಬಸವಣ್ಣನ ಬಾಸಿಂಗ ಬಲದ ಮಾತಿನ ಲವಲವಿಕೆ ಇದಕ್ಕಿಲ್ಲ. ಶ್ರೀ ಅರವಿಂದರ ಕಥೆಯನ್ನು ಜಾನಪದ ಶೈಲಿಯಲ್ಲಿ ಹೇಳುವ "ಸಾವಿರದೂರಿನ ಕಮಲದ ಕತೆ" ಒಂದು ಹೃದ್ಯವಾದ ಲಾವಣಿ. ಅರ

ವಿಂದರನ್ನು ಸಾವು ಇರದ ಊರಿನ ಕಮಲವೆಂದು ಇಲ್ಲಿ ವರ್ಣಿಸಲಾಗಿದೆ. ಕಮಲದ ವರ್ಣನೆಯಲ್ಲಿ ಬರುವ "ಭೂಮಿ ಅಗಲ ಪಕಳಿ ಬಿಚ್ಚಿ ತಲಿ ತೂಗ್ಯೆತ್ರಿ, ಮುಗಿಲ ತನಕ ಮುಖ ಎತ್ತಿ ಧ್ಯಾನಾ ಮಾಡ್ಯೆತ್ರಿ" ಎಂಬಂಥ ಸಾಲುಗಳು ಆಕರ್ಷಕವಾಗಿವೆ. ಆದರೆ "ಭಾರತ್‌ಗಾಳಿ" "ರೋಮನ್ರ ಕತಿ" "ಜರ್ಮನ್ ದೇಶದಾಗ್" ಎಂಬಂಥ ಶ್ರುತಿಗೆ ಹಿತವಲ್ಲದ ಪ್ರಯೋಗಗಳನ್ನು ತಪ್ಪಿಸಬಹುದಾಗಿತ್ತು.

"ಹೊಸ ಮನಶಾ ಅಥವಾ ಶಿವನ್ನ ಹೊರು ಪಶು" ಎಂಬ ವಿಚಿತ್ರ ಶೀರ್ಷಿಕೆಯ ಪದ್ಯ ಈ ಸಂಕಲನದ ನೀಳ್ಗವನ. ಜಾನಪದ ಶೈಲಿ ಮತ್ತು ಸರಳ ನಡಿಗೆಗಳೇ ಕಾರಣವಾಗಿ ತಕ್ಕ ಮಟ್ಟಿಗೆ ಓದಿಸಿಕೊಂಡು ಹೋಗಬಲ್ಲ ಈ ಪದ್ಯ ಬಹಳ ಸರಳ ಚಿಂತನೆಯ, ಆವೇಶಮಯವಾದ ರಚನೆಯಾಗಿದ್ದು ಮುಗ್ಧರ ಭಾವತಪ್ತ ಭಾಷಣದಂತಿದೆ.

'ಮುಗಿಯದ ಮಾಯೆ' ಸಂಕಲನದ ನಂತರ ರಾಘವರು ಪ್ರಕಟಿಸಿರುವ ಕಾವ್ಯ ಕೃತಿ **ಹಂಸಪಥ.** ಮುಗಿಯದ ಮಾಯೆಯನ್ನು ಬಿಟ್ಟು ಮುಂಚಿನ ಕೆಲವು ಸಂಕಲನಗಳಿಂದ ಆಯ್ದ ಕೆಲವು ಪದ್ಯಗಳೂ ಇದರಲ್ಲಿವೆ. ಮೂಲವನ್ನು ಅಚ್ಚುಕಟ್ಟಾಗಿ ಬಿಂಬಿಸುವ ಕೆಲವು ಅನುವಾದಗಳು ಮತ್ತು ಮುಕ್ತಕಗಳೂ ಇಲ್ಲಿ ಸೇರಿವೆ. ಒಂದು ವಿಚಾರವನ್ನು ವಿವರವಾಗಿ, ಸರಳವಾಗಿ ಅಚ್ಚುಕಟ್ಟಾಗಿ, ತಾಳಬದ್ಧವಾದ ಲಯದಲ್ಲಿ ಕಟ್ಟಿಕೊಡಬಲ್ಲ ಸಾಮರ್ಥ್ಯ ಇಲ್ಲಿಯ ಎಲ್ಲ ಕವಿತೆಗಳಲ್ಲಿಯೂ ಕಾಣುತ್ತದೆ. ಭಾಷೆಯ ಸೃಷ್ಟ್ಯಾತ್ಮಕ ಬಳಕೆ ಅಷ್ಟಾಗಿ ಕಾಣುವುದಿಲ್ಲವಾದರೂ ಉತ್ತಮ ಕಾವ್ಯಗಳ ಅಭ್ಯಾಸ ಪಾಂಡಿತ್ಯಗಳಿಂದ ಪರಿಷ್ಕೃತವಾದ ಖಚಿತಬಂಧ ಎಲ್ಲ ಕವನಗಳಲ್ಲಿಯೂ ಇದೆ. ಸುಪ್ರಭಾತ, ಲೋಕದ ಪರಿ–ಇಂಥ ಹಾಸ್ಯಗೀತೆಗಳು ಓದುಗನ ಮುಖದ ಬಿಗು ಸಡಲಿಸುತ್ತವೆ.

ರಾಜರತ್ನಂ ಅವರ **ಜಪಾನಿನ ಹಿಮಗಿರಿ ಮತ್ತು ಇತರ ಕವನಗಳ**ಲ್ಲಿರುವ ಹದಿನೆಂಟು ಪದ್ಯಗಳಲ್ಲಿ ಚೀನ ಜಪಾನುಗಳನ್ನು ಕುರಿತೇ ಎಂಟು ಪದ್ಯಗಳಿವೆ. ಜಪಾನಿನ ಪ್ರಸಿದ್ಧ ಪರ್ವತ ಫೂಜಿಯಾಮ, ಜಪಾನೀಯರ ನಂಬಿಕೆ ಪ್ರಕಾರ ಆ ದೇಶ ಆದಿಯಲ್ಲಿ ಸೃಷ್ಟಿಯಾದ ರೀತಿ, ಧರ್ಮಪರನಾದ 'ನಿನ್ರೊಕು' ಎಂಬ ರಾಜನ ವೃತ್ತಾಂತ ಇವುಗಳನ್ನು ಕುರಿತ ಪದ್ಯಗಳು ಆ ನೆಲದ ಹಿರಿಮೆಯನ್ನು ಕಥಾತ್ಮಕವಾಗಿ ಪರಿಚಯಿಸಿ ಕೊಡುತ್ತವೆ. ಅಲ್ಲಾನ ಕರುಣೆ ಎಂಬ ಕಥನಕವನ ಕುತೂಹಲಕರವಾದ ಪ್ರಸಂಗವೊಂದರ ಮೂಲಕ ದೈವ ಕರುಣೆಯ ರೀತಿಯನ್ನು ನಾಟಕೀಯವಾಗಿ ಚಿತ್ರಿಸುತ್ತದೆ. ಉಳಿದ ಪದ್ಯಗಳು ಪರಿಚಿತ ವಿಚಾರಗಳನ್ನು ಪ್ರಾಸಲಯಬದ್ಧವಾಗಿ ಕಟ್ಟಿಕೊಡುತ್ತವೆ.

ಗುಂಡ್ಮಿ ಚಂದ್ರಶೇಖರ ಐತಾಳರ **ಹೂವಿನ ಕೋಲು** ಸಂಕಲನದ ಶೀರ್ಷಿಕೆ 'ಶಿಲಾಲತೆ' ಯನ್ನು ಅನುಕರಿಸಿ ಹುಟ್ಟಿದ್ದು. ಶೀರ್ಷಿಕೆಯಂತೆಯೇ ನಾವು ಅನುತ್ತೀರ್ಣರು ಎನ್ನುವ ಪದ್ಯವೂ ಕೆ. ಎಸ್. ನ. ಅವರ ಹಿಂದಿನ ಬೆಂಚಿನ ಹುಡುಗರು ಎಂಬ ಹಾಸ್ಯಕವನದ ಮತ್ತು ಅಡಿಗರ ಗೊಂದಲಪುರದ ಕೆಲವು ಬಾಹ್ಯಾಂಶಗಳ ಪ್ರಭಾವಕ್ಕೆ ಸಿಕ್ಕಿದೆ. ಟಾಗೋರರ ಕವನಗಳ ಕೆಲವು ಅನುವಾದಗಳು ಮಾತ್ರ ತುಂಬ ಲಲಿತವಾಗಿವೆ. ಅವರೆ ಆರಿಸಿಕೊಂಡಿರುವ ಕವನಗಳು ಸಾಮಾನ್ಯ ಮಟ್ಟದವು: ಅನುವಾದಕ್ಕೆ ಸಲೀಸು

ಬಗ್ಗುವಂಥವು. ಉಳಿದವಲ್ಲಿ ಹೆಚ್ಚಿನವು ವ್ಯಕ್ತಿಗೀತೆಗಳು. ಇವುಗಳಲ್ಲಿ ಡಿ. ಎಲ್. ಎನ್. ಅವರನ್ನು ಕುರಿತ ಪದ್ಯ ತುಂಬ ಚೆನ್ನಾಗಿದೆ. ಈ ವ್ಯಕ್ತಿಗೀತೆಗಳೆಲ್ಲ ಬಾಹ್ಯ ವಿವರಗಳಲ್ಲಿ ಕೊಂಚ ಭಿನ್ನವಾಗಿ ಕಂಡರೂ ಮೂಲತಃ ಪ್ರಶಂಸೆಗಾಗಿಯೇ ಬರೆದುವಾದುದರಿಂದ ವಿಶೇಷಣಗಳ ಸರಮಾಲೆಯಾಗಿದ್ದು ಫಾರ್ಮುಲಾ ಕವನಗಳಾಗಿಬಿಡುತ್ತವೆ. ಕೆಲವದ ರಲ್ಲಿ ಕೊಂಡಾಟ ಉತ್ಪ್ರೇಕ್ಷೆಯನ್ನೂ ನಾಚಿಸುತ್ತದೆ. ಸಂಬಂಧಿಸಿದ ವ್ಯಕ್ತಿತ್ವಗಳ ಆತ್ಮೀಯ ತಿಳಿವಳಿಕೆ ಇಲ್ಲದಿರುವುದರಿಂದಲೋ ಏನೋ, ದೂರದ ಪ್ರಶಂಸಾಗೀತಗಳಾಗಿಬಿಟ್ಟು ಮಾನವೀಯವಾಗುವುದರ ಬದಲು 'ಅಲೌಕಿಕ'ವಾಗಿವೆ ಎಂದರೆ ಸರಿಯಾದೀತು. ಅನೇಕ ವ್ಯಕ್ತಿಗಳನ್ನು ಅವರ ಕೃತಿಗಳ ಹೆಸರನ್ನೇ ಬಳಸಿ ಹೊಗಳುವ ಚಮತ್ಕಾರ ಪದ್ಯಗಳು ಎಷ್ಟು ಮೇಲುಮೇಲಿನವು ಎಂದು ತಿಳಿಯಬಹುದು. ಫ್ರಾಸ್ಟ್ ಕವಿಯ Stopping by Woods on a Snowy Evening ಕವನದ ಕಡೆಯ ನಾಲ್ಕು ಸಾಲನ್ನು ಮಾತ್ರ ಅನುವಾದ ಮಾಡಿರುವುದರ ಅನೌಚಿತ್ಯ ಹೋಗಲಿ, ಐತಾಳರು ಮೂಲದ ಅರ್ಥವನ್ನೇ ಗಮನಿಸದಿರುವುದು ಆಶ್ಚರ್ಯ ತರಿಸುವ ಸಂಗತಿ.

ಸಂಕಲನದ ಮುನ್ನುಡಿಯಲ್ಲಿ ಐತಾಳರು ಬರೆಯುವ ಆರು ಪುಟಗಳ ಅರ್ಥಹೀನ ಬರೆಹ ಮತ್ತು 'ಅಷ್ಟಕಸುಬಿ' ಎಂಬ ಪದ್ಯನಾಮದ ರಚನೆ ಅವರ ಬರೆಹದ ಅಪ್ರಬುದ್ಧ ತೆಗೂ ಅಸ್ವಸ್ಥತೆಗೂ ಸಾಕ್ಷಿಯಾಗಿದೆ. ಪದ್ಯರಚನೆಯಲ್ಲಿ ಮಧ್ಯಮ ದರ್ಜೆಯ ಕೌಶಲ್ಯ ವುಳ್ಳ ಐತಾಳರು ಬರೆಹದ ಬಗ್ಗೆ ಗಂಭೀರದೃಷ್ಟಿ ಬೆಳಸಿಕೊಂಡಲ್ಲಿ ಉತ್ತಮ ಕವಿತೆಗಳನ್ನು ಬರೆಯಬಹುದೆನ್ನಿಸುತ್ತದೆ.

**ಚಾದಗೆ** ಜಚನಿಯವರ ಮೂರನೆಯ ಕಾವ್ಯಕೃತಿ. "ನಿವೇದನ ಸಂವೇದನ ಗಳೆಂಬ ಕವನ (ಸಂಕಲನ?) ಗಳ ಬಳಿವಿಡಿದು ಈ ಚಾದಗೆ ಹಾರಿ ಬಂದಿದೆ, ತೋರಿ ನಿಂತಿದೆ." ಇದರಲ್ಲಿ ಕೇದಗೆ ತಾವರೆಗಳಂಥ ಹೂವುಗಳಿಂದ ಹಿಡಿದು ನವಿಲು, ಕೋಗಿಲೆ ರನ್ನವಕ್ಕಿಗಳಂಥ ಹಕ್ಕಿಗಳ ವರೆಗೆ ಬಗೆಬಗೆಯ ವಿಷಯದ ಪದ್ಯಗಳಿರುವುದಲ್ಲದೆ 'ಅನು ಭಾವ ಗೀತೆ'ಗಳೂ ಇವೆ. ಇವುಗಳಲ್ಲಿ ಹಾಡಲು ಬರುವಂಥ ಬರೆಹಗಳೂ ಇವೆ. ಪದ್ಯ ರಚನೆಯಲ್ಲಿ ತೊಡಗಿದ ಮನಸ್ಸು ಪದಗಳ ನಾದಕ್ಕೇ ತನ್ನನ್ನು ಪೂರ್ತಿ ತೆತ್ತುಕೊಂಡಾಗ ಮಾತ್ರ ಇಂಥ ರಚನೆಗಳು ಸಾಧ್ಯ. ಜಚನಿಯವರು ಭಾವಾವೇಶದಿಂದ ಹುರಿಗೊಂಡು ಪದನಾದವನ್ನು ಸುಖಿಸುವ ರೀತಿ ಕುತೂಹಲ ಹುಟ್ಟಿಸುವಂಥದು. ಕೆಲವು ಪದ್ಯಗಳು ಸೂರ್ಯಸ್ಪಷ್ಟವಾಗಿವೆ; ಮತ್ತೆ ಕೆಲವು ತೀರ ಅಸ್ಪಷ್ಟವಾಗಿವೆ. ಅಸ್ಪಷ್ಟತೆಗೆ ಕಾರಣ ಮಾತಿನ ಆಳ ಎತ್ತರಗಳನ್ನೇ ಅಣಕಿಸಬಲ್ಲ ಅನುಭವ ಸೂಕ್ಷ್ಮಗಳಲ್ಲ; ಮಾತಿನ ಮರ್ಮ ಗಳನ್ನು ಬೆದಕಿ ತಿಳಿಯುವುದಕ್ಕೇ ಒಪ್ಪದ ಮನೋವೃತ್ತಿ. ಲೇಖಕರು ತಮ್ಮ ಮುನ್ನುಡಿ ಯಲ್ಲಿ ಹೇಳಿರುವ ಮಾತನ್ನೇ ಗಮನಿಸಿದರೂ ಸಾಕು, ಇದು ತಿಳಿಯುತ್ತದೆ.

"ಕವಿಯ ರಸ ಆಳ, ಭಾವ ನೀಳ, ಕಲ್ಪನೆ ಬಿತ್ತರ, ಯೋಜನೆ ಅನಂತ, ವಸ್ತು ನಿಗೂಢ. ಕವಿಯ ಅನುಭವ ಚಿರವಿನೂತನ. ಅಂಥವನ ಕವನದ ಅನುಭವದ ಒಳ ಪ್ರವೇಶ ಕಷ್ಟಕರವಾಗಿ ತೋರಬಹುದು. ಸಹಾನುಭೂತಿಯಿಂದ ಶ್ರಮಿಸಿದರೆ ಸಾಧ್ಯ; ಸುಕರ; ಸುಖಕರ."

ಶ್ರೀಮತಿ ಗು. ಶಂಕರಮ್ಮನವರ **ಹೊನಲು** ಅವರ ಎರಡನೆಯ ಕವನಸಂಗ್ರಹ. ಇವರ ತುಂಬ ಭಕ್ತಿಭಾವದಿಂದ ಕೂಡಿದ ಪದ್ಯಗಳೇ ಇವೆ. ಎಲ್ಲ ಪದ್ಯಗಳೂ ಅತ್ಯಂತ ಸರಳವಾಗಿದ್ದು ರಚನೆಗಳಲ್ಲಿ ಮುಗ್ಧತೆ ಎದ್ದು ಕಾಣುತ್ತದೆ. ಇವರ ಪದವಿನ್ಯಾಸದ ರೀತಿಗೆ ಒಂದು ಉದಾಹರಣೆ:

ಮಚ್ಚರದ ನಂಜು ಬರಲಿ
ಕಿಚ್ಚಿನಾ ಪಂಜು ಉರಿಯಲಿ
ಕೆಚ್ಚಿನಾ ಹುಂಜ ಹಾರದಿರಲಿ
ನಚ್ಚಿನಾ ಕುಂಜರಾ ಓಡದಿರಲಿ

ಶ್ರೀ ಜಚನಿಯವರು ಈ ಸಂಕಲನದ "ಕವನ ಕವನವನ್ನೂ ಕೈಯಾಡಿಸಿ ಸರಿಪಡಿಸಿದ್ದಾರೆ". ಇದನ್ನು ಮುಕ್ತ ಕಂಠದಿಂದ ಹೊಗಳಿ ಅವರೇ ಒಂದು ಮುನ್ನುಡಿಯನ್ನೂ ಬರೆದಿದ್ದಾರೆ. ಈ ಸಂಕಲನ ಅವರಿಗೇ ಅರ್ಪಿತವಾಗಿದೆ.

ಬೇರೆ ಬೇರೆಯವರ ಕವಿತೆಗಳನ್ನು ಸಂಗ್ರಹಿಸಿರುವ ಒಟ್ಟು ಏಳು ಕಾವ್ಯಸಂಗ್ರಹಗಳು ಈ ವರ್ಷ ಹೊರಬಂದಿವೆ. ಅವುಗಳಲ್ಲಿ ಆ್ಯಂಥಾಲಜಿ, ಸಮರಗೀತೆ, ಹಾಡುಗಳ ಸಂಗ್ರಹ ಮತ್ತು ಎರಡು ವಿದ್ಯಾರ್ಥಿ ಕವನ ಸಂಗ್ರಹಗಳಿರುವುದರ ಜೊತೆಗೆ ದೇಶದ ಇಬ್ಬರು ಹಿರಿಯ ವ್ಯಕ್ತಿಗಳನ್ನು ಕುರಿತು ಇತರರು ರಚಿಸಿದ ಕವಿತೆಗಳ ಸಂಗ್ರಹಗಳೂ (ಶತಾಬ್ದಿದೀಪ, ಕವಿಗಳು ಕಂಡ ಕುವೆಂಪು) ಇವೆ.

**ಹೊಸ ಜನಾಂಗದ ಕವಿತೆಗಳು** 'ಅಕ್ಷರ ಹೊಸ ಕಾವ್ಯ' ಪ್ರಕಟವಾಗಿ ಒಂದೇ ವರ್ಷದೊಳಗೆ ಹೊರಬಂದ ಮತ್ತೊಂದು ಕಾವ್ಯದ ಆ್ಯಂಥಾಲಜಿ. ಯಾವುದೇ ಆ್ಯಂಥಾಲಜಿಯಾಗಲಿ ಅದಕ್ಕೆ ಒಂದು ಸ್ಪಷ್ಟ ಉದ್ದೇಶವಿರಬೇಕು. ಆ ಉದ್ದೇಶದ ಔಚಿತ್ಯ ಮುನ್ನುಡಿಯಲ್ಲಿ ಸಮರ್ಥಿತವಾಗಬೇಕು. ಸಂಗ್ರಹಿಸಿದ ಬರೆಹ ಆ ಉದ್ದೇಶಕ್ಕೆ ಪೂರಕವಾಗಿರಬೇಕು ; ಮಾತ್ರವಲ್ಲ, ಅಂಥ ಎಲ್ಲ ಬರೆಹ ಅಲ್ಲಿ ದೊರೆಯಬೇಕು. ಆಗ ಮಾತ್ರ ಆ್ಯಂಥಾಲಜಿ ಒಂದು ಸ್ಪಷ್ಟ ನಿಲುವಿಗೆ ಬದ್ಧವಾದ ಪ್ರಾಮಾಣಿಕ ಕಾವ್ಯಸಂಗ್ರಹವಾಗುತ್ತದೆ.

'ಹೊಸ ಜನಾಂಗದ ಕವಿತೆಗಳು' ಆ್ಯಂಥಾಲಜಿಯ ಸಂಪಾದಕರು ತಮ್ಮ ಮುನ್ನುಡಿಯಲ್ಲಿ "ಇತ್ತೀಚಿನ ದಶಕದ ಕಾವ್ಯಯಾವ ರೂಪದಲ್ಲಿ ಹಾಗೂ ಯಾವ ಮಟ್ಟದಲ್ಲಿ ಸಮೃದ್ಧವಾಗಿರುವುದೆಂಬುದನ್ನು ಈ ಕಾವ್ಯಸಂಕಲನ ನಿದರ್ಶಿಸಬಲ್ಲುದು" ಎಂದು ಹೇಳುತ್ತಾರೆ. ಇತ್ತೀಚಿನ ದಶಕ ಎಂದರೆ ಅರವತ್ತು ಎಪ್ಪತ್ತರ ನಡುವಿನ ದಶಕ. ಈ ದಶಕದಲ್ಲಿ ನರಸಿಂಹಸ್ವಾಮಿ, ಅಡಿಗ, ಶರ್ಮ, ಕಣವಿ, ಶಿವರುದ್ರಪ್ಪ, ನಿಸಾರ್, ತಿರುಮಲೇಶ್, ಕಂಬಾರ್, ಚನ್ನಯ್ಯ, ಪಾಟೀಲ, ಅನಂತಮೂರ್ತಿ, ಶ್ರೀಕೃಷ್ಣ, ರಾಜಗೋಪಾಲ, ಸಾಡಿಗ, ಲಂಕೇಶ, ಸಿದ್ಧಲಿಂಗಯ್ಯ, ಲಕ್ಷ್ಮಣರಾವ್ ಮೊದಲಾದವರಿಂದ ಉತ್ತಮ ಕಾವ್ಯಕ್ಕೆ ಸೇರುವ ಅನೇಕ ಕವನಗಳು ರಚಿತವಾಗಿವೆ. ಇವರಲ್ಲಿ ಯಾರೊಬ್ಬರ ಕವನವೂ ಇಲ್ಲಿ ಇಲ್ಲ ಎನ್ನುವುದು ಎಂಥ ಆಭಾಸ! ಕಾವ್ಯದ ಬಗ್ಗೆ ತೀರ ಸಾಮಾನ್ಯವಾದ ತಿಳಿವಳಿಕೆ ಇರುವವರು ಸಹ ಮಾಡಲಾರದ ತಪ್ಪನ್ನು ಆ್ಯಂಥಾಲಜಿಯ

ಸಂಪಾದಕರೊಬ್ಬರು ಮಾಡಿದ್ದು ಹೇಗೆ? ಸಂಕಲನದಲ್ಲಿರುವುದು ಹೊಸ ಜನಾಂಗದ ಕವಿತೆಗಳಾದುದರಿಂದ ಕೇವಲ ಹೊಸ ಪೀಳಿಗೆಯನ್ನಷ್ಟೇ ಗಮನಕ್ಕೆ ತೆಗೆದುಕೊಳ್ಳಬೇಕೆಂದರೆ ಅಡಿಗ, ಕೆ.ಎಸ್.ನ, ಮೊದಲಾದ ನಾಲ್ಕೈದು ಜನರನ್ನು ಬಿಟ್ಟರೆ ಉಳಿದವರೆಲ್ಲ ಬೇರೆ ಯಾವ ಪೀಳಿಗೆಗೆ ಸೇರಿದವರು? ಪೀಳಿಗೆಯ ಗಣನೆ ವಯೋಸಂಬಂಧವಾದ ಮಾಪನವಾದುದರಿಂದ ಕಾವ್ಯದ ವಿಷಯದಲ್ಲಿ ಕೃತಕವಾಗುವುದಿಲ್ಲವೆ?

ಸೇರದಿರುವ ಉತ್ತಮ ಕಾವ್ಯದ ವಿಷಯ ಹೋಗಲಿ, ಇದರಲ್ಲಿ ಸೇರ್ಪಡೆಯಾಗಿರುವ ಕವನಗಳು ಆಯಾ ಕವಿಯ ಪ್ರಾತಿನಿಧಿಕವಲ್ಲ! ಅಂದ ಮೇಲೆ "ಒಳ್ಳೆಯ ಕಾವ್ಯವನ್ನು ಪ್ರತಿನಿಧಿಸುವ ಸಾಮರ್ಥ್ಯದಿಂದ ಆ್ಯಂಥಾಲಜಿಯ ಬೆಲೆ ಹೆಚ್ಚುತ್ತದೆ" ಎನ್ನುವ ಸಂಪಾದಕರ ಮಾತಿನ ಅರ್ಥ ಏನು? ಇದು ಕಳಪೆ ಕೃತಿ ಎಂದೆ? ಹಾಗಿದ್ದೂ "ಈ ಮುಂಚೆ ಬಂದ ಸಂಕಲನಗಳಿಗಿಂತಲೂ ಹೆಚ್ಚಿನ ಹೊಸತನ ಹಾಗೂ ಜೀವಂತತೆ ಇಲ್ಲಿಯ ಕವಿತೆಗಳಲ್ಲಿದೆ" ಎನ್ನುವುದು ಅರ್ಥಹೀನವಾಗುವುದಿಲ್ಲವೆ?

"ಹಿಂದಿನ ಕಾವ್ಯಸಂಚಯಗಳನ್ನು ಎದುರಿಗಿಟ್ಟುಕೊಂಡು ಈ ಸಂಕಲನ ಅವುಗಳಿಂದ ಹೇಗೆ ಭಿನ್ನವಾಗಿದೆ ಎಂಬುದನ್ನು ಗುರುತಿಸಬಹುದು" ಎಂದು ಸಂಪಾದಕರ ಹೇಳಿಕೆ. ಹಿಂದಿನ ಕಾವ್ಯಸಂಚಯಗಳಿಗೆ ಒಂದು ಸ್ಪಷ್ಟ ನಿಲುವಿದೆ. ಆ ನಿಲುವಿನಲ್ಲಿ ಕೊಂಚ ದೋಷ ಇರಬಹುದು; ಸೇರಿಸಿಕೊಂಡ ಕೆಲವು ಕವನ ಆ ನಿಲುವಿಗೆ ಹೊಂದದಿರಬಹುದು; ಉತ್ತಮವಾದ ಕೆಲವು ಕವನ ಕೈಬಿಟ್ಟುಹೋಗಿರಬಹುದು. ಇಷ್ಟಾಗಿಯೂ ಆರಿಸಿಕೊಂಡ ಕಾಲದ ಅಥವಾ ಕಾವ್ಯದ ಉತ್ತಮ ಬರೆಹವನ್ನು ಅವು ಸಾಕಷ್ಟು ಮಟ್ಟಿಗೆ ಸಂಗ್ರಹಿಸಿವೆ. ತನ್ನ ಆಶಯದಲ್ಲಿ ಪೂರ ಸೋತಿರುವ ಈ ಸಂಚಯವನ್ನು ಅವುಗಳೊಡನೆ ಹೋಲಿಸುವುದೂ ಅನುಚಿತವಾಗುತ್ತದೆ.

ಹೊಸ ಜನಾಂಗದ ಕವಿತೆಗಳನ್ನು ಸ್ಥೂಲವಾಗಿ ಪರಿಶೀಲಿಸಿದರೂ ಸಾಕು, ಅದರ ಹಿಂದಿರುವ ಉದ್ದೇಶ ಸ್ಪಷ್ಟವಾದೀತು. ಅಕ್ಷರ ಹೊಸ ಕಾವ್ಯ ಬಂದ ಹೊಸದರಲ್ಲೇ ಈ ಕೃತಿ ಹೊರಬಂತು. ಪ್ರಕಟವಾದ ರೀತಿಯಲ್ಲಿಯೇ ಅದಕ್ಕೆ ಪ್ರತಿಕ್ರಿಯೆಯೆಂಬಂತೆ ತೋರಿತು. ಅದರಲ್ಲಿರುವ ಒಬ್ಬ ಕವಿಯಾಗಲೀ, ಒಂದೇ ಒಂದು ಕವಿತೆಯಾಗಲೀ ಇದರಲ್ಲಿಲ್ಲ. ಅಲ್ಲಿ ಇಲ್ಲದ ಕವಿಗಳನ್ನೇ ಇಲ್ಲಿ ಲಕ್ಷಿಸುವುದು ಎಂದು ಹೊರಟಾಗ ಸಂಪಾದಕರ ಕೆಲಸ ತೀರ ಸುಲಭವಾಯಿತು. ಅಕ್ಷರ ಹೊಸ ಕಾವ್ಯಕ್ಕೆ ಒಂದು ಅನುಬಂಧವೋ ಎಂಬಂತೆ ಇದು ತೋರಿದರೂ ಅದರ ಸಂಪಾದಕರ ಆಯ್ಕೆಯ ಸೂತ್ರಗಳಿಗೆ ಹೊರತಾಗುವುದರಿಂದ ಆ ಅರ್ಥದಲ್ಲಿಯೂ ಈ ಕೃತಿಯನ್ನು ಪರಿಗಣಿಸುವಂತಿಲ್ಲ. ಅಕ್ಷರ ಹೊಸ ಕಾವ್ಯದಲ್ಲಿ ಆದ ಅನ್ಯಾಯವನ್ನು ಸರಿಪಡಿಸುವ ಆವೇಶದಲ್ಲಿ ಈ ಸಂಚಯ "ಇತ್ತೀಚಿನ ದಶಕದ" ಒಳ್ಳೆಯ ಕಾವ್ಯವನ್ನು ಪ್ರತಿನಿಧಿಸುವ ತನ್ನ ಘೋಷಿತ ಉದ್ದೇಶಕ್ಕೆ ಅಪಚಾರ ಮಾಡಿಕೊಂಡಿದೆ.

ಈ ಕೃತಿಯ ಬಗ್ಗೆ ಓದುಗ ತಾಳಬಹುದಾದ ಒಂದು ಸಣ್ಣ ಸಮಾಧಾನವೆಂದರೆ ಅಕ್ಷರ ಹೊಸ ಕಾವ್ಯದಲ್ಲಿ ಸೇರದಿರುವ, ಆದರೂ ಓದಬೇಕೆನ್ನುವ ಕೆಲವು ಒಳ್ಳೆಯ ಕವಿತೆಗಳು ಇಲ್ಲಿ ದೊರೆಯುತ್ತವೆನ್ನುವುದು. ಆರ್ಯ, ಚೊಕ್ಕಾಡಿ, ಲಕ್ಷ್ಮೀಶ, ಸಣ್ಣಗುಡ್ಡಯ್ಯ,

ದೊಡ್ಡರಂಗೇಗೌಡ, ಸಿಂಹ, ವೀಜಿ, ಬನ್ನಂಜೆ, ಇಮ್ರಾಪೂರ, ಪ್ರಸನ್ನ - ಇವರ ಕೆಲವು ಬರೆಹ ಕಾವ್ಯಾಸಕ್ತರೆಲ್ಲ ಗಮನಿಸಬೇಕಾದದ್ದು. ಇವರ ರಚನೆಗಳಲ್ಲಿ ಉತ್ತಮವಾದದ್ದೇ ಅಲ್ಲಿ ಬಂದಿದೆ ಎಂದು ಹೇಳಲಾಗದಿದ್ದರೂ ಉತ್ತಮವಾದದ್ದೂ ಕೊಂಚ ಇದೆ ಎಂದಷ್ಟೇ ಹೇಳಬಹುದು.

ಜಿ. ಎಸ್. ಸಿದ್ದಲಿಂಗಯ್ಯನವರು ಸಂಪಾದಿಸಿರುವ **ಶತಾಬ್ದಿ ದೀಪ** ಗಾಂಧೀಜಿಯವರನ್ನು ಕುರಿತು ಬೇರೆ ಬೇರೆ ಕವಿಗಳು ಬರೆದ ಅರವತ್ತು ಮೂರು ಕವನಗಳ ಸಂಗ್ರಹ. ಗಾಂಧಿಯಂಥ ವ್ಯಕ್ತಿಯನ್ನು ಕುರಿತು ಬರೆಯುವಾಗ ಕವನಗಳು ಸಾಮಾನ್ಯವಾಗಿ ಎರಡು ಹಾದಿ ಹಿಡಿಯುತ್ತವೆ – ಒಂದೇ ಅವರ ವ್ಯಕ್ತಿತ್ವವನ್ನು ಕೊಂಡಾಡಿ ಬರೆಯುವುದು; ಇಲ್ಲವೆ ಅಂಥವರೆದುರು ನಾವು ಎಷ್ಟು ಅಲ್ಪರೆಂದು ಹಳಿದುಕೊಳ್ಳುವುದು. ಇವುಗಳಲ್ಲಿ ಒಂದು ನಾವು ಬಾಳದ ಮೌಲ್ಯಗಳ ಆರಾಧನೆ; ಮತ್ತೊಂದು ನಾವು ಬದುಕುತ್ತಿರುವ ನಿಜದ ಖಂಡನೆ. ಎರಡೂ ಅವಾಸ್ತವಿಕವಾಗದೆ ವಿಧಿಯಿಲ್ಲ. ಈ ಸಂಗ್ರಹದಲ್ಲಿರುವ ಕವನಗಳೆಲ್ಲ (ಶರ್ಮ, ಲಂಕೇಶ, ಸೊರಬರ ಕವನಗಳನ್ನು ಬಿಟ್ಟು) ಅಂಥವೇ. ಹಾಗಿದ್ದೂ ಅವುಗಳಲ್ಲಿ ವ್ಯಕ್ತವಾಗಿರುವ ಭಾವನೆ ಬರೆಯುವ ಹೊತ್ತಿನ ಮಟ್ಟಿಗೆ ಕವಿ ಅನುಭವಿಸಿದ್ದೆಂಬುದು ಸುಳ್ಳಲ್ಲ. ಇವುಗಳಲ್ಲಿ ಕುವೆಂಪು, ಬೇಂದ್ರೆ, ಶಿವರುದ್ರಪ್ಪ, ನಿಸಾರ್,ರಾಜಗೋಪಾಲ, ಭಟ್ಟ, ಗಿರಡ್ಡಿ, ಇಮ್ರಾಪೂರರ ಕವಿತೆಗಳು ಉತ್ತಮಮಟ್ಟದ್ದಾಗಿವೆ. ಪುತಿನ ಅವರ ಪ್ರಸಿದ್ಧ ನೆರಳು ಕವನವೂ ಇದರಲ್ಲಿದೆ.

ರಾಮಚಂದ್ರಶರ್ಮರ ಕವನ ಗಾಂಧಿಗೂ, ಗಾಂಧಿದೇಶದ ಜನ ಬಾಳುತ್ತಿರುವ ರೀತಿಗೂ ಇರುವ ತಾರತಮ್ಯವನ್ನು ಟೀಕೆ ಟಿಪ್ಪಣೆಗಳಿಲ್ಲದೆ ತಟಸ್ಥವಾಗಿ ಚಿತ್ರಿಸುತ್ತ ಬೆಳೆದು ಕೊನೆಯಲ್ಲಿ ಇಡೀ ಕವನವೇ ಒಂದು ಕಠೋರ ಆತ್ಮವಿಮರ್ಶೆಯಾಗಿ ಪರಿಣಮಿಸುತ್ತದೆ. ಗಾಂಧೀಜಯಂತಿಯ ದಿನ ಬಾರು ಮುಚ್ಚಿತೆಂದು ರೇಸಿಗೆ ಹೋಗಿ, ಜ್ಯೋತಿಷ ನಂಬಿ ಹಣ ಕಟ್ಟುವ ವ್ಯಕ್ತಿ, ಕುಟುಂಬಯೋಜನೆ ಫಲವಾಗಿ ಸಿಕ್ಕ ಬಿಟ್ಟಿಮಾಲನ್ನು ಬಲೂನು ಮಾಡಿ ಊದುತ್ತಿರುವ ಮಕ್ಕಳು, ನಾಯಿಗೆ ಕಲ್ಲು ಬೀರುವ ಮಗುವನ್ನು ಉಳಿದ ಮಕ್ಕಳಿಗಿಂತ ಚೂಟಿ ಮಗುವೆನ್ನುವ ತಾಯಿ – ಇವು ಪಾನನಿರೋಧ, ಶ್ರಮದ ದುಡಿಮೆ, ಬ್ರಹ್ಮಚರ್ಯ, ಅಹಿಂಸೆ – ಇತ್ಯಾದಿ ಗಾಂಧಿ ತತ್ವಗಳಿಗೆ ವಿರುದ್ಧವಾಗಿರುವ ಬದುಕನ್ನು ಮಾರ್ಮಿಕವಾಗಿ ಹಿಡಿಯುತ್ತವೆ. ಲಂಕೇಶರ ಕವನ ಅಭಿವ್ಯಕ್ತಿಯ ದೃಷ್ಟಿಯಿಂದ ಸಹ ಉಳಿದವರದ್ದಕ್ಕಿಂತ ಭಿನ್ನವಾದದ್ದು. ಆಕಾಶ ಅಳೆಯುತ್ತ ಕನಸುವ ಜ್ಯೋತಿಷಿ ಗೋಪಿ ವಾಸ್ತವ ಬದುಕು ತಲೆಗೆ ಬಡಿದಾಗ ಗಾಂಧಿಯನ್ನು ಕೈಬಿಟ್ಟು (ಅವರ ತತ್ವಕ್ಕೆ ವಿರುದ್ಧವಾದ) ಗಾಂಧಿ ಟೋಪಿಗೆ ತಲೆ ಕೊಡುವುದನ್ನು ಹೇಳುವ ಈ ಪದ್ಯ ಗಾಂಧೀದೃಷ್ಟಿಯನ್ನು ಅವಾಸ್ತವವೆಂದು ನಿರಾಕರಿಸಿಬಿಡುವ ಹರಿತವಾದ ವಿಡಂಬನೆ. 'ಮಹಾತ್ಮ ಗಾಂಧಿ'ಯನ್ನು ಪ್ರಿಯ ಮೋಹನದಾಸ್ ಎಂದು ಸಂಬೋಧಿಸಿ ಆರಂಭದಿಂದಲೇ ಅವರ 'ಮಹಾತ್ಮೆ'ಯನ್ನು ಅಲ್ಲಗಳೆಯುತ್ತಹೋಗುವ ವೇಣುಗೋಪಾಲ ಸೊರಬರ 'ಕಿವಿ ಮಾತು' ಹೊಸ ರೀತಿಯ ಕವನ. ತುಂಬ ಲವಲವಿಕೆಯ ಮಾತುಗಾರಿಕೆಯಲ್ಲಿ ಬೆಳೆಯುವ ಈ ಕವನ ಈ ಸಂಗ್ರಹದಲ್ಲಿಯೇ ತುಂಬ ಆಕರ್ಷಕವಾದ ಪದ್ಯವೆನ್ನಿಸುತ್ತದೆ.

**ಕವಿಗಳು ಕಂಡ ಕುವೆಂಪು** ಎಂಬ ಕೃತಿ ಕುವೆಂಪು ಅವರ ಅರವತ್ತೇಳನೆಯ ಹುಟ್ಟುಹಬ್ಬದ ಸವಿನೆನಪಿಗೆ ಹೊರತಂದ ಅರವತ್ತೇಳು ಕವನಗಳ ಸಂಗ್ರಹ. ಇದರ ಎಲ್ಲ ಕವನಗಳ ವಿಷಯ ಕುವೆಂಪು ಅಥವಾ ಅವರ ಬರೆಹ. ಈ ಕೃತಿಯಲ್ಲಿ ನಾಡಿನ ಅನೇಕ ಲೇಖಕರ ಕವನಗಳಿರುವುದರ ಜೊತೆಗೆ ಸ್ವತಃ ಕುವೆಂಪು ಅವರೇ ತಮ್ಮನ್ನು ಕುರಿತು ಬರೆದುಕೊಂಡ ಕವನವೂ ಇದೆ. ಅಭಿವ್ಯಕ್ತಿಯ ದೃಷ್ಟಿಯಿಂದ ಇದರಲ್ಲಿ ತುಂಬ ವೈವಿಧ್ಯವಿದೆ. ಪುತಿನ ಅವರು ಅನುಷ್ಟುಭ್ ಛಂದಸ್ಸಿನಲ್ಲಿ, ಕೆ. ಕೃಷ್ಣಮೂರ್ತಿಯವರು ಹಳಗನ್ನಡ ಕಂದ ವೃತ್ತಗಳಲ್ಲಿ, ಕಾಪಸೆಯವರು ಜಾನಪದ ಶೈಲಿಯಲ್ಲಿ, ಅನೇಕರು ನವೋದಯ ಸಂಪ್ರದಾಯದಲ್ಲಿ, ಕೆಲವರು ಹೊಸಕಾವ್ಯದ ಜಾಡಿನಲ್ಲಿ ಬರೆದ ಕವನಗಳೆಲ್ಲ ಇಲ್ಲಿವೆ. ಇವುಗಳಲ್ಲಿ ಬೇಂದ್ರೆ, ಜಿ. ಎಸ್. ಸಿದ್ದಲಿಂಗಯ್ಯ, ಡೋ. ನಾ., ವೆಂಕಟೇಶ್, ಇನ್ಮಾಪೂರ, ಕಾಪಸೆ, ಚನ ಣ್ಣ ವಾಲೀಕಾರರ ಕವನಗಳು ಲವಲವಿಕೆಯ ಬಿಚ್ಚುನಡೆಯಿಂದ ಮತ್ತು ಪ್ರಸನ್ನ ಮಾತುಗಾರಿಕೆಯಿಂದ ಕೂಡಿದ್ದು ಹೆಚ್ಚು ಸಲ ಓದಿಸಿಕೊಳ್ಳುತ್ತವೆ. ಉಳಿದ ಕವನಗಳಲ್ಲಿರುವಂತೆ ಇವುಗಳಲ್ಲಿಯೂ ಕುವೆಂಪು ಅವರ ಕಾವ್ಯವ್ಯಕ್ತಿತ್ವದ ಬಗ್ಗೆ ವಿಶೇಷ ಮೆಚ್ಚಿಕೆ ಗೌರವಗಳಿವೆ. ಹಾಗಿದ್ದರೂ ಇವು ಭಾವುಕ ಆಲಾಪಗಳಾಗಲೀ, ವಿಮರ್ಶೆಯನ್ನೇ ತಿರಸ್ಕರಿಸಿದ ಭೋಳೇ ಪ್ರಶಂಸೆಯ ದಿಢೀರ್ ಸಾಷ್ಟಾಂಗಗಳಾಗಲೀ ಆಗದೆ ಗುಣ ತಿಳಿದು ಮೆಚ್ಚುವ, ಮೆಚ್ಚಿ ಗೌರವಿಸುವ ಪ್ರಬುದ್ಧ ನಿಲುವನ್ನು ಕವನದಲ್ಲೇ ತಾಳಿ ತೋರಿವೆ. ಸಿದ್ದಲಿಂಗಯ್ಯನವರ 'ಜೀವನದ ಬುಗುರಿ' ಕವನ ಕಾನೂರು ಹೆಗ್ಗಡತಿಯಲ್ಲಿ ಮಿರಿ ಮಿರಿ ಮಿಂಚುವ ಬದುಕಿನ ಗೆರೆಯನ್ನು ಗುರುತಿಸಿ 'ಯಾರು ನಿಲ್ಲಬಹುದು ಈ ಪ್ರವಾಹದ ಎದುರು' ಎಂದು ವಿಸ್ಮಯಭಾವದಲ್ಲಿ ಕೈಮುಗಿಯುತ್ತದೆ.

ಮಾಟಾದ ಮುಖದಾವ ನೀಟಾದ ಬೇತಾಲಿ
ಮಾವಿನ ಹಣ್ಣ ಮೈಬಣ್ಣ–ಗಿಳಿಮೂಗ
ಮಲ್ಲಿಗೆ ಹೂವು ಮನವೆಲ್ಲ

ಎಂದು ಆರಂಭವಾಗುವ ಕಾಪಸೆಯುವರ ತ್ರಿಪದಿಗಳಿಗೆ ಜಾನಪದ ಧಾಟಿ ವಿಶೇಷ ರುಚಿ ಕೊಟ್ಟಿದೆ. ಉಳಿದ ಕವನಗಳಲ್ಲಿ ಬಹುಮಟ್ಟಿನವು ದಿವ್ಯ, ಭವ್ಯ, ಭೂಮ, ರಸಋಷಿ, ಭಾವಬ್ರಹ್ಮ, ಚಿರಂತನ ಧವಳ ಹೃನ್ಮೈತ್ರಿ – ಇತ್ಯಾದಿ ಕುವೆಂಪು ನಾಣ್ಯಗಳನ್ನೇ ಬಳಸಿ, ಅವರ ಶೈಲಿಯನ್ನೇ ಅನುಕರಿಸಿ ಬರೆದ ಭಕ್ತಿಪೂರ್ವಕವಾದ ಪ್ರಶಂಸೆಗಳು. ಇವುಗಳಲ್ಲಿ ಯಾವುದನ್ನು ಓದಿದರೂ ಮತ್ತೊಂದನ್ನು ಓದಿದಂತಾಗುವಷ್ಟರ ಮಟ್ಟಿಗೆ ಅವು ಪರಸ್ಪರ ಅನ್ಯೋನ್ಯವಾಗಿವೆ!

ಕಡೆಯಲ್ಲಿ ಕುವೆಂಪು ಅವರೇ ಬರೆದ ಕವನವಿದೆ. ಕವಿ ತನ್ನ ಬಗ್ಗೆ ಬರೆದುಕೊಳ್ಳಬಾರದೆಂದೆಲ್ಲಿದೆ? ಆದರೆ ಹಾಗೆ ಬರೆಯುವಾಗ ತನ್ನನ್ನೇ ತಾನು ಕೊಂಚ ನಗೆಯೊಡನೆ ವಿಮರ್ಶಿಸಿಕೊಂಡು ಬರೆದರೆ ಕವನಕ್ಕೆ ಔಚಿತ್ಯ, ರುಚಿ ಎರಡೂ ಹೆಚ್ಚುತ್ತವೇನೋ. ಆದರೆ ಕುವೆಂಪು ತಮ್ಮನ್ನು ತಾವೇ ಗಂಭೀರವಾಗಿ ಪ್ರಶಂಸೆಮಾಡಿಕೊಂಡುಬಿಡುತ್ತಾರೆ. ಆ ಪ್ರಶಂಸೆಯ ಮಾತು ತೀರ ಸತ್ಯವೇ ಆಗಿದ್ದರೂ

ಭಕ್ತಿಯುಡಿಯ ಹುಡಿ ಕುವೆಂಪು
ಗುರುಹಸ್ತದ ಕಿಡಿ ಕುವೆಂಪು
ನುಡಿರಾಣಿಯ ಗುಡಿ ಕುವೆಂಪು
ಸಿರಿಗನ್ನಡ ಮುಡಿ ಕುವೆಂಪು

ಎಂದು ಕುವೆಂಪುವೇ ಬರೆದದ್ದನ್ನು ನೋಡಿದಾಗ ಇವರು ಯಾಕಾದರೂ ಹೀಗೆಲ್ಲ ಮಾಡುತ್ತಾರೆ ದೇವರೇ ಎಂದು ಚಡಪಡಿಸುವಂತಾಗುತ್ತದೆ.

ಸಂಕಲನದಲ್ಲಿ ಕುವೆಂಪು ಅವರ ಸುಂದರ ಭಾವಚಿತ್ರವಿರುವುದು ಕೃತಿಯ ಬೆಲೆಯನ್ನು ಹೆಚ್ಚಿಸಿದೆ. ಆದರೆ ಅರವತ್ತೇಳು ಕವನಗಳೇ ಆಗಬೇಕೆಂದು ಹೊರಟದ್ದರಿಂದಲೂ, ಚೆನ್ನಾಗಿ ಬರೆಯಬಲ್ಲ ಎಷ್ಟೋ ಕವಿಗಳಿಂದ ಕವನಗಳನ್ನು ಪಡೆಯಲು ಯತ್ನಿಸಿಲ್ಲದಿರುವುದರಿಂದಲೂ ಕೆಲವು ಕಳಪೆ ರಚನೆಗಳೂ ಈ ಕೃತಿಯಲ್ಲಿ ಸೇರುವಂತಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯದ ಇಪ್ಪತ್ತಾರು ಜನ ಸ್ನಾತಕೋತ್ತರ ವಿದ್ಯಾರ್ಥಿ ವಿದ್ಯಾರ್ಥಿನಿಯರ ಪದ್ಯಗಳು **ದಿಗಂಬರ** ಸಂಗ್ರಹದಲ್ಲಿವೆ. ಇವರಲ್ಲಿ ಕನ್ನಡ ವಿಭಾಗದ ವಿದ್ಯಾರ್ಥಿಗಳೇ ಹದಿನಾರು ಜನರಿದ್ದಾರೆ! ಕನ್ನಡ ಓದಿದವರೆಲ್ಲ ಕಾವ್ಯ ಬರೆಯಬೇಕೆಂಬ ನಿಯಮ ಖಂಡಿತ ಇಲ್ಲ. ಆದರೂ ಇಂಥ ಪ್ರಯತ್ನದಿಂದ ಲೇಖಕರಿಗೆ ಕಾವ್ಯದ ಹೊರ ಸ್ವರೂಪದ ನಿಕಟ ಪರಿಚಯ ಆದೀತೆನ್ನುವುದೂ ಸುಳ್ಳಲ್ಲ.

ಈ ಸಂಗ್ರಹದಲ್ಲಿ ಬಿ. ಎಸ್. ಪಾಟೀಲರ 'ಮಹಿಷಿ ನೆನಪಾಗಲಿಲ್ಲ' ಮತ್ತು 'ನಡೆದದ್ದು' ಎಂಬ ಎರಡು ಕವನಗಳು ಹಾಗೂ ಜಯಶ್ರೀ ಕುಲಕರ್ಣಿಯವರ 'ಬಯಕೆ' ಕವನ ಉಳಿದವರ ಪದ್ಯಗಳಿಗಿಂತ ಮೇಲ್ಮಟ್ಟದ್ದಾಗಿವೆ. ದಿಗಂಬರದ ಎಲ್ಲ ಪದ್ಯಗಳಲ್ಲೂ ಅನಿಸಿಕೆಗಳ ವಾಚ್ಯ ಪ್ರತಿಪಾದನೆ, ಆಲೋಚನೆಗಳ ನೇರಮಂಡನೆ ಕಾಣುತ್ತವೆ. ಇವುಗಳ ಲೇಖಕರೆಲ್ಲ ಕವನ ಬರೆಯಬೇಕೆನ್ನುವ ಆಸೆ ಹುಮ್ಮಸ್ಸುಗಳಿಂದಲೇ ಪ್ರೇರಿತರಾಗಿ ಬರೆಯುವುದು ಪದ್ಯಗಳಿಂದಲೇ ವೇದ್ಯವಾಗುತ್ತದೆ. ಇವರಲ್ಲಿ ಕೆಲವರು ಕನ್ನಡದ ಹೆಸರಾದ ತರುಣ ಕವಿಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಾರೆ. ಮುರಿಗೆಪ್ಪನವರ 'ಸಡಿಲಬೂಟು' ಲಕ್ಷ್ಮಣರಾವ್ ಅವರ ಶೈಲಿಯಿಂದ ಪ್ರಭಾವಿತವಾಗಿದ್ದರೆ 'ಅರುಣವರ್ಣದ ಸೂರ್ಯ ಮೇಲೇರಿ ಬಂದ' ಪದ್ಯ ಆಲನಹಳ್ಳಿ ಶ್ರೀಕೃಷ್ಣರ 'ಬೆಳಗಾಯಿತು' ಕವನದ ನೆರಳು ಹಿಡಿದಿದೆ. ಕುಂಕುಮಿಸಿ, ತಾಳಿಸಿ, ಗಲ್ಲಿಸಿ, ಸಿಂಹಾವಲೋಕನಿಸಿ, ಲೆನ್ಸಿಸಿ – ಇತ್ಯಾದಿ ಪ್ರಯೋಗಗಳು ನಿಸಾರ್ ಅಹಮದ್ ಅವರ ಪ್ರಭಾವವನ್ನು ಸೂಚಿಸುತ್ತವೆ.

ವಿದ್ಯಾರ್ಥಿಗಳಲ್ಲಿ ಕಾವ್ಯದ ಬಗೆಗೆ ಸಂವೇದನೆಯನ್ನು ಉಂಟುಮಾಡುವ ಒಂದು ಪ್ರಯತ್ನವಾಗಿ 'ದಿಗಂಬರ' ಸಂಗ್ರಹ ಸ್ವಾಗತಾರ್ಹವಾದದ್ದು.

ಕೆ. ಬಿ. ಪ್ರಭುಪ್ರಸಾದರ **ಹಾಡೋಣ ಬಾ** ಎಂಬ ಕೃತಿ ಮೂವತ್ತುನಾಲ್ಕು ಭಾವಗೀತೆಗಳನ್ನು ನಿರ್ದಿಷ್ಟ ರಾಗಗಳಲ್ಲಿ. ಸಂಚಾರ ಕ್ರಮಗಳಲ್ಲಿ ಹಾಡಲು ಅನುಕೂಲವಾಗುವಂತೆ ಸ್ವರಪ್ರಸ್ತಾರ ಸಹಿತ ಅಚ್ಚು ಮಾಡಿರುವ ಗ್ರಂಥ. ಅವರೇ ಸ್ವತಃ ರಚಿಸಿದ ಆರು

ಭಾವಗೀತೆಗಳನ್ನು ಬಿಟ್ಟರೆ ಉಳಿದವೆಲ್ಲ ಖ್ಯಾತಕವಿಗಳ ಗೀತೆಗಳಾಗಿದ್ದು ಹಿಂದೆಯೇ ಬೇರೆಡೆ ಅಚ್ಚಾಗಿವೆ. ಪ್ರಭುಪ್ರಸಾದರ ರಚನೆಗಳಲ್ಲಿ 'ಕೆರೀ ತುಂಬಿ ಬಂತು' ಮತ್ತು 'ನೆನಪು' ಎಂಬ ಗೀತೆಗಳು ಕೇವಲ ಹಾಡು ಮಾತ್ರವಾಗಿರದೆ ಮನಸ್ಸಿಗೆ ಹಾಯೆನಿಸುವ ಕೋಮಲ ಕವಿತೆಗಳೂ ಆಗಿವೆ. ನಗರದ ಬಿರುಜೀವನದಲ್ಲಿ ತೊಳಲುವ ವ್ಯಕ್ತಿಯ ಬದುಕಿನಲ್ಲಿ ಆಗೀಗ ಥಟ್ಟನೆ ಹಾಯುವ ಬಾಲ್ಯದ ಕೋಮಲ ಸ್ಮೃತಿಗಳನ್ನು ಚಿತ್ರಿಸುವ 'ನೆನಪು' ಕವನ ಮಾತಿನ ಮೃದುತ್ವದಿಂದ, ಸುಕುಮಾರ ಚಿತ್ರಗಳಿಂದ ಹಿತವಾದ ನೇವರಿಕೆಯಂತೆ ಸಮಾಧಾನ ಕೊಡುತ್ತದೆ.

**ಪ್ರಿಯದರ್ಶಿನಿ** ಇಪ್ಪತ್ತೆರಡು ಚಿಕ್ಕ ಚಿಕ್ಕ ಸಮರಗೀತೆಗಳ ಸಂಕಲನ. ಎಪ್ಪತ್ತೊಂದರ ಭಾರತ–ಪಾಕ್ ಯುದ್ಧದ ಫಲವಾಗಿ ಸೃಷ್ಟಿಯಾದದ್ದು ಇದು. ಒಂದೆರಡು ಪದ್ಯಗಳನ್ನು ಬಿಟ್ಟರೆ ಉಳಿದುವೆಲ್ಲ ಪ್ರಥಮ ಪದ್ಯಪ್ರಯತ್ನಗಳಂತೆ ಕಾಣುತ್ತವೆ. ಇಂಚಲ ಮತ್ತು ಎನ್ಕೆಯವರ ಪದ್ಯಗಳು ಹಾಡಲು ಬರುವಂತಿದ್ದು ಇದ್ದುದರಲ್ಲಿ ಉತ್ತಮವಾಗಿವೆ.

ಒಂದು ವರ್ಷದ ಹಿಂದೆ ಇಂಚರ ಎಂಬ ಕವನ ಸಂಗ್ರಹವನ್ನು ಪ್ರಕಟಿಸಿದ ಮೈಸೂರು ಮೆಡಿಕಲ್ ಕಾಲೇಜ್ ವಿದ್ಯಾರ್ಥಿಗಳು ಈಗ **ವಿಕಾಸ** ಎಂಬ ಸಂಗ್ರಹವನ್ನು ಹೊರತಂದಿದ್ದಾರೆ. ಇಂಥ ಸಂಕಲನ ನಿಜಕ್ಕೂ ಸ್ವಾಗತಾರ್ಹ. ಸಾಹಿತ್ಯ ಓದಿ, ಸಾಹಿತ್ಯ ಪಾಠ ಹೇಳುವ ಸಾಹಿತ್ಯ ಡಿಪಾರ್ಟ್‌ಮೆಂಟಿನವರೇ ಈಗ ಹೆಚ್ಚಾಗಿ ಬರೆಯುತ್ತಿದ್ದಾರೆ. ಅವರ ಬರೆಹದಲ್ಲಿರುವ ಒಂದು ಕೃತಕ ಕಳೆಯಿಂದ ಇಂಥ ಸಂಕಲನ ಪಾರಾಗಿರಬಲ್ಲದು. ವಿಕಾಸದ ಲೇಖಕರಲ್ಲಿ ಪಟೇಲ, ವೆಂಕಟೇಶ, ನರಸಿಂಹಮೂರ್ತಿ, ಶ್ರೀಕಾಂತ ಮತ್ತು ಉಮಾದೇವಿ ಓದಿಸಿಕೊಳ್ಳಬಲ್ಲ ರುಚಿಯಾದ ಪದ್ಯಗಳನ್ನು ರಚಿಸಬಲ್ಲರು. ಉಳಿದವರಲ್ಲಿ ಕೆಲವರು ನವ್ಯಕ್ಲೀಷೆಗಳನ್ನೂ ಮತ್ತೆ ಕೆಲವರು ನವೋದಯ ಕ್ಲೀಷೆಗಳನ್ನೂ ಬಳಸಿ ಪದ್ಯ ಹೆಣೆಯುವ ಪ್ರಯತ್ನ ಮಾಡಿದ್ದಾರೆ. ಮೇಲೆ ಹೇಳಿದ ಮೊದಲ ಮೂವರ ಕೃತಿಗಳಲ್ಲಿ ಕೆ. ಎಸ್. ನರಸಿಂಹಸ್ವಾಮಿ ಮತ್ತು ಜಿ. ಎಸ್. ಶಿವರುದ್ರಪ್ಪನವರ ಪ್ರಭಾವ ಕಾಣುತ್ತದೆ. ಇಷ್ಟಾದರೂ ಅವು ಸೊಗಸಾದ ಉಪಮೆಗಳಿಂದಲೋ, ಧ್ವನಿಪೂರ್ಣವಾದ ಪ್ರತಿಮೆಯನ್ನು ಸೃಷ್ಟಿಸುವ ಪ್ರಯತ್ನದಿಂದಲೋ ಅನುಭವದ ಕಾವಿನಿಂದಾಗಿಯೋ ಆಕರ್ಷಕವಾಗಿ ಪರಿಣಮಿಸಿವೆ. ಪಟೇಲರ 'ಸಾದು' ಪದ್ಯದಲ್ಲಿ ಧ್ವನಿತವಾಗುವ ತಣ್ಣನೆಯ ವ್ಯಂಗ್ಯ, ಹೆಣ್ಣು ಪದ್ಯದ ಕಡೆಯಲ್ಲಿ ಹದಿಬದೆಯ ಧರ್ಮದ ಎರಡು ಸಾಲುಗಳ ಉದ್ಧರಣದಿಂದ ಬರುವ ಅರ್ಥವತ್ತಾದ ತಿರುವು, 'ತಂಗಿ' ಕವನದ ಉದ್ದಕ್ಕೂ ಬರುವ ಚಿತ್ರಗಳ ಸಾಲು ಕಾವ್ಯ ಕುಶಲತೆಗೆ ಸಾಕ್ಷಿ. ವೆಂಕಟೇಶರ 'ಆಲದ ಬಿಳಲು'ವಿನಲ್ಲಿ ಸಾಂಕೇತಿಕತೆಗೆ ಮೈಕೊಡುವ ಆಲದ ಅಸ್ಪಷ್ಟಚಿತ್ರ, 'ಋಣ'ದಲ್ಲಿ ಮೂಡುವ ಆತ್ಮೀಯತೆಯ, ಕೃತಜ್ಞತೆಯ ಭಾವನೆ ಮನಸ್ಸಿಗೆ ತಟ್ಟುತ್ತದೆ.

ನಿನ್ನ ಋಣ ತೀರಿಸಲಾಗಲಿಲ್ಲ ಎಂದು
ಹಿಂದಿರುಗಿ ಕೂಗಬೇಕೆಂದುಕೊಂಡೆ
ದನಿಯೇಳಲಿಲ್ಲ.

ಈಗ ಕಣ್ಣೆದುರು ಮಾಸಲು ರೂಪ ತಡಕಾಡುತ್ತಿದೆ
ಕಪ್ಪನೆಯ ನಾಯಿ ಕಾಡುತ್ತಿದೆ
ಅದಾರೋ ಬಂದವರು
ಹಿತ್ತಲಲ್ಲಿ ಬೆಳೆದ ನನ್ನ ನೂರರಷ್ಟೆತ್ತರದ ಬೊಂಬ
ಬುಡಮಟ್ಟ ಕತ್ತರಿಸುತ್ತಿದ್ದಾರೆ.

ಇಂಥ ಸಾಲುಗಳಲ್ಲಿ ಕಾಣುವ ಗಂಭೀರ ದನಿ, ಅನುಭವದ ಮೈಗೆ ಅಂಟಿಬಂದಂಥ ಸಹಜ ಲಯ, ಮೆಚ್ಚಬೇಕಾದ ಅಂಶ. ಕೆ. ನರಸಿಂಹಮೂರ್ತಿಯವರ 'ಮರೆಯಬೇಕು' 'ಸೋನಿಯಾ'ಗಳಲ್ಲಿ ಮಿಂಚುವ ತುಂಡು ಪ್ರತಿಮೆಗಳಿಂದ ಕೂಡಿದ ಬಿಕ್ಕಟ್ಟಾದ ಭಾಷೆಯಿದ್ದು ಅವರು ಸಮರ್ಥವಾಗಿ ಬರೆಯಬಲ್ಲರೆಂಬುದನ್ನು ಸೂಚಿಸುತ್ತದೆ. ಆರಂಭದ ಕವನಗಳಲ್ಲೇ ಇಂಥ ಹೃದ್ಯತೆಯನ್ನು ಸಾಧಿಸಿರುವ ಮೇಲಿನ ಲೇಖಕರು ಮೆಚ್ಚಿಕೆಗೆ ಅರ್ಹರು.

ಈಚೆಗೆ ಪ್ರಕಟವಾಗುತ್ತಿರುವ ಕೆಲವು ಪ್ರಥಮಸಂಕಲನಗಳಲ್ಲಿ ನಾಲ್ಕನ್ನು ವಿಮರ್ಶಿಸಿ ಐದನೆಯದಕ್ಕೆ ಹೋಗುವ ಹೊತ್ತಿಗೆ ವಿಮರ್ಶೆ ಬರೆಯ ಹೊರಟವನಿಗೆ ವಿಚಿತ್ರವಾದ ಮೂಗುಬ್ಬಸ. ಒಂದರ ಬಗ್ಗೆ ಹೇಳುವ ಮಾತೇ ಎಲ್ಲಕ್ಕೂ ಅನ್ವಯವಾಗುವ ಅಪಾಯದ ಸಮಾಕಾರ ಕವಿತೆ. ಭೇದವಿತ್ತೆಂದರೂ ಮೈಚಹರೆಯಲ್ಲಿ ಹೊರತು ಶೀಲ ಅದೇ. ಹತ್ತು ಕವನ ಓದಿ, ಹದಿನೈದು ಮಾತು ಗೆಬರಿ, ಅದರ ರೆಕ್ಕೆ ಇದರ ಪುಕ್ಕ, ಯಾವುದರದೋ ಕೊಕ್ಕು ಕಟ್ಟಿಕೊಂಡು ಸ್ವಂತಕ್ಕೊಂದು ನಕಲಿ ಆಕಾರ ಹುಟ್ಟಿಕೊಳ್ಳುತ್ತದೆ. ಅನುಭವ ಕ್ಲೀಷೆ; ಅದಕ್ಕೆ ಹೊಂದಿ ಹುಟ್ಟದೆ, ಬುದ್ಧಿ ಹೆಕ್ಕಿದ ಮಾತು ಕ್ಲೀಷೆ. ಈ ಕ್ಲೀಷೆಗಳನ್ನು ಹವಣಿಸಿ ಕಟ್ಟಿದ ಬುದ್ಧಿಯ ಚತುರತೆಯನ್ನು ಬೇಕಿದ್ದರೆ ಹೊಗಳಬಹುದು–ಅದರ ಅನುಕರಣ ಸಾಮರ್ಥ್ಯಕ್ಕೆ; ಅನುಕರಿಸಿಯೂ ಸ್ವಂತದ್ದೆಂಬಂತೆ ಹಾಕುವ ಒಂದು ಢೋಂಗಿ ವರಸೆಗೆ.

ಮೊದಮೊದಲ ಪದ್ಯಗಳ ಭಾವಮುಗ್ಧತೆ, ಉತ್ಸಾಹ, ಹಿರಿಯ ಕವಿಗಳ ಧಾರಾಳ ಅನುಕರಣೆ – ಈ ಎಲ್ಲ ಸಂಗ್ರಹಗಳಲ್ಲಿಯೂ ಬೇರೆ ಬೇರೆ ಪ್ರಮಾಣದಲ್ಲಿ ಕಾಣಸಿಕೊಂಡಿವೆ. ಇಷ್ಟಾದರೂ ಅಲ್ಲಿ ಇಲ್ಲಿ ಒಂದೆರಡು ಸಂಕಲನಗಳು ಅಥವಾ ಸಂಕಲನದ ಒಂದೆರಡು ಪದ್ಯಗಳು ಭರವಸೆ ಹುಟ್ಟಿಸುವಂತಿವೆ ಎನ್ನುವುದು ಸುಳ್ಳಲ್ಲ.

ಶ್ರೀ ಶಿವರಾಮಯ್ಯನವರ **ಸ್ವಪ್ನಸಂಚಯ** ದ ತುಂಬ ಕ್ಷೌರದಿಂದಿಡುದು, ಮುಗ್ದತೆ, ಅಂಗಿಂಗಾಡು, ವತ್ತರಿಸು, ವೈವಿದ್ಯ, ಸೌದ – ಇಂಥ ಪ್ರಯೋಗಗಳು ಸಿಗುತ್ತವೆ. ತಪ್ಪೋಲೆಯಲ್ಲಿ "ನಿಶ್ಯಭ್ದ" ಎಂಬ ತಪ್ಪು ರೂಪಕ್ಕೆ "ನಿಶ್ಯಬ್ದ" ಎಂಬ 'ಸರಿ' ರೂಪ ಕೊಟ್ಟಿದ್ದಾರೆ. ಮೇಲೆ ಕಾಣುವ ಸಾಮಾನ್ಯ ಪದಗಳ ಬಳಕೆಯಲ್ಲೇ ಅವರಿಗೆ ಶ್ರಮವಾಗುತ್ತಿದ್ದರೂ ಕಷ್ಟದ ಸಂಸ್ಕೃತ ಶಬ್ದಗಳನ್ನು ಬಳಸುವುದರಲ್ಲಿ ಶಿವರಾಮಯ್ಯನವರಿಗೆ ತುಂಬಾ ಆಸಕ್ತಿ. ಹಾಗಾಗಿ "ಪೂರ್ವ ದಿಗಂತದಿಂ ಶಿವನ ಲೀಲಾಂಶದ ಅಸ್ಪಷ್ಟ ಪಾರಾವಾರ" ಎಂದೆಲ್ಲ ಬರೆದುಬಿಡುತ್ತಾರೆ. ಸದ್ಯದ ಕನ್ನಡವನ್ನು ಉದ್ದಕ್ಕೂ ಬಳಸುತ್ತ ನಡುವೆ ಥಟ್ಟನೆ "ಒಡಿತದಿಂ ಸಂತಸಂಬಟ್ಟು" "ಹಾಡಲುದ್ಯೋಗಿಸಿದರ್ ಮೇಣ್

ಪಳಂಚಿ ನರ್ತಿಸಿದರ್" ಎಂಬ ಹಳಗನ್ನಡದ ರೂಪಗಳನ್ನು ಬೆರೆಸಿಬಿಡುವ ಒಂದು ಲೀಲೆಯನ್ನು ಇವರಲ್ಲಿ ಕಾಣಬಹುದು. ಅಲ್ಲಲ್ಲಿ ಇಂಗ್ಲಿಷ್ ಪದಗಳನ್ನು ಅನಿವಾರ್ಯವಲ್ಲದಿದ್ದರೂ ತರಲು ಹಿಂಜರಿಯುವುದಿಲ್ಲ. ಶಿವರಾಮಯ್ಯನವರಿಗೆ ಪದದ ಅರ್ಥಕ್ಕಿಂತ ಅದರ ನಾದದ ಬಗೆಗೆ ಹೆಚ್ಚು ಮೆಚ್ಚಿಗೆ. ಯಾವ ಕರೆ ಎಂಬ ಪದ್ಯ ಈ ಸಂಕಲನದ ಇತರ ಪದ್ಯಗಳಿಗಿಂತ ಮೇಲೆನ್ನಬಹುದು.

**ಅರ್ನೆಸ್ಟ್** ಕೃತಿಯಲ್ಲಿ ಇಪ್ಪತ್ತೊಂದು ಪದ್ಯಗಳಿವೆ. ಗದ್ಯದಲ್ಲಿ ಅಚ್ಚುಕಟ್ಟಾಗಿ ಹೇಳಬಹುದಾಗಿದ್ದ ಕೆಲವು ಪರಿಚಿತ ವಿಚಾರಗಳನ್ನು ಇಲ್ಲಿ ಪದ್ಯಾಕಾರದಲ್ಲಿ ಹಿಡಿಯುವ ಪ್ರಯತ್ನ ಮಾಡಲಾಗಿದೆ. ಇಲ್ಲಿನ ಕೆಲವು ಪದ್ಯಗಳನ್ನು ಹಾಡಲು ಸಾಧ್ಯ. ಕಹಿ. ಸಿಹಿ, ಖೆಡ್ಡಾ ಎಂಬ ಪದ್ಯಗಳು ಈ ಸಂಗ್ರಹದ ಉಳಿದ ಬರೆಹಗಳಿಗಿಂತ ಉತ್ತಮ. ಮಾತ್ರಾ ಛಂದಸ್ಸಿನ ಸಲುವಾಗಿ ಜೋಂಪತ್ತಿ, ನೀವ್–ಎಂಬಂಥ ರೂಪಗಳನ್ನು ಬಳಸುವುದನ್ನು ತಪ್ಪಿಸಬಹುದು.

**ಜೀವನರಂಗ** ಡಾ|| ಎಸ್. ಎಂ. ಹುಣಶಾಳರ ಎರಡನೆಯ ಪದ್ಯಸಂಕಲನ. ಹುಣಶಾಳರು ತುಂಬ ಭಾವವಶರಾಗಿ ಆವೇಶಗೊಂಡು ಬರೆಯುವುದರಿಂದ ಇವರಿಗೆ ಮಾತಿನ ಮೇಲೆ ಹತೋಟಿ ತಪ್ಪಿ, ಹುಣಶಾಳರ ಮನಸ್ಸಿನಲ್ಲಿ ಇದ್ದಿರಬಹುದಾದದ್ದೇ ಒಂದು, ಮಾತುಗಳು ಹೇಳುವುದೇ ಮತ್ತೊಂದು ಎನ್ನಿಸುತ್ತದೆ. ಉತ್ಸಾಹವೇ ಮೂಲ ಆಧಾರವಾಗಿ ಪದಗಳ ಬಗ್ಗೆ ತಾರತಮ್ಯ ಮಾಡದೆ ಬರೆಯುವ ಹುಣಶಾಳರ ರಚನೆಗಳಲ್ಲಿ ಕೆಲವು ಸಿನಿಮಾಗೀತೆಗಳನ್ನು ಹೋಲುತ್ತವೆಯಾದರೂ ಉಳಿದ ಹಲವು ಆ ಮಟ್ಟಕ್ಕೂ ಏರುವುದಿಲ್ಲ. ತೀರ ಸರಳವಾದ ಕ್ಲೀಷೆ ವಿಚಾರಗಳನ್ನು ಹೆಚ್ಚು ಕಡಿಮೆ ಲಯಬದ್ಧವಾದ ಧಾಟಿಯಲ್ಲಿ ಹೇಳುವ ಈ ಪದ್ಯಗಳು ತುಂಬ ಕುತೂಹಲಕರವಾಗಿವೆ. ಹುಣಶಾಳರ ರಚನಾರೀತಿಗೆ ಒಂದು ನಿದರ್ಶನ:

ನಗೆ ನಿಗೆ ಹೊಗೆ ಹೋಗೆ
ಹರುಷದಿಂ ನಕ್ಕು ಹೊಟ್ಟೆಶೂಲಿ
ನಗೆ ಹೊಗೆಯಾಗಿ ಹೋಗಲಿ

(ನಗೆ ಹೊಗೆ)

ಮಥನದಿಂ ಮುತ್ತು ಮೌಕ್ತಿಕಗಳು
ಸತ್ಯ ಅಹಿಂಸೆ ಸತ್ಯಾಗ್ರಹಗಳು
ಉದುರಿದವು ಪಳಪಳ
ಆರಿಸಲಿಲ್ಲ ಬಳಬಳ

(ಮಹಾತ್ಮನ ಕೊಡುಗೆ)

ಇನ್ನೂ ಪದ್ಯರಚನೆಯ ಸಾಧನೆಯ ಹಂತದಲ್ಲಿರುವ 'ಮಹಿಮರ' ಮೊದಲ ಸಂಕಲನ **ಕುಮುದ್ವತಿ,** ಕಾವ್ಯವನ್ನು ಬರೆಯುವ ಹಂಬಲ ಆತುರಗಳೇ ಹೆಚ್ಚಾಗಿದ್ದು ಅದಕ್ಕೆಬೇಕಾಗುವ ಸಾಮರ್ಥ್ಯ ಒದಗಿ ಬರುವ ಮುನ್ನವೇ ರಚಿತವಾಗಿರುವ ಕೃತಿ.

**ಚಂದ್ರಮೂವು** 'ಕುಮುದ್ವತಿ'ಗಿಂತ ಕೊಂಚ ಉತ್ತಮ ರೀತಿಯ ಬರೆಹ. ಹಿರಿಯ ಕವಿಗಳ ಭಾವಗೀತೆಗಳನ್ನು ಅನುಕರಿಸಿ ಬರೆದ ಬರೆಹ. ಇದರಲ್ಲಿ "ಅಭಿವ್ಯಕ್ತಿಯ ಆತುರ ನಾವೀನ್ಯತೆಯ ಕಾತರ" ಎದ್ದು ಕಾಣುತ್ತದೆ. ಹೃದಯದೀವಿಗೆ, ಮನಸು, ಹೃದಯ ಗೀತ ಮೊದಲಾದ ಪದ್ಯಗಳು ರೂಢಿಯ ಮಾತಿನಿಂದ ಕಟ್ಟಿದ ತೀರ ಸಾಮಾನ್ಯರಚನೆಗಳಾದರೂ ಕಟ್ಟುನಿಟ್ಟಾದ ಮಾತ್ರಾಲಯದ ಕಾರಣದಿಂದ ಹಾಡಲು ಬರುವಂತಿವೆ. 'ಗಣಪತಿ ಪೂಜೆ' ಮತ್ತು 'ತಾಯಿಮಗು'ಗಳು ಶಿಶುಗೀತೆಗಳ ಸಾಲಿನಲ್ಲಿ ನಿಲ್ಲುತ್ತವೆ.

ನಾಗೇಗೌಡರ **ನಾನಾಗುವೆ ಗೀಜಗನ ಹಕ್ಕಿ** ತನ್ನ ಸುತ್ತ ಕಾಣುವ ಪ್ರಕೃತಿಯ, ಬದುಕಿನ ಚೆಲುವನ್ನು ಕಾವ್ಯವಾಗಿ ಹಾಡಬೇಕೆಂಬ ಹಂಬಲದಿಂದ ಹುಟ್ಟಿದ ಪದ್ಯಕೃತಿ. ತೀರ ಸ್ಪಷ್ಟವಾದ ಕೆಲವು ವಿಚಾರಗಳನ್ನು ಇಲ್ಲಿ ಪದ್ಯರೂಪದಲ್ಲಿ ಹೆಣೆದು ಕೊಡಲಾಗಿದೆ. ಹಳಗನ್ನಡದ ಕೆಲವು ಪದಪ್ರತ್ಯಯಗಳನ್ನು ಇಂದಿನ ಭಾಷೆಯ ನಡುವೆ ಬೆರೆಸಿ ಬಳಸುವುದರಿಂದಲೂ ಲಯದ ಶೈಥಿಲ್ಯದಿಂದಲೂ ಇವು ಸೊರಗುತ್ತವೆ. ಆದರೆ ಒಂದೆರಡು ಕಡೆ ಕೆಲವು ಸೊಗಸಾದ ಸಾಲುಗಳೂ ಮೂಡಿವೆ. "ಹುಚ್ಚೆಳ್ಳ ಹೂಮುಡಿಸಿ, ಹೆಣೆದವರೆಗಿಡ ಉಡಿಸಿ, ಜೋಳದ ಬಾಲೇರ ಮೇಲೆ ತೆನೆದೀಪ ಹೊರಿಸಿ, ನಿಲಿಸಿದಳು ತೆಂಗಿನ ಮರಗಳ ಕೊಡೆ ಹಿಡಿಸಿ" ಉಷೆ ಸೂರ್ಯನ ಬರವಿಗೆ ಕಾಯುವ ಚಿತ್ರ ಇದಕ್ಕೆ ನಿದರ್ಶನ. ಸರೋಜಿನೀ ದೇವಿಯವರ ಕವನಗಳ ಅನುವಾದಗಳಾದ ಅರ್ಪಣೆ, ಚಂಚಲ, ಪಾರಿತೋಷಕ – ಇವು ಮೂಲದ ಚೆಲುವಿಗೆ ಕುಂದು ಬರದಂತೆ ಮಾಡಿದ ಅನುವಾದಗಳಾಗಿವೆ.

ಎಚ್. ಎಂ. ರಂಗನಾಥರ **ಗ್ರಹ ಭ್ರಮಣ** ದಲ್ಲಿರುವ ಇಪ್ಪತ್ತೆಂಟು ಕವನಗಳನ್ನು ಮೂರು ಭಾಗಗಳಾಗಿ ವಿಂಗಡಿಸಿದಂತಿದೆ. ಮೊದಲ ಭಾಗದಲ್ಲಿ ನವೋದಯ ಸಂಪ್ರದಾಯದ ಅನುಸರಣೆಗಳಿದ್ದರೆ ಎರಡನೆಯ ಭಾಗದಲ್ಲಿ ಜಾನಪದ ಧಾಟಿ ಹಿಡಿದ ರಚನೆಗಳಿವೆ. ಮೂರನೆಯ ಭಾಗದಲ್ಲಿ ಹೊಸಕಾವ್ಯದ ಆಕಾರ ಹೊತ್ತ ಪದ್ಯಗಳಿವೆ. ಮೇಲುನೋಟಕ್ಕೆ ಇವುಗಳಲ್ಲಿ ಭಿನ್ನತೆ ಕಂಡರೂ ಇವೆಲ್ಲದರ ಹಿಂದೆ ಉತ್ತಮ ಕಾವ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಿ ಅದನ್ನು ಹೋಲುವಂತೆ ಬರೆಯುವ ಮನೋಶೀಲವೊಂದು ಕಾಣುತ್ತದೆ. 'ಪಾಳುದೇಗುಲ' ಕವನ ಕುವೆಂಪು ಅವರ 'ಹಂಪೆಯ ಭೀಮ'ನಿಂದ ಪ್ರಭಾವಿತವಾಗಿದ್ದರೆ 'ಒಲಿದು ನಲಿದೆ' ಎಂಬ ಪದ್ಯ ಕೆ.ಎಸ್.ನ.ರವರ 'ಪ್ರಶ್ನೆಗೆ ಉತ್ತರ' ಕವನದ ಲಯ ಹಿಡಿದು ಸಾಗುತ್ತದೆ. ಮೈಲಿಗಲ್ಲು, ಪ್ರತಿಮೆಗೊಂಚಲಹಾರ, ಇಳಿಗಿಳಿದೆ ನಾನು ಎಂಬ ಪದ್ಯಗಳು ಬಹಳ ಕಡೆ ಶಿವರುದ್ರಪ್ಪನವರ ಕಾವ್ಯವನ್ನು, ಕೆಲವು ಕಡೆ ಅಡಿಗರ ಕಾವ್ಯವನ್ನು ಅನುಕರಿಸಿದರೆ 'ಲೆಕ್ಕ' ಕವನ ರಾಮಾನುಜನ್ನರ 'ಮಾತು ಮುಗಿಯುವ ಮೊದಲೆ' ಕವನಕ್ಕೆ ಋಣಿಯಾಗಿದೆ. ಹೀಗಿದ್ದೂ ಕಡೆಯ ಎರಡು ಭಾಗಗಳ ಪದ್ಯಗಳು ತೊಡಕಿಲ್ಲದೆ ಓದಿಸಿಕೊಳ್ಳುತ್ತವೆ. ಅಲ್ಲಿ ಇಲ್ಲಿ ಮಿಂಚುವ ಉಪಮೆ ರೂಪಕಗಳಿಂದ ಮಾತು ಕೊಂಚ ರುಚಿಯಾಗುತ್ತದೆ. ಅನುಭವವನ್ನು ಸರಳೀಕರಿಸಿ ಸಿಂಗರಿಸಿ ಹೇಳುವ ಜಾನಪದ ಧಾಟಿಯ ಕೋಲುಬ್ಯಾಟೆ, ಸುಗ್ಗಿಪದ, ತವರಿಂದ, ಚೆಲುವೆ, ಭೂತಾಯಿಯಂಥ ಪದ್ಯಗಳು ಹಿತವಾಗಿದ್ದು ಹಾಡಿಗೆ ಸೊಗಸುತ್ತವೆ.

ಬದುಕಿನ ಸಿಕ್ಕು ಸುಳಿಗಳ ಪರಿಚಯವಿರದ ಮುಗ್ಧ ಮನಸ್ಸು ಹಾಡಿರುವ ಕೆಲವು ಕೋಮಲ ಪದ್ಯಗಳ ಸಂಗ್ರಹ **ರಿಂಗಣ.** ನೀ ಎಲ್ಲೆಲ್ಲಿ, ಮೊದಲ ಮುಗುಳು, ರೂಪಶ್ರೀ, ಸೂಜಿಮದ್ದಿನ ಸೋಗಿಗಳಲ್ಲಿ ಭಾವಗೀತದ ಮೆಲುಪು ಇದೆ. ರಿಂಗಣ, ಬಾರೆ, ತಾರೆಮಲ್ಲಿಗೆ ಮೊದಲಾದುವು ಪ್ರಕೃತಿಯ ಚೆಲುವಿಗೆ ಒಲಿದು ಬರೆದ ಕೆಲವು ರಾಗ ಪ್ರಶಂಸೆಗಳು. ಮಗು, ರಾಗಮಾಲೆ, ಜೀವನಗೀತಗಳು ಅನ್ಯರ ಕವನಗಳ ಮಾದರಿಗೆ ಹೆಣೆದ ಪದ್ಯಗಳು. ಹಿಂದಿನ ಭಾವಗೀತಕಾರರು ಸಿದ್ಧಪಡಿಸಿಕೊಟ್ಟ ಭಾಷೆಯನ್ನು ಇವರು ಅಚ್ಚುಕಟ್ಟಾಗಿ ಬಳಸಿಕೊಳ್ಳುತ್ತಾರೆ. ಈ ಕೃತಿಗೆ ಮುನ್ನುಡಿ ಬರೆದ ಚೆನ್ನವೀರ ಕಣವಿ ಯವರು ಹೇಳುವಂತೆ ರಾಜಶೇಖರರ ಪದ್ಯಗಳು "ಒಂದು ಮೃದುವಾದ ಭಾವ, ಇಲ್ಲವೆ ನವುರಾದ ಕಲ್ಪನೆ. ಹದವಾದ ಪದಯೋಜನೆಯಿಂದ ಅನೇಕ ಕಡೆ ತೆಳುವಾದರೂ ಸಾರ್ಥಕ ವಾಗಿ ರೂಪುಗೊಂಡಿವೆ."

ದಿವಂಗತ ಮುರಳೀಧರರ **ತಾರಾಮಂಡಲ** ದಲ್ಲಿರುವ ಪದ್ಯಗಳಲ್ಲಿ ಆಧುನಿ ಕರ ಅತಿರೇಕದ ಬದುಕನ್ನು ವಿಡಂಬಿಸುವ 'ಕಿವಿಮಾತು' ಮತ್ತು 'ನಾಚಿಕೆ' ಕವನಗಳು ಉತ್ತಮವಾದವು. ಉಳಿದವುಗಳಲ್ಲಿಯೂ ಕಾಣುವ ಮಾತಿನ ಅಚ್ಚುಕಟ್ಟು, ಗೀತಲಯ ಗಳು ಬೆಳೆಯುತ್ತಿದ್ದ ಕವಿಯಲ್ಲಿ ಕಾಣುವ ಲಕ್ಷಣಗಳು.

**ಹಾಲುತೊರೆಯಿಂದ ಉಪ್ಪುನೀರಿಗೆ** ಇಪ್ಪತ್ತೈದು ಪದ್ಯಗಳಿರುವ ಕೃತಿ.ಇದರಲ್ಲಿ ಫಣಿ, ಹಣ ಎಂಬ ಎರಡು ರಚನೆಗಳು ಲಕ್ಷ್ಯಯೋಗ್ಯವಾಗಿವೆ. ಮೊದಲನೆಯದರಲ್ಲಿ ಜಡೆಯನ್ನು ಹಾವಿನ ಸಂಕೇತದಲ್ಲಿ ಧ್ವನಿಸುವ ಯತ್ನವಿದೆ. ಆದರೆ ಫಣಿಯ ವರ್ಣನೆ ಯಲ್ಲಿ ಬರುವ 'ತಲೆ ತುಂಬ ಸಂಚಾರ' ಎನ್ನುವ ಮಾತು ಮತ್ತು 'ತರತರದ ಎಣ್ಣೆಗಳ ಲೊಚಲೊಚನೆ ಕುಡಿಯುವುದು' ಎನ್ನುವ ವರ್ಣನೆ ಸಂಕೇತವನ್ನು ವಾಚ್ಯದತ್ತ ಜಗ್ಗು ತ್ತವೆ. ರಾಮಾನುಜನ್ನರ ಶೈಲಿಯಿಂದ ಪ್ರಭಾವಿತವಾಗಿದ್ದರೂ 'ಹಣ' ಅರ್ಥವತ್ತಾದ ರಚನೆ. ಇಡೀ ಪದ್ಯ ಒಂದು ಸಂಕೇತವಾಗಿದ್ದು ಧ್ವನಿಯ ನೆಲೆಯಲ್ಲಿ ಎಲ್ಲ ಅಸಹಜ ವ್ಯಾಪಾರಗಳನ್ನೂ ವಿಡಂಬಿಸುವ ಯತ್ನ ಮಾಡುತ್ತದೆ.

**ಅಜ್ಜಗಾವಲು** ಇಪ್ಪತ್ತು ಕವನಗಳ ಒಂದು ಗುಚ್ಛ. ಈ ಕವನಗಳಲ್ಲಿ ಹೊಸ ಮಾತಿನ ಪೋಣಿಕೆಯ ಯತ್ನವಿದೆ. ಮಾತಿನ ಬಳಕೆಯಲ್ಲಿ ಹಿಡಿತವಿದ್ದು ಧಾರವಾಡದ ದೇಸಿಯ ಹದವಾದ ಬೆರಕೆಯಿದೆ. ಅನುಭವಗಳನ್ನು ಹಳೆ ಹೇಳಿಕೆಗಳ ಅಚ್ಚಿಗೆ ಹೊಯ್ಯದೆ ಅದರ ನಿಜಾರ್ಥದತ್ತ ದಿಟ್ಟಗಣ್ಣಿನಿಂದ ನೋಡುವ ಸ್ಥೈರ್ಯವಿದೆ. ಆದರೂ ನಿಜವಾದ ಕಾವ್ಯದಲ್ಲಿ ಇರಬೇಕಾದ ಮಾಂತ್ರಿಕತೆಯ ಸ್ಪರ್ಶವೇ ಗೈರುಹಾಜರಾಗಿದೆ. ಸಂಬಂಧ, ನಂಬಿಕೆ ಮತ್ತು ಸಂಕಲನದ ಕಡೆಯಲ್ಲಿರುವ ಹೆಸರಿರದ ಒಂದು ಕವನ – ಇವು ಮಾತ್ರ ಮೇಲಿನ ಮಾತಿಗೆ ಅಪವಾದವಾಗುವ ದಿಕ್ಕಿನಲ್ಲಿ ಸಾಗಿವೆ.

ಶ್ರೀ ರಾಜಶೇಖರಪ್ಪನವರ **ತರಂಗ** ಸಂಕಲನದಲ್ಲಿ "ಚಂದನದುರ್ಗದ ಬಂಧಿತ ಕನ್ಯೆ" ಎಂಬ ದೀರ್ಘ ಕವನದ ಜೊತೆಗೆ ಬೇರೆ ನಾಲ್ಕಾರು ಬಿಡಿ ಪದ್ಯಗಳಿವೆ. ಕಥನ ಕವನ ಟೆನಿಸನ್ ಕವಿಯ The Lady of Shallot ಕವಿತೆಯ ಮೂಲಭಾವ

ಗಳನ್ನೂ, ಸನ್ನಿವೇಶಗಳನ್ನೂ, ಅನುಸರಿಸಿ ಬರೆದದ್ದು. ರಾಜಶೇಖರಪ್ಪ ತಿಳಿಯಾದ ಭಾಷೆಯಲ್ಲಿ ಕುತೂಹಲ ಹುಟ್ಟಿಸುವಂತೆ ಕಥೆ ಹೇಳಬಲ್ಲರು. ನಾಲ್ಕು ಮಾತ್ರೆಯ ಲಯದಲ್ಲಿ ಅದರ ವೈವಿಧ್ಯವನ್ನೆಲ್ಲ ಸಾಧ್ಯವಾದಷ್ಟೂ ಬಳಸಿಕೊಂಡು ಲಲಿತ ನಡಿಗೆಯಲ್ಲಿ ಸಾಗುವ ಈ ಕಥನಕವನ ಆಕರ್ಷಕ ಹಾಡುಗಬ್ಬವಾಗಿವೆ. ಆದರೆ ಚಂದನದುರ್ಗದ ಕನ್ಯೆ ಹೊರಲೋಕವನ್ನು ನೋಡಿದ ಕೂಡಲೆ ಕೊಠಡಿಯ ಕನ್ನಡಿ ಚೂರಾಗುವುದನ್ನೂ ಹೂಡಿದ ನೆಯ್ಗೆ ಹರಿಯುವುದನ್ನೂ ಶಾಪವೆಂದು ಕರೆಯದೆ ಬದುಕಿನ ನಿಜಪ್ರಸಂಗಗಳಿಗೆ ಅನ್ವಯಗೊಳ್ಳುವ ಧ್ವನಿವತ್ತಾದ ಪ್ರತಿಮೆಗಳಾಗಿ ಬೆಳೆಸಿದ್ದಲ್ಲಿ ಕವನಕ್ಕೆ ಹೊಸ ಆಳ ಒದಗುತ್ತಿತ್ತು. 'ತರಂಗ'ದಲ್ಲಿ ಚಿಟ್ಟೆ, ಮರಗಳನ್ನೆಲ್ಲ ಮಾತಾಡಿಸಿ ಬರೆದ ಮುಗ್ಧ ರಚನೆಗಳೂ ಇವೆ. ಸಾರ್ಥಕ್ಯ, ಹೂವು ಮೊದಲಾದ ಪದ್ಯಗಳ ಧಾಟಿ, ಭಾಷೆಗಳಲ್ಲಿ ಮತ್ತು ವರ್ಷ–ಶರತ್ ಪದ್ಯದ ಲಯದಲ್ಲಿ ಕುವೆಂಪು ಅವರ ಕವನಗಳ ದಟ್ಟವಾದ ಪ್ರಭಾವ ಕಾಣುತ್ತದೆ.

**ಕೆಲೈಡೋಸ್ಕೋಪ್** ಆಡುಮಾತನ್ನೇ ಬಳಸಿ ಬರೆದ ಲಘುಲಹರಿಯ ಕೆಲವು ಪದ್ಯಗಳ ಸಂಗ್ರಹ. ಎಲ್ಲವನ್ನೂ ಹಗುರವಾಗಿ ಭಾವಿಸಿ ಬಳಸಿ ಖುಷಿ ಪಟ್ಟುಕೊಳ್ಳುವ ಲಘು ಮನೋಭಾವ ಹೆಚ್ಚಿನ ಪದ್ಯಗಳ ಭಾಷೆಯ ಬಳಕೆಯಲ್ಲಿ ಮತ್ತು ಭಾವನೆಯ ಅಭಿವ್ಯಕ್ತಿಯಲ್ಲಿ ಕಾಣುತ್ತದೆ. ಹಾಗಿದ್ದೂ ಹೈಜಂಪು, ಉತ್ತಮ ತಳಿ, ಉನ್ಮಾದಿನಿ, ಫ್ರೀಸ್ಟ್ಯಾಲ್ ಕುಸ್ತಿ, ದುಂಬಿ ಮತ್ತು ಬಾಡಿದ ಹೂ ಎಂಬ ಕವನಗಳು ಉಳಿದ ಪದ್ಯಗಳಿಗಿಂತ ತೀರ ಭಿನ್ನವಾಗಿದ್ದು ತಕ್ಕಮಟ್ಟಿಗೆ ಉತ್ತಮ ರಚನೆಗಳಾಗಿವೆ. "ಹೊಸಕವಿಯ ಗೋಳಿ"ನಲ್ಲಿ ಲೇಖಕರಿಗೂ ಕಾವ್ಯಕ್ಕೂ ಇರುವ ಸಂಬಂಧ ಯಾವ ಬಗೆಯದೆಂಬುದು ತಿಳಿಯುತ್ತದೆ. ಯಾರು ಲಕ್ಷಿಸದೆ ಇದ್ದರೆ ತಾನೆ ಏನು?

ಆದರೂ ಬರೆಯುವೆ
ಬರೆದು ಬಿಸಾಕುವೆ
ಮತ್ತೂ ಬರೆಯುವೆ
ಬರೆಯುವ ರೋಗ
ಗುಣಪಡಿಸುವುದು ಹೃದ್ರೋಗ

ಎನ್ನುವುದು ಶಾಸ್ತ್ರಿಗಳ ದೃಢ ಪ್ರತಿಜ್ಞೆ. ಹಾಗಿರುವಾಗ ಅವರು

ನಾನಾಗುವೆ ಹಿರಿಯ ಕವಿ
ಅಹ! ಅದೆಂತಹ ಸವಿ
ಇನ್ನೊಬ್ಬರು ಮೂಸದ ವಿಷಯವ
ಹುಡುಹುಡುಕುತ ತೆಗೆಯುವೆ

ಎಂದೆಲ್ಲ ಬರೆಯುವುದರಲ್ಲಿ ಸೋಜಿಗವೇನಿದೆ?

ಸಣ್ಣ ಕತೆಗಳಲ್ಲಿ ಒಂದು ಮಟ್ಟದ ಗದ್ಯವನ್ನು ಬರೆಯಬಲ್ಲ ಶ್ರೀನಿವಾಸ ಕುಲಕರ್ಣಿಯವರು ತಮ್ಮ **ಕೆಥಾರ್ಸಿಸ್** ಕವನ ಸಂಕಲನದಲ್ಲಿ ಬಿಗಿಯಾದ ಭಾಷೆ

ಯನ್ನು ಬಳಸಿದ್ದಾರೆ. ವ್ಯರ್ಥಪದಗಳು, ಅನಗತ್ಯ ಪ್ರತ್ಯಯಗಳು, ಬಲಾತ್ಕಾರ ಪ್ರಾಸ, ಛಂದೋಪೂರಣಗಳ ಭಾರವಿಲ್ಲದೆ ಮಾತು ಅರ್ಥಕ್ಕೆ ವಿಧೇಯವಾಗಿದೆ. ಅನೇಕ ಕವನಗಳಲ್ಲಿನ ಲಯ ಕವನವನ್ನು ಮಾತಿಗೆ ಹತ್ತಿರ ನಿಲ್ಲಿಸುತ್ತದೆ. ಕೆಲವು ಪದ್ಯಗಳಲ್ಲಿ ಒಂದೇ ಪದವಿರುವ ಅನೇಕ ಸಾಲುಗಳಿವೆ. ಮೂರು ಪದಗಳಿಗೆ ಮೀರಿದ ಸಾಲು ತೀರ ಕಡಿಮೆ. ಅರ್ಥವತ್ತಾದ ಉದ್ದೇಶವಿಲ್ಲದೆ ಸಾಲುಗಳನ್ನು ಹೀಗೆ ಒಡೆದಾಗ ಅದು ಕಣ್ಣಿಗೆ ಚಂದ ಕಂಡೀತೇನೋ ಅಷ್ಟೆ. ಸುಗಂಧ, ನಲ್ಲನಲ್ಲಿ, ಎರಡೂ ಒಂದೇ, ಸಿಂಗಾರ ಇಂಥ ರಚನೆಗಳು ಓದುಗರನ್ನು ಎರಡು ಕ್ಷಣ ಹಿಡಿದು ನಿಲ್ಲಿಸುತ್ತವೆ. "ಮರಳುಗಾಡ ಮರ" ಈ ಸಂಕಲನದ ಉತ್ತಮ ಕವನ.

ಆ ಮತಾ ಈ ಮತಾ
ಯಾವ ಮತಕ್ಕೂ ಸೇರದ
ಗೊಮ್ಮಟ ನಾನು
ವಿವಿಧ ಭಾವರಾಗಗಳಲಿ ಮಿಡಿದ
ಶೃತಿಗಳು ನನ್ನವೆ
ಅವು ಸತ್ತರೆ ನಾನೇ ಹೊತ್ತು
ಸುಡುಗಾಡಿಗೆ ಬಾಡಿಗೆ ತೆತ್ತು, ಸುಟ್ಟು
ಉಮ್ಮಳಿಸದೆ ಬಿಕ್ಕಳಿಸದೆ
ಚಿತೆಯ ಉರಿಯಿಂದಲೇ ಸಿಗರೇಟು
ಹೊತ್ತಿಸಿ, ಒಂದು ಝುರಿ ಎಳೆದು ಮರಳುವೆ
ತಾನು ತನ್ನ ನೆರಳೊಡನಿದ್ದ
ಮರಳುಗಾಡ ಮರ ನಾನು.

ಚೆಲುವಾದ ಈ ಸಾಲುಗಳಲ್ಲಿ ವ್ಯಕ್ತವಾಗುವ ಸ್ವಾತಂತ್ರ್ಯಪ್ರೀತಿ, ತನ್ನನ್ನೇ ತಾನು ವಿಮರ್ಶೆಗೆ ಸಲ್ಲಿಸಿಕೊಳ್ಳುವ ವಸ್ತುನಿಷ್ಠ ಮನೋಧರ್ಮ ಮೆಚ್ಚುವಂಥದು.

**ಮಹಾತ್ಮ** ಕೆ. ಭೈರವಮೂರ್ತಿಯವರ ಪದ್ಯಸಂಗ್ರಹ. ಐವತ್ತುಮೂರು ಕವನಗಳಿರುವ ಈ ಕೃತಿಯಲ್ಲಿ "ಸಾಕಷ್ಟು ವೈವಿಧ್ಯವಿದೆ. ಸ್ವತಂತ್ರ ಕವನಗಳು, ಪುಡಿ ಕವನಗಳು, ಅನುವಾದಗಳು – ಹೀಗೆ ಎಲ್ಲವೂ ಈ ಸಂಕಲನದಲ್ಲಿ ಅಡಕವಾಗಿವೆ". ಅರವತ್ತೈದು ಪುಟಗಳ ಈ ಸಂಗ್ರಹದಲ್ಲಿ ಆರು ಭಾಗಗಳಿವೆ. ವಸ್ತುವಿನ ದೃಷ್ಟಿಯಿಂದ ಈ ವರ್ಗೀಕರಣ ಮಾಡಿರುವಂತಿದೆ. ಆದರೆ ಸಮರ್ಪಕವಾಗಿಲ್ಲ. 'ತೋರಣ' ಭಾಗದ ಅನೇಕ ಪುಡಿ ಪದ್ಯಗಳನ್ನು 'ಒಲವು' ಭಾಗದಲ್ಲಿ ಸೇರಿಸಬಹುದಾಗಿತ್ತು.

'ಒಲವು' ಭಾಗದ ರಚನೆಗಳು ಉಳಿದ ಪದ್ಯಗಳಿಗಿಂತ ಮೇಲ್ಮಟ್ಟದವು. ರವೀಂದ್ರನಾಥರ Crossing ನ ಅನುವಾದಗಳು ಮೂಲದ ಭಾವವನ್ನು ಚೆನ್ನಾಗಿ ಬಿಂಬಿಸುತ್ತವೆ. ಲೇಖಕರ ಸ್ವಂತ ರಚನೆಗಳಲ್ಲಿ ಬಹುಪಾಲು ಸರಳ ಆಲೋಚನೆಗಳನ್ನು 'ಕಾವ್ಯಮಯ'ವಾದ ಭಾಷೆಯಲ್ಲಿ ಮಂಡಿಸುವ ಯತ್ನಗಳು.

ಭೈರವಮೂರ್ತಿಯವರಿಗೆ ಕನ್ನಡ ಶಬ್ದಕೋಶದ ವಿಸ್ತಾರ ಪರಿಚಯವಿರುವುದೇನೋ ಸ್ಪಷ್ಟ. ಆದರೆ ಭಾಷೆಯನ್ನು ಸೃಜನಾತ್ಮಕವಾಗಿ ಬಳಸುವುದು ಅವರಿಗೆ ಇನ್ನೂ ಕೈಗೂಡಬೇಕು.

**ನವಶೃಂಗಾರ** ಅದರ ಕರ್ತೃವಾದ ವಿ. ಎನ್. ದಾಸರ ಪ್ರಕಾರ ಕನ್ನಡ ಸಾಹಿತ್ಯದಲ್ಲಿ ಒಂದು 'ನವ್ಯಪ್ರಯೋಗ'. ದಾಸರು "ಅಲ್ಪಕಾಲದಲ್ಲಿ ಸವಿಯಬಹುದಾದ ಗೀತಗಳಲ್ಲಿ" ನವರಸಗಳನ್ನೂ ತುಂಬಲು "ಜಿಜ್ಞಾಸು ಮನೋಭಾವದಿಂದ ರಾಗ ರಸಭಾವಗಳ ಮೇಲೆ ವೈಜ್ಞಾನಿಕವಾಗಿ ಸಂಶೋಧನೆಯನ್ನು" ಕೈಗೊಂಡರು. ಫಲವಾಗಿ ಒಂದೇ ಪದ್ಯದಲ್ಲಿ ಪಲ್ಲವಿಯಲ್ಲಿ ಪ್ರಧಾನ ರಸ, ಮಿಕ್ಕ ಒಂಬತ್ತು ಚರಣಗಳಲ್ಲಿ ಒಂಬತ್ತು ರಸ–ಹೀಗೆ (ಲೆಕ್ಕದ ಪ್ರಕಾರ) ದಶರಸ ಭರಿತವಾದ ಪದ್ಯಗಳನ್ನೆಲ್ಲ ರಚಿಸಿದ್ದಾರೆ. ದಾಸರ ಈ ನವ್ಯ ಪ್ರಯೋಗಕ್ಕೆ ಒಂದು 'ಯುಗಲಗೀತ'ದಿಂದ ನಿದರ್ಶನ ಕೊಡಬಹುದು:

ಬಾರೇ ಶಿಂಗೀ ಹೆದರುವ ಏಕೆ
ನೀರೇ ಜಡೆಯಂ ಬೀಸೇ ಬೇಗಾ
ನೀರೋ ಯಾಕೋ ಪಿಟೀಲ್ ತಂತೀ
ಬಾರೋ ಬೀಸೋ ಬ್ಯಾಟ್ ಬೇಗ.

ಮುನ್ನುಡಿಕಾರ ಡಿ. ಆರ್. ರಾಮಯ್ಯನವರಿಗೆ ಈ ಪದ್ಯ 'ಮನಮೋಹಕವಾಗಿ' ಕಂಡಿದೆ. ಕೇವಲ ಸಾಹಿತ್ಯವೇ ಇಷ್ಟು "ಮನಮೋಹಕ". ಇನ್ನು ದಾಸರು ಖುದ್ದು ಸೂಚಿಸಿರುವಂತೆ ಅದನ್ನು ಆನಂದಭೈರವಿ ರಾಗದಲ್ಲಿ ಹಾಡಿದರಂತೂ ಕೇಳಬೇಕಾದ್ದೇ ಇಲ್ಲ. ಇದನ್ನು ಮನಮೋಹಕವೆಂದ ಮಾತ್ರಕ್ಕೆ ಉಳಿದವು ಕಳಪೆ ಎಂದು ಭಾವಿಸಿದರೆ ತಪ್ಪಾದೀತು. ಈ 'ಭಾವಗೀತಗಳ ಸಂಗ್ರಹದಲ್ಲಿ' ಇದನ್ನು ಮೀರಿಸುವಂಥ ಪದ್ಯಗಳೇ ಹೆಚ್ಚು.

ಮಹಾದೇವಸ್ವಾಮಿಯವರ **ಸವಿನೆನಪು** ಕೃತಿಯಲ್ಲಿ 'ಕಣ್ಣೀರುಧಾರೆ' ಮತ್ತು 'ಲೀನ' – ಇವು ತಕ್ಕಮಟ್ಟಿನ ಪದ್ಯಗಳು. ಉಳಿದುವೆಲ್ಲ ಮಾತಿನ ಕೆದಕಾಟ ಎನಿಸುತ್ತದೆ. ಸದಾಸಿವ, ಮುಗುಥತೆ ಎಂಬ ಪ್ರಯೋಗಗಳಾಗಲೀ ಝುಂಝಾವಾತವೆಂದರೆ ಮಂದಾನಿಲವೆಂದು ('ಝುಂಝಾವಾತಕ್ಕೆ ಮರುಳಾಗಿ ಇದೇ ಸ್ಥಳಕ್ಕೆ ಪ್ರತಿನಿತ್ಯ ಬರುತ್ತೇನೆ') ತಿಳಿಯುವುದಾಗಲೀ ತಪ್ಪು.

**ಅಂದನಾ ತಿಂಮ** ಮತ್ತು **ಮಂಗಮಲ್ಲನ ವ್ಯಂಗ್ಯಪದ** – ಇವೆರಡೂ ನೀತಿ ಬೋಧಕ ಕಾವ್ಯದ ಗುಂಪಿಗೆ ಸೇರುವ ಕೃತಿಗಳು. ಎರಡು ಕೃತಿಗಳೂ ಮಂಕುತಿಮ್ಮನ ಕಗ್ಗವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಕೃತಿಗಳಾಗಿ ತೋರುತ್ತವೆ. ಆದರೆ ಇವುಗಳಿಗೆ ಕಗ್ಗದೊಡನಿರುವ ಹೋಲಿಕೆ ಇವೂ ಅದರಂತೆ ಚೌಪದಿ ರೂಪದಲ್ಲಿ, ಅಂಕಿತಸಹಿತವಾಗಿ ರಚಿತವಾದವು ಎಂಬಷ್ಟಕ್ಕೆ ಮಾತ್ರ. ಕಗ್ಗದ ಕಾವ್ಯಸತ್ವ. ಚಿಂತನೆಯ ಆಳ. ತೀವ್ರತೆ, ಉಪಮೆಗಳ ಔಜ್ವಲ್ಯ, ಬಿಗಿಯಾದ ಲಯ ಇವುಗಳಲ್ಲಿ ಏಷ್ಟೂ ಕಾಣುವುದಿಲ್ಲ.

ಬೀಚಿಯವರ 'ಅಂದನಾ ತಿಂಮ'ದಲ್ಲಿ ಉದಾರವಾದ ನೀತಿದೃಷ್ಟಿ, ಕೆಲವು ಕಡೆ ಚುರುಕಾದ ವಿಡಂಬನೆ ಇದೆ. ಸೋಷಿಯಲಿಸಂ. ತ್ಯಾಗ, ವಿಶಾಲದೃಷ್ಟಿ, ದೇಶಸೇವಕ, ಸರಸ್ವತೀ ಭಾಂಡಾರ – ಇಂಥವು ಮೇಲಿನ ಮಾತಿಗೆ ನಿದರ್ಶನಗಳೆನ್ನಬಹುದು. ಆದರೆ ಚಿಕ್ಕ ಆಕಾರದ ಚುಟುಕದ ರೀತಿಯು ಈ ಪದ್ಯಗಳು ಲಯ, ಪ್ರಾಸಗಳಿದ್ದು ಅಚ್ಚುಕಟ್ಟಾಗಿ ಕಡೆದ ಮಾತಿನ ಬಂಧಗಳಾಗಿದ್ದಲ್ಲಿ ಅವುಗಳ ಸೊಗಸು ಹೆಚ್ಚುತ್ತದೆ. 'ಅಂದನಾ ತಿಂಮ'ದಲ್ಲಿ ಇವರ ಕೊರತೆ ಎದ್ದು ಕಾಣುತ್ತದೆ.

**ಮಂಗಮಲ್ಲನ ವ್ಯಂಗ್ಯ ಪದಗಳು** ಅ. ಮ. ಸಿ. ಯವರ ಪದ್ಯಸಂಗ್ರಹದ ಶೀರ್ಷಿಕೆ ಯಾಗಿದ್ದರೂ ಪದ್ಯಗಳಲ್ಲಿ ವ್ಯಂಗ್ಯವಾದದ್ದು ಏನೂ ಇಲ್ಲ. ಇರುವುದೆಲ್ಲ ಡಿ. ವಿ. ಜಿ. ಯವರ 'ಮಂಕುತಿಮ್ಮನ ಕಗ್ಗ'ದ ಪದ್ಯಗಳ ತೀರ ಬಡ ಅನುಕರಣೆ. ಕಗ್ಗದ ಪದ್ಯ ಗಳಂತೆ ಇವೂ ನಾಲ್ಕು ಸಾಲುಗಳಿಂದ ಕೂಡಿವೆ ಎನ್ನುವುದೊಂದೇ ಎರಡರ ನಡುವೆ ಇರುವ ಹೋಲಿಕೆ. ಅ. ಮ. ಸಿ. ಯವರು "ಬದುಕು ಜಟಕಾ ಬಂಡಿ ವಿಧಿಯದರ ಸಾಹೇಬ" ಎಂಬ ಕಗ್ಗದ ಪದ್ಯವನ್ನು ಕೊಂಚ ಬದಲಿಸಿ "ಬಾಳು ರಿಕ್ಷಾಗಾಡಿ ವಿಧಿ ಯದನು ತುಳಿವವನು" ಎಂದು ಬರೆಯುತ್ತಾರೆ. ಸೋಮೇಶ್ವರ ಶತಕದ "ಧರೆ ಬೀಜಂಗಳ ನುಂಗೆ... "ಎಂಬ ವೃತ್ತವನ್ನು ಕೊಂಚ ಹೊರಳಿಸಿ "ನೆಲ ಬೀಜಗಳ ನುಂಗೆ, ತರುವೆ ಪಣ್ಗಳ ಮೆಲ್ಲೆ... ಕೊಲುವರಾರ್ ಕಾಯ್ವರಾರ್ ಮಂಕುಬೂದಿಯು ಶಂಕರನು ಕಾಯ್ವನೇ" ಎಂದು ಪ್ರಶ್ನಿಸಿ ಬೆಚ್ಚಿಸುತ್ತಾರೆ. ಬಹುಮಟ್ಟಿಗೆ ಇಲ್ಲಿಯ ಎಲ್ಲ ಪದ್ಯಗಳೂ ಮಂಕುತಿಮ್ಮನ ಕಗ್ಗದ ಬೇರೆ ಬೇರೆ ಪದ್ಯಗಳನ್ನು ಎದುರಿಗಿಟ್ಟುಕೊಂಡೇ ಬರೆದವು. ಇವು ಅ.ಮ.ಸಿ. ಯವರ ಋಣದ ಪ್ರಮಾಣದ ವಿಷಯವಾಯಿತು. ಇನ್ನು "ಹೊಲ ವಾಗಿ ಹಸಿವೆಯು ನೀಗು, ಹುಳುವಾಗಿ ಕೊಳೆ ತಿನ್ನು, ಕುಲದ ಬಲೆ ಹರಿದೆಸೆದು ಮಲಮೂತ್ರ ತೊಳೆಯುತಿರು" ಎಂಬಂಥ ಪದ್ಯಗಳನ್ನು ಮತ್ತು "ಕಡಲ ತೆರ ಅಚಲಾಗು ಗಡಿಗೆ ತೆರ ಒಡೆಯುತಿರು, ಬಡಗಿಯಂತೆ ನೀನು ಕೆತ್ತುತಿರು ಹಡಗುಗಳ" ಎಂಬಂಥ ಉಪಮೆಗಳನ್ನು ನೋಡಿದ ಮೇಲೆ ಅ. ಮ. ಸಿ. ಯವರ ಪ್ರತಿಭೆಯು ಬಗ್ಗೆಯೂ ಅನುಮಾನ ಉಳಿಯುವುದಿಲ್ಲ.

ನಾಗೇಗೌಡರ **ಕಥೆ ವ್ಯಥೆ** ಮತ್ತು ಗುಂಡ್ಮಿಯವರ **ಪಟಾಚಾರಾ** ಈ ಎರಡೂ ಕಥನಕವನಗಳ ಸಂಗ್ರಹಗಳು. ಮೊದಲನೆಯದರಲ್ಲಿ ಕಥನಕವನಗಳ ಜೊತೆಗೆ ಭಾವ ಪ್ರಧಾನವಾದ ಇತರ ನೀಳ್ಗವನಗಳೂ ಇವೆ. 'ಕಥೆ ವ್ಯಥೆ'ಯಲ್ಲಿರುವ ನಾಲ್ಕು ಕಥನಕವನ ಗಳಲ್ಲಿ ಒಂದು ತೋರುದತ್ತರ Royal Hermit and the Deer ಕವನದ ಅನುವಾದ. ಉಳಿದ ಮೂರು ಕ್ರಮವಾಗಿ ವರ್ಡ್ಸ್‌ವರ್ತ್ ಕವಿಯ The Lost of the Flock, The Old Cumberland Beggar ಮತ್ತು Michael ಎಂಬ ದೀರ್ಘ ಕವಿತೆಗಳ ಭಾಷಾಂತರಗಳು. ಲಯದ ಮೇಲೆ ಹಿಡಿತವಿಲ್ಲವೆನ್ನುವುದನ್ನೂ, ನಡುನಡುವೆ ಹಠಾತ್ತನೆ ಹಳಗನ್ನಡ ಪದ ಪ್ರತ್ಯಯಗಳನ್ನು ಬಳಸಿ ಮಾತನ್ನು ಕೊಂಚ ಹದ ಗೆಡಿಸುತ್ತಾರೆನ್ನುವುದನ್ನೂ ಬಿಟ್ಟರೆ ಅನುವಾದಗಳು ಪರವಾಗಿಲ್ಲ ಎನ್ನುವಂತಿವೆ. ಅನು ವಾದಕ್ಕೆ ಆಯ್ದುಕೊಂಡಿರುವ ಕವಿತೆಗಳು ಅನುವಾದಕರ ಉತ್ತಮ ಅಭಿರುಚಿಯನ್ನು

ತೋರಿಸುತ್ತವೆ. ಸ್ವಂತ ರಚನೆಗಳಲ್ಲಿ 'ಹಳ್ಳಿಯಮ್ಮ' ಎಂಬ ಕವನದಲ್ಲಿ ಬರುವ ಕೆಲವು ಉಪಮೆಗಳು ಚೆನ್ನಾಗಿವೆ. ಈ ರಚನೆಗಳಲ್ಲಿ ಕಾವ್ಯಗುಣ ಅಷ್ಟಾಗಿ ಕಾಣುವುದಿಲ್ಲ.

**ಸಟೂಚಾರಾ** ದಲ್ಲಿ ಒಂಬತ್ತು ಕಥನಕವನಗಳಿವೆ. ಅವುಗಳಲ್ಲಿ ಒಂದು ಗಿಬ್ಸನ್ ಕವಿಯ ಲೋಡ್ ಸ್ಟಾರ್ ಎಂಬ ನೀಳ್ಗವನದ ಅನುವಾದ. ಉಳಿದವು ಕೇಳಿದ ಹಳೆಯ ಕಥೆಗಳನ್ನು ಹಿಂಜಿ ಬರೆದ ಗೀತೆಗಳು. ಇವುಗಳಲ್ಲಿ ನಾಯಿ ಬಸದಿ ಎಂಬ ಕವನ ಮಾತ್ರ ರಚನೆಯ ದೃಷ್ಟಿಯಿಂದ ತಕ್ಕಮಟ್ಟಿಗಿದೆ. ಎಲ್ಲ ಪದ್ಯಗಳಲ್ಲಿಯೂ ಮಾತಿನ ದುಂದು, ಪ್ರಾಸದ ಅಬ್ಬರ, ಜಾಳುಜಾಳಾದ ಹೆಣಿಗೆ ಕಾಣುತ್ತದೆ. ಐದು ಮಾತ್ರೆಯ ಲಯದಲ್ಲಿ ಕಟ್ಟಿದ ಈ ಕಥನಕವನಗಳಲ್ಲಿ ಪದ್ಯದ ಅಚ್ಚುಕಟ್ಟು ಎದ್ದು ಕಾಣುವಂತಿದ್ದರೂ ಎಲ್ಲೂ ಕಾವ್ಯದ ಮಿಂಚು ಕಾಣುವುದಿಲ್ಲ.

ಈ ವರ್ಷದಲ್ಲಿ ಹೊರಬಂದ ಎರಡು ಸುದೀರ್ಘ ಕಾವ್ಯಗಳೆಂದರೆ ಲಕ್ಷ್ಮಣ ಜೋಷಿ ಯವರ **ಕಾವ್ಯರಾಮಾಯಣ** ಮತ್ತು ಸಮೇತನಹಳ್ಳಿ ರಾಮರಾಯ (ರಾಸ) ರ **ಶಾಕುಂತಲಾ**. ಕಾವ್ಯರಾಮಾಯಣ ಮಾತ್ರಾವೃತ್ತದಲ್ಲಿ ರಚಿಸಿರುವ ಸುಮಾರು ಎರಡು ಸಾವಿರ ವೃತ್ತಗಳ ಒಂದು ಕೃತಿ. ಬಾಲಕಾಂಡ, ಅಯೋಧ್ಯಾಕಾಂಡ ಮತ್ತು ಅರಣ್ಯಕಾಂಡ ಗಳು ಮಾತ್ರ ಇರುವ ಈ ಕೃತಿ ಅಸಂಪೂರ್ಣವಾಗಿದೆ. ಇದನ್ನು ಒಂದು ಭಾಗವೆಂದು ಪರಿಗಣಿಸಿಲ್ಲ. ಅಲ್ಲದೆ ಮುಂದಿನ ಕಾಂಡಗಳನ್ನು ಬರೆದು ಪ್ರಕಟಿಸುವ ಬಗ್ಗೆ ಲೇಖಕರ ಮಾತಿನಲ್ಲಿಯೂ ಸೂಚನೆಯಿಲ್ಲ. ಇಲ್ಲಿಯವರೆಗೆ ಬರೆದಿದ್ದೇನೆ ಎಂದಷ್ಟೇ ಇದೆ.

ಈ ಕಾವ್ಯ ಮೂರು–ನಾಲ್ಕು ಮಾತ್ರೆಗಳ ಲಯದಲ್ಲಿ ನಾಲ್ಕು ನಾಲ್ಕು ಸಾಲಿನ ವೃತ್ತ ಗಳಾಗಿ ಹರಿಯುತ್ತದೆ. "ಸಂಸ್ಕೃತ ರಾಮಾಯಣವನ್ನು ಓದಿದ ಮೇಲೆ ನನಗೆ ಕಂಡ ಹಾಗೆ ನಾನು ಅನುಭವಿಸಿದುದನ್ನು ಕಾವ್ಯರೂಪದಲ್ಲಿ ಬರೆಯತೊಡಗಿದೆ" ಎಂದು ಜೋಷಿ ಯವರು ಹೇಳಿಕೊಂಡಿದ್ದಾರೆ. ಆದರೆ ಮುನ್ನುಡಿ ಬರೆದಿರುವ ಪುತಿನ ರವರು ಹೇಳು ವಂತೆ "ವಾಲ್ಮೀಕಿಯದಕ್ಕಿಂತ ಹೆಚ್ಚಾಗಿ ತೊರವೆ ರಾಮಾಯಣವನ್ನು ಸ್ಮರಿಸುತ್ತ ಇವರು ಕಥೆಯನ್ನು ಬರೆದಂತಿದೆ". ಮೂರು–ನಾಲ್ಕು ಮಾತ್ರೆಯ ಲಯವೇ ಯಾವ ವೈವಿಧ್ಯವೂ ಇಲ್ಲದೆ ಕೃತಿಯುದ್ದಕ್ಕೂ ಬರುವುದರಿಂದ ಸ್ವಲ್ಪ ದೂರ ಸಾಗಿದ ಮೇಲೆ ಲಯದ ಏಕ ತಾನತೆ ತೀವ್ರವಾಗಿ ಅರಿವಿಗೆ ತಟ್ಟುತ್ತದೆ. ಶೈಲಿ ಕೂಡ ಬೇರೆ ಬೇರೆ ಸಂದರ್ಭಗಳಿಗೆ ತಕ್ಕಂತೆ ಅಳವಡುತ್ತ ಹೋಗದೆ ಒಂದೇ ಧಾಟಿಯಲ್ಲಿ ಸಾಗುತ್ತದೆ. "ಛಂದಸ್ಸು ಮೇಲ್ಗೈ ಯಾದಾಗ ವ್ಯಾಕರಣ ನಿಯಮಗಳೂ, ಅರ್ಥಕ್ಕೆ ಕಟ್ಟುಬೀಳುವ ಸಂದರ್ಭದಲ್ಲಿ ಛಂದೋ ನಿಯಮಗಳೂ ಸಡಿಲವಾಗುತ್ತವೆ. ಪ್ರೌಢಿಮೆಗೆ ಎಳಸಿದಾಗ ಸಂಸ್ಕೃತ ಶಬ್ದಗಳು ಪುನ ರುಕ್ತಿ ದೋಷಕ್ಕೆ ಹೆದರದೆ ಸರಾಗವಾಗಿ ಹೆಣೆದುಕೊಳ್ಳುತ್ತವೆ". ತುಂಬ ಸರಳವಾದ ಮಾತುಗಳಲ್ಲಿ ಯಾರಿಗೂ ತಿಳಿಯುವಂತೆ ಕಥೆ ಹೇಳಿರುವುದೇ ಇದರ ವಿಶೇಷತೆ ಎಂದು ಹೇಳಬೇಕು. "ಈ ಕಾವ್ಯದಲ್ಲಿ ರಾಮಭಕ್ತಿ ಒಳ್ಳೇ ಹದದಲ್ಲಿ ಹರಿದಿದೆ". ಭಕ್ತಿ ಯಿಂದ ಬರೆದ ಈ ಕೃತಿ ಭಕ್ತಜನರ ಮನಸ್ಸನ್ನು ಆಕರ್ಷಿಸಬಲ್ಲದು.

**ಶಾಕುಂತಲಾ** ಇಪ್ಪತ್ತೈದು ಅಧ್ಯಾಯಗಳಿಂದ ಕೂಡಿರುವ ಆರುನೂರು ಪುಟ ಗಳ ಬೃಹತ್ಕಾವ್ಯ. ಸಂಸ್ಕೃತ ಪುರಾಣ ನಾಟಕಗಳಲ್ಲಿ ಬರುವ ಶಕುಂತಳೆಯ ಕಥೆಯನ್ನು

ಇಲ್ಲಿ ಇನ್ನಷ್ಟು ವಿಸ್ತರಿಸಿ, ಹೊಸ ದೃಷ್ಟಿಗೆ ಹೊಂದುವಂತೆ ಕೆಲವು ಮಾರ್ಪಾಟು ಕಲ್ಪಿಸಿ ಬರೆಯಲಾಗಿದೆ. ಈ ಮಾರ್ಪಾಟುಗಳೆಲ್ಲ ಹೆಚ್ಚಾಗಿ ಪಾತ್ರಗಳನ್ನು ಅತಿಶುಭ್ರವಾಗಿಸುವ ಕಡೆಗೇ ಸಾಗಿವೆ. ಮೇನಕೆ ಮಗುವನ್ನು ಒಂಟಿಯಾಗಿ ಬಿಟ್ಟುಹೋಗದೆ ಕಾತ್ಯಾಯನಿಗೆ ಕೊಡುವುದು, ಅವಳು ಮುಂಚೆ ವಿಶ್ವಾಮಿತ್ರನ ಬಳಿಗೆ ಬಂದದ್ದನ್ನು, ಆ ಋಷಿಗೆ ಕರ್ಮ ದೇವತ್ವವನ್ನು ಕರುಣಿಸಿ ದಿವ್ಯಾಪ್ಸರಾ ಸಂಗದಿಂದ ಊರ್ಧ್ವಮುಖಕೇರಿಸಿದ ಘಟನೆ ಯಾಟದ ಬೇಟವೆಂದು ವ್ಯಾಖ್ಯಾನಿಸುವುದು – ಇವೆಲ್ಲದರಿಂದ ವಿಶಿಷ್ಟ ಅರ್ಥದಲ್ಲಿ ರೂಪು ಗೊಂಡ ಪೌರಾಣಿಕ ಪಾತ್ರಗಳನ್ನು ಅರ್ಥ ತಿಳಿಯದೆ ಉದಾತ್ತೀಕರಿಸಿ ಕೆಡಿಸಿದಂತಾಗಿದೆ. ಆಶ್ರಮದಲ್ಲಿ ವ್ಯಾಸಂಗ ಮಾಡುತ್ತಿರುವ ಅರಸುಮಗ ಆಭೀರನ ಪ್ರಭುದರ್ಪ, ಶಕುಂ ತಳೆ ಅವನಿಗೆ ನೀಡುವ ತಿಳಿವಳಿಕೆ. ಆಭೀರನ ತಪ್ಪೊಪ್ಪಿಗೆ, ಮಗಳು ಉಪದೇಶಪಾಂಡಿತ್ಯ ಮೆರೆದದ್ದಕ್ಕಾಗಿ ಕಣ್ವರ ಪ್ರಾಯಶ್ಚಿತ್ತರೂಪದ ಉಪವಾಸ – ಇಂಥ ಅನೇಕ ಕಲ್ಪಿತ ವಿವರ ಗಳು ಈ ಕಾವ್ಯದಲ್ಲಿ ಸೇರಿವೆ. ಬೃಹತ್ಕಾವ್ಯವೊಂದರ ಒಡಲನ್ನು ಹೀಗೆ ವಿವರಗಳಿಂದ ತುಂಬಬಹುದಾದರೂ ಇಲ್ಲೆಲ್ಲ ಮನುಷ್ಯ ಸ್ವಭಾವವನ್ನು ಸೂಕ್ಷ್ಮವಾಗಿ ಹೊಕ್ಕು ನೋಡುವ ಯಾವ ವಿಶೇಷತೆಯೂ ಇಲ್ಲ. ಶಕುಂತಳೆ ತಾನು ಕಣ್ವರನ್ನು ನೋಯಿಸಿದ್ದಕ್ಕೆ ವ್ಯಥೆಪಟ್ಟು ಅಗ್ನಿಯನ್ನು ಧ್ಯಾನಿಸಿ ಬ್ರಹ್ಮೈಕ್ಯಳಾಗುವ ವಿಧಾನ ಕೇಳುವುದು, ಕಣ್ವರಲ್ಲಿಗೆ ಬಂದು ಅವರಿಂದ ಏಕಾಂತಧ್ಯಾನಕ್ಕೆ ಒಪ್ಪಿಗೆ ಪಡೆಯುವುದು – ಇತ್ಯಾದಿ ವಿವರಗಳು ಕಾವ್ಯವನ್ನು ಬೆಳೆಸಲೆಂದೇ ಹೂಡಿದ ಯೋಜನೆಗಳಾಗಿ ಕಂಡರೆ ಆಶ್ಚರ್ಯವಿಲ್ಲ. ಎಷ್ಟು ಯೋಚಿಸಿದರೂ ಮೃದುಮಾತಿನಿಂದಲೇ ಆಭೀರನನ್ನು ತಿದ್ದಿದ ಶಕುಂತಳೆಯ ತಪ್ಪೇನು ಎನ್ನುವುದೇ ತಿಳಿಯದಿರುವಾಗ ಅದಕ್ಕಾಗಿ ಕಣ್ವರು ಕೈಗೊಳ್ಳುವ ಉಪವಾಸ, ಶಕುಂ ತಳೆಯ ಮಿಡುಕಾಟ ಇವನ್ನೆಲ್ಲ ಜೀರ್ಣಿಸಿಕೊಳ್ಳುವುದು ಕಷ್ಟವಾಗುತ್ತದೆ. ಈ ಅಸಂಗತ ಗಳನ್ನೆಲ್ಲ ತಾಳ್ಮೆಯಿಂದ ಸಹಿಸಿದರೂ ಋಷಿಸಭೆಗೆ ಯಾರು ಅಧ್ಯಕ್ಷರಾಗಬೇಕೆಂದು ತೀರ್ಮಾನಿಸುವುದಕ್ಕೇ ಒಂದು ಅಧ್ಯಾಯ ಬರೆಯುವುದಾಗಲೀ (ಕಾವ್ಯಕ್ಕೆ ಅಗತ್ಯವಾಗಿ ಬೇಕಿಲ್ಲದ ಈ) ಋಷಿಸಭೆ ಮುಂದೆ ಒಂದು ನಿರ್ಣಯ ತೆಗೆದುಕೊಳ್ಳುವುದನ್ನು ಮೂವತ್ತು ಪುಟಗಳ ಅಧ್ಯಾಯವೊಂದರ ತುಂಬ ಮಹೋತ್ಸಾಹದಿಂದ ಬಣ್ಣಿಸುವುದಾಗಲೀ ಲೇಖಕ ರಿಗೆ ಕೃತಿಯ ವಿವಿಧಾಂಗಗಳ ಪ್ರಮಾಣದ ಅರಿವಿನ ಬಗ್ಗೆ ಇರುವ ಕೊರತೆಯನ್ನು ಎತ್ತಿ ಹೇಳುತ್ತದೆ. ಇಂದಿನ ಕೆಲವು ವಿಚಾರಗಳನ್ನು ಕೃತಿಯಲ್ಲಿ ತಂದು ಅದನ್ನು ಸಮಕಾಲೀನ ಗೊಳಿಸಲು ಯತ್ನಿಸಲಾಗಿದೆ. ಉದಾಹರಣೆಗೆ ಕಣ್ವರ ಪ್ರಾಯಶ್ಚಿತ್ತೋಪವಾಸ ಗಾಂಧೀಜಿ ಯವರು ಕೈಗೊಳ್ಳುತ್ತಿದ್ದ ಅಂಥ ಉಪವಾಸಗಳನ್ನು ಮನಸ್ಸಿನಲ್ಲಿಟ್ಟು ಬರೆದಂತಿದೆ. ಲೋಪಾಮುದ್ರೆಯನ್ನು ಸಭೆಯ ಅಧ್ಯಕ್ಷತೆಗೆ ಒಪ್ಪಿಸುವಾಗ ಗಂಡು ಹೆಣ್ಣಿನ ಸಮಾನ ತೆಯ ಆಧುನಿಕ ವಿಚಾರಗಳನ್ನು ಗಮನದಲ್ಲಿಡಲಾಗಿದೆ. ಎಂದಿನ ಸಮಾಜದ್ದೋ ಒಂದು ಕಥೆಗೆ ಅದರ ಜೀವನ ರೀತಿ ನೀತಿಗಳಿಂದ ಹುಟ್ಟದ ಇಂದಿನ ವಿಚಾರಗಳನ್ನು ಹೀಗೆ ಉಪಾ ಯವಾಗಿ ಜೋಡಿಸಿಕೊಡುವುದನ್ನು ಒಂದು ರಂಜಕ ಚಮತ್ಕಾರವೆನ್ನಬಹುದಾದರೂ ಅದು ಎಷ್ಟು ಉಚಿತ ಎಂದು ಕೇಳಬೇಕಾಗುತ್ತದೆ.

ಯಾರ ಗಮನಕ್ಕೂ ತತ್‌ಕ್ಷಣ ಬರುವ ಒಂದು ಅಂಶವೆಂದರೆ ಈ ಕೃತಿಕಾರರು ಭಾಷೆ ಲಯಗಳ ವಿಷಯದಲ್ಲಿ ರಾಮಾಯಣ ದರ್ಶನವನ್ನು ಹಠದಿಂದೆಂಬಂತೆ ಅನುಕರಿಸಿರುವ

ರೀತಿ. ಕುವೆಂಪು ಅವರಿಗೇ ವಿಶಿಷ್ಟವಾದ ಸರಳ ರಗಳೆಯ ಲಯ, ಅದರಲ್ಲಿ ತರುವ ವೈವಿಧ್ಯ, ಸಂಭಾಷಣೆಯ ಭಾಗದಲ್ಲಿ ಅದನ್ನು ಲಯವತ್ತಾಗಿ ಮುರಿದುಕೊಡುವ ರೀತಿ ಎಲ್ಲವನ್ನೂ ಈ ಕಾವ್ಯದಲ್ಲಿ ಕಾಣಬಹುದು. ಭಾಷೆಯ ವಿಷಯ ತಾನೇ ಇದಕ್ಕೆ ಹೊರತಲ್ಲ. ಕುವೆಂಪುವಿಶಿಷ್ಟವಾದ ನೂರಾರು ಪದಪುಂಜಗಳು, ಅವರಲ್ಲಿ ಮಾತ್ರ ಕಾಣಸಿಗುವ ಹಳಗನ್ನಡ ಸಂಸ್ಕೃತಗಳ ಮಿಶ್ರಣರೀತಿ, ಅವರ ವಾಕ್ಯರಚನೆಯ ಬಗೆ, ಕಾವ್ಯದಲ್ಲಿ ಅವರು ಮಾತ್ರವೇ ಬಳಸುವ ವೇದಾಂತ ಸಂಬಂಧವಾದ ಪರಿಭಾಷೆ, ಪಾತ್ರಗಳು ಒಂದನ್ನೊಂದು ಸಂಬೋಧಿಸುವ ವಿಧಾನ, ಮಧ್ಯೆ ಮಧ್ಯೆ ಬರುವ ಪ್ರತಿಭಾಸ್ತೋತ್ರ. ದೇವವಂದನೆ ಎಲ್ಲವೂ ಇಲ್ಲಿದ್ದು ಇದು ಅನನ್ಯವೆನ್ನಿಸುವಂಥ ಕುವೆಂಪು ಅನುಕರಣೆಯಾಗಿದೆ. ಕಡೆಗೆ ಅಧ್ಯಾಯಗಳಿಗೆ ಕೊಟ್ಟಿರುವ ಹೆಸರುಗಳೂ ಸಹ (ಹರಣವಿನ್ನಣಮಿದೆ ಕಣಾ, ಚೈತ್ಯಚಿದ್ವಹ್ನಿ, ಸಂವಿದಗ್ನಿ ಸಂಭೂತೆ, ಕಣ್ವ ಕೃತುಶ್ರೀ, ವಜ್ರಶೀಲಮಾ ವ್ಯಕ್ತಿಶೀಲಂ) ಈ ಮಾತಿಗೆ ಹೊರತಲ್ಲ. ಸಮಕಾಲೀನ ಕವಿಯೊಬ್ಬರ ಕೃತಿಯನ್ನು ಹೀಗೆ ಹಿಂಬಾಲಿಸಿದ ಕೃತಿ ಸಾಹಿತ್ಯಚರಿತ್ರೆಯಲ್ಲೇ ವಿರಳವೆನ್ನಬಹುದು. ಈ ಮಾತಿಗೆ ನಿದರ್ಶನವಾಗಿ ಕೆಳಗಿನ ಕೆಲವು ಕಾವ್ಯಭಾಗಗಳನ್ನು ನೋಡಬಹುದು.

ಬಾದರಾಯಣ ಗುರುವೆ ನಿನ್ನ ಕೈಕಂದನೀ
ಕವಿ ಶಿಶುವನಿಂತೊಲಿದು ಕರುಣೆಯಿಂ ಕೃಪಾಮೃತದ
ಮಳೆಗರೆಯೆ ಮೂಡಿದತ್ತೀ ಬೃಹತ್ಕಾವ್ಯಮಲ್ತೆ

(ನಿವೇದನಂ)

ಇನ್ನಯ್ಯ
ನೋಯೆ ನುಡಿವನ್ನೆಯಕೆ ಜೀವವಿರುವನ್ನೆಗಂ
ಮನವನಿಡೆನಿದು ಪೂಣ್ಕೆ ಎನ್ನಾತ್ಮ ಜ್ಯೋತಿಯಂ
ಬೆಳಗಿಸಿದ ನಿನ್ನ ದಿವ್ಯತೆಗೆ ಚಿತ್ ಚೆಲುವಿಕೆಯ
ಚಿತ್ರಭಾನುವೆ ಸಾಕ್ಷಿ; ಋತ ಹಿತಸ್ವಾಪೇಕ್ಷಿ

(ಧರ್ಮರಕ್ಷಣಾದೀಕ್ಷೆ)

ಸುಜ್ಞಾನವಾರಿಧಿ ವ್ಯಾಸ ಭಗವನ್ ನಮೋ
ಫುಲ್ಲಾರವಿಂದಾಕ್ಷಿ ಶೋಭನನೆ ಶತನಮೋ
ಶ್ಯಾಮಲ ಸುವರ್ಣತನು ದೇದೀಪ್ಯ ಮಂಗಲನೆ
ಓಂ ನಮೋ.........................

(ನಿವೇದನಂ)

ಮಾನಸಿಕದಾ ಸೂಕ್ಷ್ಮ
ವಿಜ್ಞಾನಕೋಶದಿಂದನ್ನಮಯದೆಲ್ಲೆಯಂ
ಮುಟ್ಟುತಿರುವನ್ನೆಗಂ ಸುಸ್ಥಿರಂ ನೆಲಸಿತೈ
ಪಂಚಶರ ಭಾವಶ್ರೀ ಸಾಧಕನ ವಾಕ್ಕಿನೊಳ್

(ಮದನ ಮಧುಸಂದರ್ಶನಂ)

ಪೊಸಪುಟ್ಟಿನೀ
ಶಾಕುಂತಲಾ ಸಾಧ್ವಿಯಿೂ ಚೆಲ್ವು ಬಾಳಾದೊಡಂ
ನಿತ್ಯ ಸತ್ಯಮೆ ವಲಂ ದಿವ್ಯತರ ಕಾವ್ಯಸತ್ವಂ

ಸಿದ್ಧಹಸ್ತನು ನೀಂ ರಸಋಷಿಯೆ ನುಡಿಕಿಡಿಯ
ಚಿಚ್ಛಕ್ತಿಯಿಂದಾತ್ಮಮಂ ಒಯ್ವೆಯಾನಂದ
ಲೋಕಕ್ಕೆ; ಜನ್ಮ ಜರೆಗಳ ಮಿಾರ್ದ ತಾಣಕ್ಕೆ

(ಮಂಗಲಾಚರಣಂ)

ಮಂಗಲಾಚರಣ ಭಾಗದಲ್ಲಿ ರಾಮರಾಯರು ಪಂಪ, ರನ್ನ, ನಾಗಚಂದ್ರ. ಜನ್ನ. ನಾರಣಪ್ಪ. ಲಕ್ಷ್ಮೀಶ. ಮುದ್ದಣ ಎಲ್ಲರನ್ನೂ ಪ್ರತ್ಯೇಕವಾಗಿ ಹೆಸರಿಸಿ ಹೊಗಳಿ ವಂದಿಸುತ್ತಾರೆ. ಆದರೆ ಯಾರಿಗೆ ತಾವು ಎಲ್ಲರಿಗೀತ ಹೆಚ್ಚು ಋಣಿಯೋ ಅಂಥ ಕುವೆಂಪು ವನ್ನು ಆಕಸ್ಮಾತ್ತಾಗಿಯೂ ಸ್ಮರಿಸದಿರುವುದು ಒಂದು ದೊಡ್ಡ ಚೋದ್ಯ. ಈ ಕೃತಿಯಲ್ಲಿ ಸ್ವತಂತ್ರವೆನ್ನುವಂಥದು ತೀರ ಕಡಮೆಯಾಗಿದ್ದರೂ ಅನುಕರಣೆಯ ಒಂದು ಅನುಪಮ ದಾಖಲೆಯಾಗಿ ಇದು ಗಮನಾರ್ಹವಾಗಿದೆ.

ಒಂದು ವರ್ಷದ ಅವಧಿಯಲ್ಲಿ ಹೊರಬಂದ ಕಾವ್ಯದಲ್ಲಿ ಒಂದೆರಡು ಗಟ್ಟಿ ಸಂಕಲನ ಗಳಿದ್ದರೂ ಅದು ಸಂತೋಷಪಡಬಹುದಾದ ವಿಷಯ. ಎಪ್ಪತ್ತೊಂದರ ಕಾವ್ಯದಲ್ಲಿ ಅಂಥ ಸಂಕಲನಗಳಿವೆಯೆನ್ನುವುದು ಈವರೆಗಿನ ಪರಿಶೀಲನೆಯಿಂದ ತಿಳಿಯುತ್ತದೆ. ಜೊತೆಗೆ ಪುಸ್ತಕರೂಪದಲ್ಲಿ ಬರದಿದ್ದರೂ ಹಿರಿಯ ಕವಿಗಳ ಕೆಲವು ಗಮನಾರ್ಹ ಬಿಡಿ ಕವನಗಳು ಪತ್ರಿಕೆಗಳಲ್ಲಿ, ವಿಶೇಷ ಸಂಚಿಕೆಗಳಲ್ಲಿ, ನಿಯತಕಾಲಿಕಗಳಲ್ಲಿ ಪ್ರಕಟವಾಗಿವೆ. ಇವನ್ನೆಲ್ಲ ನೆನೆದರೆ ಎಪ್ಪತ್ತೊಂದರಲ್ಲಿ ಸಾಕಷ್ಟು ತೃಪ್ತಿ ಕೊಡಬಲ್ಲ ಕಾವ್ಯ ಬಂದಿದೆಯೆನ್ನಿ ಸುತ್ತದೆ.

## ನಾಟಕ

### ಕೆ. ಮರುಳಸಿದ್ದಪ್ಪ

ಕನ್ನಡ ರಂಗಭೂಮಿಯಲ್ಲಿ ಹೊಸ ಒಲವುಗಳಿಗೆ ನಾಂದಿಯನ್ನು ಹಾಡಿದ ನಾಟಕ ಕಾರರೆಂದರೆ ಶ್ರೀರಂಗರು. 'ಕತ್ತಲೆ ಬೆಳಕು', ಶ್ರೀರಂಗರ ನಾಟಕಗಳ ದಾರಿಯನ್ನು ಮಾತ್ರ ವಲ್ಲ, ಕನ್ನಡ ರಂಗಭೂಮಿಯ ದಾರಿಯನ್ನೂ ಬದಲಿಸಿತು.

**ಅಪರಾಧಂಗಳ ಕ್ಷಮಿಸೋ** ಎಂಬ ತಮ್ಮ ಇತ್ತೀಚಿನ ನಾಟಕವನ್ನು ಶ್ರೀರಂಗರು ಕರುಣಾಸ್ಪದ ಪ್ರಹಸನವೆಂದಿದ್ದಾರೆ. ಆಧುನಿಕ ರಂಗಭೂಮಿಯ ಚಟುವಟಿಕೆ ಹೇಗೆ ತನ್ನ ಸುತ್ತಣ ಜಗತ್ತಿನಿಂದ ಪ್ರತ್ಯೇಕಗೊಂಡು, Absurd, Cruelty, Happening ಮುಂತಾದ ಶಬ್ದಗಳಿಗೆ ಜೋತುಬಿದ್ದಿದೆಯೆಂಬುದನ್ನು ವಿಡಂಬಿಸುವ ಈ ನಾಟಕ, ವಸ್ತುಸ್ಥಿತಿಗಿಂತ ಕಲ್ಪನಾಸ್ಥಿತಿಯನ್ನು ಹೆಚ್ಚು ಅವಲಂಬಿಸಿರುವಂತಿದೆ.

ವೃತ್ತಿರಂಗಭೂಮಿಯ ಹಳೆಯ ನಾಟಕಗಳ ಮೌಲ್ಯಗಳನ್ನು ಮತ್ತು ರೀತಿ ನೀತಿ ಗಳನ್ನು ತಮ್ಮ 'ಸಂಪೂರ್ಣ ರಾಮಾಯಣ'ದಲ್ಲಿ ವಿಡಂಬಿಸಿ, ಹೊಸಯುಗದ ರಂಗ ಭೂಮಿಯ ಧ್ಯೇಯವನ್ನು ಮುಂದಿಟ್ಟು, ಇತಿಹಾಸವನ್ನು ನಿರ್ಮಿಸಿದ ಶ್ರೀರಂಗರೇ, ಆಧುನಿಕ ರಂಗಭೂಮಿಯನ್ನು ಸಂಪೂರ್ಣ ಭಿನ್ನವಾದ ಮತ್ತೊಂದು ಕಾರಣಕ್ಕಾಗಿ, ಈಗ ಗೇಲಿ ಮಾಡುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ. "ಇಪ್ಪತ್ತು ವರ್ಷಗಳ ಹಿಂದಿನ ಇಂಗ್ಲಿಷ್ ನಾಟಕಗಳ ಸೆಕೆಂಡ್ ಹ್ಯಾಂಡ್ copy ಕೊಂಡ್ಕೊಂಡು, ಅದನ್ನ ಸದ್ದಿಲ್ಲದೆ ಎತ್ತಿಹಾಕಿ Modern ಅನ್ನಿಸಿಕೊಳ್ಳುವ"[1] ನಾಟಕಕಾರ, "ಗಿಮಿಕ್ಸ್ ಮತ್ತು ಅಶ್ಲೀಲತೆಗಳೇ Modern ಎಂದು ತಿಳಿಯುವ ನಿರ್ದೇಶಕ"ರನ್ನು ನಿಷ್ಕರುಣೆಯಿಂದ ಚುಚ್ಚಿ ಚುಚ್ಚಿ ನೋಯಿಸುವ ಈ ಹಿರಿಯ ನಾಟಕಕಾರ ತನ್ನ ಸುತ್ತಣ ಪರಿ ಸರಕ್ಕೆ ಸ್ಪಂದಿಸುವ ರೀತಿ ಅಚ್ಚರಿಯನ್ನು ತರಿಸುವಂತಿದೆ. "ಸಾಮಾಜಿಕ ಜೀವನದಲ್ಲಿಯ ಅಜ್ಞಾನ, ಅಂಧಶ್ರದ್ಧೆ, ಡಾಂಭಿಕತೆಗಳು ರಂಗಭೂಮಿಯ ಸಂದರ್ಭದಲ್ಲಿ ಕಾಣುತ್ತಿ ವೆಯೋ ಎಂದು ತನ್ನನ್ನು ತಾನೇ ಹಾಸ್ಯಕ್ಕೆ ಒಳಗಾಗಿಸುವ"[2] ಈ ರೂಪಕದಲ್ಲಿ ಬರುವ ಅನೇಕ ವಿಡಂಬನಾತ್ಮಕ ಚಿಕ್ಕ ದೃಶ್ಯಗಳು ಸಾಕಷ್ಟು ನಾಟಕೀಯವಾಗಿದ್ದು, ಪ್ರಯೋಗಕ್ಕೆ ವೈವಿಧ್ಯತೆಯನ್ನು ತಂದುಕೊಡುವಂತಿವೆ. ಆದರೆ ನಾಟಕದ ವೈಚಾರಿಕ ಹಿನ್ನೆಲೆಗೆ ಕ್ರಿಯೆಯ ಬೆಂಬಲವಿಲ್ಲದ ಕಾರಣ ತೀವ್ರತೆ ಇಲ್ಲವಾಗುತ್ತದೆ.

ಪಾಶ್ಚಾತ್ಯ ಸಂವೇದನೆಗಳಿಗೆ ತಮ್ಮ ಮನಸ್ಸನ್ನು ತೆರೆದಿದ್ದರೂ ನಮ್ಮ ದೇಶದ ಪರಿಸರದಲ್ಲೇ ತಮ್ಮ ಅನುಭವಗಳ ಶೋಧನೆ ನಡೆಸುತ್ತಿರುವ ಆಧುನಿಕ ಕನ್ನಡ ನಾಟಕ ಕಾರರು. ರಂಗಭೂಮಿಯ ಚಟುವಟಿಕೆಗಳನ್ನು ಚುರುಕುಗೊಳಿಸಿದ್ದಾರೆ: ಹೊಸಬಗೆಯ

---

[1] ಶ್ರೀರಂಗ: 'ಅಪರಾಧಂಗಳ ಕ್ಷಮಿಸೋ'.

[2] ಅದೇ.

ಪ್ರೇಕ್ಷಕವರ್ಗವನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ; ಸಮಕಾಲೀನ ಭಾರತೀಯ ರಂಗಭೂಮಿಯಲ್ಲಿ ಕನ್ನಡ ನಾಟಕಕಾರರಿಗೆ ವಿಶೇಷವಾದ ಮನ್ನಣೆಯನ್ನು ದೊರಕಿಸಿಕೊಟ್ಟಿದ್ದಾರೆ.

ಕನ್ನಡ ನಾಟಕಗಳನ್ನು ಅಖಿಲ ಭಾರತೀಯ ನೆಲೆಗೆ ಒಯ್ದ ನಮ್ಮ ಕೆಲವೇ ನಾಟಕಕಾರರಲ್ಲಿ ಗಿರೀಶ್ ಕಾರ್ನಾಡರು ಅಗ್ರಗಣ್ಯರಾಗಿದ್ದಾರೆ. **ಹಯವದನ,** ಅವರ ಮೂರನೆಯ ನಾಟಕ. ಬಹುಶಃ ಕನ್ನಡದ ಯಾವ ಒಂದು ನಾಟಕಕ್ಕೂ 'ಹಯವದನ'ಕ್ಕೆ ಸಿಕ್ಕಿದ ಪ್ರೋತ್ಸಾಹ ಮತ್ತು ಚರ್ಚೆಗಳು ಇದಕ್ಕಿಂತ ಹಿಂದೆ ಸಿಕ್ಕಿರಲಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. 'ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ'ಗೆ ಈ ನಾಟಕವನ್ನು ಪ್ರಯೋಗಕ್ಕಿಂತ ಮುಂಚೆಯೇ ಆಯ್ಕೆ ಮಾಡಲಾಯಿತು.

'ಹಯವದನ'ದ ಮುಖ್ಯ ಕತೆಯ ವಸ್ತುವಿಗೆ, ಟಾಮಸ್ ಮಾನ್‌ನ ಜರ್ಮನ್ ಕತೆಗೆ ತಾವು ಋಣಿಯಾಗಿರುವುದಾಗಿ ಕಾರ್ನಾಡರು ಹೇಳಿಕೊಂಡಿದ್ದಾರೆ. 'ವೇತಾಲ ಪಂಚವಿಂಶತಿ ಕಥಾ'ದಲ್ಲಿನ ಆರನೆಯ ಕತೆಯನ್ನು ಆಧಾರವಾಗಿಟ್ಟುಕೊಂಡು 'The Transposed Heads' ಎಂಬ ಕತೆಯನ್ನು ಟಾಮಸ್ ಮಾನ್ ಬರೆದಿದ್ದಾನೆ. "ಕಾರ್ನಾಡರು ತಮ್ಮ ನಾಟಕಕ್ಕೆ ಮಾನ್‌ನಿಂದ ಪಾತ್ರಗಳು, ಘಟನೆಗಳು, ಬೆಳವಣಿಗೆ, ಬದಲಾವಣೆ, ಆಶಯ, ವೈಚಾರಿಕತೆಗಳನ್ನೆಲ್ಲಾ ಸಗಟಾಗಿ ತೆಗೆದುಕೊಂಡಿದ್ದಾರೆ. ಮೂಲದಲ್ಲಿಯ ಕಥಾನಿರೂಪಣೆಯನ್ನು ಇಲ್ಲಿ ಸಂಭಾಷಣೆಗೆ ಇಳಿಸಿರುವುದೊಂದೇ ಇದರ ವಿಶೇಷ".[3]

ಆದರೆ ಮುಖ್ಯಕತೆಗೆ ಹೊಂದಿಕೊಂಡಂತೆಯೇ ಮತ್ತೊಂದು ಕುದುರೆಯ ಕತೆ ಈ ನಾಟಕದಲ್ಲಿದೆ. ಮನುಷ್ಯನ ದೇಹ ಮತ್ತು ಕುದುರೆಯ ಮುಖವುಳ್ಳ ವಿಚಿತ್ರ ಪ್ರಾಣಿಯೊಂದು ಪೂರ್ಣ ಕುದುರೆಯಾಗಲು ನಡೆಸಿದ ಹೋರಾಟವನ್ನು ಹಾಸ್ಯಮಯವಾಗಿ ಅಲ್ಲಿ ನಿರೂಪಿಸಲಾಗಿದೆ. ಈ ಕತೆ, ಗಿರೀಶರ ಸ್ವಂತ ಕಲ್ಪನೆಯಾಗಿದೆ. ಹೀಗೆ,ಹ ಯವದನ ಎಂಬ ಕುದುರೆ ಮತ್ತು ಪದ್ಮಿನಿಯೆಂಬ ಹೆಣ್ಣಿನ ಭಿನ್ನ ಕತೆಗಳೆರಡನ್ನೂ ಸಂವಿಧಾನದಲ್ಲಿ ಪರಸ್ಪರ ಹೊಂದಿಸಿ, ನಾಟಕದ ಮಾಧ್ಯಮಕ್ಕೆ ಅಳವಡಿಸಲು ಕನ್ನಡ ಜಾನಪದದ ಭಾಗವತ ಹಿಮ್ಮೇಳಗಳನ್ನೂ, ಜರ್ಮನ್ ನಾಟಕಕಾರ ಬ್ರೆಕ್ಟ್‌ನ 'ಮಹಾಕಾವ್ಯ ರಂಗಭೂಮಿ'ಯ ತಂತ್ರಗಳನ್ನೂ ಬಳಸಿಕೊಂಡಿದ್ದಾರೆ; ಸಂಸ್ಕೃತ ನಾಟಕಗಳ ಪ್ರಭಾವಕ್ಕೂ ಒಳಗಾಗಿದ್ದಾರೆ.

'ಹಯವದನ'ದ ಮುಖ್ಯ ಕತೆ, ಬದುಕಿನ ಅಪೂರ್ಣತೆಯನ್ನು ಕುರಿತದ್ದು. ದೇವದತ್ತನ ಬುದ್ಧಿಶಕ್ತಿ ಮತ್ತು ಕಪಿಲನ ದೇಹಶಕ್ತಿಗಳೆರಡನ್ನೂ ಪ್ರೇಮಿಸಿ, ಬಯಸುವ ಪದ್ಮಿನಿಯ ಹೋರಾಟ ಮತ್ತು ನೋವುಗಳನ್ನು ಪ್ರಹಸನದ ಧಾಟಿಯಲ್ಲಿ ನಿರೂಪಿಸುವುದು ನಾಟಕಕಾರರು ಆರಿಸಿಕೊಂಡಿರುವ ವಿಧಾನವಾಗಿದೆ. ಗಂಭೀರ ವಸ್ತುವಿಗೆ ಹಾಸ್ಯದ ಚಿಕಿತ್ಸೆ ನಡೆಸಹೋದದ್ದು ಇಲ್ಲಿನ ವಿಶೇಷ. ನಾಟಕದ ಸೋಲಿಗೆ ಕಾರಣವಾದ ಕೆಲವು ಅಂಶಗಳಲ್ಲಿ ಇದೂ ಒಂದು. ಕುದುರೆಯ ಕತೆಯು ಮಟ್ಟಿಗೆ ತಮ್ಮ ವಿಡಂಬನೆ ಮತ್ತು

[3] ಗಿರಡ್ಡಿ ಗೋವಿಂದರಾಜ: 'ಸುಧಾ', 16-4-1972.

ಹಾಸ್ಯದೃಷ್ಟಿಗಳನ್ನು ಸೀಮಿತಗೊಳಿಸಿಕೊಂಡಿದ್ದರೆ, ನಾಟಕದ ಪರಿಣಾಮ ಇನ್ನೂ ತೀವ್ರಗೊಳ್ಳುವ ಸಾಧ್ಯತೆಯಿತ್ತು.

ಪರಿಪೂರ್ಣತೆಗೆ ಹಂಬಲಿಸಿದ ಪದ್ಮಿನಿ, ದೇವದತ್ತ ಕಪಿಲರೊಡನೆ ಚಿತೆಯನ್ನೇರಬೇಕಾದದ್ದು ಮತ್ತು ಹಯುವದನನೆಂಬ ಕುದುರೆ ಪರಿಪೂರ್ಣತೆಯನ್ನು ಪಡೆದದ್ದು, ಈ ನಾಟಕದ ವ್ಯಂಗ್ಯವಾಗಿದೆ; ಪೂರ್ಣ ಮನುಷ್ಯನಾಗಲು ಕಾಳಿಯ ಹತ್ತಿರ ಹೋದ ಹಯವದನ, ಪೂರ್ಣ ಕುದುರೆಯಾಗಿ ಹಿಂದಿರುಗುತ್ತಾನೆ. ಪರಿಪೂರ್ಣತೆಯಿಂದ ಪ್ರಾಣಿಯಾಗಲು ಸಾಧ್ಯವೇ ಹೊರತು ಮನುಷ್ಯನಾಗಲು ಸಾಧ್ಯವಿಲ್ಲ, ಎಂಬುದನ್ನು ಸೂಚಿಸುವುದೇ ನಾಟಕಕಾರರ ಉದ್ದೇಶವಿರುವಂತಿದೆ. ಮನುಷ್ಯನ ಸಹಜ ಸ್ಥಿತಿಯೆಂದರೆ, ಅತೃಪ್ತಿ ಅಥವಾ ಅಪರಿಪೂರ್ಣತೆ. ನಾಟಕದ ಆರಂಭದಲ್ಲಿ ಭಾಗವತ ವಿಘ್ನೇಶ್ವರನನ್ನು ಸ್ತುತಿಸುತ್ತಾ, ಗಜವದನನ ಅಪೂರ್ಣತೆಯನ್ನು ಕುರಿತು ಮಾತನಾಡುತ್ತಾನೆ; ದೇವರ ಪೂರ್ಣತ್ವ ಮನುಷ್ಯನ ಕಲ್ಪನೆಗೆ ಒಗ್ಗಲಾರದೆಂಬುದನ್ನು ಗಣಪತಿಯ ಮೂರ್ತಿ ಸಂಕೇತಿಸುತ್ತಿರಬಹುದೆಂದು ಭಾವಿಸುತ್ತಾನೆ.

ಆದರೆ ಚಿಕ್ಕ ವಿರೋಧಾಭಾಸವೊಂದನ್ನು ಇಲ್ಲಿ ಗಮನಿಸಬೇಕಾಗಿದೆ. ಕಪಿಲ ದೇವದತ್ತರ ತಲೆ ಅದಲುಬದಲಾದ ಬಳಿಕ ದೇಹವೂ ಕ್ರಮೇಣ ತಲೆಗೆ ತಕ್ಕಂತೆ ವ್ಯತ್ಯಾಸಗೊಳ್ಳುತ್ತದೆ. ಆದರೆ ಕುದುರೆಯ ತಲೆ ಪಡೆದ ಹಯುವದನ ಪೂರ್ಣಾಂಗನಾಗಲು ದೇವಿಯ ಮರೆಹೊಗಬೇಕಾಗುತ್ತದೆ; ಕುದುರೆಯ ಸ್ವರ, ಪದ್ಮಿನಿಯ ಮಗನನ್ನು ಹೊತ್ತಾಗ ಅಕಸ್ಮಾತ್ತಾಗಿ ಹಿಂದಿರುಗುತ್ತದೆ.[4]

ಪದ್ಮಿನಿಯ ಅಪೂರ್ಣತೆಯೂ ಸಹ ನಾಟಕದ ಪಾತ್ರಕಲ್ಪನೆಯಲ್ಲಿ ಶಕ್ತಿಯುತವಾಗಿ ಸಾಕ್ಷಾತ್ಕಾರಗೊಳ್ಳುವುದಿಲ್ಲವೆನ್ನುವುದು ಗಮನಿಸಬೇಕಾದ ಮತ್ತೊಂದು ಅಂಶ. "ಪದ್ಮಿನಿಯ ಅಪೂರ್ಣತೆಯ ನೋವು, ಆಯ್ಕೆಯ ಕಷ್ಟ, ನಮಗೆ ನಾಟಕದಲ್ಲಿ ನಿಜವಾಗಬೇಕಾದರೆ ದೇವದತ್ತ 'ಅಪ್ರತಿಮ ಮಿದುಳಿ'ಗೂ ಕಪಿಲ 'ಅಪ್ರತಿಮ ಮೈ'ಗೂ ಸಮರ್ಥ ಸಂಕೇತಗಳಾಗಿರಬೇಕಿತ್ತು; ಆದರೆ ನಾಟಕದ ಈ ಘೋಷಿತ ಉದ್ದೇಶದಂತೆ ಆಗುವುದಿಲ್ಲ. ಬದಲಾಗಿ ಕಪಿಲ ಮಾತ್ರ ಮೈ ಮನಸ್ಸುಗಳೆರಡೂ ತುಂಬಿಕೊಂಡ ಪಾತ್ರವಾಗಿ ಬಿಡುತ್ತಾನೆ; .... ಪದ್ಮಿನಿ ಮೊದಲಿನಿಂದ ಕೊನೆಯ ತನಕ ಹುಡುಕುವುದು, ಬಯಸುವುದು ಅವಳು ಶಾಸ್ತ್ರೋಕ್ತವಾಗಿ ಕೂಡಲಾರದ ಕಪಿಲನ ಮೈಯನ್ನು ಮಾತ್ರ. ದೇವದತ್ತನ 'ಮಿದುಳು' ಅವಳಿಗೆ ನಿಜವಾಗಿಯೂ ಬೇಕಿಲ್ಲ; ಯಾಕೆಂದರೆ ದೇವದತ್ತನಲ್ಲಿ ಅವಳ ಅನುಭವಕ್ಕೆ ಬರುವಂತೆ ಅದಿಲ್ಲ. ಕಪಿಲನ ಮೈ ಮನಸ್ಸುಗಳೆರಡೂ ಉಜ್ವಲವಾಗಿದ್ದು ಅವಳಿಗೂ ನಮಗೂ ತಟ್ಟುವಂತಹ ಕ್ರಿಯೆಗಳು ನಾಟಕದಲ್ಲಿ ಇವೆ. ಆದರೆ ಶಾಸ್ತ್ರಬದ್ಧವಾಗಿ ಪದ್ಮಿನಿ ಕೈಹಿಡಿದ (ಯಾಕೆಂದರೆ. ಅವಳು ಶಾಸ್ತ್ರೋಕ್ತವಾಗಿ ಮದುವೆಯಾಗಲು ಸಮಾಜ ಒಪ್ಪುವ) ಅವಳ ಜಾತಿಯವನಾದ ದೇವದತ್ತ ಮೈಯಲ್ಲಷ್ಟೇ ಮನಸ್ಸಿನಲ್ಲೂ ಸುಕುಮಾರ".[5]

---

[4] ರಾಜೇಂದ್ರ ಪಾಲ್: *Enact* 70.

[5] ಯು. ಆರ್. ಅನಂತಮೂರ್ತಿ: 'ಸಾಕ್ಷಿ', 17.

ದೇವದತ್ತನ ಅಪ್ರತಿಮ ಬುದ್ಧಿಶಕ್ತಿಯನ್ನು ಭಾಗವತನು ಕೊಂಡಾಡುತ್ತಾನೆ. ಆದರೆ ನಾಟಕದಲ್ಲಿ ಮೂರ್ತಗೊಳ್ಳುವ ದೇವದತ್ತ ಸಪ್ಪೆಯಾಗಿದ್ದಾನೆ. ಕಪಿಲ ಮತ್ತು ಪದ್ಮಿನಿಯರ ಪೌರುಷ ಹಾಗೂ ರೂಪವನ್ನು ಆಂಗಿಕಾಭಿನಯದಲ್ಲಿ ಮೂರ್ತಗೊಳಿಸಲು ಸಾಧ್ಯ; ಆದರೆ ದೇವದತ್ತನ ಬುದ್ಧಿಶಕ್ತಿ, ಅವನ ಮಾತಿನಲ್ಲಿ ಮೂರ್ತಗೊಳ್ಳಬೇಕು. "......ಅಂದರೆ ಕ್ರಿಯೆಯಾಗುವ ಮಾತಿನ ಶಕ್ತಿಯೂ ನಾಟಕದಲ್ಲಿದ್ದಿದ್ದರೆ ಆಗ ನಿರ್ದೇಶಕನಿಗೆ ನಾಟಕ ಸವಾಲಾಗುತ್ತಿತ್ತು".[6]

ಪಾತ್ರಗಳ ಅಂತರಂಗವನ್ನು ಕ್ರಿಯಾತ್ಮಕವಾಗಿ ಸಾಕ್ಷಾತ್ಕರಣಗೊಳಿಸುವಲ್ಲಿ ಕಾರ್ನಾಡರ ಸೋಲು ಗಮನಾರ್ಹವಾಗಿದೆಯಾದರೂ, ತಾಂತ್ರಿಕವಾಗಿ ಯಶಸ್ವಿಯಾಗಿದ್ದಾರೆ. ನಾಟಕದ ಎರಡೂ ಕತೆಗಳನ್ನು ಜೋಡಿಸುವ ಕೊಂಡಿಯಾಗಿದ್ದಾನೆ ಭಾಗವತ ಮತ್ತು ನಾಟಕದ ಸಂದರ್ಭಗಳನ್ನು ವಿವರಿಸುವ ವ್ಯಾಖ್ಯಾನಕಾರನಾಗಿದ್ದಾನೆ. ಹಾಡುಗಳು, ಹಿಮ್ಮೇಳದ ಉಪಯೋಗ, ಗೊಂಬೆಗಳು ಮತ್ತು ಮುಖವಾಡದ ಬಳಕೆಯಿಂದಾಗಿ 'ದೇಶ ಕಾಲಾತೀತ'ವಾದ ಸಂಬಂಧವನ್ನು ಪ್ರೇಕ್ಷಕರೊಡನೆ ನಾಟಕ ಪಡೆಯಲು ಸಾಧ್ಯವಾಗುತ್ತದೆ. ಮುಖವಾಡದ ಬಳಕೆ, ನಾಟಕಕ್ಕೆ ತಾಂತ್ರಿಕ ಅಗತ್ಯವಾಗಿದ್ದರೂ, ಅವುಗಳನ್ನು ಬಳಸದೆ ಕಪಿಲ–ದೇವದತ್ತರ ತಲೆ ಅದಲುಬದಲಾಗುವ ಪ್ರಸಂಗವನ್ನು ನಿರ್ವಹಿಸಲು ಸಾಧ್ಯವೆಂದು ಪ್ರಯೋಗವೊಂದರಿಂದ ವ್ಯಕ್ತವಾಗಿದೆ.

ಮಹತ್ವಪೂರ್ಣವಾದ ಚರ್ಚೆಗೆ ಅವಕಾಶ ಮಾಡಿಕೊಡುವ ಶ್ರೇಷ್ಠ ಕನ್ನಡ ನಾಟಕಗಳಲ್ಲಿ ಸಫಲತೆಯಿಂದಾಗಿ 'ತುಘಲಕ' ಮತ್ತು ಸೋಲಿನಿಂದಾಗಿ 'ಹಯವದನ' ಎಲ್ಲ ವಿಮರ್ಶಕರ ಗಮನವನ್ನೂ ಸೆಳೆದಿವೆ.

ಹೊಸ ಸಂವೇದನೆಯ ನಾಟಕಕಾರರಲ್ಲಿ ಲಂಕೇಶರ ನಾಟಕಗಳು ವಿಶಿಷ್ಟ ಮನೋಧರ್ಮವೊಂದನ್ನು ಪ್ರತಿನಿಧಿಸುತ್ತವೆ. ಸಾಮಾಜಿಕ ಪರಿಸರದಲ್ಲೇ ವ್ಯಕ್ತಿಯ ಅಂತರಂಗದ ಜೀವನವನ್ನು ಶೋಧಿಸುವುದು ಲಂಕೇಶರ ವಿಧಾನವಾಗಿದೆ. ಸಂದಾಚಾರದ ವಿರುದ್ಧ ತಮ್ಮ ಎಲ್ಲ ನಾಟಕಗಳಲ್ಲಿಯೂ ದಂಗೆಯೇಳುವ ಲಂಕೇಶರು ಸಮಕಾಲೀನ ಬದುಕಿಗೆ ಹೆಚ್ಚು ಪ್ರಸ್ತುತವೆನ್ನಿಸಬಹುದಾದ ನಾಟಕಕಾರರು. ನಮ್ಮ ಕುಟುಂಬಜೀವನದ ಅವನತಿ, ವರ್ಗಶೋಷಣೆ, ಪ್ರಗತಿಪರರೆಂದು ಕರೆದುಕೊಳ್ಳುವವರ ಆಷಾಡಭೂತಿತನ ಮುಂತಾದ ದುರಂತ ಸಾಮಾಜಿಕ ಪರಿಸರದಲ್ಲಿ ಬದುಕುತ್ತಿರುವ ವ್ಯಕ್ತಿಯ ಹೋರಾಟವನ್ನು ಅವರ ನಾಟಕಗಳಲ್ಲಿ ಕಾಣಬಹುದಾಗಿದೆ.

**ಕ್ರಾಂತಿ ಬಂತು ಕ್ರಾಂತಿ**ಯ ಭಗವಾನ್‌ನ ವ್ಯಕ್ತಿತ್ವದಲ್ಲಿ ತೋರುವ ಬಿರುಕು, ಸಮಕಾಲೀನ ಬುದ್ಧಿಜೀವಿಗಳ ಹೊಯ್ದಾಟವನ್ನೂ, ದಿನಕರನಂಥವರ ರೊಚ್ಚು ಮತ್ತು ಹೊಣೆಗೇಡಿತನಗಳು ನಮ್ಮ ಯುವ ಜನಾಂಗವನ್ನೂ ಪ್ರತಿನಿಧಿಸುತ್ತವೆ. ಆದರೆ ಎಲ್ಲ ಕ್ರಾಂತಿಯನ್ನೂ ಘೋಷಣೆ ಮತ್ತು ತುತ್ತೂರಿಯ ಮಾತುಗಳಲ್ಲಿ ಮುಳುಗಿಸಿಬಿಡುವ ಜನತೆ, ಇದೆಲ್ಲದರ ಉಪಯೋಗ ಪಡೆದು ಸುಲಿಗೆ ನಡೆಸುವ ಮಧ್ಯವರ್ತಿಗಳು, ನಿಜ

---

[6] ಯು. ಆರ್. ಅನಂತಮೂರ್ತಿ: 'ಸಾಕ್ಷಿ', 17

ವಾದ ದುರಂತಕ್ಕೆ ಕಾರಣರಾದವರು. ಈ ನಾಟಕದಲ್ಲಿ ಬರುವ ಕಳ್ಳನ ಪ್ರಸಂಗ, ಕೇವಲ ತಂತ್ರದ ಸಲುವಾಗಿ ಕಲ್ಪಿಸಿಕೊಂಡ ಘಟನೆಯಾಗಿರದೆ, ನಾಟಕದ ಉದ್ದೇಶವನ್ನು ವಿವರಿಸಲು ಸಹಕಾರಿಯಾಗಿದೆ. ವಾಸ್ತವಿಕ ಮತ್ತು ಸಾಂಕೇತಿಕ ಸ್ತರಗಳೆರಡರಲ್ಲಿಯೂ ಈ ಪ್ರಸಂಗವನ್ನು ಅರ್ಥವಿಸಲು ಅವಕಾಶವಿದೆ. ದಿನಕರನ ಹೊಣೆಗೇಡಿತನ, ಭಗವಾನನ ವ್ಯಕ್ತಿತ್ವದ ಪೊಳ್ಳು ಮತ್ತು ಅಸಹಾಯಕತೆಗಳು ವ್ಯಕ್ತವಾಗುವುದು ಈ ಸನ್ನಿವೇಶದ ಹಿನ್ನೆಲೆಯಲ್ಲಿಯೇ ಎಂಬುದನ್ನು ಮರೆಯುವಂತಿಲ್ಲ.

ಪ್ರತಿಭಾವಂತ ನಾಟಕಕಾರರಾಗಿದ್ದ ಸಂಸರ ಬದುಕಿನ ಹಿನ್ನೆಲೆಯಲ್ಲಿ, ಸೂಕ್ಷ್ಮ ಸಂವೇದನೆಯುಳ್ಳವರೆಲ್ಲರಿಗೂ ಸಾಧಾರಣವಾದ, 'Persecution complex' ನ ಶೋಧನೆ ನಡೆಸುವ **ಪೋಲೀಸರಿದ್ದಾರೆ ಎಚ್ಚರಿಕೆ** ಎಂಬ ನಾಟಕಕ್ಕೆ ಲಂಕೇಶರು, ಪಾಶ್ಚಾತ್ಯ ಅಸಂಬದ್ಧ ವಿಚಾರಗಳ ಲೇಪನವನ್ನು ಕೊಟ್ಟಿದ್ದಾರೆ.

ಸಮಾಜಕ್ಕೆ ಹೊಂದದ್ದನ್ನು ಬರೆಯುವವರ ಸುತ್ತ ಇರುವ ಪ್ರತಿಷ್ಠಿತವರ್ಗ, ಸಹಾಯಕರ ಸೋಗುಹಾಕಿ ಸತ್ವವಿದ್ದವರನ್ನು ನಿರ್ವೀರ್ಯಗೊಳಿಸುವ ಸಜ್ಜನರು, ಆತ್ಮೀಯರಾದ ಬಂಧುಗಳ ಆಸಕ್ತಿ, ಪರಂಪರೆಯ ಪ್ರತಿನಿಧಿಗಳಾದ ಪೂಜಾರಿಗಳು—ಇವರೆಲ್ಲಾ ವ್ಯಕ್ತಿಯನ್ನು ಸಮೂಹದ ಶಿಸ್ತಿಗೆ ಒಳಪಡಿಸುವ ಪೋಲೀಸರಾಗಬಹುದು. ಬದುಕಿನ ನಿರರ್ಥಕತೆಯನ್ನು ಕಂಡುಕೊಂಡ ವ್ಯಕ್ತಿ, ಸುತ್ತಮುತ್ತಲಿನವರ ಹದ್ದಿನ ಕಣ್ಣಿಗೆ ಸಿಕ್ಕಿದಾಗ ಆತ್ಮಹಿಂಸೆಗೆ ತೊಡಗುತ್ತಾನೆ. ಈ ದುರಂತಮಯ ಸನ್ನಿವೇಶವನ್ನು ಅತ್ಯಂತ ನಾಟಕೀಯವಾಗಿ 'ಪೋಲೀಸರಿದ್ದಾರೆ ಎಚ್ಚರಿಕೆ', ಚಿತ್ರಿಸುತ್ತದೆ.

ಎಲ್ಲರ ಬದುಕಿನಲ್ಲೂ ಇರುವ ಅತೃಪ್ತಿಯೇ **ಸಿದ್ಧತೆ**ಯ ವಸ್ತು. ರಂಗಣ್ಣ, ಕನಸನ್ನು ಕಳೆದುಕೊಂಡು ವಾಸ್ತವವನ್ನು ಒಪ್ಪಿಕೊಳ್ಳದೆ ವೃದ್ಧನಾದರೆ, ಅವನ ಹೆಂಡತಿ ಲಲಿತ, ರಂಗಣ್ಣನೊಂದಿಗೆ ಹೊಂದಿ ಬಾಳುವುದಕ್ಕಾಗಿಯೇ ತನ್ನ ಆಸೆಗಳನ್ನು ಬಲಿಗೊಡುತ್ತಾಳೆ. ಸಂಪೂರ್ಣ ಸ್ವಾತಂತ್ರ್ಯ ಪಡೆದು ಬಿಡುಗಡೆಯಾಗಬಯಸುವ ರಂಗಣ್ಣನ ಪೆಟ್ಟಿಗೆಯ ಬೀಗದ ಕೈ, ಮಗನಾದ ರಾಮುವಿನ ಹತ್ತಿರವಿದೆ; ಎರಡು ತಲೆಮಾರುಗಳ ನಡುವೆ ಸಂವಾದವಿಲ್ಲ. "ಮುದುಕರು ಮಾತಾಡ್ತಾರೆ, ಕೇಳಿಸೋಲ್ಲ. ಚಿಕ್ಕವರು ಮಾತಾಡೋಲ್ಲ, ಕೇಳಿಸುತ್ತೆ"— ಎಂದು ಹೇಳುವ ರಂಗಣ್ಣನ ವೇದನೆ ಅರ್ಥಪೂರ್ಣವಾಗಿದ್ದು ಅವನ ಸಾವಿನ ಅನಿವಾರ್ಯತೆಯನ್ನು ಸೂಚಿಸುತ್ತದೆ.

**ಗಿಳಿಯು ಪಂಜರದೊಳಿಲ್ಲ** ಲಂಕೇಶರ ಒಂದು ಕತೆಯು, ನಾಟಕರೂಪವಾಗಿದ್ದು, ತಂತ್ರದ ದೃಷ್ಟಿಯಿಂದ ತುಂಬಾ ಸರಳವಾಗಿದೆ. ವ್ಯಕ್ತಿಗಳ ನಡುವಿನ ಸಂಬಂಧದ ತಳಹದಿಯೇನು? — ಎಂಬ ಸಮಸ್ಯೆಯನ್ನು ಈ ನಾಟಕದಲ್ಲಿ ಚರ್ಚಿಸಲಾಗಿದೆ. ಸಾಮಾಜಿಕ ಸನ್ನಿವೇಶದಿಂದ ಬೇರ್ಪಡಿಸದೆ ಮನುಷ್ಯನ ಉದಾರತೆ, ಮುಂತಾದ ಗುಣಗಳನ್ನು ಪರೀಕ್ಷೆಗೆ ಗುರಿಪಡಿಸುವುದು ನಾಟಕಕಾರರ ಉದ್ದೇಶವಿರುವಂತಿದೆ. "ಹತ್ತು ವರ್ಷದಿಂದ ನಾನು ಬಲ್ಲ ಸ್ನೇಹಿತರು ನನಗಿನ್ನೂ ಸಮಸ್ಯೆ. ಹತ್ತು ಜನರ ಪರಿಚಯ ನನ್ನ ಆಳಕ್ಕೆ ಇಳಿದು ಮನಸ್ಸನ್ನು ಅಲ್ಲಾಡಿಸುತ್ತೆ. ಅವರ ಚರ್ಮ ಹೊಕ್ಕು ನೋಡುವ ದಾರಿ ನಮಗಿಲ್ಲ. ಅವರನ್ನು ಮುಟ್ಟಿ ನೋಡಿದರೆ ಗೊತ್ತಾಗೋಲ್ಲ. ಅವರೊಂದಿಗೆ ಹರಟಿದರೆ

ಗೊತ್ತಾಗೋಲ್ಲ. ಅವರೊಂದಿಗೆ ಜಗಳ ಆಡಿದರೆ ಗೊತ್ತಾಗೋಲ್ಲ"– ಎಂದು ತತ್ವಜ್ಞಾನಿಯಂತೆ ಮಾತಾಡುವ ನಾಟಕದ ನಾಯಕನಿಗೆ ತನ್ನ ಮನಸ್ಸಿನ ಆಳದಲ್ಲಿಯೇ ಇರುವ ಸಣ್ಣತನ, ಅಪನಂಬಿಕೆ, ಕ್ರೌರ್ಯಗಳ ಪರಿಚಯವೂ ಇರುವುದಿಲ್ಲ. ಈ ಸ್ಥಿತಿ ನಾಟಕದ ವ್ಯಂಗ್ಯವೂ ಆಗಿದ್ದು, ಬದುಕನ್ನು ಪ್ರತಿಬಿಂಬಿಸುತ್ತದೆ. ಈ ನಾಟಕದಲ್ಲಿ ಬರುವ ಹಜಾಮ ಮತ್ತು ಮಗುವಿನ ಪಾತ್ರಗಳು ಸತ್ಯ ಮತ್ತು ಮುಗ್ಧತೆಗೆ ಸಂಕೇತವಾಗಿದ್ದು ವಿಶಿಷ್ಟವಾದ ರೂಪವನ್ನು ಪಡೆದಿವೆ.

ಲಂಕೇಶರ ನಾಟಕಗಳ ಸಂಭಾಷಣೆಗೆ ತೀವ್ರತೆಯನ್ನು ತಂದುಕೊಡುವ ಹರಿತವಾದ ಬಳಕೆಮಾತಿನ ಗದ್ಯಕ್ಕೆ, ಕಾವ್ಯಭಾಷೆಯ ಸಂಸ್ಕಾರವೂ ಇರುವುದರಿಂದ, ಅವು ಎಲ್ಲ ಬಗೆಯ ಪ್ರೇಕ್ಷಕರನ್ನೂ ಪರಿಣಾಮಕಾರಿಯಾಗಿ ತಟ್ಟುತ್ತವೆ. "ಸಾಮಾನ್ಯವಾಗಿ ಲಂಕೇಶರ ಪ್ರತಿಭೆಯು ಪಾಶ್ಚಾತ್ಯ ಆಧುನಿಕ ನಾಟಕಕಾರರಾದ ಆಸ್‌ಬೋರ್ನ್, ಬೆಕೆಟ್, ವೆಸ್ಕರ್, ಆಲ್ಬೀ ಮತ್ತು ಪಿಂಟರ್ ಅವರ ಕೃತಿಗಳ ಪರಿಣಾಮಕ್ಕೆ ಸಂವಾದಿಯಾಗಿ ತೆರೆದ ಮನಸ್ಸಿನಿಂದ ಕ್ರಿಯಾತ್ಮಕವಾಗುವಾಗ ನಮ್ಮ ಜನಜೀವನದ ಘಟನೆಗಳು ಮತ್ತು ಪಾತ್ರಗಳ ಇತಿಮಿತಿಯಲ್ಲಿಯೇ ದುಡಿಯುತ್ತದೆ. ಹೀಗೆ ಎರಡೂ ಕಡೆಗೆ ತೆರೆದ ಮನಸ್ಸಾದ ಕಾರಣ ನಮ್ಮ ಅವಶ್ಯಕತೆಯ ಸಾಮಾಜಿಕ ನಾಟಕಗಳನ್ನು ರಚಿಸಿ ನಮ್ಮ ರಂಗಭೂಮಿಗೆ ಹೊಸನೀರನ್ನು ಹರಿಯಿಸಲು ಸಾಧ್ಯವಾಗಿದೆ."[7]

"ತಾನು ಸ್ವಂತ ಏನಾಗಬೇಕೆಂದು ನಿಶ್ಚಯಿಸಿ ಮನುಷ್ಯ ಆಗುತ್ತಾನೋ ಅದೇ ಅವನ ಮನುಷ್ಯತ್ವ: ಕೆಲವು ಪೂರ್ವಸಿದ್ಧ ಸತ್ಯಗಳ, ಸತ್ವಗಳ, ಉದ್ದೇಶಪೂರ್ವಕ ಆವಿರ್ಭಾವವಲ್ಲ ಮನುಷ್ಯ."

ಶ್ರೀ ಅನಂತಮೂರ್ತಿಯವರು 'ಸಾರ್ತ್ ಮತ್ತು ಅಸ್ತಿತ್ವವಾದ' ಎಂಬ ಲೇಖನದಲ್ಲಿ ಹೇಳಿರುವ ಮೇಲಿನ ಮಾತುಗಳು, ಅವರ ನಾಟಕವಾದ **ಆವಾಹನೆ**ಯ ನಾಯಕ ಶ್ರೀನಿವಾಸನ ಪಾತ್ರರಚನೆಯ ಆಶಯವನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತವೆ.

ನೈತಿಕವಾಗಿ ಶಿಥಿಲಗೊಂಡು, ಕೇವಲ ಚರ್ವಿತಚರ್ವಣದಲ್ಲೇ ಕೊಳೆಯುತ್ತಿರುವ ವಠಾರದ ಬದುಕಿನ ಪರಿಸರದಿಂದ ಬಿಡಿಸಿಕೊಳ್ಳಲು ಹೋರಾಡುವ ಯುವಕನೊಬ್ಬನ ನೋವು, ಈ ನಾಟಕದ ವಸ್ತು. ವೈಯಕ್ತಿಕ ಬಿಡುಗಡೆಗಾಗಿ ಹೋರಾಡುವ ಶ್ರೀನಿವಾಸನಿಗೆ ತನ್ನ ತಾಯಿ, ಹೆಂಡತಿ, ಸ್ನೇಹಿತ, ಮತ್ತು ವಠಾರದ ಹಿರಿಯರೊಡನೆ ಸಂವಾದ ಸಾಧ್ಯವಾಗುತ್ತಿಲ್ಲ; ಅದು ಸಾಧ್ಯವಾಗದೆ ಅವನಿಗೆ ಮುಕ್ತಿಯಿಲ್ಲ.

ಆತ್ಮನಿಷ್ಠೆ ಮತ್ತು ಸಂಪ್ರದಾಯಗಳ ಹೋರಾಟವನ್ನೇ ಸಂಕೇತಿಸುವ ಈ ನಾಟಕದ ನಾಯಕನ ಸೋಲು ಅರ್ಥಪೂರ್ಣವಾದದ್ದು. ದೃಢ ನಿಶ್ಚಯ ಮತ್ತು ಕ್ರಿಯಾಶಕ್ತಿಗಳ ಅಭಾವವೇ ಶ್ರೀನಿವಾಸನ ದುರಂತಕ್ಕೆ ಕಾರಣವೆಂದು ಮೇಲುನೋಟಕ್ಕೆ ಅನ್ನಿಸಿದರೂ, 'ನಿಶ್ಚಯ' ಅಷ್ಟು ಸುಲಭವಲ್ಲ. ತನ್ನ ವ್ಯಕ್ತಿತ್ವವನ್ನು ಸ್ಥಾಪಿಸಿಕೊಳ್ಳಲು

7 ಕ. ವೆಂ. ರಾಜಗೋಪಾಲ: 'ಪ್ರಜಾವಾಣಿ', 14-5-1972.

ಹಿರಿಯರನ್ನು, ಸ್ನೇಹಿತರನ್ನು ಧಿಕ್ಕರಿಸುವ ಶ್ರೀನಿವಾಸನೇ ತಾಯಿ, ಮೇಷ್ಟ್ರು, ಸ್ನೇಹಿತ– ಮುಂತಾದ ಪ್ರೀತಿಯ ಸಂಬಂಧಗಳ ಇಕ್ಕುಳದಲ್ಲಿ ಸಿಕ್ಕಿಕೊಂಡು ಅಸಹಾಯಕತೆಯಿಂದ ಒದ್ದಾಡುತ್ತಾನೆ. "ಇದರಿಂದ ನಿವೃತ್ತೀಂದ್ರೆ ಕೊಲ್ಲಬೇಕು–ನಿನ್ನನ್ನ, ತಮ್ಮನನ್ನ ನಿರ್ದಯವಾಗಿ ಕೊಲ್ಲಬೇಕು. ಗರ್ಭದಿಂದ ಸೀಳಿಕೊಂಡು ಹೊರ್ಗೆ ಬರಬೇಕು," ಎಂದು ತನ್ನ ಸ್ನೇಹಿತನೆದುರು ಕೊಚ್ಚಿಕೊಳ್ಳುವ ಶ್ರೀನಿವಾಸನಿಗೆ ಹಾಗೆ ಕೊಲ್ಲುವುದು ಅಷ್ಟು ಸುಲಭವಲ್ಲವೆಂದೂ ಗೊತ್ತಾಗುತ್ತದೆ. "ಇದು ನರಕ: ಏನೇ ಮಾಡು, ಎಷ್ಟೇ ಜಗ್ಗು, ಇದನ್ನ ಅಲ್ಲಾಡಿಸಕ್ಕಾಗಲ್ಲ. ಇಲ್ಲಿಂದ ಹೊರಗೆ ಹೋಗ್ಲಿಕ್ಕೆ ದಾರಿ ಸಹಾ ಇಲ್ಲ. ನಂಗೆ ಅನ್ನಿಸತ್ತೆ: ಇದ್ದುಬಿಡ್ತೇವೆ, ಹೀಗೇನೆ; ಸಹಿಸ್ಕೋತ: ಚಿಗುರೋದೇ ಇಲ್ಲ."

ಸಂವೇದನೆಯನ್ನು ಕಳೆದುಕೊಂಡ ಪರಿಸರದೊಂದಿಗೆ, ವ್ಯಕ್ತಿ ನಡೆಸುವ ಹೋರಾಟವೇ ಇಲ್ಲಿ ಮುಖ್ಯವೇ ಹೊರತು ಆತನ ಸೋಲು ಅಥವಾ ಗೆಲುವಲ್ಲ. ಗಣೇಶನ ಚೌತಿಯ ಹಿನ್ನೆಲೆಯಲ್ಲಿ ಪ್ರಾರಂಭವಾಗುವ ಈ ನಾಟಕದಲ್ಲಿ ಗಣಪತಿ, ಮಾತಾಡದ ಒಂದು ಪಾತ್ರವಾಗಿ ನಾಟಕದ ಕ್ರಿಯೆಯಲ್ಲಿ ಪಾಲುಗೊಳ್ಳುತ್ತಾನೆ. ಶ್ರೀನಿವಾಸನ ಮಾತುಗಾರಿಕೆಯ ಮೂಲಕವೇ ಅವನ ಸೆಣಸಾಟವನ್ನು ಚಿತ್ರಿಸುವ ಈ ನಾಟಕದ ಸಂಭಾಷಣೆ ಸತ್ವಯುತವಾಗಿದೆ: ನಾಟಕದ ಘಟನಾವಳಿಗಳಿಗೆಲ್ಲ ಕ್ಷಿಪ್ರಗತಿಯಿದೆ, ಗಣೇಶನ ಪೂಜೆ ಮುಂತಾದ ಕ್ರಿಯಾವಿಧಿಗಳಲ್ಲಿ ಸುಂದರ ದೃಶ್ಯನಿರ್ಮಾಣಕ್ಕೆ ಅವಕಾಶವಿದೆ.

ಪಾಶ್ಚಾತ್ಯ ಸಂವೇದನೆಯನ್ನು ಉತ್ತರ ಕರ್ನಾಟಕದ ವೀರ್ಯವತ್ತಾದ ಭಾಷೆಯಲ್ಲಿ ನಾಟಕವಾಗಿಸುತ್ತಿರುವ ಚಂದ್ರಶೇಖರ ಪಾಟೀಲರು ಇತ್ತೀಚೆಗೆ ಆಧುನಿಕ ಕನ್ನಡ ರಂಗಭೂಮಿಯಲ್ಲಿ ಬಹು ಮಹತ್ವವನ್ನು ಪಡೆಯುತ್ತಿದ್ದಾರೆ. ಕನ್ನಡದ ಅತ್ಯುತ್ತಮ ಪ್ರಹಸನಗಳೆನ್ನಬಹುದಾದ ಇವರ ಎಲ್ಲ ನಾಟಕಗಳೂ ಏಕಾಂಕಗಳಿದ್ದುದರಿಂದ ಅಮೆಚೂರ್ ತಂಡಗಳಲ್ಲಿ ಬಹುಬೇಗ ಜನಪ್ರಿಯಗೊಂಡವು; ಪಾಟೀಲರ ನಾಟಕಗಳ ಭಾಷೆಯಲ್ಲಿ ತುಂಬಿ ತುಳುಕುವ ಕಾವ್ಯಗುಣ ಮತ್ತು ತೀವ್ರವಾದ ನಾಟಕೀಯ ಪ್ರಜ್ಞೆ ಅವರ ನಾಟಕಗಳ ಆಕರ್ಷಣೆಯ ಮತ್ತೊಂದು ಕಾರಣವಾಗಿದೆ.

ಪಾಟೀಲರು ತಮ್ಮ **ಕುಂಟಾ ಕುಂಟಾ ಕುರವತ್ತಿ** ಎಂಬ ನಾಟಕದಲ್ಲಿ ಮನುಷ್ಯನ ಮೂಲಸ್ವಭಾವವಾದ, ಛಿದ್ರಾನ್ವೇಷಣೆಯಲ್ಲೇ ಸಂತೋಷಿಸುವ ಪ್ರವೃತ್ತಿಯನ್ನು ವಿಡಂಬಿಸಿದ್ದಾರೆ. ಇಲ್ಲಿ ಬರುವ ಕುಂಟ, ಕುರುಡ ಮತ್ತು ಕಿವುಡರು ಪರಸ್ಪರರನ್ನು ಹೀಯಾಳಿಸುತ್ತಲೇ, ತಮ್ಮ ಹುಳುಕನ್ನು ಮುಚ್ಚಿಕೊಳ್ಳಲೆತ್ನಿಸುವ ಮನುಷ್ಯಸ್ವಭಾವದ ಪ್ರತಿನಿಧಿಗಳು. ಬಾಟಾ ಬೂಟನ್ನು ಮಿರುಗುಟ್ಟುವಂತೆ ಪಾಲಿಷ್ ಮಾಡುವ ಕುಂಟ, ತಂಪಿನ ಚಾಳೀಸು ಮತ್ತು ಸುಂದರ ವಾಚನ್ನು ಧರಿಸಿರುವ ಕುರುಡ, ಕಿವಿಗೆ ಹೂ ಸಿಕ್ಕಿಸಿಕೊಂಡು ಬಗಲಿನಲ್ಲಿ ಟ್ರಾನ್ಸಿಸ್ಟರ್ ತೂಗುಬಿಟ್ಟುಕೊಂಡಿರುವ ಕಿವುಡ – ಇವರ ಆಸಕ್ತಿಗಳೂ ಅವರ ಈ ಕೊರತೆಯನ್ನೇ ಎತ್ತಿ ತೋರಿಸುವುದು ಇಲ್ಲಿನ ವ್ಯಂಗ್ಯವಾಗಿದೆ. ಸ್ವವಿಮರ್ಶೆಯ ಅಭಾವದಿಂದ ನರಳುವ ಬದುಕಿನ ವಿರೋಧಾಭಾಸಗಳನ್ನು ಒಂದು ಸನ್ನಿವೇಶದ ಮೂಲಕ ಚುರುಕಾಗಿ ಹಾಸ್ಯಮಯವಾಗಿ ನಿರೂಪಿಸಲಾಗಿದೆ: ಈ ಸನ್ನಿವೇಶವೇ ಅತ್ಯಂತ ನಾಟಕೀಯವಾಗಿರುವುದರಿಂದ ವಸ್ತುವಿಗೆ ಖಚಿತ ಸ್ವರೂಪ ದೊರಕಿದೆ.

**ಗುರ್ತಿನವರು** ಆಧುನಿಕ ಬದುಕಿನ ದುರಂತವೊಂದನ್ನು ಚಿತ್ರಿಸುತ್ತದೆ. ಸಮೂಹ ಜೀವನದಲ್ಲಿ, ವೈಯಕ್ತಿಕತೆಯನ್ನು ಕಳೆದುಕೊಂಡ ವ್ಯಕ್ತಿಯ ಪರದಾಟಕ್ಕೆ ಅಲ್ಲಿನ ಪಾತ್ರಗಳು ಪ್ರತಿನಿಧಿಗಳಾಗಿದ್ದಾರೆ. ಈ ನಾಟಕದ ಕೇಂದ್ರವ್ಯಕ್ತಿ, ಒಬ್ಬ ಸಾಹಿತಿ, "ಸಾಹಿತ್ಯ ಅಂದರ ಜೀವನದ ಪ್ರತಿಬಿಂಬ", ಎಂದು ಭಾಷಣ ಮಾಡುತ್ತಾನೆ. ಆದರೆ ಸಮಕಾಲೀನ ಜೀವನ ಎನ್ನುವುದು ಜೀವವಿಲ್ಲದ ಬಿಂಬ ಎಂಬುದರ ಅರಿವೂ ಅವನಿಗಿದೆ. "ಅರ್ಥಾತ್ ಸಾಹಿತ್ಯದೊಳಗ ನಾವು ಕಾಣೋದು ಅಥವಾ ನಮಗ ಕಾಣಿಸೋದು ಜೀವನದ ಬಿಂಬದ ಪ್ರತಿ". ಖಾಸಗಿ ಬದುಕಿನಲ್ಲಾಗಲೀ ಸಾಮಾಜಿಕ ಬದುಕಿನಲ್ಲಾಗಲೀ ಯಾರನ್ನು ಯಾರೂ ಗುರುತುಹಿಡಿಯದಿರುವ, ಸಂವಾದ ಸಾಧ್ಯವಾಗದೆ ಇರುವ, ಭಯಾನಕ ಪರಿಸ್ಥಿತಿಯನ್ನು ಮುಂದಿಡುವ ಈ ನಾಟಕ ಸಾಮಾಜಿಕ ವಿಡಂಬನೆಯಂತೆ ಸಾಹಿತ್ಯಿಕ ವಿಡಂಬನೆಯೂ ಆಗಿದೆ. "ಇಂವ ಹಾಕ್ಕೊಂಡಿರೋದು ಗಾಂಧಿ ಟೊಪಿಗಿ – ಜೀವನದಾಗ. ಇಂವ ಗೋಡಸೆ ಟೊಪಿಗಿ ಹಾಕ್ಬೇಕಾರೆ ಏನ ಮಾಡಬೇಕು? ಸಾಹಿತ್ಯದೊಳಗ ನುಗ್ಗಬೇಕು. ಯಾಕಂದ್ರ ಸಾಹಿತ್ಯ... ಜೀವನದ ಪ್ರತಿಬಿಂಬ". ಈ ಮಾತುಗಳನ್ನು ಹೇಳುವ ನಾಟಕದ 'ಸಾಹಿತಿ'ಯ ನೋವು ವಸ್ತುಸ್ಥಿತಿಯನ್ನೇ ಹೇಳುತ್ತದೆ. ಈ ಬಗೆಯ ಗಂಭೀರ ವಿಚಾರವನ್ನು ಪ್ರಹಸನದ ಧಾಟಿಯಲ್ಲಿ ಹೇಳಿಬಿಡುವ ಕಲೆ ಪಾಟೀಲರಿಗೆ ಕರಗತವಾಗಿದೆ; ಇದೇ ಅವರ ನಾಟಕಗಳ ವೈಶಿಷ್ಟ್ಯ.

**ಟಿಂಗರ ಬುಡ್ಡಣ್ಣ** ಪುರಾಣದ ಮೋಹಿನಿ ಭಸ್ಮಾಸುರರ ಕತೆಯಂತೆ ಒಂದು ನಾಟಕೀಯ ಪ್ರತಿಮೆಯಾಗಿದೆ. ಶಕ್ತಿಸಂಚಯನ, ಯಾವಾಗಲೂ ಒಳ್ಳೆಯ ಪರಿಣಾಮವನ್ನೇ ಉಂಟುಮಾಡುವುದಿಲ್ಲ; ಅಧಿಕಾರದ ಮದ ಯಾವುದನ್ನೂ ಲೆಕ್ಕಿಸುವುದಿಲ್ಲ; ಆದರೆ, ಅಪ್ರತಿಮ ಶಕ್ತಿ ತನ್ನ ವಿನಾಶವನ್ನು ತನ್ನಲ್ಲಿ ಹುದುಗಿಸಿಕೊಂಡೇ ಹುಟ್ಟಿ ಬರುತ್ತದೆ. ವರ ಕೊಟ್ಟ ಶಿವನ ತಲೆಯ ಮೇಲೆ ಕೈ ಇಡಬಯಸಿದ ಭಸ್ಮಾಸುರನಂತೆ ಪಾಟೀಲರ 'ಟಿಂಗರ ಬುಡ್ಡಣ್ಣ'ನೂ ತನ್ನ ಹುಟ್ಟಿಗೆ ಕಾರಣರಾದ ಮುದುಕ ಮುದುಕಿಯರನ್ನು 'ಕಲಾಸ್' ಮಾಡುತ್ತಾನೆ; ತಾನೂ 'ಕಲಾಸ್' ಆಗುತ್ತಾನೆ. ಆಧುನಿಕ ವಿಜ್ಞಾನ ಮತ್ತು ರಾಜಕೀಯ ಶಕ್ತಿಗಳ ವಿಡಂಬನೆಯೊಂದಿಗೆ, 'ದೇಶ ಕಾಲಾತೀತ'ವಾದ ಭಯಾನಕ ಸಮಸ್ಯೆಯೊಂದನ್ನು ಮುಂದಿಡುವ ಈ ನಾಟಕ, ವಿವಿಧ ಅರ್ಥಸ್ತರಗಳನ್ನು ಒಳಗೊಂಡಿದ್ದೂ, ಸರಳವಾದ ಕತೆಯೊಂದರ ನಾಟಕೀಯ ಮಾಧ್ಯಮದಲ್ಲಿ ಅದನ್ನು ನಿರೂಪಿಸಿದೆಯೆಂಬುದು ಇಲ್ಲಿ ಮಹತ್ವದ ಸಂಗತಿಯಾಗಿದೆ. ಜಾನಪದ ಸತ್ವ, ಪಾಟೀಲರ ನಾಟಕಗಳಲ್ಲಿ ಕೇವಲ ತಂತ್ರ ಅಥವಾ ವಿಧಿಯುಕ್ತ ಕ್ರಿಯೆಗಳಲ್ಲಿ ವ್ಯಕ್ತವಾಗದೆ, ಭಾಷೆ, ವಸ್ತು ಮತ್ತು ಪಾತ್ರಗಳಲ್ಲಿ ಆಧುನಿಕ ಸಂವೇದನೆಯೊಂದಿಗೆ ರಕ್ತಗತವಾಗಿದೆಯೆಂಬುದು 'ಟಿಂಗರ ಬುಡ್ಡಣ್ಣ'ದಂಥ ನಾಟಕದಲ್ಲಿ ಸ್ಪಷ್ಟವಾಗುತ್ತದೆ.

"'ಟಿಂಗರ ಬುಡ್ಡಣ್ಣ' ಬಹುಶಃ ಈ ಸಂಗ್ರಹದಲ್ಲಿಯ ಅತ್ಯಂತ ಸುಂದರವಾದ, ವಾದಾತೀತವಾಗಿ ಯಶಸ್ವಿಯಾದ ನಾಟಕ. ಇದರಲ್ಲಿಯ 'ಪಗದ್ಯ' ಕನ್ನಡ ನಾಟಕದಲ್ಲಿಯ ಇತ್ತೀಚಿನ ಭಾಷಾ ಪ್ರಯೋಗಗಳಲ್ಲಿಯೇ ಅತ್ಯಂತ ಯಶಸ್ವಿಯಾಗಿದ್ದು ಕನ್ನಡದ ನಾಟ್ಯಭಾಷೆಗೇ ಒಂದು ಹೊಸ ಆಯಾಮವನ್ನು ಕಲ್ಪಿಸಿದೆಯೆಂದು ಹೇಳಬಹುದು."[8]

---

[8] ಶಾಂತಿನಾಥ ದೇಸಾಯಿ: 'ಮೂರು ನಾಟಕಗಳು' ರಕ್ಷಾಕವಚದಲ್ಲಿ.

ಕನ್ನಡದಲ್ಲಿ ಮಹತ್ವಾಕಾಂಕ್ಷೆಯಿಂದ ನಾಟಕ ಬರೆಯುತ್ತಿರುವವರಲ್ಲಿ, ಚಂದ್ರಶೇಖರ ಕಂಬಾರರು ಪ್ರಮುಖರು. ಜಾನಪದ ತಂತ್ರವನ್ನು ಆಧುನಿಕ ನಾಟಕಕ್ಕೆ ಬಳಸಿಕೊಳ್ಳಬಹುದಾದ ಸಾಧ್ಯತೆಯನ್ನು ಮೊತ್ತಮೊದಲ ಬಾರಿಗೆ ಅವರು ತಮ್ಮ **ಋಷ್ಯಶೃಂಗ**ದಲ್ಲಿ ಕಂಡುಕೊಂಡಿದ್ದಾರೆ.

ಕಂಬಾರರ 'ಹೇಳ್ತೇನ ಕೇಳ' ಎಂಬ ಆಧುನಿಕ ಲಾವಣಿಯ ಮುಂದಿನ ಭಾಗವೇ 'ಋಷ್ಯಶೃಂಗ'ದ ಕಥಾವಸ್ತು. ಊರ ಗೌಡನನ್ನು ಕೊಂದು ಬಾವಿಗೆ ಹಾಕಿ. ಅವನ ವೇಷ ಧರಿಸಿ ಬಂದ ರಾಕ್ಷಸನು ಗೌಡಿತಿಯನ್ನು ಕೂಡಿದ ಫಲವಾಗಿ ಹುಟ್ಟಿದ ಬಾಳಗೊಂಡನೇ ಈ ನಾಟಕದ ನಾಯಕ. ಅವನತಿ ಹೊಂದಿದ ಸಂಸ್ಕೃತಿಯೊಂದರ ಕತೆಯನ್ನು 'ಹೇಳ್ತೇನ ಕೇಳ' ಸಂಕೇತಿಸಿದರೆ, ಅದರ ಪುನರುಜ್ಜೀವನದ ಆಶಯವನ್ನು 'ಋಷ್ಯಶೃಂಗ' ಸೂಚಿಸುತ್ತದೆ. ಆದರೆ ಈ ಆಶಯ ನಾಟಕದಲ್ಲಿ ಸಫಲಗೊಂಡಂತಿಲ್ಲ. ಹಿಂಸ್ರ ಕಾಮ ಮತ್ತು ರಾಕ್ಷಸ ಪ್ರವೃತ್ತಿಗಳ ಸಂಯೋಗದಿಂದ ಹುಟ್ಟಿದ ಬಾಳಗೊಂಡನಿಂದ, ಊರಜನರ ಹದಗೆಟ್ಟ ಬದುಕನ್ನು ಉದ್ಧರಿಸುವ ಪ್ರಯತ್ನಕ್ಕೆ ನಾಟಕದಲ್ಲಿ ಅವಕಾಶ ಸಿಕ್ಕಿರುವುದು ವಿರೋಧಾಭಾಸಕ್ಕೆ ಎಡೆಕೊಟ್ಟಿದೆ. ಹುಟ್ಟಿನಿಂದಲೇ ಪಡೆದ ಪಾಪದ ಗಂಟನ್ನು ಕರಗಿಸಲಾರದ ದುರಂತನಾಯಕ ಬಾಳಗೊಂಡನ ಅಸಹಾಯಕತೆ ಮತ್ತು ತಾಯಿ ಮಕ್ಕಳ ಸಂಭೋಗದ ಅನೈತಿಕ ಫಲದಿಂದ ಆದ ಮಳೆಯಿಂದಾಗಿ. "ಗೌಡ ಸತ್ತರೂ ಅವನ ದುಷ್ಟಶಕ್ತಿಗೆ ಒಂದು ದೃಷ್ಟಿಯಿಂದ ವಿಜಯವಾಗುತ್ತದೆ. ಜೀವನದ ಮೌಲ್ಯಗಳ ಅವ್ಯವಸ್ಥೆ, ಶ್ರದ್ಧೆಯ ಅಭಾವ, ಬದುಕಿನ ಬಂಜೆತನ, ಸಂಬಂಧಗಳ ವಿಚ್ಛೇದ– ಈ ಸ್ಥಿತಿ ಕೊನೆಯವರೆಗೂ ಅಪರಿಹಾರ್ಯವೇ ಎಂಬ ಪ್ರಶ್ನೆ ಮಾತ್ರ ಉಳಿಯುತ್ತದೆ."[9]

'ಹೇಳ್ತೇನ ಕೇಳ'ದಲ್ಲಿ ಲಾವಣಿಯ ತಂತ್ರವನ್ನನುಸರಿಸಿದರೆ. 'ಋಷ್ಯಶೃಂಗ'ದಲ್ಲಿ ದೊಡ್ಡಾಟದ ತಂತ್ರವಿದೆ. ಎರಡೂ ಜಾನಪದ ತಂತ್ರಗಳೇ: ಒಂದು ಕಾವ್ಯ, ಮತ್ತೊಂದು ನಾಟಕ. 'ಋಷ್ಯಶೃಂಗ'ದ ಹಾಡುಗಳೂ 'ಹೇಳ್ತೇನ ಕೇಳ'ದಂತೆಯೇ ಹೃದ್ಯವಾದ ಗೇಯಗುಣವನ್ನು ಪಡೆದಿದೆ. ಆದರೆ 'ಋಷ್ಯಶೃಂಗ'ದ ಕಾವ್ಯಗುಣ ಅದರ ನಾಟಕತ್ವವನ್ನು ಮರೆಸಿಬಿಡುವಂತಿದೆ: ಸಂಕೇತ ಮತ್ತು ಭಾಷೆಯ ಗೋಜಲಿನಲ್ಲಿ ಸಂಭಾಷಣೆಗಳು ದಿಕ್ಕು ತಪ್ಪಿದಂತಿವೆ: ಘಟನೆಗಳು ಚೆಲ್ಲಾಪಿಲ್ಲಿಯಾಗಿದ್ದು. ಅವೆಲ್ಲವನ್ನೂ ನಿಯಂತ್ರಿಸುವ ಕ್ರಿಯೆಯ ಏಕಸೂತ್ರತೆಯಿಲ್ಲವಾದುದರಿಂದ ನಾಟಕದ ರಚನೆ ಸಮಗ್ರವಾಗಿರುವಂತೆ ತೋರುವುದಿಲ್ಲ. ಆದರೂ. 'ಋಷ್ಯಶೃಂಗ'ದ ಪ್ರಯೋಗ ಇನ್ನೂ ಅರ್ಥಪೂರ್ಣವಾದ ಚರ್ಚೆಗೆ ಅವಕಾಶ ಮಾಡಿಕೊಡಬಹುದಾದುದರಿಂದ ಈ ಘಟ್ಟದಲ್ಲಿ ಯಾವುದೇ ತೀರ್ಮಾನಕ್ಕೆ ಬರುವುದು ಕಷ್ಟದ ಮಾತಾಗಿದೆ. ಸಮರ್ಥ ನಿರ್ದೇಶಕರಾರೂ ಈ ನಾಟಕದ ಪ್ರಯೋಗದತ್ತ ಗಮನ ಹರಿಸದಿರುವುದು ಅಚ್ಚರಿಯ ಸಂಗತಿಯಾಗಿದೆ.

'ಋಷ್ಯಶೃಂಗ'ದೊಂದಿಗೆ ಹೋಲಿಸಿದಾಗ **ನಾರ್ಸಿಸಸ್** ಹೆಚ್ಚು ನಿಖರವಾದ ಸ್ವರೂಪವನ್ನು ಹೊಂದಿದೆಯೆನ್ನಬೇಕು. ಕಂಬಾರರು ಈ ನಾಟಕದಲ್ಲಿ ಜಾನಪದವನ್ನು

---

[9] ಕೀರ್ತಿನಾಥ ಕುರ್ತಕೋಟಿ: 'ಋಷ್ಯಶೃಂಗ'ದ ಮುನ್ನುಡಿಯಲ್ಲಿ.

ತಂತ್ರಕ್ಕಾಗಿ ಬಳಸಿಕೊಳ್ಳದೆ, ವಿಧ್ಯುಕ್ತ ಕ್ರಿಯೆಗಾಗಿ ಬಳಸಿಕೊಂಡಿದ್ದಾರೆ; ಇಲ್ಲಿನ ಜೋಗಿತಿ ನಾಟಕದ ಪ್ರಮುಖ ಪಾತ್ರವಾಗಿದ್ದಾಳೆ.

ನಾರ್ಸಿಸಸ್ ನಾಟಕದ ನಾಯಕ ನಾಣಿ, ತನ್ನತನವನ್ನು ಆತ್ಮಾರಾಧನೆಯಲ್ಲಿ ಕಂಡುಕೊಳ್ಳಬಯಸಿದ ವಿಕೃತ ಮನಸ್ಸಿನ ವ್ಯಕ್ತಿ. ನಾಟಕ ಆರಂಭವಾಗುವುದೇ ಅವನ ಆತ್ಮಾರಾಧನೆಗೆ ಬಲಿಯಾದ ಹೆಣ್ಣುಗಳ ಆಕ್ರಂದನದೊಂದಿಗೆ. ನಾಣಿಯ ಸಹಾಯಕನಾದ ಭೀಮ್ಯಾ ಅವನ ಅಹಂಕಾರಕ್ಕೆ ಒತ್ತಾಸೆ ಕೊಡುವ ವ್ಯಕ್ತಿ: ನಾಣಿಯ ಪ್ರಭಾವಕ್ಕೆ ಒಳಗಾಗಿ ಬಂಧಿತನಾಗಿರುವವನು. ನಾಟಕದಲ್ಲಿ ಬರುವ ಇತರ ಹೆಣ್ಣುಗಳೆಲ್ಲಾ ನಾಣಿಯ ಆಸೆ ಅಥವಾ ಕಾಮಕ್ಕೆ ಪ್ರತಿನಿಧಿಗಳಾದರೆ, ದೇವದಾಸಿಯಾದ ಜೋಗಿತಿ ದೈವಿಕತೆಯ ಪ್ರತಿನಿಧಿಯಾಗಿದ್ದಾಳೆ. ಆಕೆ ಬಂದಾಗ ನಾಣಿ ಗುರುತಿಸದವನಂತಿರುತ್ತಾನೆ, ಬಳಿಕ ಗುರುತಿಸಿದರೂ ಹೀಯಾಳಿಸುತ್ತಾನೆ; ಕೊನೆಗೆ ಅವಳ ಪ್ರಭಾವದಿಂದ, ತಪ್ಪಿಸಿಕೊಳ್ಳಲು ಅವಳನ್ನು ಕೊಂದುಹಾಕುತ್ತಾನೆ. ಕೂಡಲೆ ಪೋಲೀಸರು ಬಂದು ಅವನನ್ನು ಬಂಧಿಸುತ್ತಾರೆ. ಬಾಲ್ಯದಲ್ಲಿ ಕಳೆದುಕೊಂಡ ನಾಣಿಯ ಆಪ್ತಸ್ನೇಹಿತ 'ನಾನು', ಗೊಂಬೆಯ ರೂಪದಲ್ಲಿ ನಾಣಿಗೆ ಸಿಕ್ಕರೂ ಅವರಿಬ್ಬರ ನಡುವೆ ಸಂವಾದ ಸಾಧ್ಯವಿಲ್ಲ; ಏಕೆಂದರೆ 'ನಾನು'ವಿನ ಭಾಷೆ ನಾಣಿಗೆ ಅರ್ಥವಾಗುವುದಿಲ್ಲ. ಈ ನಾಟಕದಲ್ಲಿ 'ನಾನು', ನಾಯಕನ ಬಾಲ್ಯದ ಮುಗ್ಧತೆಗೆ ಸಂಕೇತವಾಗಿದ್ದಾನೆ.

ಹೀಗೆ ಮುಗ್ಧತೆಯನ್ನು ಕಳೆದುಕೊಂಡು, ಅಹಂಕಾರ ಮತ್ತು ಆತ್ಮಾರಾಧನೆಯಲ್ಲಿ ತನ್ನತನವನ್ನು ಕಂಡುಕೊಳ್ಳಬಯಸುವ ನಾಣಿ, ದೈವಿಕತೆಯನ್ನು ತಿರಸ್ಕರಿಸಿದಾಗ, ದುರಂತಕ್ಕೆ ಈಡಾಗುತ್ತಾನೆ. ಜೋಗಿತಿಯನ್ನು ಒಪ್ಪಿಕೊಂಡ ಭೀಮ್ಯಾನಿಗೆ ನಾಣಿಯಿಂದ ಬಿಡುಗಡೆ ಮತ್ತು ಬದುಕಿನಲ್ಲಿ ನೆಮ್ಮದಿ ಸಿಗುತ್ತದೆ. ನಾಣಿ ತನ್ನ ಪಾಪಗಳ ಕಟ್ಟಿನಲ್ಲಿ ಸೆರೆಯಾಗಿ ಏಕಾಕಿಯಾಗುತ್ತಾನೆ.

'ನಾರ್ಸಿಸಸ್' ನಾಯಕನಾದ ನಾಣಿ ವ್ಯಕ್ತಿಯ ಒಂದು ನಿರ್ದಿಷ್ಟ ಮನಸ್ಥಿತಿಗೆ ಸಂಕೇತವಾಗಿದ್ದಾನೆ. ಈ ನಾಟಕದಲ್ಲಿ "ನಾವು ತಿಳಿದಿರುವ ರೀತಿಯ ಪಾತ್ರಪೋಷಣೆ ಇಲ್ಲ; ಯಥಾಪ್ರಕಾರದ ವೈಚಾರಿಕತೆ ಇಲ್ಲ. ಇವೆಲ್ಲವುಗಳಿಗಿಂತ ಆಳಕ್ಕೆ ಹೋಗಿ ಸಂಕೇತಗಳ ಮೂಲಕ ಕ್ರಿಯೆಯನ್ನು ನಡೆಸಿಯೂ ಮುಖ್ಯ ಘರ್ಷಣೆಗಳನ್ನು ಕಾಪಾಡಿಕೊಂಡು ಅತ್ಯಂತ ತೀವ್ರ ರೀತಿಯ ನಾಟಕತ್ವ ನೀಡಿರುವುದು ಇಲ್ಲಿಯ ಸಾಧನೆ."[10]

'ಋಷ್ಯಶೃಂಗ' ಮತ್ತು 'ನಾರ್ಸಿಸಸ್', ಎರಡು ನಾಟಕಗಳಲ್ಲಿಯೂ ಸಂಕೇತಗಳು ಹೆಚ್ಚು ವೈಯಕ್ತಿಕವಾಗಿರುವುದರಿಂದ, ನಾಟಕದ 'ಗತಿ'ಯನ್ನು ಹಿಂಬಾಲಿಸುವುದು ಒಮ್ಮೊಮ್ಮೆ ಕಷ್ಟವಾಗುತ್ತದೆ ಎಂಬ ಅಂಶವನ್ನು ಮರೆಯುವಂತಿಲ್ಲ.

**ಚಾಳೇಶ** ದಲ್ಲಿ ಕಂಬಾರರ ಭಾಷೆ ಹೆಚ್ಚು ಹದಗೊಂಡು ಕಾವ್ಯವಂತಿಕೆ ಕಮ್ಮಿಯಾಗಿದೆ. ಅತ್ಯಂತ ಸರಳವಾದ ರಂಗಭೂಮಿಯ ಮೇಲೆ ಈ ನಾಟಕವನ್ನು ಸಮರ್ಥವಾಗಿ ಪ್ರಯೋಗಿಸಲು ಸಾಧ್ಯವಿದೆಯೆಂದು ಈಗಾಗಲೇ ಮನವರಿಕೆಯಾಗಿದೆ.

10 ಪಿ. ಲಂಕೇಶ್ : 'ಪ್ರಸ್ತುತ'.

'ಚಾಳೇಶ'ದ ನಾಯಕ ಗೋವಿಂದ, ಒಂದು ಕಾಲದಲ್ಲಿ ಗುಬ್ಬಿ ಕಂಪನಿಯಲ್ಲಿದ್ದು ಸುಳ್ಳಿನ ತಳಹದಿಯ ಮೇಲೆ ತನ್ನ ಬದುಕನ್ನು ನಿರ್ವಹಿಸಿ, ಸಾಲಗಾರರ ತಗಾದೆ ಹೆಚ್ಚಿದಂತೆ ಪರಾರಿಯಾಗಿ ಅಜ್ಞಾತವಾಸಿಯಾಗಿರುವ ನಟ; ಬಣ್ಣದ ಚಾಳೇಶ ಧರಿಸಿ ತನ್ನ ಸೋಲನ್ನು ಮುಚ್ಚಲು ಯತ್ನಿಸುತ್ತಿದ್ದ ಕಾರುಭಾರಿ. ಆತನ ಸುಳ್ಳೇ ಮೂರ್ತಿವೆತ್ತು, ಅವನ ಮಗ, ಸೊಸೆ ಮತ್ತು ಜವಾನರ ವೇಷ ಧರಿಸಿ ಭೆಟ್ಟಿಯಾದಾಗ ಗೋವಿಂದ ಅಪ್ರತಿಭನಾಗುತ್ತಾನೆ. ಸಾವಿನ ಸಂಕೇತದಂತಿರುವ ಈ ಮೂವರು ಅವನ ಹೆಂಡತಿಯನ್ನು ಕೊಂದು, ನಯವಾಗಿ ಇವನನ್ನು ಗೋರಿಯಲ್ಲಿ ಹುಗಿಯುವ ಮೊದಲೇ ಈತ ತನ್ನ ಮುಖವಾಡವನ್ನು ಕಳಚಿಹಾಕಿ ಸತ್ಯವನ್ನು ಎದುರಿಸಿ, ಸಾವನ್ನು ಗೆಲ್ಲುತ್ತಾನೆ.

ಕುತೂಹಲಕಾರಿಯಾದ ಕತೆಯನ್ನು ಒಳಗೊಂಡು. ಪ್ರಹಸನದ ಧಾಟಿಯಲ್ಲಿ ಬದುಕಿನ ಆಳವಾದ ವಿಮರ್ಶೆ ನಡೆಸುವ ಈ ನಾಟಕದ ಮೊದಲ ಎರಡು ಅಂಕಗಳು ಸಮರ್ಥವಾದ ರೀತಿಯಲ್ಲಿ ರೂಪುಗೊಂಡಿದ್ದರೆ, ಮೂರನೆಯ ಅಂಕದಲ್ಲಿ ಗೋವಿಂದ ಇದ್ದಕ್ಕಿದ್ದಂತೆ ತಿರುಗಿಬೀಳುವ ಪ್ರಸಂಗದಲ್ಲಿ ತೀವ್ರವಾದ ನಾಟಕೀಯತೆಯ ಅಭಾವದಿಂದ ಸಪ್ಪೆಯಾಗಿಬಿಡುತ್ತದೆ.

"'ಚಾಳೇಶ' ಕಂಬಾರರ ಉಳಿದ ನಾಟಕಗಳಿಗಿಂತ ತೀರ ಭಿನ್ನರೀತಿಯಲ್ಲಿ ಕೊನೆಗೊಳ್ಳುತ್ತದೆ. ಋಷ್ಯಶೃಂಗ ವ್ಯಕ್ತಿಯ ದುರಂತವನ್ನು ಚಿತ್ರಿಸುತ್ತದೆ. ನಾರ್ಸಿಸಸ್ ಮನುಷ್ಯನ ಸೋಲನ್ನು ಖಚಿತಗೊಳಿಸುತ್ತದೆ. ಚಾಳೇಶ ಮಾತ್ರ ಸಾವಿನ ಭೀತಿಯನ್ನೂ, ಸೋಲನ್ನೂ ಮೀರಿ ಬಾಳನ್ನು ಹೊಸದಾಗಿ ಸ್ವತಂತ್ರವಾಗಿ ರೂಪಿಸುವ ಅಸ್ತಿತ್ವವಾದದ ಸಾಧ್ಯತೆಗಳನ್ನು ಸೂಚಿಸುತ್ತದೆ."[11] ನಾಟಕಕಾರರ ಆಶಯದ ಹಿನ್ನೆಲೆಯಲ್ಲಿ ಈ ಮಾತನ್ನು ಒಪ್ಪಬಹುದಾಗಿದೆ.

ಚಂದ್ರಕಾಂತ ಕುಸನೂರರ **ಮೂರು ಅಸಂಗತ ನಾಟಕಗಳು** ಕನ್ನಡ ರಂಗಭೂಮಿಯ ಸಧ್ಯದ ಸ್ಥಿತಿಯಲ್ಲಿ ಗಮನಿಸಬೇಕಾದ ಕೃತಿ. ಪಾಶ್ಚಾತ್ಯ ರಂಗಭೂಮಿಯಲ್ಲಿ ಅಸಂಬದ್ಧ ನಾಟಕಗಳಿಗೆ ನಿರ್ದಿಷ್ಟ ತತ್ವಗಳಿವೆ, ಪರಿಸರವಿದೆ. ಆದರೆ ನಮ್ಮ ಸಮಾಜದ ಮನೋಭೂಮಿಕೆಯಾಗಲೀ, ನಾಟಕಕಾರರ ಸಿದ್ಧತೆಯಾಗಲೀ, ರಂಗಭೂಮಿಯ ಪರಿಸ್ಥಿತಿಯಾಗಲೀ ಇನ್ನೂ ಪಾಶ್ಚಾತ್ಯ ಸ್ಥಿತಿಯನ್ನು ತಲಪಿಲ್ಲವೆಂದೇ ಹೇಳಬೇಕು. ಪಾಶಾತ್ಯ ಅಸಂಬದ್ಧ ನಾಟಕಕಾರರ ಪ್ರಭಾವ, ನಮ್ಮ ನಾಟಕಕಾರರ ಮೇಲಾಗಿದೆಯೆಂಬುದೇನೋ ನಿಜವಾದರೂ, ಅಸಂಬದ್ಧ ನಾಟಕಗಳು ನಮ್ಮಲ್ಲಿ ಇನ್ನೂ ಹುಟ್ಟಿಲ್ಲವೆಂದೇ ಹೇಳಬೇಕು.

ವಿವೇಕ ಮತ್ತು ತರ್ಕದಿಂದ ವಿವರಿಸಬಹುದಾದ ಜಗತ್ತು ಪರಿಚಿತವಾದದ್ದು. ಆದರೆ ಇದ್ದಕ್ಕಿದ್ದಂತೆ ಭ್ರಮೆಯನ್ನು ಕಳೆದುಕೊಂಡು ಕತ್ತಲೆ ಕವಿದ ಸ್ಥಿತಿಯಲ್ಲಿ ಮನುಷ್ಯ ತನಗೆ ತಾನೇ ಅಪರಿಚಿತನಾಗುತ್ತಾನೆ. ನೆನಪುಗಳಿಂದ ವಂಚಿತನಾಗಿ ನೆಲೆತಪ್ಪಿದ ಆತನಿಗೆ ಭವಿಷ್ಯದಲ್ಲಿ ಭರವಸೆ ಇಲ್ಲ. ಪರಂಪರೆ, ದೇವರು ಮತ್ತು ನೈತಿಕ ಮೌಲ್ಯಗಳಲ್ಲಿ ನಂಬಿಕೆಯನ್ನು ಕಳೆದುಕೊಂಡ ವ್ಯಕ್ತಿ, ಸಾವಿನ ಘೋರ ಸತ್ಯದೆದುರು, ಏಕಾಕಿಯಾಗಿರುವ

---

11 ಜಿ. ಎಸ್. ಆಮೂರ: 'ಪ್ರಜಾವಾಣಿ', 23-7-1972.

ಸನ್ನಿವೇಶವೊಂದರ ಚಿತ್ರವನ್ನೇ ಕುಸನೂರರ ಎಲ್ಲ ನಾಟಕಗಳಲ್ಲಿಯೂ ಕಾಣ ಬಹುದಾಗಿದೆ. ಆಟದ ಆನೆಯನ್ನು ಕಳೆದುಕೊಂಡು ಏಕಾಕಿಯಾದನೆಂದು ಭಾವಿಸುವ ಬಸವ, ಸಾಮ್ರಾಜ್ಯವನ್ನು ಕಳೆದುಕೊಂಡು ಏಕಾಕಿಯಾದೆನೆಂದು ಭ್ರಮಿಸುವ ಹುಚ್ಚ, ರಾಜಹಂಸವನ್ನು ಕಳೆದುಕೊಂಡ ಮುದುಕ– ಇವರೆಲ್ಲಾ ಬದುಕಿನ ನಿರರ್ಥಕತೆಯನ್ನು ಕಂಡುಕೊಂಡ, ನೆಲೆತಪ್ಪಿದ ವ್ಯಕ್ತಿಯ ಸ್ಥಿತಿಯನ್ನೇ ಪ್ರತಿನಿಧಿಸುತ್ತಾರೆ.

ಕುಸನೂರರ ನಾಟಕಗಳು ಈ 'ಅಸಂಬದ್ಧ' ವೈಚಾರಿಕ ತಳಹದಿಯ ಮೇಲೆ ಕಟ್ಟಿದ ಸುಸಂಬದ್ಧ ನಾಟಕಗಳು. ಈ ಸಂಕಲನದ ನಾಟಕಗಳಲ್ಲಿ ಅಸಂಬದ್ಧ ವಿಚಾರಗಳನ್ನು ವ್ಯಕ್ತ ಪಡಿಸುವ ಪಾತ್ರಗಳೆಲ್ಲಾ ಮನೋರೋಗಿಗಳಾಗಿರುವುದು ವಿಚಿತ್ರವಾಗಿದೆ. 'ಆನಿ ಬಂತಾನಿ' ಯ ಬಸವ, 'ಮನೆ'ಯ ಹುಚ್ಚ, 'ರೆಕ್ಕೆ'ಯ ಮುದುಕ, ಈ ಬಗೆಯವರಾಗಿರುವುದರಿಂದ– ವೈಚಾರಿಕವಾಗಿ ನಾಟಕಗಳು ಶಿಥಿಲಗೊಂಡಿವೆ; ತೀವ್ರವಾದ ನಾಟಕೀಯ ಪ್ರಜ್ಞೆಯ ಅಭಾವ ಮತ್ತು ಸಂಕೇತಗಳ ಗೊಂದಲ ಅದನ್ನು ಇನ್ನೂ ಹೆಚ್ಚಿಸುತ್ತದೆ. ಕ್ರಿಯಾತ್ಮಕ ಘಾದ ಸಂಭಾಷಣೆ ಮತ್ತು ವಾಸ್ತವವಾದ ಪಾತ್ರಗಳಿದ್ದಿದ್ದರೆ, ನಾಟಕಗಳು ಇನ್ನೂ ಪರಿ ಣಾಮಕಾರಿಯಾಗಿರಲು ಸಾಧ್ಯವಿತ್ತು. ಆದರೂ, ಪ್ರಯೋಗಗಳ ಬಗೆಗೆ ಕುತೂಹಲ ವನ್ನು ಉಳಿಸಿಕೊಳ್ಳುವಂತಹ ನಾಟಕಗಳನ್ನು ಕುಸನೂರರು ಬರೆದಿದ್ದಾರೆಂಬುದರಲ್ಲಿ ಸಂದೇಹವಿಲ್ಲ.

ತಲೆತಲಾಂತರದಿಂದ ದ್ವೇಷವನ್ನು ತೊಡೆದುಹಾಕಿ ಹಿಂದೂ ಮುಸ್ಲಿಂ ಮೈತ್ರಿಯ ತಳಹದಿಯ ಮೇಲೆ ಹೊಸ ಸಾಮ್ರಾಜ್ಯವನ್ನು ಕಟ್ಟಬಯಸಿದ ಹುಮಾಯೂನ್, ತನ್ನ ಗಂಡನನ್ನು ಕೊಂದವನ ಮಗನಾದರೂ ಹುಮಾಯೂನ್‌ನನ್ನು ಸೋದರನೆಂದು ಸ್ವೀಕ ರಿಸಿದ ಮೇವಾಡದ ರಾಜಮಾತೆ ಕರ್ಮಾವತಿ. ಇದಕ್ಕೆ ತದ್ವಿರುದ್ಧ ಭಾವನೆಗಳುಳ್ಳ ವಿಕ್ರಮಜಿತ್, ಬಹದ್ದೂರ್‌ಶಹ– ಮುಂತಾದವರ ನಡುವೆ ಆದ ಹೋರಾಟ ಮತ್ತು ಅದರ ದುರಂತ ಕತೆಯನ್ನು **ಸ್ನೇಹಸೂತ್ರ** ದಲ್ಲಿ ಹರಿಜಿತ್‌ರವರು ನಾಟಕರೂಪಕ್ಕೆ ಅಳವಡಿಸಲು ಪ್ರಯತ್ನಿಸಿದ್ದಾರೆ.

"ಈ ನಾಟಕ ನೂರಕ್ಕೆ ತೊಂಬತ್ತರಷ್ಟು ಐತಿಹಾಸಿಕ. ಇಲ್ಲಿ ಬರುವ ಹೆಸರುಗಳು, ಘಟನೆಗಳು, ಯುದ್ಧಗಳು, ವರ್ಣನೆಗಳು, ಮಾತುಕತೆಗಳು – ಎಲ್ಲವೂ ಐತಿಹಾಸಿಕ. ಕಲ್ಪನೆಗೆ ಇಲ್ಲಿ ಹೆಚ್ಚು ಸ್ವಾತಂತ್ರ್ಯವಿಲ್ಲ" ಎಂಬ ನಾಟಕಕಾರರ ಮಾತಿನಲ್ಲೇ ಈ ನಾಟಕದ ಸೋಲಿಗೆ ಕಾರಣವೂ ಇದೆ. ಅನೇಕ ಶತಮಾನಗಳ ಹಿಂದಿನ ಕತೆ, ಈ ಕಾಲದ ಪ್ರೇಕ್ಷಕರಿಗೆ ಪ್ರಸಕ್ತವೆನಿಸಬೇಕಾದರೆ, ಅದು ಕೇವಲ ಸಂಗತಿಸತ್ಯವಾದರೆ ಮಾತ್ರ ಸಾಲದು; ಅದು ಸಮಕಾಲೀನ ಬದುಕಿನೊಂದಿಗೆ ಸಂವಾದ ಪಡೆಯಬೇಕು: ಕಲಾತ್ಮಕವಾಗಿ ಅಭಿವ್ಯಕ್ತಿ ಪಡೆದಿರಬೇಕು. ನೂರಕ್ಕೆ ತೊಂಬತ್ತರಷ್ಟು ಇತಿಹಾಸವನ್ನು ನೇರವಾಗಿ ಓದಬೇಕೇ ಹೊರತು, ನಾಟಕರೂಪದಲ್ಲಿಯಲ್ಲ. ಐತಿಹಾಸಿಕ ಸಂಗತಿಗಳು, ಸಾಹಿತ್ಯರೂಪ ಪಡೆಯು ವಾಗ, ಅದರ ಧ್ವನಿಯನ್ನು ಮಾತ್ರ ಹಿಡಿದು, ವಿವರಗಳನ್ನು ಹಿನ್ನಲೆಗೆ ಸರಿಸಿದಾಗಲೇ ಉತ್ತಮ ಕೃತಿ ಮೈದಾಳುವುದು. 'ಸ್ನೇಹಸೂತ್ರ'ದಲ್ಲಿ ಇತಿಹಾಸ ಪ್ರಮುಖವಾಗಿ, ನಾಟಕಕ್ಕೆ ಗೌಣಸ್ಥಾನ ಸಿಕ್ಕಿದೆ. ಮೂರನೆಯ ಅಂಕವಂತೂ ಪೂರ್ತಿಯಾಗಿ ಐತಿಹಾಸಿಕ

ಸಂಗತಿಗಳ ಪ್ರತ್ಯಕ್ಷ ವಿವರಣೆಯನ್ನು ದೃಶ್ಯಗಳಾಗಿ ವಿಂಗಡಿಸಿ, ಸಂಭಾಷಣೆಯಲ್ಲಿ ನಿರೂಪಿಸಿದಂತಿದೆ.

ತಂತ್ರದ ದೃಷ್ಟಿಯಿಂದ, ದೃಶ್ಯದಿಂದ ದೃಶ್ಯಕ್ಕೆ ಬದಲಾಗುವ ಸ್ಥಳ ಮತ್ತು ಸನ್ನಿವೇಶಗಳು ರಂಗಸಜ್ಜಿಕೆಗೆ ಅಡಚಣೆಯನ್ನು ತಂದೊಡ್ಡಬಹುದಾದರೂ, 'ಪ್ರತೀಕಾತ್ಮಕ ರಂಗಸಜ್ಜಿಕೆ'ಯಿಂದ ನಿವಾರಿಸಿಕೊಳ್ಳಬಹುದು. ಅಲ್ಲದೆ, ಇದು ಮುಖ್ಯವಾಗಿ ರೇಡಿಯೋ ರೂಪಕವಾಗಿ ಬರೆದ ಕಾರಣ ಈ ಅಂಶಗಳು ಗೌಣವಾಗುತ್ತವೆಯೆಂದು ನಾಟಕಕಾರರು ಭಾವಿಸಿದ್ದಾರೆ. "ರೇಡಿಯೋ ನಾಟಕದಲ್ಲಿ ಕೂಡ, ಪರಿಸರ ನಿರ್ಮಾಣ, ಕ್ರಿಯೆ ಕೇಳುವವರ ಊಹೆಯನ್ನು ನೂರಕ್ಕೆ ತೊಂಬತ್ತೈದರಷ್ಟು ನಿರೀಕ್ಷಿಸುವಂತಿರಬಾರದು."[12]

ಪಾತ್ರಗಳ ಆಂತರಿಕ ಶೋಧನೆಗೆ ನಾಟಕಕಾರರು ಗಮನವನ್ನೇ ಕೊಟ್ಟಿಲ್ಲವಾದುದರಿಂದ, ಇಲ್ಲಿನ ವೈಚಾರಿಕತೆಗೆ ಪ್ರಚಾರದ ಧ್ವನಿ ಬಂದುಬಿಟ್ಟಿದೆ. "ಒಟ್ಟಿನ ಮೇಲೆ ಓದಿದಾಗ, ಇತಿಹಾಸದ ಹಲವು ಪುಟಗಳನ್ನು ಪುನರ್ ನಿರ್ಮಿಸುವುದರಲ್ಲಿ ಸೋತಿಲ್ಲ ಎಂಬುದು ಸಮಾಧಾನದ ಸಂಗತಿಯಾಗಿದೆ. ಇದು ರೇಡಿಯೋಕ್ಕೆಂದೇ ಬರೆದ ಕಾರಣ ಅದಕ್ಕೆ ತನ್ನದೇ ಆದ ಕೆಲವು ಮಿತಿಗಳಿವೆ. ಆದರೆ ನಿಜವಾದ ನಾಟಕ ಇಂಥ ಮಿತಿಯನ್ನು ಮೀರಿಯೂ ನಿಲ್ಲುವಂತಿರಬೇಕು."[13]

ವಿಜಯನಗರ ಸಾಮ್ರಾಜ್ಯವನ್ನಾಳಿದ ಕೃಷ್ಣದೇವರಾಯನ ಬದುಕಿನಲ್ಲಿ ನಡೆದ ಒಂದು ದುರಂತ ಸಂದರ್ಭದ ಹಿನ್ನಲೆಯನ್ನೊಳಗೊಂಡ ಏಕಾಂಕ ನಾಟಕವಾದ **ಕರ್ನಾಟಕ ರನೂರನುಣ** ವನ್ನು ರಚಿಸಿರುವ ನಾಟಕಕಾರ್ತಿ, ಕೆ. ಸರೋಜರಾವ್‌ರವರು ನಲವತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದು, ಅನುಭವ ಪಡೆದು, ನಾಟಕದ ಮಾಧ್ಯಮ ಕಾದಂಬರಿಗಿಂತ ಕ್ಲಿಷ್ಟತರವಾದದ್ದೆಂಬ ತೀರ್ಮಾನಕ್ಕೆ ಬಂದಿದ್ದಾರೆ.

ಕೃಷ್ಣದೇವರಾಯ, ಪರನಾಡಿನ ಮೇಲೆ ದಂಡೆತ್ತಿ ಹೋಗಿದ್ದ ಸಮಯದಲ್ಲಿ, ಅವನ ಮುದ್ದುಮಗ ತಿರುಮಲನನ್ನು ವಿಷವಿಟ್ಟು ಕೊಂದ ಕೊಲೆಯ ಆಪಾದನೆ ಅಮಾತ್ಯ ತಿಮ್ಮರಸರ ಮೇಲೆ ಬರುತ್ತದೆ. ನಿಜವಾದ ಕೊಲೆಗಾರನಾಗಿದ್ದ ಅಚ್ಯುತರಾಯನ ಮೋಸದಿಂದ ವಂಚಿಸಲ್ಪಟ್ಟ ಕೃಷ್ಣದೇವರಾಯನಿಗೆ, ವಸ್ತುಸ್ಥಿತಿಯ ಅರಿವಾಗುವಷ್ಟರಲ್ಲಿ ತಿಮ್ಮರಸರ ಕಣ್ಣು ಕೀಳಿಸಲಾಗಿರುತ್ತದೆ; ತಂದೆಯಂತೆ ಸಾಕಿದ ಅಮಾತ್ಯರನ್ನು ಹಿಂಸಿಸಿದ ಪಾಪದ ಹೊರೆ ಹೊತ್ತು ಪಶ್ಚಾತ್ತಾಪದಿಂದ ಕೃಷ್ಣದೇವರಾಯ ಬದುಕುವ ದುರಂತ ಸ್ಥಿತಿಯೊಂದಿಗೆ ನಾಟಕ ಮುಕ್ತಾಯಗೊಳ್ಳುತ್ತದೆ.

ಕೇವಲ ಒಂದು ಘಟನೆಯ ಸುತ್ತ, ಸನ್ನಿವೇಶ ಮತ್ತು ಪಾತ್ರಪೋಷಣೆಗಳು ಬೆಳೆಯುತ್ತಾ ಹೋಗುವುದರಿಂದ ನಾಟಕಕ್ಕೆ ಸಮಗ್ರತೆ ಬಂದಿದೆ. ಆದರೆ ನಾಟಕದ ವಸ್ತುವೇ ಕರುಣೆ, ಆಕ್ರೋಶ, ಪ್ರತೀಕಾರ, ಪಶ್ಚಾತ್ತಾಪ – ಮುಂತಾದ ಭಾವನೆಗಳ

---

[12] ಜಿ. ಎಸ್. ಶಿವರುದ್ರಪ್ಪ: 'ಸ್ನೇಹಸೂತ್ರ' ದ ಮುನ್ನುಡಿಯಲ್ಲಿ.

[13] ಅದೇ.

ಸಂಗಮವಾಗಿದ್ದು – ಸ್ವಲ್ಪ ಎಚ್ಚರ ತಪ್ಪಿದರೂ, ಭಾವಾತಿರೇಕದ ನಾಟಕವಾಗುವ ಸಂಭವವಿದೆ. ನಾಟಕಕಾರ್ತಿಯವರ ಉದ್ದೇಶವೂ ಭಾವನೆಗಳ ಅತಿರೇಕದ ಸೃಷ್ಟಿಯೇ ಆಗಿರುವುದರಿಂದ, ಎಲ್ಲ ಪಾತ್ರಗಳೂ ತಾರಕ ಸ್ವರದಲ್ಲಿ ಕೂಗಾಡುತ್ತವೆಯೇ ಹೊರತು, ಒಂದು ಕ್ಷಣ ನಿಂತು ಯೋಚಿಸುವುದಿಲ್ಲ. ಭಾವನೆಗಳ ಶೋಧನೆಗಿಂತ, ಪ್ರದರ್ಶನವೇ ನಮ್ಮ ಬಹುಪಾಲು ಜನಪ್ರಿಯ ಐತಿಹಾಸಿಕ ನಾಟಕಗಳ ಗುರಿಯಾಗಿರುವುದರಿಂದ ಅದಕ್ಕಿಂತ ಭಿನ್ನವಾಗಿರಲು ಯಾರೂ ಪ್ರಯತ್ನ ಪಡುವುದಿಲ್ಲ.

ಕಿತ್ತೂರ ರಾಣಿ ಚನ್ನಮ್ಮನ ಪರವಾಗಿ ಬ್ರಿಟಿಷರ ವಿರುದ್ಧ ಹೋರಾಡಿ, ಮಡಿದ ಸ್ವಾತಂತ್ರ್ಯಯೋಧ ಸಂಗೊಳ್ಳಿ ರಾಯಣ್ಣ ಮತ್ತು ಆತನ ಸಂಗಡಿಗರ ದುರಂತ ಕತೆಯನ್ನು **ಬಿಚ್ಚುಗತ್ತಿ** ನಾಟಕಕ್ಕೆ ಅಳವಡಿಸಿಕೊಳ್ಳುವಲ್ಲಿ ಬೇಲೂರು ಕೃಷ್ಣಮೂರ್ತಿಯವರು ಅದಕ್ಕೆ ಸಂಬಂಧಿಸಿದ ಲಾವಣಿ, ಸ್ಥಳಪುರಾಣಗಳನ್ನು ಸಾಕಷ್ಟು ಅಭ್ಯಸಿಸಿದ್ದಾರೆ; ನಮ್ಮ ಬಹುಪಾಲು ಐತಿಹಾಸಿಕ ನಾಟಕಗಳಂತೆ, ಈ ನಾಟಕವೂ ಒಂದು ಭಾವುಕ ನಾಟಕ. ಈ ನಾಟಕದ ಮತ್ತೊಂದು ವೈಶಿಷ್ಟ್ಯವೆಂದರೆ ದುರಂತದ ಗಾಂಭೀರ್ಯತೆಯನ್ನೂ ಕಾಪಾಡಿಕೊಳ್ಳದಿರುವುದು. ನಾಟಕದ ಅರ್ಧ ಭಾಗಕ್ಕೂ ಮಿಗಿಲಾಗಿ ಅವಕಾಶ ಪಡೆದಿರುವ ನಿಂಗನಗೌಡ ಮತ್ತು ವೆಂಕನಗೌಡರ ಅಸಂಬದ್ಧ ಸಂಭಾಷಣೆ, ಆಂಗ್ಲ ಕಲೆಕ್ಟರನ ಕನ್ನಡ ಭಾಷೆಯ ತಪ್ಪು ಉಚ್ಚಾರಣೆ–ಮುಂತಾದ ಲಘು ಸನ್ನಿವೇಶ ಕಲ್ಪನೆಗಳು ನಾಟಕದಲ್ಲಿ ರಂಜನೆಯ ಸಲುವಾಗಿಯೇ ಸೃಷ್ಟಿಸಲ್ಪಟ್ಟಿವೆಯೆಂದು ನಾಟಕಕಾರರೇ ಒಪ್ಪಿಕೊಂಡಿದ್ದಾರೆ. ಜನಪ್ರಿಯ ನಗೆನಾಟಕಕಾರರೆಂದು ತಮ್ಮ ಪ್ರಕಾಶಕರಿಂದ ಬೆನ್ನು ತಟ್ಟಿಸಿಕೊಂಡಿರುವ ಬೇಲೂರು ಕೃಷ್ಣಮೂರ್ತಿಯವರು ಗಂಭೀರ ನಾಟಕಗಳನ್ನು ಬರೆಯಬಾರದೆಂಬುದು ಈ ನಾಟಕದಲ್ಲಿ ಸ್ಪಷ್ಟಪಟ್ಟಿದೆ.

ಸಂಸರ 'ವಿಗಡ ವಿಕ್ರಮರಾಯ' ವನ್ನೇ ಆಶ್ರಯಿಸಿ **ಕಲಿಕಂಠೀರವ** ಎಂಬ ನಾಟಕವನ್ನು ರಚಿಸಿರುವ ಎನ್. ಎಸ್. ರಾವ್‌ರವರ ದಾರಿಯನ್ನೇ ಉಳಿದ ಚಿಕ್ಕಪುಟ್ಟ ನಾಟಕಕಾರರೂ ಅನುಸರಿಸಿದರೆ ನಾಟಕ ಬರೆಯುವುದು ಬಹು ಸುಲಭವಾಗುತ್ತದೆ. ಆಗಿ ಹೋದ ನಾಟಕಕಾರನೊಬ್ಬನನ್ನು ಹೊಗಳಿ, ಅವನ ಋಣವನ್ನು ಒಪ್ಪಿಕೊಂಡ ಮಾತ್ರಕ್ಕೆ ಯಾವುದೇ ಶ್ರೇಷ್ಠ ಕಲಾಕೃತಿಯನ್ನು ವಿರೂಪಗೊಳಿಸುವ ಅಧಿಕಾರ ಯಾರಿಗೂ ಬರುವುದಿಲ್ಲ. ಈ ನಾಟಕದಲ್ಲಿ ಸಂಸರನ್ನು ಇದ್ದಕ್ಕಿದ್ದಂತೆ ಪರಿವರ್ತಿಸಿಕೊಂಡಿರುವ ಕಡೆಯೇ ಅಲ್ಪಸ್ವಲ್ಪವಾದ ನಾಟ್ಯಗುಣವಿರುವುದು; ಉಳಿದದ್ದು ಆಭಾಸಕರ, ಇಲ್ಲವೇ ಭಾವುಕತೆಯ ಚರಮಸೀಮೆ ಮುಟ್ಟಿದೆ. ಮೂಲ ನಾಟಕದಲ್ಲಿ ಖಳನೂ ಸ್ವಾಮಿದ್ರೋಹಾಡಂಬರನೂ ಆದ ವಿಕ್ರಮರಾಯನ ಪಾತ್ರಕಲ್ಪನೆ, ಕನ್ನಡ ನಾಟಕ ಸಾಹಿತ್ಯಕ್ಕೇ ಸಂಸರು ಕೊಟ್ಟ ಒಂದು ಅಪೂರ್ವ ಕೊಡುಗೆ. ಖಳನಾಯಕನೇ ಅಲ್ಲಿ ದುರಂತನಾಯಕನಾಗಿದ್ದಾನೆ. ಅವನ ಸಾವು ವೀರೋಚಿತವಾಗಲಿಲ್ಲವೆಂದು ವೈರಿಯಿಂದಲೇ ಮರುಕಕ್ಕೆ ಪಾತ್ರನಾದ ವಿಕ್ರಮರಾಯನ ಪಾತ್ರಕ್ಕೆ ಈ ನಾಟಕದಲ್ಲಿ ದುರ್ಗತಿ ಒದಗಿದೆ. ಕಳ್ಳನಂತೆ ರಾತ್ರಿಯವೇಳೆ ಅರಮನೆಗೆ ನುಗ್ಗಿ ಕಂಠೀರವ ಮತ್ತು ರಾಜಮಾತೆಯರ ಕೊಲೆ ಮಾಡಲು ಹವಣಿಸುವ ಆತ ತನ್ನ ಅನುಯಾಯಿಯಿಂದಲೇ ಹತ್ಯೆಗೆ ಗುರಿಯಾಗುತ್ತಾನೆ. ಸಂಸರ ನಾಟಕದಲ್ಲಿ ಬರುವ ನಿರೀಶ

ಮುಂತಾದ ಗರಡಿ ಮನೆಯವರ ವೀರಾಡಂಬರ, ಅವರುಗಳು ಪೌರರನ್ನು ಕ್ರಮೇಣ ತಮ್ಮೆಡೆಗೆ ಒಗ್ಗೂಡಿಸಿಕೊಂಡದ್ದು ಮುಂತಾದ ಉತ್ತಮ ನಾಟಕೀಯ ಸನ್ನಿವೇಶ ಕಲ್ಪನೆಗಳನ್ನು ಇಲ್ಲಿ ಕೈಬಿಡಲಾಗಿದೆ. ಸಂಸರ ಗಂಡುಭಾಷೆಯ, ನಾಟ್ಯಧ್ವನಿಯಿಂದ ತುಂಬಿ ಸೂಸುವ ಸಂಭಾಷಣೆಗಳೊಡನೆ ಕಲಿಕಂಠೀರವದ ಕೆಲವು ಸಂಭಾಷಣೆಗಳನ್ನು ಹೋಲಿಸುವುದೇ ಅರ್ಥರಹಿತ ವಿಮರ್ಶೆಯಾದೀತು. ಆದರೆ ಬಹುಭಾಗ ಸಂಸರ ಸಂಭಾಷಣೆಗಳನ್ನು ಗದ್ಯಾನುವಾದ ಮಾಡಿರುವುದರಿಂದ ಒಂದು ಕ್ಷಣ ಅವಾಕ್ಕಾಗಿ ಗಮನಿಸುವಂಥ ಮನಸ್ಸೂ ಉಂಟಾಗುತ್ತದೆ.

**ಆತ್ಮಹತ್ಯೆ** ವೆಂಕಟೇಶ ಕುಲಕರ್ಣಿಯವರ ಒಂದು ಸಾಂಕೇತಿಕ ನಾಟಕ. "ಈ ನಾಟಕದಲ್ಲಿ ಬರುವ ಪಾತ್ರಗಳಿಗೆ ಬೇರೆ ಹೆಸರಿಲ್ಲ. ಇದರಲ್ಲಿ ಬರುವ ಯುವಕ ಇಂದಿನ ತರುಣ ಪೀಳಿಗೆಯ ಪ್ರತೀಕ. ಸತ್ಯದ ಹಿಂಬಾಲಕ. ಸಮಾಜ, ಸಂಪ್ರದಾಯ, ಧರ್ಮಗಳ ಎಳೆತ ಒಂದು ಕಡೆ; ಏತನ್ಮಧ್ಯೆ ಆತ 'ಕಿಂಕರ್ತವ್ಯ ಮೂಢ'ನಾಗಿದ್ದಾನೆ. ಸತ್ಯ ಏಕಪಕ್ಷೀಯವಾಗಿ ಯಾವ ನಿರ್ಣಯ ಕೈಕೊಂಡರೂ ಅದಕ್ಕೆ ಬೆಲೆಯಿಲ್ಲ. ಅಹಿಂಸೆಯಂತೂ ಹುಡುಗಾಟಕ್ಕೆ ಗುರಿಯಾಗಿದೆ. ಈ ಅಹಿಂಸೆಯ ಹೆಸರಿನಲ್ಲಿ, ತಾಳ್ಮೆಯ ಹೆಸರಿನಲ್ಲಿ ಏನೆಲ್ಲ ನಡೆಯಿತು, ಧೈರ್ಯವಿರದಿದ್ದರೆ ಇವೆರಡಕ್ಕೂ ಏನೂ ಬೆಲೆಯಿಲ್ಲವೆಂದು ಹೇಳುವುದೇ ನನ್ನ ಉದ್ದೇಶ"–ಎಂದು ನಾಟಕಕಾರರು ಹೇಳಿಕೊಂಡಿದ್ದಾರೆ. ನಾಟಕದಲ್ಲಿ "ಮಾನವ ಪಾತ್ರಗಳಿದ್ದು, ಅವು ಸತ್ವ, ಅಹಿಂಸೆ ಇವುಗಳಿಗೆ ಧ್ವನಿ ಪ್ರತಿಮೆಯಾಗುವ ಬದಲು, ಸತ್ಯ ಅಹಿಂಸೆ ಸಂಪ್ರದಾಯ ಇತ್ಯಾದಿ ಭಾವನೆಗಳೇ ಮನುಷ್ಯ ಪಾತ್ರಗಳಾಗಿ ಒಂದು ರೀತಿಯಲ್ಲಿ ವಾಚ್ಯ ಸಂಕೇತ ರೂಪವಾಗಿದೆ ನಾಟಕ".[14] ಅಲ್ಲದೆ, ಸ್ವರೂಪದಲ್ಲಿ ನಾಟ್ಯಗುಣಕ್ಕಿಂತ ಪ್ರಬಂಧಗುಣವೇ ಮೇಲುಗೈಯಾಗಿದೆ. ಆದರೂ ರೇಡಿಯೋ ರೂಪಕವಾಗಿರುವುದರಿಂದ ಪ್ರಯೋಗ ತಕ್ಕಮಟ್ಟಿಗೆ ಯಶಸ್ವಿಯಾದೀತೆಂದು ಭಾವಿಸಬಹುದಾಗಿದೆ.

ಅ. ನ. ಕೃ. ರವರ 'ಅಗ್ನಿಕನ್ಯೆ' ಎಂಬ ಕಥಾಸಂಕಲನದಲ್ಲಿರುವ ಕತೆಯೊಂದರ ಆಧಾರದ ಮೇಲೆ ರಚಿಸಲ್ಪಟ್ಟ **ರೊಟ್ಟಿ ಋಣ** ಎಂಬ ನಾಟಕ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ದುರಂತ ಸಂದರ್ಭವೊಂದನ್ನು ಚಿತ್ರಿಸುತ್ತದೆ. ನಾಟಕಕಾರರಾದ ಎನ್. ಎಸ್. ರಾವ್‌ರವರು, ಕತೆಯನ್ನು ನಾಟಕಕ್ಕೆ ಅಳವಡಿಸಿಕೊಳ್ಳುವಲ್ಲಿ ಸೂಕ್ತ ಬದಲಾವಣೆ ಮಾಡಿಕೊಂಡಿರುವುದಾಗಿ ಹೇಳಿದ್ದಾರೆ. ಸ್ವಾತಂತ್ರ್ಯ ಹೋರಾಟಗಾರ ದುಗ್ಗಪ್ಪನ ಸಾವಿನೊಂದಿಗೆ, ಪೋಲೀಸ್ ಇನ್‌ಸ್ಪೆಕ್ಟರ್ ವಿಷಕಂಠಯ್ಯನ ಮನಃಪರಿವರ್ತನೆಯೊಂದಿಗೆ ನಾಟಕ ಮುಗಿಯುತ್ತದೆ. ದುಗ್ಗಪ್ಪ ಮತ್ತು ವಿಷಕಂಠಯ್ಯನ ಪತ್ನಿ ಗಿರಿಜಮ್ಮನಿಗೆ ತಾಯಿ ಮಕ್ಕಳ ಸಂಬಂಧ ಆರೋಪಿಸುವುದು, ಇತ್ಯಾದಿ ಭಾವುಕಾಂಶಗಳಿದ್ದೂ ನಾಟಕ ದುರಂತ ರಮಣೀಯವಾಗಿದೆ.

'ಗ್ರಾಮೀಣ ಕಡೆಯ ಪ್ರೇಕ್ಷಕರು ಮತ್ತು ರಂಗಮಂದಿರ'ಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾಟಕ ರಚಿಸುತ್ತಿರುವುದಾಗಿ ಹೇಳಿಕೊಂಡಿರುವ ರಘುಸುತರ **ಲಾಯರ್ ರಾದ್ಧಾಂತ** ಎಂಬ ನಾಟಕ ಅವರೇ ಭಾವಿಸಿರುವಂತೆ ಬಾಲಿಶವಾಗಿದೆ. ಲಾಯರ್

---

[14] ವಿ. ಕೃ. ಗೋಕಾಕ್: 'ಆತ್ಮಹತ್ಯೆ' ಮುನ್ನುಡಿಯಲ್ಲಿ

ಮತ್ತು ಆತನ ಗುಮಾಸ್ತನೊಬ್ಬನ ಮರೆವಿನಿಂದಾಗಿ ಆದ ರಾದ್ಧಾಂತವೊಂದರ ಸುತ್ತ ಹಾಸ್ಯ ಸನ್ನಿವೇಶವೊಂದನ್ನು ನಿರ್ಮಿಸುವ ಸಲುವಾಗಿ, ಉದ್ದೇಶರಹಿತ ಸಂಭಾಷಣೆ ಮತ್ತು ಪಾತ್ರಗಳನ್ನು ಕಲ್ಪಿಸಿಕೊಂಡಿರುವ ಈ ನಾಟಕಕಾರರು ಜನಹಿತದೃಷ್ಟಿಯಿಂದ ಒಳ್ಳೆಯ ನಾಟಕಗಳಾವುವೆಂಬುದನ್ನು ನಿರ್ಧರಿಸಲು ಮುನ್ನುಡಿಯಲ್ಲಿ ಪ್ರಯತ್ನಪಟ್ಟಿದ್ದಾರೆ: "ಅರ್ಥವಾಗದ, ಅಸಂಬದ್ಧ, ಅನರ್ಥಕಾರೀ ಅಸಂಗತ ನಾಟಕಗಳ ರಚನೆಗಿಂತ, ಹೆಚ್ಚು ಜನ ಓದಿ ಅರ್ಥಮಾಡಿಕೊಂಡು ಸುಲಭ ರೀತಿಯಲ್ಲಿ ಅಭಿನಯಿಸಬಲ್ಲ ಸಾಮಾನ್ಯ ನಾಟಕಗಳನ್ನು ಬರೆಯುವುದು ಜನಹಿತದೃಷ್ಟಿಯಿಂದ ಒಳ್ಳೆಯದು," ಎಂಬ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತಾ, ಈ ಬಗೆಯ ನಾಟಕಗಳು, 'ಲಾಯರ್ ರಾದ್ಧಾಂತ'ದಂತಿರುವುದಾದರೆ, ಗ್ರಾಮೀಣ ಕಡೆಯ ಪ್ರೇಕ್ಷಕರು ಮತ್ತು ಶಾಲಾಬಾಲಕರ ಅಭಿರುಚಿಯ ಗತಿ ಏನಾದೀತೆಂಬುದರ ಬಗ್ಗೆ ಚಿಂತಿಸಬೇಕಾಗಿದೆ.

**ದಿವ್ಯದೃಷ್ಟಿ ಮತ್ತು ಇತರ ನಾಟಕಗಳು** ಎಂಬುದು ಮೂರು ಕಿರುನಾಟಕಗಳ ಒಂದು ಸಂಕಲನ. 'ದಿವ್ಯದೃಷ್ಟಿ' ಮತ್ತು 'ವೈಶಾಲಿನಿ' ಎಂಬ ನಾಟಕಗಳಲ್ಲಿ "ನಮ್ಮ ಸ್ತ್ರೀಯರ ತಾಳ್ಮೆ. ಶೀಲ, ದಯೆ ಮತ್ತು ತ್ಯಾಗಗಳನ್ನು ಹೃದಯಂಗಮವಾಗಿ" ಚಿತ್ರಿಸುವುದೇ ಲೇಖಕರ ಉದ್ದೇಶವಾಗಿದೆ. 'ಹುಚ್ಚ ಚೋರ'ದಲ್ಲಿ "ಎಲೆಯ ಮರೆಯ ಕಾಯಿಯಂತೆ ಸಾಮಾನ್ಯವಾಗಿ ಬೆಳಕಿಗೆ ಬರದ ಗ್ರಾಮದ ಉದಾರಿಯೊಬ್ಬನ ತ್ಯಾಗ ಶೀಲಗಳನ್ನು ಚಿತ್ರಿಸುವುದಕ್ಕೆ ಪ್ರಯತ್ನಿಸಲಾಗಿದೆ." ಆದರೆ ತ್ಯಾಗ, ಶೀಲ, ದಯೆ, ಸಂಸ್ಕೃತಿ –ಈ ಬಗೆಯ ಉದಾತ್ತ ಧ್ಯೇಯಗಳನ್ನಿಟ್ಟುಕೊಂಡ ಮಾತ್ರಕ್ಕೆ ಒಂದು ನಾಟಕ ಉತ್ತಮವೆನಿಸುವುದಿಲ್ಲವೆಂಬುದಕ್ಕೆ ರೇವಣಸಿದ್ದಪ್ಪನವರ ನಾಟಕಗಳು ಸಾಕ್ಷಿಯಾಗಿವೆ. ಅವಾಸ್ತವಿಕ ಪಾತ್ರಕಲ್ಪನೆ, ಭಾವಾತಿರೇಕದ ಸಂಭಾಷಣೆ, ನಂಬಲಸಾಧ್ಯವೆನಿಸುವ ಘಟನೆಗಳಿಂದ ಕೂಡಿದ ಇವರ ನಾಟಕಗಳನ್ನು ಓದುವುದೇ ದುಸ್ತರವೆನ್ನಿಸುತ್ತೆ. "ಇದನ್ನು ಓದಿದ ಸಮಸ್ತರೂ ಮುಖ್ಯವಾಗಿ ವಿದ್ಯಾರ್ಥಿ ವಿದ್ಯಾರ್ಥಿನಿಗಳೂ ಸ್ವಲ್ಪವಾದರೂ ನಮ್ಮ ಧರ್ಮ ಸಂಸ್ಕೃತಿಗಳ ಬಗ್ಗೆ ಆಸಕ್ತಿವಂತರಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ," ಎಂದಿರುವ ಲೇಖಕರ ಭಾವನೆಗಳನ್ನು ಅರ್ಥಮಾಡಿಕೊಳ್ಳಬಹುದಾಗಿದೆ.

**ಕಣ್ಣುಗಳು,** ಸೂ. ಸುಬ್ರಹ್ಮಣ್ಯಂರವರ ನಾಲ್ಕು ಚಿಕ್ಕ ನಾಟಕಗಳ ಸಂಗ್ರಹ; ಅವರೇ ಹೇಳಿಕೊಂಡಿರುವಂತೆ ಮೂರು ಪ್ರಹಸನ, ಒಂದು ವ್ಯಸನ. ಕಾಂಪ್ಲಿಮೆಂಟರಿ ಪಾಸಿನ ಆಸೆಗೆ ನಾಟಕ ನೋಡಲು ಹೋಗಿ ಮನೆಗೆ ಕನ್ನ ಹಾಕಿಸಿಕೊಂಡ ಶ್ರೀಮಂತನ ಬೇಸ್ತು, ಹೆಂಡತಿ ಊರಲ್ಲಿಲ್ಲದಾಗ ಸಂಸಾರವನ್ನು ಸುಧಾರಿಸಲಾಗದ ಗಂಡನ ಪರದಾಟ, ಹೆಂಡತಿಗೆ ಗೃಹಿಣೀ ಧರ್ಮವನ್ನು ಕಲಿಸಹೋಗಿ ಪೆಚ್ಚಾದ ಗಂಡ– ಈ ಬಗೆಯ ಸಾಮಾನ್ಯ ವಸ್ತುಗಳು ನಾಟಕಗಳಾಗಬೇಕಾದರೆ, ಮಾತುಮಾತಿಗೂ ನಗೆಯ ಬುಗ್ಗೆಯನ್ನೇ ಎಬ್ಬಿಸಬೇಕೆಂದು ನಾಟಕಕಾರರು ನಿರ್ಧರಿಸುವುದರಿಂದಲೂ, ಪ್ರಾಸಾನುಪ್ರಾಸಗಳ ಗೊಂದಲದಲ್ಲಿ ತೊಡಗಿಕೊಂಡಿರುವುದರಿಂದಲೂ, ಇಂಗ್ಲಿಷ್–ಕನ್ನಡ ಮಿಶ್ರಭಾಷೆ ಪ್ರಯೋಗಿಸಿದಷ್ಟಕ್ಕೆ ಕೈಲಾಸಂರಂತೆ ಬರೆದೆನೆಂದು ಭ್ರಮಿಸಿರುವುದರಿಂದಲೂ, ಓದುಗರ ಪಾಲಿಗೆ ಪ್ರಹಸನಗಳೇ ವ್ಯಸನಗಳಾಗುವ ಸಂಭವವಿದೆ.

'ಕಣ್ಣುಗಳು' ಸೂ. ಸು. ರವರ ಒಂದು ದುರಂತ ನಾಟಕ. ವಿಜಯನಗರದ ಅರಸು ಕೃಷ್ಣದೇವರಾಯ ತಾನು ರಾಜನಾಗುವುದಕ್ಕೆ ಮುಂಚೆ ತನ್ನ ಅಣ್ಣನ ದುರಾಸೆಗೆ ಬಲಿಯಾಗಿ ಕಣ್ಣು ಕಳೆದುಕೊಳ್ಳಬೇಕಾಗಿ ಬಂದಾಗ ಸಾಳುವ ತಿಮ್ಮರಸರಿಂದ ಉಳಿಯುತ್ತಾನೆ; ಆದರೆ ತಾನು ಅರಸನಾದ ಬಳಿಕ, ತಿಮ್ಮರಸರು ತನ್ನ ಮಗನ ಕೊಲೆಗಾರರೆಂದು ತಪ್ಪು ಕಲ್ಪನೆಗೊಳಗಾಗಿ ಅವರ ಕಣ್ಣು ಕೀಳಿಸುತ್ತಾನೆ. ಈ ಘಟನೆಯಲ್ಲಿರುವ ದುರಂತ ವ್ಯಂಗ್ಯ ಮಾರ್ಮಿಕವಾಗಿದೆ. ಆದರೆ ವಸ್ತುವಿಗೆ ಪೂರ್ಣಾವಧಿ ನಾಟಕವೊಂದರ ವ್ಯಾಪ್ತಿ ಇದ್ದು ಏಕಾಂಕವೊಂದರಲ್ಲಿ ಸಂಗ್ರಹಿಸಿದ್ದಾರೆ; ಪರಿಣಾಮವಾಗಿ ಪಾತ್ರಪೋಷಣೆ ಅಸಮಗ್ರವಾಗಿದ್ದು ನಾಟಕಕ್ಕೆ ಅವಸರದ ಮುಕ್ತಾಯ ಪ್ರಾಪ್ತವಾಗಿದೆ.

'ದಡಿಯಡಿಯಾಲ್ ಧನ್ವಂತರಿ' ಎಂಬ ತಮಿಳು ನಾಟಕವೊಂದರ ಕತೆಯ ಆಧಾರದ ಮೇಲೆ ಎಚ್. ಕೆ. ಸಿಂಹೇಗೌಡರಿಂದ ರಚಿಸಲ್ಪಟ್ಟಿರುವ **ಮುಯ್ಯಿಗೆ ಮುಯ್ಯಿ** ಸ್ವತಃ ಲೇಖಕರೇ ಹೇಳಿರುವಂತೆ ಒಂದು ನಗೆನಾಟಕ. ಗಂಡ ಹೆಂಡಿರಿಬ್ಬರ ಸರಸ–ವಿರಸದ ಸುತ್ತ ತಮಾಷೆಯಾಗಿ ಹಬ್ಬಿರುವ ಈ ನಾಟಕದ ರಚನೆ ಚಮತ್ಕಾರಿಕವಾಗಿದೆ.

ಎನ್ಕೆ ಶಂಕರಪ್ಪನವರ **ತೆರೆಯ ನುರೆಯಲ್ಲಿ** ಎಂಬ ನಾಟಕ ಸಾಮಾಜಿಕ ಉದ್ದೇಶವುಳ್ಳದ್ದು. ಸಮಾಜದ ಶೋಷಕವರ್ಗ ಮತ್ತು ಶೋಷಿತವರ್ಗದ ನಡುವೆ ಆದ ಹೋರಾಟ, ಪರಿಣಾಮವಾದ ದುಷ್ಟಶಿಕ್ಷೆ ಮತ್ತು ಶಿಷ್ಟರಕ್ಷೆ – ಈ ಬಗೆಯ ಉದ್ದೇಶಗಳನ್ನಿರಿಸಿಕೊಂಡಿರುವ ನಾಟಕಕಾರರ ಪಾತ್ರಕಲ್ಪನೆ ಅತ್ಯಂತ ಸರಳವಾದ ಸೂತ್ರದ ಮೇಲೆ ನಿಂತಿದೆ. ಒಳ್ಳೆಯವರು ಮತ್ತು ಕೆಟ್ಟವರು ಎಂದು ಎರಡು ಭಾಗವಾಗಿ ಪಾತ್ರಗಳನ್ನು ವಿಂಗಡಿಸಿಕೊಂಡಿರುವುದರಿಂದ, ಸಂಭಾಷಣೆಯ ಉಕ್ತಿವೈಚಿತ್ರ್ಯಗಳು, ಉದ್ದನೆಯ ಭಾಷಣಗಳು – ಇವೆಲ್ಲವುಗಳಿಂದ ಕಂಪನಿ ನಾಟಕಗಳ ಧಾಟಿ ಅದಕ್ಕಿದೆಯಾದರೂ ಉತ್ತಮ ಸಾಮಾಜಿಕ ಕಂಪನಿ ನಾಟಕಗಳೊಂದಿಗೆ ಹೋಲಿಸುವಂತೆಯೂ ಇಲ್ಲ.

ಇಬ್ಸೆನ್‌ನ 'ಡಾಲ್ಸ್ ಹೌಸ್' ನಾಟಕದಿಂದ ಸ್ಫೂರ್ತಿ ಪಡೆದು ತಾವು ಈ ನಾಟಕ ರಚಿಸಿದ್ದಾಗಿ **ದೇವರ ಗೊಂಬೆ**ಯ ಮುನ್ನುಡಿಯಲ್ಲಿ ವೈನತೇಯರು ಹೇಳಿಕೊಂಡಿದ್ದಾರೆ. ಇಬ್ಸೆನ್ ತನ್ನ ನಾಟಕವನ್ನು ಬರೆದಾಗ ತನ್ನ ಕಾಲದ ಸಾಮಾಜಿಕವಾದ ಒಂದು ಪರಿಸ್ಥಿತಿ ಅವನಿಗೆ ಸ್ಫೂರ್ತಿ ಕೊಟ್ಟಿತು. ತನ್ನ ಗಂಡನ ವಿರುದ್ಧ ಸಿಡಿದೆದ್ದ ನೋರಾ, ಅನಾದಿ ಕಾಲದಿಂದಲೂ ಶೋಷಣೆಗೆ ತುತ್ತಾದ ಸ್ತ್ರೀವರ್ಗವನ್ನೇ ಪ್ರತಿನಿಧಿಸುತ್ತಾಳೆ. ಗಂಡನಷ್ಟೇ ಸರಿಸಮಾನ ಜವಾಬ್ದಾರಿಯುಳ್ಳ, ಸ್ವತಂತ್ರ ಅರಿವನ್ನು ಪಡೆದಿರುವ ಹಕ್ಕು ಹೆಂಡತಿಗೂ ಇದೆ, ಅದನ್ನು ಒಪ್ಪದ ಗಂಡನನ್ನು ತಿರಸ್ಕರಿಸುವುದೇ ಸರಿಯಾದ ಮಾರ್ಗ ಎಂದು ಪ್ರತಿಪಾದಿಸುವುದಷ್ಟೇ 'ಡಾಲ್ಸ್ ಹೌಸ್'ನ ಗುರಿಯಲ್ಲ. ಮಾನವೀಯ ಸಂಬಂಧಗಳ ತಳಹದಿಯೇನು? ಪ್ರೀತಿಯ ಹೆಸರಿನಲ್ಲಿ ನಡೆಸುವ ಶೋಷಣೆಯೇ ಅಥವಾ ನೋರಾಳಂತೆ ತನ್ನ ಸ್ವಂತ ಬದುಕಿಗಾಗಿ ಎಲ್ಲವನ್ನೂ ತಿರಸ್ಕರಿಸುವುದೇ?–ಎಂಬುದಾಗಿದೆ. ಮಾನವೀಯ ಸಂಬಂಧಗಳು ಪರಸ್ಪರರನ್ನು ಕುರಿತ ಗೌರವ ಮತ್ತು ಅರಿವಿನ ಮೇಲೆ ನಿಂತಿರಬೇಕೇ ಹೊರತು ಸಾಮಾಜಿಕ ಕಟ್ಟುಪಾಡುಗಳ ಮೇಲಲ್ಲ ಎಂಬುದನ್ನೇ ವ್ಯಾಪಕವಾದ ಅರ್ಥದಲ್ಲಿ ಈ ನಾಟಕ ಸೂಚಿಸುತ್ತದೆ. 'ಡಾಲ್ಸ್ ಹೌಸ್'ನ ವಸ್ತು ದೇಶ

ಕಾಲಾತೀತವಾದದ್ದು. ಆದರೆ ವೈನತೇಯರು ನಮ್ಮ ದೇಶಕ್ಕೆ 'ಡಾಲ್ಸ್ ಹೌಸ್'ನ ವಸ್ತು ಅನ್ವಯಿಸುವುದಿಲ್ಲವೆಂದು ಭಾವಿಸಿ ಸರಳೀಕರಿಸಿದ್ದಾರೆ. ಈ ನಾಟಕದ 'ರೂಪ' ಅಚ್ಚ ಭಾರತೀಯ ಹೆಣ್ಣು; ಕರ್ಮಾಂತರ, ಜನ್ಮಾಂತರ, ದೇವರು ಮುಂತಾದ ನಂಬಿಕೆ ಯುಳ್ಳವಳು; ಗಂಡನ ಹಠ, ಅಪನಂಬಿಕೆ, ದಬ್ಬಾಳಿಕೆಯನ್ನು ಪ್ರತಿಭಟಿಸುವ ಯೋಚನೆ ಯನ್ನೂ ಆಕೆ ಮಾಡಲಾರಳು. ಪರಿಣಾಮವಾಗಿ ಆತನ ಒಣ ಆದರ್ಶಕ್ಕೆ ಬಲಿಯಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸಾಯುವಾಗ ತಾನು ಮಾಡದ ತಪ್ಪಿಗಾಗಿ ಕ್ಷಮೆ ಯಾಚಿಸಿ ಪತ್ರ ಬರೆದಿಡುತ್ತಾಳೆ. ಈ ಬಗೆಯ ಭಾವುಕತೆಯನ್ನು ಶ್ರೇಷ್ಠ ಆದರ್ಶವೆಂದು ಭಾವಿಸಿರುವ ವೈನತೇಯರು ಭಾರತೀಯ ಸ್ತ್ರೀಯರಿಗೆ ಮತ್ತು ಇಬ್ಸೆನ್ನನಿಗೆ ಕೂಡಿಯೇ ವಂಚಿಸಿದ್ದಾರೆಂದರೆ ತಪ್ಪಾಗಲಾರದು.

**ಬದುಕೇ ಬೃಂದಾವನ** ಎಂಬ, ವಿ. ಶ್ರೀನಿವಾಸರಾಯರ ನಾಟಕಕ್ಕೆ ನಾಡಿಗೇರ ಕೃಷ್ಣರಾಯರು ಮುನ್ನುಡಿ ಬರೆಯುತ್ತಾ ಹೀಗೆ ಹೇಳಿದ್ದಾರೆ: "ನಮ್ಮ ರಾಷ್ಟ್ರಕ್ಕೆ ಕಳಂಕ ಪ್ರಾಯವಾಗಿರುವ ಅತಿಸಂತಾನ ಹಾಗೂ ಕ್ಷಯರೋಗಗಳಿಂದಾಗುವ ಭೀಕರ ಪರಿಣಾಮ ವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಕ್ಷಯರೋಗವನ್ನು ಮನೆಯಲ್ಲಿಯೇ ಉಚಿತವಾಗಿ ಗುಣಪಡಿಸಲು ಸಾಧ್ಯವೆಂಬುದನ್ನು ಸಹ ತಿಳಿಸಿದ್ದಾರೆ. ಸಂಬಂಧಪಟ್ಟ ಇಲಾಖೆಗಳು ಈ ಕೃತಿಯ ಸದುಪಯೋಗ ಪಡೆಯಲೆಂದು ಹಾರೈಸುತ್ತೇನೆ." ಹೀಗೆ ಕುಟುಂಬ ಯೋಜನೆ, ಕ್ಷಯರೋಗ ನಿವಾರಣಾ ಸಂಸ್ಥೆ, ಲಂಚನಿರೋಧ ಇಲಾಖೆ– ಮೂರು ವಿಭಾಗಗಳವರೂ ಇದನ್ನೊಂದು ಪ್ರಚಾರ ನಾಟಕವನ್ನಾಗಿ ಬಳಸಿಕೊಳ್ಳಲು ಅನುಕೂಲವಾಗುವಂತೆ ಕತೆಯಿರುವ ನಾಟಕವನ್ನು ಬರೆದಿರುವ ಶ್ರೀನಿವಾಸರಾಯರಿಗೆ ಯಶಸ್ಸನ್ನು ಕೋರಿ ಧರ್ಮವೀರ, ವಿ. ವಿ. ಗಿರಿ ಮುಂತಾದವರು ಪತ್ರ ಬರೆದಿದ್ದಾರೆ. ಈ ನಾಟಕದ ವಿಚಾರಕ್ಕೆ ಇಷ್ಟು ವಿವರಗಳನ್ನು ಕೊಟ್ಟ ಮೇಲೆ, ಹೇಳಬೇಕಾದ್ದು ಏನೂ ಇಲ್ಲವೆಂದೇ ಎನಿಸುತ್ತದೆ. ಬದುಕಿನ ಲವಲೇಶ ಪರಿಚಯವನ್ನೂ ಮಾಡಿಕೊಡದ ಈ ಬಗೆಯ ನಾಟಕಗಳು ಮಾಡುವ ಪ್ರಚಾರದಿಂದ ಯಾರಿಗೆ ಲಾಭ? – ಎಂಬುದು ವಿಚಾ ರಾರ್ಹವಾಗಿದೆ.

**ಇನ್‌ಸ್ಪೆಕ್ಟರ್ ಅಪರಾಧಿಯೆ?** ಎಂಬುದು ಎನ್. ಶ್ರೀನಿವಾಸ್‌ರವರು ರಚಿ ಸಿರುವ ಪತ್ತೇದಾರಿ ನಾಟಕ. ದೃಶ್ಯದಿಂದ ದೃಶ್ಯಕ್ಕೆ ಕುತೂಹಲವನ್ನು ಬೆಳೆಸಿಕೊಂಡು ಹೋಗುವ ಈ ನಾಟಕದಲ್ಲಿ ಪತ್ತೇದಾರಿ ಸಿನೆಮಾ ಪ್ರಭಾವ ಹೆಚ್ಚಾಗಿರುವುದರಿಂದ ಅಲ್ಲಿನ ಕೆಲವು ಅಸಂಬದ್ಧ ಕಲ್ಪನೆಗಳು, ಮಸಾಲೆಗಳು ಇಲ್ಲಿಯೂ ತಲೆಹಾಕಿವೆ. ಪತ್ತೇ ದಾರಿ ನಾಟಕಗಳ ಅಭಾವವಿರುವ ಕನ್ನಡ ರಂಗಭೂಮಿಗೆ ಇನ್ನೂ ಉತ್ತಮ ನಾಟಕಗ ಳನ್ನು ಈ ನಾಟಕಕಾರರಿಂದ ನಿರೀಕ್ಷಿಸಬಹುದಾಗಿದೆ.

ಸಮಾಜವಿರೋಧಿಗಳು ಮತ್ತು ಸಮಾಜದ ಉದ್ಧಾರಕರು – ಹೀಗೆ ಎರಡು ಬಗೆಯ ಪಾತ್ರಗಳ ಗುಣ, ಶೀಲ ವೈದೃಶ್ಯ ಕಲ್ಪನೆಯೊಂದಿಗೆ ರಚಿತವಾಗಿರುವ, ಎಸ್.

ಸಿದ್ಧರಾಜುರವರ **ಸಮಾಜಕಲ್ಯಾಣ** ಎಂಬ ನಾಟಕ, ಮುನ್ನುಡಿಕಾರರು ಹೇಳಿರುವಂತೆ ಅನೇಕ ರಸಗಳಿಂದ ತುಂಬಿದೆ. ಇದರಲ್ಲಿ ಕುಡುಕತನವಿದೆ, ಹುಚ್ಚಾಟವಿದೆ, ಕಾಮುಕತೆಯಿದೆ, ಹೊಡೆದಾಟವಿದೆ, ವಂಚನೆಯಿದೆ, ಆದರ್ಶವಿದೆ; ಕೊನೆಗೆ, ಸತ್ಯಕ್ಕೆ ಜಯವಾಗುತ್ತದೆ. ಹೀಗೆ ಮನರಂಜನೆಯನ್ನು ಬಹುಸುಲಭವಾಗಿ ಒದಗಿಸಿರುವ ನಾಟಕಕಾರರ ವಾಕ್ಯರಚನೆಗಳೂ ಸಾಕಷ್ಟು ತಮಾಷೆ ಒದಗಿಸಬಲ್ಲವು.

ನೂರಿಪ್ಪತ್ತು ಪುಟಗಳ ಪೂರ್ಣಾವಧಿ ನಾಟಕವಾದ **ಬಾಳೇ ಬಂಗಾರ** ವನ್ನು ರಚಿಸಿರುವ ಕವಿತಾ ಕೃಷ್ಣರವರು 'ಸಮಾಜ ಕಲ್ಯಾಣ'ದ ಸಿದ್ಧರಾಜುರವರಂತೆಯೇ ಸಿನೆಮಾ ಪ್ರಭಾವದಿಂದ ನಾಟಕ ಬರೆಯುತ್ತಿದ್ದಾರೆ. ಈ ನಾಟಕದಲ್ಲಿ ಸಂಗೀತ, ಹಾಸ್ಯ, ನೃತ್ಯ, ಹೊಡೆದಾಟ. ಅಣ್ಣನ ಮೇಲೆ ತಮ್ಮಂದಿರ ಕ್ರೌರ್ಯ, ತಾಯಿಗೆ ಅನುತಾಪ, ಐಶ್ವರ್ಯದ ಮದದಲ್ಲಿದ್ದವರು ಬೀದಿ ಪಾಲಾಗುವುದು, ಕಾಮುಕರಿಗೆ ಅವಮಾನ – ಇವೆಲ್ಲವೂ ಇದೆ; ಕೊನೆಗೆ ಎಲ್ಲರೂ ಪಶ್ಚಾತ್ತಾಪದಿಂದ ಪುನೀತರಾಗಿ ಒಂದಾಗುತ್ತಾರೆ.

ಆದರ್ಶ ಮತ್ತು ವಂಚನೆಗಳ ಅತಿರೇಕವನ್ನೇ ಪಾತ್ರಗಳಿಗೆ ಆರೋಪಿಸುವ ಈ ಬಗೆಯ ನಾಟಕಕಾರರು ವಸ್ತುವಿಗೆ. ಜೀವನಕ್ಕಿಂತ ಸಾಮಾನ್ಯದರ್ಜೆ ಸಿನೆಮಾಗಳ ಕಡೆಗೆ ತಿರುಗುತ್ತಾರೆ. ನಾಟಕಕಾರರಿಗೆ ತೀರಾ ಅಗತ್ಯವಾದ ಸಾಮಾನ್ಯ ಸಿದ್ಧತೆಗಳೂ ಇವರಿಗೆ ಬೇಕಿರುವುದಿಲ್ಲ. ಕೇವಲ ಉತ್ಸಾಹವೊಂದೇ ಅವರ ಬಂಡವಾಳ.

ನಾಟಕದ ಸಂಭಾಷಣೆಯ ಗುರಿಯೆಲ್ಲಾ ತಮಾಷೆಯ ಕಡೆಗೇ ಇದ್ದು, ಅಸಂಬದ್ಧ ಮಾತುಕತೆ,ಮಿಶ್ರ ಭಾಷೆ ಮುಂತಾದ ಕಸರತ್ತುಗಳಿಂದ ರಂಜಿಸ ಹೊರಟಿರುವ **ಲಾಟ್ರಿ ಲಕ್ಷ್ಮಿ** ಎಂಬ ನಾಟಕ, ಕೆ. ಸರೋಜ ರಾವ್‌ರವರದು. "ಈ ನಾಟಕದಲ್ಲಿ ದಿಢೀರ್ ಹಣವಂತನಾಗುವ ಹಂಬಲದಿಂದ ಲಾಟರಿಯನ್ನು ನಂಬಿ ಕೊನೆಗೆ 'ಲಾಟರಿ' ಹೊಡೆದ ಬಡವನೊಬ್ಬನ ಚಿತ್ರವಿದೆ." ಉತ್ಪ್ರೇಕ್ಷೆಯ ಅತಿರೇಕವನ್ನೆಲ್ಲಾ ನಾಟಕಕಾರ್ತಿಯವರು ಮತ್ತು ಪ್ರಕಾಶಕರು ಕೂಡಿಯೇ ಸಮರ್ಥಿಸಿಕೊಂಡಿದ್ದಾರೆ. ಹಾಸ್ಯನಾಟಕದಲ್ಲಿ ಏನಿದ್ದರೂ ಸರಿ, ನಗಿಸಿದರೆ ಮುಗಿಯಿತು ಎಂಬ ಸೂತ್ರವನ್ನೇ ನಂಬಿರುವ ಈ ಬಗೆಯ ನಾಟಕಗಳು ಓದುಗರನ್ನು ನಗಿಸಲು ಹಾಕುವ ವರಸೆಗಳು ಬೇಸರವನ್ನು ತರುವಷ್ಟು ಅತಿರೇಕವನ್ನು ಮುಟ್ಟಿರುತ್ತವೆ.

ವಸಂತ ಕವಲಿಯವರ ನಾಲ್ಕು ಏಕಾಂಕಗಳ ಸಂಗ್ರಹವೇ **ಕಣ್ವ ಕೇಶನ್**. ರೇಡಿಯೊ ಪ್ರಸಾರವನ್ನೇ ಗಮನದಲ್ಲಿಟ್ಟುಕೊಂಡು ರಚಿಸಲ್ಪಟ್ಟಿರುವ ಈ ಚಿಕ್ಕ ನಾಟಕಗಳ ಪರಿಮಿತಿಯೂ ಅದೇ ಆಗಿದೆ. ನಾಲ್ಕು ನಾಟಕಗಳಿಗೂ ಪ್ರಸಿದ್ಧವಾದ ಪೌರಾಣಿಕ ವಸ್ತುಗಳನ್ನೇ ಆಯ್ದುಕೊಂಡು ಉಚಿತವೆನಿಸಿದಂತೆ ವ್ಯತ್ಯಾಸ ಮಾಡಿಕೊಂಡಿದ್ದಾರೆ. **ನಿಷ್ಕ್ರಾಂತಾ ಉರ್ವಶೀ** ಇವುಗಳಲ್ಲಿ ಉತ್ತಮ ನಾಟಕವೆನ್ನಬಹುದು. ಕಾಳಿದಾಸನ 'ವಿಕ್ರಮೋರ್ವಶೀಯ'ದಲ್ಲಿ ಪಾತ್ರಗಳೆರಡರ ಸಂಭಾಷಣೆಯಲ್ಲಿಯೇ ಮುಗಿದುಹೋಗಿರುವ 'ಲಕ್ಷ್ಮೀಸ್ವಯಂವರ ನಾಟಕ'ದ ಪ್ರಸಂಗವನ್ನೇ ದೃಶ್ಯಕ್ಕೆ ಅಳವಡಿಸಿರುವ ನಾಟಕಕಾರರ ಕಲ್ಪನೆ ಚೆನ್ನಾಗಿದೆ. ವಿಕ್ರಮೋರ್ವಶೀಯದ ಕತೆಯೆಲ್ಲವನ್ನೂ ಸಂದರ್ಭೋಚಿತವಾಗಿ ಪಾತ್ರಗಳ ಮೂಲಕ ವಿವರಿಸಿ ಹೇಳುವ ಹವ್ಯಾಸಕ್ಕೆ ನಾಟಕಕಾರರು ಕಟ್ಟುಬಿದ್ದಿರುವುದರಿಂದ ನಾಟಕೀ

ಯತೆಗೆ ಅಲ್ಲಲ್ಲಿ ಧಕ್ಕೆ ಬಂದಿದೆ. ಊರ್ವಶಿಯನ್ನು ಕುರಿತು ಅತ್ಯಂತ ಉದಾರವಾಗಿ ನಡೆದುಕೊಳ್ಳುವ ಇಂದ್ರನ ಪಾತ್ರಕಲ್ಪನೆ, ಉತ್ತಮ ಮಟ್ಟದಲ್ಲಿ ರೂಪು ಪಡೆದಿದೆ. ಕಾಳಿದಾಸನ ನಾಟಕವೊಂದನ್ನು ಅನುಸರಿಸಿ, ಅಲ್ಲಿನ ಸಂದರ್ಭವೊಂದರಲ್ಲಿ ಅಡಗಿದ್ದ ನಾಟಕೀಯ ಸಾಧ್ಯತೆಯನ್ನು ಬಹು ಜಾಣ್ಮೆಯಿಂದ ಬಳಸಿಕೊಂಡಿರುವ ಕವಲಿಯವರು 'ಕಣ್ವ ಕೇಶನ್' ಎಂಬ ಅಣಕುನಾಟಕದಲ್ಲಿ 'ಶಾಕುಂತಲ'ವನ್ನು ಆಧುನಿಕಗೊಳಿಸಲು ಯತ್ನಿಸಿದ್ದಾರೆ; ಈ ಪ್ರಯತ್ನ ತಮಾಷೆಯಾಗಿದೆಯೇ ಹೊರತು, ಯಶಸ್ವಿಯಾಗಿಲ್ಲ.

ಬಸವಣ್ಣನ ಜೀವನದಲ್ಲಿ ನಡೆದಿರಬಹುದಾದ ಘಟನೆಯೊಂದನ್ನಾಧರಿಸಿ ಕವಲಿಯವರು ರಚಿಸಿರುವ **ಕಳ್ಳ ಮತ್ತು ಬಲ್ಗಳ್ಳ** ಎಂಬ ನಾಟಕ ಹರಿಹರನ ರಗಳೆಯ ವಾಚ್ಯಾರ್ಥವಷ್ಟನ್ನೇ ಗಣನೆಗೆ ತೆಗೆದುಕೊಂಡಿದೆ. ಬಸವಣ್ಣನವರ ವಚನಗಳನ್ನು ಸಂಭಾಷಣೆಗೆ ಅಳವಡಿಸಿಕೊಳ್ಳಲು ನಾಟಕಕಾರರು ಪ್ರಯತ್ನಿಸಿದ್ದಾರೆ. ಆದರೆ, ನಿರ್ದಿಷ್ಟ ವಚನ ರಚನೆಗೆ ಪ್ರೇರಕವಾಗಿರಬಹುದಾದ ಸನ್ನಿವೇಶ ಸಂದರ್ಭಗಳನ್ನು ಕುರಿತು ಸ್ಪಷ್ಟ ಆಧಾರವಿಲ್ಲದಿರುವಾಗ, ಹೀಗೆ ಬಳಸಿಕೊಳ್ಳುವುದು ರಂಜಕವಾಗಬಹುದೇ ಹೊರತು ಉಚಿತವಾಗಲಾರದು. 'ಕಾವ್ಯಸಾರಥಿ' ಎಂಬ ಕವಲಿಯವರ ಮತ್ತೊಂದು ನಾಟಕ ಜಯದೇವ ಕವಿಯ ಬದುಕಿನ ಹಿನ್ನೆಲೆಯಲ್ಲಿ ಕಲ್ಪಿಸಿಕೊಂಡ ಚಿಕ್ಕ ಘಟನೆಯೊಂದನ್ನು ಪುನರ್ ನಿರ್ಮಿಸುತ್ತದೆ. ಕೇವಲ ಮಾತುಗಾರಿಕೆಯೇ ಬಂಡವಾಳವಾಗಿರುವ ಈ ನಾಟಕ ರೇಡಿಯೊ ರೂಪಕವಾಗಿ ಯಶಸ್ವಿಯಾಗಬಹುದು.

ನೇಮಿಚಂದ್ರನ 'ನೇಮಿನಾಥ ಪುರಾಣ'ದಲ್ಲಿ ಕಂಸನ ಕತೆ ಬರುವ ಕಾವ್ಯಭಾಗವನ್ನು ಆಶ್ರಯಿಸಿ **ಕಂಸ** ಎಂಬ ನಾಟಕವನ್ನು ಟಿ. ವಿ. ವೆಂಕಟಾಚಲಶಾಸ್ತ್ರಿಗಳವರು ರಚಿಸಿದ್ದಾರೆ. ಜೈನ ಪುರಾಣಗಳ ಪ್ರಭಾವದಿಂದ ದುರ್ಯೋಧನ, ರಾವಣ, ಕೀಚಕರಂಥ ಪಾತ್ರಗಳನ್ನು ಉದಾತ್ತಗೊಳಿಸಿ ಕನ್ನಡದಲ್ಲಿ ನಾಟಕ ಬರೆದ ಬಿ.ಎಂ.ಶ್ರೀ., ಸಿ. ಕೆ. ವೆಂಕಟರಾಮಯ್ಯ ಮತ್ತು ಕೈಲಾಸಂರವರ ಜಾಡಿನಲ್ಲಿಯೆ ಶಾಸ್ತ್ರಿಗಳೂ ಹೆಜ್ಜೆ ಇಟ್ಟಿದ್ದಾರೆ. ಆದರೆ ಶ್ರೀಯವರಾಗಲೀ ಕೈಲಾಸಂರವರಾಗಲೀ ಮೂಲತಃ ಶ್ರೇಷ್ಠ ನಾಟಕಕಾರರಾಗಿದ್ದುದರಿಂದ ಅವರು ವಸ್ತುವನ್ನು ಬದಲಾಯಿಸಿಕೊಂಡ ಬಗೆಗೆ ಭಿನ್ನಾಭಿಪ್ರಾಯವಿರಬಹುದೇ ಹೊರತು, ಅವರ ನಾಟಕಗಳ ಸತ್ವವನ್ನು ಕುರಿತಲ್ಲ. ವೆಂಕಟಾಚಲ ಶಾಸ್ತ್ರಿಗಳಿಗಾದರೋ ಜೈನ ಪುರಾಣಗಳಲ್ಲಿ ಕಂಡುಬರುವ ಕಂಸನ ಕತೆ ಹೇಳಲು ನಾಟಕ ಒಂದು ತಂತ್ರವಾಗಿ ಬಂದಿದೆ; ಪುಟಗಟ್ಟಲೆ ಬರುವ ನೀರಸ ಪದ್ಯ ಸಂಭಾಷಣೆಗಳೇ ನಾಟಕವೆನ್ನುವುದಾದರೆ ಅಡ್ಡಿಯಿಲ್ಲ.

ಯಲ್ಲೂರು ಉಮೇಶರಾಯರು **ಉತ್ತರಕುಮಾರ** ಎಂಬ ಪೌರಾಣಿಕ ನಾಟಕವನ್ನು ಚಿಕ್ಕ ಮಕ್ಕಳಿಗಾಗಿಯೇ ಬರೆದಿರುವುದಾಗಿ ಹೇಳಿಕೊಂಡಿದ್ದಾರೆಂದು ನಂಬಬೇಕಾಗಿದೆ. ಏಕೆಂದರೆ ಮಕ್ಕಳ ನಾಟಕದ ಯಾವ ಲಕ್ಷಣಗಳೂ ಇದರಲ್ಲಿಲ್ಲ. ಕುಮಾರವ್ಯಾಸ ಭಾರತದಲ್ಲಿ ಸೊಗಸಾದ ಹಾಸ್ಯಸನ್ನಿವೇಶಗಳಿಗೆ ಕಾರಣವಾಗುವ ಉತ್ತರನ ಕತೆ, ಇಲ್ಲಿ ತನ್ನ ಮೂಲದ ತೇಜಸ್ಸನ್ನು ಕಳೆದುಕೊಂಡು ವರದಿಯಾಗಿ ಪರಿಣಮಿಸಿದೆ. ಅಂತಃಪುರದಲ್ಲಿ ಉತ್ತರನ ಪೌರುಷ, ಯುದ್ಧರಂಗದಲ್ಲಿ ಪಲಾಯನ, ಗೆದ್ದ ಬೃಹನ್ನಳೆ ಮತ್ತು

ಪಾಂಡವರಿಗೆ ಸನ್ಮಾನ – ಹೀಗೆ ಮೂರು ದೃಶ್ಯಗಳಲ್ಲಿ ಕತೆಯನ್ನು ಅಳವಡಿಸಿಕೊಂಡು ರಚಿಸಿರುವ ಈ ನಾಟಕದಲ್ಲಿ ಕ್ರಿಯೆಗೆ ಸ್ಥಾನವೇ ಇಲ್ಲ; ಸಂಭಾಷಣೆಯ ಮೂಲಕವೇ ಕತೆ ಮುಂದುವರಿಯುತ್ತದೆ; ಅಲ್ಲಿನ ಸಂಭಾಷಣೆಗಳಲ್ಲೂ ನಾಟ್ಯಗುಣವಿಲ್ಲ. ಪೌರಾಣಿಕ ಕತೆಯೊಂದನ್ನು ಸಂಭಾಷಣೆಗೆ ಅಳವಡಿಸಿ ಹೇಳುವ ಶ್ರದ್ಧೆಯೇ ಬಹಳ ಮಹತ್ವದ್ದಿದ್ದರೆ ಇದು ನಾಟಕವಾಗುತ್ತಿತ್ತು.

**ಚಂಡಕೌಶಿಕ** ಮತ್ತು **ಮುದ್ರಾರಾಕ್ಷಸ** ಎಂಬ ಎರಡು ನಾಟಕಗಳನ್ನು ಮೂಲ ಸಂಸ್ಕೃತದಿಂದ ಕನ್ನಡಕ್ಕೆ ಗಣಪತಿ ಮೊಳೆಯಾರರು ಅನುವಾದಿಸಿದ್ದಾರೆ. ಆರ್ಯ ಕ್ಷೇಮೀಶ್ವರನ 'ಚಂಡಕೌಶಿಕ'ವನ್ನು ಈಗಾಗಲೇ ಬಸವಪ್ಪಶಾಸ್ತ್ರಿ, ದೇವಶಿಖಾಮಣಿ ಅಳಸಿಂಗರಾಚಾರ್ಯ, ಜಯರಾಯಾಚಾರ್ಯ, ಗೋಡಪಲ್ಲಿ ರಾಮಾಶಾಸ್ತ್ರಿಗಳು ಅನುವಾದಿಸಿದ್ದು, ವಿಶಾಖದತ್ತನ ಮುದ್ರಾರಾಕ್ಷಸವನ್ನೂ ಮೋ. ರಾಮಶೇಷಶಾಸ್ತ್ರಿಗಳು ಅನುವಾದಿಸಿದ್ದಾರೆ; ಪ್ರೊ॥ ತೀ.ನಂ.ಶ್ರೀಯವರ 'ರಾಕ್ಷಸನ ಮುದ್ರಿಕೆ'ಯೆಂಬ ಸಂಗ್ರಹಾನುವಾದವನ್ನೂ ಇಲ್ಲಿ ಗಮನಿಸಬಹುದು. ಬಸವಪ್ಪಶಾಸ್ತ್ರಿ, ದೇವಶಿಖಾಮಣಿ ಅಳಸಿಂಗರಾಚಾರ್ಯ, ತೀ. ನಂ. ಶ್ರೀಯವರ ಅನುವಾದಗಳು ಮೂಲನಾಟಕದ ಸತ್ವವನ್ನು ಬಹು ಸಮರ್ಪಕವಾಗಿ ಕನ್ನಡಿಸಿವೆಯೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[15]

"...ಇಂದು ಆಧುನಿಕ ರಂಗಭೂಮಿಯಲ್ಲಿ ಇನ್ನೂ ಹಲವಾರು ಬಗೆಯ ಹೊಸ ನಾಟಕಗಳ ಪ್ರಯೋಗಗಳೂ ನಡೆದಿವೆ. ಆದರೂ – ದೇಶೀಯವಾದ ಮತ್ತು ಪೂರ್ವಪರಂಪರೆಯ ನಾಟಕಗಳನ್ನು ನಾಡಿನ ಸಾಂಸ್ಕೃತಿಕ ದೃಷ್ಟಿಯಿಂದ ನಾವು ಉಳಿಸಿಕೊಳ್ಳಬೇಕಾಗಿದೆ. ಹೊಸಯುಗ ಬಂದಿದೆಯೆಂಬುದು ನಿಜವಾದರೂ ಪೂರ್ವಪರಂಪರೆಯ ಋಣವನ್ನು ನಾವು ಕಡಿದುಕೊಂಡೆವಾದರೆ ನಮ್ಮ ಕಲೆಗಳಿಗೆ ತಳಪಾಯವಿಲ್ಲವಾದೀತು. ಆ ದೃಷ್ಟಿಯಿಂದ ಅಲ್ಲೊಮ್ಮೆ ಇಲ್ಲೊಮ್ಮೆಯಾದರೂ ಜನ್ನ, ಕಾಳಿದಾಸ, ಭಾಸರ ನಾಟಕಗಳನ್ನು ಹಿಂದಿನ ತೆರದಲ್ಲಿ ಆಡುತ್ತ ಬರಬೇಕು"[16] – ಎಂಬುದನ್ನು ಸಂಪೂರ್ಣವಾಗಿ ಒಪ್ಪುತ್ತಾ, ಅನುವಾದಗೊಂಡಿರುವ ಕೃತಿಗಳು ರಂಗಪ್ರಯೋಗಕ್ಕೆ ಉಚಿತವಾಗಿವೆಯೇ ಎಂಬುದನ್ನು ಗಮನಿಸಬೇಕಾಗುತ್ತದೆ. ಕೇವಲ ಓದುನಾಟಕವಾಗಿಯೇ ಸಾರ್ಥಕ್ಯ ಪಡೆಯಬೇಕಾಗುವ ರೀತಿಯ ಕ್ಲಿಷ್ಟ ಅನುವಾದಗಳು ರಂಗಭೂಮಿಯ ಬೆಳವಣಿಗೆಗೆ ಯಾವುದೇ ಕೊಡುಗೆಯನ್ನು ಕೊಡಲು ಅಸಮರ್ಥವಾಗುತ್ತವೆ. ಗದ್ಯಕ್ಕೆ ಗದ್ಯ, ಪದ್ಯಕ್ಕೆ ಪದ್ಯ ಎಂಬ ಸೂತ್ರವಿಟ್ಟುಕೊಂಡು ಅನುವಾದಿಸಲ್ಪಟ್ಟಿರುವ 'ಚಂಡಕೌಶಿಕ'ದ ಭಾಷಾಶೈಲಿ ಸಂಸ್ಕೃತ ಭೂಯಿಷ್ಠವಾಗಿದ್ದು, ಅದನ್ನು ಪ್ರಯೋಗಿಸುವವರಿಗೆ ಸವಾಲಾಗಿ ಪರಿಣಮಿಸುತ್ತದೆ. 'ಚಂಡಕೌಶಿಕ'ದ ಅನುವಾದದೊಂದಿಗೆ 'ಮುದ್ರಾರಾಕ್ಷಸ'ದ ಅನುವಾದವನ್ನು ಹೋಲಿಸಿದರೆ ಭಾಷಾಂತರ ಇಲ್ಲಿ

---

15 ತ. ಸು. ಶಾಮರಾವ್: ಕನ್ನಡ ನಾಟಕ'.

16 ಶಿವರಾಮ ಕಾರಂತ : 'ಚಂಡಕೌಶಿಕ'ದ ಮುನ್ನುಡಿಯಲ್ಲಿ.

ಹೆಚ್ಚು ಲಲಿತವೂ ಸರಳವೂ ಆಗಿದೆಯಾದರೂ ಪುಟಗಟ್ಟಲೆ ಬರುವ ಸಂಭಾಷಣೆಗಳನ್ನು ಸಂಗ್ರಹಿಸಬಹುದಿತ್ತು. ಆಧುನಿಕ ರಂಗಭೂಮಿಯ ಆಗತ್ಯ ಮತ್ತು ಪ್ರೇಕ್ಷಕರ ಅಭಿರುಚಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಮೂಲ ನಾಟಕಕಾರನ ಆಶಯಕ್ಕೆ ಧಕ್ಕೆ ಬರದಂತೆ ಸೂಕ್ತ ಬದಲಾವಣೆಗಳೊಂದಿಗೆ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಅಳವಡಿಸುವ ಪ್ರಯತ್ನವನ್ನು ನಮ್ಮ ವಿದ್ವಾಂಸರು ಕೈಗೊಂಡರೆ. ರಂಗಭೂಮಿಯಲ್ಲಿ ಮತ್ತೆ ಸಂಸ್ಕೃತ ನಾಟಕಗಳು ಜೀವ ತಳೆಯುವುದರಲ್ಲಿ ಸಂದೇಹವಿಲ್ಲ. ಕೇವಲ ಪಂಡಿತರಂಜಕವಾದ ಅನುವಾದಗಳು ಪಠ್ಯಪುಸ್ತಕಗಳಾಗಿ ಶಾಲಾ ಕಾಲೇಜುಗಳ ಅಗತ್ಯವನ್ನು ಪೂರೈಸುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ.

ಸಮಕಾಲೀನ ಭಾರತೀಯ ರಂಗಭೂಮಿಯಲ್ಲಿ ಅಗ್ರಗಣ್ಯರಾದ ಬಾದಲ್ ಸರ್ಕಾರ್ ಅವರ **ಬಾಕಿ ಇತಿಹಾಸ** ವನ್ನು ಎನ್.ಎಸ್. ವೆಂಕಟರಾಮ್‌ರವರು ಅನುವಾದಿಸಿದ್ದಾರೆ. ಬದುಕಿನ ಅರ್ಥವೇನು? ಕಲೆಯ ಜಗತ್ತಿಗೂ, ವಾಸ್ತವ ಜಗತ್ತಿಗೂ ಇರುವ ಸಂಬಂಧವೆಂಥದು? ಎಂಬ ಪ್ರಶ್ನೆಗಳನ್ನು ಬಾದಲ್ ಸರ್ಕಾರ್‌ರವರು ತಮ್ಮ ನಾಟಕದಲ್ಲಿ ವಿಶ್ಲೇಷಿಸಿದ್ದಾರೆ.

ಶರದ್ ಮತ್ತು ವಾಸಂತಿಯರ ಬದುಕಿನಲ್ಲಿ ಅಕಸ್ಮಾತ್ ಒಂದು ದಿನ ಪರಿಚಿತನಾಗಿ ಮರೆವಿಗೆ ಸಂದಿದ್ದ ಸೀತಾನಾಥನ ಆತ್ಮಹತ್ಯೆಯನ್ನು ಪತ್ರಿಕೆಯಲ್ಲಿ ಓದಿದ ಗಂಡಹೆಂಡಿರು, ಅವನ ಆತ್ಮಹತ್ಯೆಗೆ ಕಾರಣವಾಗಿರಬಹುದಾದ ಹಿನ್ನೆಲೆಯನ್ನು ಊಹಿಸಿಕೊಂಡು ಒಂದೊಂದು ಕತೆ ಬರೆಯುತ್ತಾರೆ. ವಾಸಂತಿಯ ಕತೆ ಭಾವನಾಮಯವಾಗಿದ್ದರೆ ಶರದ್‌ನದು ವೈಚಾರಿಕವಾಗಿರುತ್ತದೆ. ಈ ಎರಡು ಕತೆಗಳೂ ನಾಟಕದಲ್ಲಿ ದೃಶ್ಯರೂಪವನ್ನು ಪಡೆದಿವೆ. ಮುಂದಿನ ದೃಶ್ಯದಲ್ಲಿ, ಸತ್ತ ಸೀತಾನಾಥನೊಂದಿಗೆ ಶರದ್‌ನ ಮುಖಾಬಿಲೆಯಾದಾಗ ಕತೆಗಳಿಗಿಂತ ಭಿನ್ನವಾದ ಕಾರಣಗಳಿಗಾಗಿ ಆತ ಆತ್ಮಹತ್ಯೆ ಮಾಡಿಕೊಂಡಿರುವುದು ಗೋಚರಿಸುತ್ತದೆ. ಶರದ್–ಸೀತಾನಾಥರ ಸಂವಾದ, ಈ ನಾಟಕದಲ್ಲಿ ಅತ್ಯಂತ ನಾಟಕೀಯ ಸಂದರ್ಭವಾಗಿದ್ದು, ನಾಟಕಕಾರನ ಜೀವನದೃಷ್ಟಿ ಅಲ್ಲಿ ವ್ಯಕ್ತವಾಗಿದೆ.

"ಮನುಷ್ಯ ಬದುಕಬೇಕು. ಇಲ್ಲ ಸಾಯಬೇಕು. ,ಮಾತು ಬಹಳ ಗೂಢವಾದದ್ದು; ತರ್ಕಶುದ್ಧವಾದದ್ದು. ಈ ತರ್ಕದಿಂದ ಉಂಟಾಗೋ ನಿಷ್ಕರ್ಷೆ ಯಾವುದು ಗೊತ್ತೇನು?"– ಎಂದು ಪ್ರಶ್ನಿಸುವ ಸೀತಾನಾಥ, ಅತ್ಯಂತ ಸರಳವಾಗಿ ತನ್ನ ಪ್ರಶ್ನೆಗೆ ತಾನೇ ಉತ್ತರಿಸಿಕೊಳ್ಳುತ್ತಾನೆ: "ಬದುಕೋಕಾಗದಿದ್ದರೆ ಸಾಯಬೇಕು." "ಬದುಕೋಕೆ ಯಾಕೆ ಸಾಧ್ಯವಿಲ್ಲ?" ಎಂಬ ಶರದ್‌ನ ಪ್ರಶ್ನೆಗೆ, "ನೀನು ಆತ್ಮಹತ್ಯೆ ಯಾಕೆ ಮಾಡಿಕೊಂಡಿಲ್ಲ?" ಎಂದು ಮರುಪ್ರಶ್ನೆ ಹಾಕುತ್ತಾನೆ. ಹೀಗೆ ಪ್ರಶ್ನೆ ಉತ್ತರಗಳ ಧಾಟಿಯಲ್ಲಿ ಮಾತುಕತೆ ಮುಂದುವರಿಯುತ್ತದೆ. ಸೀತಾನಾಥ ತನ್ನ ಆದ್ಯಂತ ವೃತ್ತಾಂತವನ್ನು ಹೇಳುತ್ತಾನೆ; ಆತನ ಕತೆ ಶರದ್‌ನ ಕತೆಯೂ ಆಗಿರುತ್ತದೆ; ಬದುಕಿಗೊಂದು ಅರ್ಥ ಹುಡುಕಲಾರದೆ, ಹಿಂಸೆಯಲ್ಲಿಯೇ ಮುಳುಗಿರುವ, ಜಗತ್ತಿನ ಅಸಹಾಯಕ ಇತಿಹಾಸವೂ ಆಗಿರುತ್ತದೆ. ಈ ವಸ್ತುಸ್ಥಿತಿಯನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ.

"...ಯಾರೂ ಏನೂ ಮಾಡಲಾರರು! ಅತ್ಯಾಚಾರ, ದಂಗೆ, ಯುದ್ಧ – ಎಲ್ಲ ನಡೀತಾನೇ ಇರುತ್ತೆ. ಇದೆಲ್ಲಾನೂ ಮಾಡೋದು ಮನುಷ್ಯಾನೆ! ಇಷ್ಟಾದರೂ ಮನುಷ್ಯ ಏನೂ ಮಾಡಲಾರ. ಎರಡು ಹೊತ್ತು ಹಾಯಾಗಿ ಊಟ ಮಾಡೋದ್ರಲ್ಲಿ ತೃಪ್ತಿ ಪಡೋ ಮನುಷ್ಯನೇ ಮತ್ತೊಬ್ಬನ ಹೊಟ್ಟೆಗೆ ಚಾಕು ಹಾಕ್ತಾನೆ. ಒಂದು ಜಂತುವಿನ ಪೀಡೆಯನ್ನು ಸಹ ಸಹಿಸದ ವಿಜ್ಞಾನಿಯೇ ಲಕ್ಷಾಂತರ ಜನರನ್ನು ನಾಶಮಾಡೋ ಅಸ್ತ್ರ ತಯಾರಿಸ್ತಾನೆ. ಇವರೆಲ್ಲಾ ಮನುಷ್ಯರೇ – ನಿನ್ನ ಹಾಗೆ, ನನ್ನ ಹಾಗೆ ಇವರೆಲ್ಲಾನೂ ಜೀವನಕ್ಕೆ ಒಂದು ಅರ್ಥ ಹುಡುಕಿಕೊಂಡು ಬದುಕೋಕ್ಕೆ ಪ್ರಯಾಸಪಡ್ತಾರೆ..."

"ಬದುಕೋ ವೇಷ ಕಟ್ತಾರೆ. ಅರ್ಥ ಯಾವಾಗ ಉಳೀಲಿಲ್ಲವೋ ಆಗ ಅಭ್ಯಾಸದ ಬದುಕು ನಡೆಸ್ತಾರೆ". "ಜೀವನದ ಅರ್ಥ ಕಳೆದುಹೋದ ಮೇಲೆ ಯೋಚಿಸ್ತಾರೆ– ಮತ್ತೆ ಒಂದು ದಿನ ಆ ಅರ್ಥ ತಮಗೆ ಸಿಗುತ್ತೇಂತ. ಬದುಕಿರೋದು ನಿಂತುಹೋದರೂ ಯೋಚಿಸ್ತಾ ಇರ್ತಾರೆ – ಮತ್ತೆ ಆರಂಭವಾಗುತ್ತೇಂತ! ಅವರಿಗೆ ಆಸೆ ಇರುತ್ತೆ."

ಸೀತಾನಾಥ ಸೂಕ್ಷ್ಮ ಸಂವೇದನಾಶೀಲನಾದುದರಿಂದ ಅರ್ಥವಿಲ್ಲದ ಬದುಕನ್ನು ಆತ್ಮಹತ್ಯೆಯಿಂದ ಕೊನೆಗೊಳಿಸುತ್ತಾನೆ; ಅಸಿಸ್ಟೆಂಟ್ ಪ್ರೊಫೆಸರನಾಗುವ ಆಸೆಯಲ್ಲಿ ಬದುಕುವ ಶರದ್, ಬದುಕಿಗೆ ಏನೋ ಅರ್ಥವಿದೆ ಎಂಬ ಭ್ರಮೆಯಲ್ಲಿಯೇ ತೊಳಲಾಡುತ್ತಾನೆ. ಸೀತಾನಾಥ ಸತ್ತು ಮುಕ್ತನಾಗಿದ್ದರೆ, ಶರತ್ ಬದುಕಿಯೂ ಸಾಯುತ್ತಾನೆ. ಸೀತಾನಾಥನ ಪಾತ್ರಕಲ್ಪನೆಯ ಮೂಲಕ ಪಾಶ್ಚಾತ್ಯ 'ಅಸಂಬದ್ಧ ತತ್ತ್ವ'ಗಳಿಗೆ ರೂಪು ಕೊಡಲು ನಾಟಕಕಾರರು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ. ಕನ್ನಡ ರಂಗಭೂಮಿಯ ಉತ್ತಮ ನಿರ್ದೇಶಕರಲ್ಲೊಬ್ಬರಾದ ಎಸ್. ಎಸ್. ವೆಂಕಟರಾಮ್‌ರವರ ಅನುವಾದದ ಭಾಷೆಯಲ್ಲಿ ರಂಗಪ್ರಜ್ಞೆಯಿದೆಯೆಂಬುದನ್ನು ಉದ್ಧರಿಸಿರುವ ಸಂಭಾಷಣೆಗಳಿಂದ ತಿಳಿದುಕೊಳ್ಳಬಹುದಾಗಿದೆ. ಮೂಲನಾಟಕದ ತಂತ್ರ ಮತ್ತು ಶೈಲಿಯನ್ನು ಅನುವಾದಕರು ಸಮರ್ಥವಾಗಿ ಹಿಡಿದಿರುವಂತಿದೆ.

"ಬಾದಲ್ ಸರ್ಕಾರರ ಈ ನಾಟಕದ ತೀರ ಮಹತ್ವದ ಅಂಶವೆಂದರೆ ನಾಟಕದ ಅಭಿವ್ಯಕ್ತಿಯ ಬಗ್ಗೆ ಇರುವ ಅವರ ನಿಷ್ಠೆ. ನಾಟಕದಲ್ಲಿ ಪಾತ್ರ–ವಸ್ತು ಸಂಬಂಧವನ್ನು ಈ ನಾಟಕ ಒಂದು ಮಟ್ಟದಲ್ಲಿ ವಿಡಂಬಿಸುತ್ತದೆ. ಆದರೆ ನಾಟಕದಲ್ಲಿ ವಸ್ತು ಇದೆ, ಪಾತ್ರಗಳೂ ಇವೆ. ಜೀವನದ ಸತ್ಯವನ್ನು ಪ್ರಶ್ನಿಸುವುದೇ ಆಗಲಿ, ಕಲೆಯ ಸತ್ವವನ್ನು ಪ್ರಶ್ನಿಸುವುದೇ ಆಗಲಿ ನಾಟಕದ ನಿಯಮಗಳಿಗೆ ಎಲ್ಲಿಯೂ ಭಂಗ ತರುವುದಿಲ್ಲ. ಸೀತಾನಾಥನ ದುರಂತ ಮತ್ತು ಶರದ್‌ನ 'ಕಾಮೆಡಿ' ಇವೆರಡನ್ನೂ ಒಳಕೊಂಡ ನಾಟಕದ ಆಕಾರ ಶಕ್ತಿಪೂರ್ಣವಾಗಿದೆ. ಇಲ್ಲಿ ಹಾಸ್ಯ ಕರುಣಗಳೆರಡೂ ಅಸಾಮಾಜಿಕ ಪ್ರವೃತ್ತಿಗಳಾಗಿರುವುದರಿಂದ ಎರಡೂ ಕೂಡಿಕೊಂಡು ಇಂದಿನ ಮೌಲ್ಯಸಂಕರವನ್ನು. ಸಾವಯುವ ಸಮಾಜದ ಅಸ್ತವ್ಯಸ್ತತೆಯನ್ನು ಸಬಲವಾಗಿ ನಿರೂಪಿಸುತ್ತವೆ." [17]

---

[17] ಕೀರ್ತಿನಾಥ ಕುರ್ತಕೋಟಿ: ಪ್ರಜಾವಾಣಿ, 19–3–1972.

"ನಿರ್ದೇಶಕರ ಕಲ್ಪನಾಸಾಮರ್ಥ್ಯ, ತಂತ್ರಕೌಶಲ್ಯದ ಬಳಕೆಗೆ ಈ ನಾಟಕದ ಪ್ರದರ್ಶನ ವಿಪುಲ ಅವಕಾಶ ನೀಡಬಲ್ಲುದು. ಕಲ್ಕತ್ತೆಯ 'ಬಹುರೂಪಿ' ತಂಡದವರು ಪ್ರದರ್ಶಿಸಿದಾಗ 'ಸೀತಾನಾಥ್–ಕನಕ'ರು, 'ಶರದ್–ವಸಂತಿ'ಯರ ಸ್ವಂತ ವ್ಯಕ್ತಿತ್ವಗಳ ಪ್ರತಿರೂಪವೆಂದು ಸಾಧಿಸಲು, ಶರದ್–ಸೀತಾನಾಥ್ ಪಾತ್ರಗಳನ್ನು ಒಬ್ಬನೇ ನಟ ಹಾಗೂ ವಾಸಂತಿ–ಕನಕರ ಪಾತ್ರಗಳನ್ನು ಒಬ್ಬಳೇ ನಟಿ ಅಭಿನಯಿಸಿದ್ದರು. ಮೂರನೆಯ ಅಂಕದಲ್ಲಿ ಬರುವ ಶರದ್–ಸೀತಾನಾಥರ ಸಂವಾದವನ್ನು ಪರಿಣಾಮಕಾರಿ ಬೆಳಕಿನ ಸಂಯೋಜನೆಯಲ್ಲಿ ತೋರಿಸಲಾಗಿತ್ತು." [18]

ಬೆಂಗಳೂರಿನಲ್ಲಿ ನಡೆದ ಪ್ರಯೋಗದಲ್ಲಿ ಸೀತಾನಾಥ್–ಶರದ್ ಮತ್ತು ಕನಕ–ವಾಸಂತಿಯರ ಪಾತ್ರಗಳನ್ನು ಪ್ರತ್ಯೇಕವೆಂದು ಅರ್ಥವಿಸಲಾಗಿತ್ತು. ಈ ಎರಡೂ ಬಗೆಯ ವ್ಯಾಖ್ಯಾನಗಳಿಗೆ ಸಾಧ್ಯತೆ ನಾಟಕದಲ್ಲಿದೆ.

ರಷ್ಯಾದ ಪ್ರಸಿದ್ಧ ಕತೆಗಾರನೂ ನಾಟಕಕಾರನೂ ಆದ ಚೆಕೊವ್ ಕ್ರಾಂತಿಪೂರ್ವ ರಷ್ಯನ್ ಸಾಹಿತ್ಯ ಕ್ಷೇತ್ರದ ಅಗ್ರಗಣ್ಯರಲ್ಲೊಬ್ಬ. ಸ್ಥಗಿತಗೊಂಡಿದ್ದ ಸಾಮಾಜಿಕ ಪರಿಸರದಲ್ಲಿ ಬದುಕುತ್ತಿದ್ದ ಆತ ತನ್ನ ನಾಟಕಗಳಲ್ಲಿ ಅವರ ದುರಂತಮಯ ರೋಗಿಷ್ಠ ಸ್ಥಿತಿಯನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ: ಆತನ **ಚೆರ‍್ರಿ ಹಣ್ಣಿನ ತೋಟ** ಜಗತ್ತಿನ ಶ್ರೇಷ್ಠ ನಾಟಕಗಳ ಸಾಲಿಗೆ ಸೇರುತ್ತದೆ. ಈ ನಾಟಕದಲ್ಲಿ ಸಾಮಾನ್ಯವಾದ ಒಂದು ಚೆರ‍್ರಿ ಹಣ್ಣಿನ ತೋಟದ ಸಂಕೇತದ ಮೂಲಕ ಬದಲಾಗುತ್ತಿರುವ ಮೌಲ್ಯಗಳ ಕಡೆ ಚೆಕೋವ್ ತನ್ನ ಗಮನ ಹರಿಸಿದ್ದಾನೆ. ಕ್ರಾಂತಿಪೂರ್ವ ರಷ್ಯನ್ ಸಮಾಜದಲ್ಲಿ ನಿಧಾನವಾಗಿ ಆಗುತ್ತಿದ್ದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳ ಪ್ರತಿನಿಧಿಯಾಗಿ 'ಚೆರ‍್ರಿ ಹಣ್ಣಿನ ತೋಟ' ಮತ್ತು ಅದರ ಒಡೆಯರು ದುರಂತಕ್ಕೆ ತುತ್ತಾಗುತ್ತಾರೆ, ನಾಟಕಕಾರ ನಿರ್ಲಿಪ್ತವಾಗಿ ವಸ್ತುಸ್ಥಿತಿಯನ್ನು ಪ್ರತಿಬಿಂಬಿಸಿದ್ದಾನೆ. ಹಳೆಯ ಸಂಪ್ರದಾಯದ ಕೊನೆಯೊಂದಿಗೆ ಉದಯವಾಗುವ ಹೊಸ ಯುಗದ ಮುನ್ಸೂಚನೆಯೊಡನೆ ನಾಟಕ ಮುಕ್ತಾಯಗೊಳ್ಳುತ್ತದೆ. ತಂತ್ರ, ಸಂಘರ್ಷ, ಕ್ರಿಯೆ ಮುಂತಾದ ನಾಟಕದ ಪ್ರಸಿದ್ಧ ಸೂತ್ರಗಳಿಗೆ ಬದ್ಧವಾಗದೆ ವಾಸ್ತವಿಕತೆಗೆ ಮನ್ನಣೆ ಕೊಟ್ಟ ಚೆಕೊವ್‌ನ 'ಚೆರ‍್ರಿ ಹಣ್ಣಿನ ತೋಟ', ದುರಂತ ನಾಟಕವೂ ಹೌದು, ವೈನೋದಿಕವೂ ಹೌದು. "ಒಳ್ಳೆಯದು ಮತ್ತು ಕೆಟ್ಟದ್ದನ್ನು ಕುರಿತಾಗಲಿ ಗೆಲುವು ಮತ್ತು ಸೋಲುಗಳನ್ನು ಕುರಿತಾಗಲಿ ತೀರ್ಪು ಕೊಡಲು ದೈವದ ದೃಷ್ಟಿಗೆ ಮಾತ್ರ ಸಾಧ್ಯ" ಎಂದಿರುವ ಚೆಕೊವ್‌ನ ಪಾತ್ರಗಳು ಜೀವಂತ ಪಾತ್ರಗಳು; ಕೇವಲ ಆದರ್ಶ ಅಥವಾ ದುಷ್ಟತನಕ್ಕೆ ಹೆಸರಾದ ಪಾತ್ರಗಳಿಗೆ ಅವನ ನಾಟಕದಲ್ಲಿ ಅವಕಾಶವೇ ಇಲ್ಲವೆನ್ನಬಹುದು.

ಪಡುಕೋಣೆ ರಮಾನಂದರಾಯರು ಚೆಕೋವ್‌ನ ಈ ಜಗತ್ಪ್ರಸಿದ್ಧ ನಾಟಕವನ್ನು ಮನೆಮಾತಿನ ಕನ್ನಡಕ್ಕೆ ಅನುವಾದಿಸಿದ್ದಾರೆ. ಭಾರತೀಯ ಪರಿಸರಕ್ಕೆ ಹೆಚ್ಚು ಸೂಕ್ತವಾಗಿ ಹೊಂದಿಕೊಳ್ಳುವ ಈ ನಾಟಕವನ್ನು ಶ್ರಮವಿಲ್ಲದೆ ರೂಪಾಂತರಿಸಬಹುದಾಗಿತ್ತಾದರೂ, ಇನ್ನೊಂದು ಸಮಾಜದ ಜೀವನದ ರೀತಿ ನೀತಿಗಳನ್ನು ಮಾರ್ಪಡಿಸದೆ ಅದರ

[18] ಎಸ್. ಎಸ್. ವೆಂಕಟರಾಮ್: 'ಬಾಕಿ ಇತಿಹಾಸ'ದ ಪರಿಚಯದಲ್ಲಿ.

ಪರಿಚಯ ಮಾಡಿಕೊಡುವುದು ಅನುವಾದಕರ ಉದ್ದೇಶವಿರುವಂತಿದೆ. ಮೂಲನಾಟಕದ ತಂತ್ರ ಮತ್ತು ರೀತಿಯನ್ನು ಬಹುಪಾಲು ಸಮರ್ಥವಾಗಿ ಉಳಿಸಿಕೊಂಡು ಬಂದಿರುವ ಈ ಅನುವಾದ ಸಾರ್ಥಕವೆನಿಸಬೇಕಾದರೆ ರಂಗಪ್ರಯೋಗಗಳಲ್ಲಿ ಫಲಿಸಬೇಕು. ಅನುವಾದ ಆಡುಭಾಷೆಗೆ ಹತ್ತಿರವಾಗಿದೆಯಾದರೂ ಕೆಲವೆಡೆ ನುಡಿಗಟ್ಟುಗಳನ್ನು ಕನ್ನಡಕ್ಕೆ ತದ್ವತ್ ಭಾಷಾಂತರಿಸುವುದು ಮತ್ತು ರೂಪಾಂತರಿಸುವುದರಿಂದ ತಮಾಷೆಯ ಅರ್ಥ ಪ್ರತೀತಿಗೆ ಅವಕಾಶವಾಗುತ್ತದೆ. ಆಕಸ್ಮಾತ್ತಾಗಿ ಕಾಣಸಿಗುವ ಈ ಬಗೆಯ ದೋಷಗಳ ಹೊರತು, ರಂಗಪ್ರಯೋಗಕ್ಕೆ ಅತ್ಯಂತ ಸೂಕ್ತವೆನಿಸಬಹುದಾದ ಅನುವಾದವನ್ನು ಪಡುಕೋಣೆಯವರು ಒದಗಿಸಿದ್ದಾರೆಂಬುದರಲ್ಲಿ ಎರಡು ಮಾತಿಲ್ಲ.

# ಸಣ್ಣ ಕಥೆ

## ಹು. ಕಾ. ಜಯದೇವ್

ಸಾಹಿತ್ಯಪ್ರಕಾರಗಳಲ್ಲೆಲ್ಲ ಸಣ್ಣಕಥೆ ಅತ್ಯಂತ ಜನಪ್ರಿಯ ಪ್ರಕಾರ ಎನ್ನುವುದು ನಿರ್ವಿವಾದ. ಆದ್ದರಿಂದ ಸಣ್ಣಕಥೆಗಳ ಸೃಷ್ಟಿ ಸಹಜವಾಗಿಯೇ ವಿಪುಲವಾಗಿರುತ್ತದೆ. ಹೀಗೆ ವಿಪುಲವಾಗಿ ಸೃಷ್ಟಿಯಾಗುವ ಸಣ್ಣಕಥೆಗಳೆಲ್ಲವೂ ಈ ಸಮೀಕ್ಷೆಯಲ್ಲಿ ಒಳಗಾಗಿಲ್ಲ. ಅದು ಸಾಧ್ಯವೂ ಅಲ್ಲ. ಪುಸ್ತಕ ರೂಪದಲ್ಲಿ ಹೊರಬಂದಿರುವ ಸಣ್ಣಕಥೆಗಳು ಮಾತ್ರ ಈ ಸಮೀಕ್ಷೆಗೆ ಒಳಗಾಗಿವೆ. ಇಲ್ಲೂ ಎಲ್ಲ ಪುಸ್ತಕಗಳೂ. ಕಥಾಸಂಕಲನಗಳೂ ಸಮೀಕ್ಷೆಗೆ ಒಳಗಾಗಿವೆ ಎಂದು ಧೈರ್ಯವಾಗಿ ಹೇಳಲಾಗದು. ಕಾರಣಾಂತರಗಳಿಂದ ಕೆಲವು ಕಥಾ ಸಂಕಲನಗಳು—ಉತ್ತಮವಾದವೂ ಕೂಡ – ಈ ಸಮೀಕ್ಷೆಯಿಂದ ಹೊರತಾಗಿರಬಹುದು. ಒಂದು ಅಗುಳಿನಿಂದ ಅನ್ನ ಬೆಂದಿದೆಯೊ ಇಲ್ಲವೊ ಎಂದು ನೋಡಲು ಸಾಧ್ಯವಾಗುವಂತೆ ಸಮೀಕ್ಷೆಗೆ ಒಳಗಾಗಿರುವ ಕಥಾಸಂಕಲನಗಳ ಮೂಲಕ ಕನ್ನಡ ಸಾಹಿತ್ಯದ ಸಮೀಕ್ಷೆಯನ್ನೇ ಮಾಡಬಹುದೇನೋ! ಇಲ್ಲಿ ಸಮೀಕ್ಷೆಗೆ ಒಳಗಾಗುವುದು ಕೇವಲ ಒಂದು ವರ್ಷದ ಸಣ್ಣಕಥೆಗಳಾದುದರಿಂದ ಯಾರೊಬ್ಬ ಸಣ್ಣಕಥೆಗಾರರ ಬಗ್ಗೆಯೂ, ಅವರ ಬೆಳವಣಿಗೆಯ ಬಗ್ಗೆ, ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಾಗಲಾರದು. ಸಮೀಕ್ಷೆಗೆ ಅನುಕೂಲವಾಗುವಂತೆ ಕಥಾಸಂಕಲನಗಳನ್ನು ಲೇಖಕಿಯರ ಕಥೆಗಳು, ಲೇಖಕರ ಕಥೆಗಳು, ಭಾಷಾಂತರಗಳು, ಪ್ರಾತಿನಿಧಿಕ ಸಂಕಲನಗಳು ಎಂದು ವರ್ಗೀಕರಣ ಮಾಡಿಕೊಳ್ಳಲಾಗಿದೆ. ಹೀಗೆ ವರ್ಗೀಕರಣವನ್ನು ಮಾಡಿಕೊಂಡಿದ್ದರೂ ಒಂದೊಂದು ಸಂಕಲನದ ವಿವರವಾದ ವಿಮರ್ಶೆಯನ್ನೂ ಆಯಾ ವರ್ಗದ ವಿಮರ್ಶೆಯಲ್ಲಿ ಲೇಖನದ ಕೊನೆಯಲ್ಲಿ ಸಮಗ್ರ ಸಣ್ಣಕಥೆಗಳ ವಿಮರ್ಶೆಯನ್ನೂ ಕೊಟ್ಟಿದೆ.

ಕ್ರಿ. ಶ. 10ನೆ ಶತಮಾನದ ಆದಿಯಲ್ಲಿ ಶಿವಕೋಟ್ಯಾಚಾರ್ಯನಿಂದ ವಿರಚಿತವಾದ 'ವಡ್ಡಾರಾಧನೆ'ಯ ಹೊಸಗನ್ನಡ ರೂಪವೆ ಆರ್. ಎಲ್. ಅನಂತರಾಮಯ್ಯನವರ **ವಡ್ಡಾರಾಧನ ಕಥಾಲೋಕ** ಮೂಲದ ಹತ್ತೊಂಬತ್ತು ಕಥೆಗಳನ್ನೂ ಯಥಾವತ್ತಾಗಿ ಚೊಕ್ಕವಾಗಿ ಹೊಸಗನ್ನಡಕ್ಕೆ ರೂಪಾಂತರಿಸಿದ್ದಾರೆ. ಗ್ರಂಥದ ಕೊನೆಯಲ್ಲಿ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತಹ ಗ್ರಂಥದ ಕರ್ತೃವಿನ ವಿಚಾರ, ಹೆಸರು, ವಸ್ತು, ಸಂವಿಧಾನ, ಧರ್ಮವಿಚಾರ, ಪಾತ್ರ, ಸನ್ನಿವೇಶ, ಕಥಾತಂತ್ರ, ಭಾಷೆ, ಶೈಲಿ, ಹಾಸ್ಯ, 10ನೆ ಶತಮಾನದಲ್ಲಿ ಅದರ ಸ್ಥಾನ, ಪಾರಿಭಾಷಿಕ ಪದಗಳ ಅರ್ಥಗಳನ್ನು ಕೊಟ್ಟಿದ್ದಾರೆ. ಇವೆಲ್ಲವೂ ಗ್ರಂಥದ ಉಪಯೋಗವನ್ನು ಇಮ್ಮಡಿಸಿವೆ. ಇಲ್ಲಿನ ಕಥೆಗಳಲ್ಲಿ ಬರುವ ಭವಾವಳಿ ತೊಡಕಿನವಾದುದರಿಂದ ಕಥೆಗಳ ಕೊನೆಯಲ್ಲಿ ಭವಾವಳಿಯನ್ನು ತೋರಿಸಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಜೈನಧರ್ಮೀಯರಿಗೂ ಸಾಹಿತ್ಯಾಭ್ಯಾಸಿಗಳಿಗೂ ಹೆಚ್ಚು ಉಪಯುಕ್ತವಾದ ಗ್ರಂಥ. ಇಂತಹ ಹಳಗನ್ನಡ ಕೃತಿಗಳ ಹೊಸಗನ್ನಡ ರೂಪಗಳು ಹೆಚ್ಚುಹೆಚ್ಚಾಗಿ ಬರುವಂತಾಗಲಿ ಎಂದು ಆಶಿಸಬಹುದು.

**ಜೈನಸಾಹಿತ್ಯದ ಕಥೆಗಳನ್ನು** ಡಿ. ಪದ್ಮನಾಭ ಶರ್ಮ ಅವರು ಬರೆದಿದ್ದಾರೆ. ಇದರಲ್ಲಿ ಇಪ್ಪತ್ತೈದು ಕಥೆಗಳಿವೆ. ನೇಮಿಜಿನೇಶ ಸಂಗತಿ, ವಡ್ಡಾರಾಧನೆ, ಮಹಾಪುರಾಣ, ಅನಂತನಾಥಪುರಾಣ ಮೊದಲಾದ ಕೃತಿಗಳಿಂದ ಕಥೆಗಳನ್ನು ಆರಿಸಿಕೊಳ್ಳಲಾಗಿದೆ. ಕಥೆಗಳು ಸರಳವಾಗಿ ನಿರೂಪಿತವಾಗಿವೆ. ಕೆಲವು ಕಥೆಗಳ ಕೊನೆಯಲ್ಲಿ ಕಥೆಯಿಂದ ಬೋಧೆಯಾಗುವ ತತ್ತ್ವವನ್ನು ಹೇಳಿದೆ. 'ಅಭಿಮಾನ ತ್ಯಾಗ', 'ವಾರಾಂಗನಾ ರತ್ನ', 'ಮನೆ ಮುರುಕ ಗೆಳೆಯ' (ಚಂಡಶಾಸನನ ಕಥೆ) – ಇವು ಹೃದ್ಯವಾಗಿವೆ. 'ವಡ್ಡಾರಾಧನೆ'ಯ ಒಂದು ಕಥೆಯನ್ನೇ ಎರಡು ಮೂರು ಪ್ರತ್ಯೇಕ ಕಥೆಗಳನ್ನಾಗಿ ಹೇಳಿದ್ದಾರೆ. ಉಪದೇಶಾತ್ಮಕವಾದ ಅನೇಕ ಪುಟ್ಟ ಕಥೆಗಳೂ ಇವೆ. ಜೈನಧರ್ಮೀಯರಿಗೆ ಪ್ರಿಯವಾಗುವ ಕೃತಿ ಇದು. ಜೈನಧಾರ್ಮಿಕ ಸಾಹಿತ್ಯದ ಸ್ಥೂಲ ಪರಿಚಯವೂ ಆಗುತ್ತದೆ.

'ವಡ್ಡಾರಾಧನ ಕಥಾಲೋಕ' ಮತ್ತು 'ಜೈನ ಸಾಹಿತ್ಯ ಕಥೆಗಳು' ಎರಡೂ ಜೈನ ಧರ್ಮದ ಕಥೆಗಳನ್ನು ಹೇಳುತ್ತವೆ. ಒಂದು ಹಳಗನ್ನಡ ಕೃತಿಯ ರೂಪಾಂತರವಾದರೆ ಮತ್ತೊಂದು ಸ್ವತಂತ್ರವಾದ ಕೃತಿ. ಹಳಗನ್ನಡ ಕೃತಿಗಳ ಹೊಸಗನ್ನಡ ರೂಪಗಳಿಗೂ. ಸ್ವತಂತ್ರವಾದ ಧಾರ್ಮಿಕ ಕಥೆಗಳಿಗೂ ಇವು ನಾಂದಿಯಾಗಲಿ ಎಂದು ಆಶಿಸಬಹುದು. ಪೌರಾಣಿಕ, ಧಾರ್ಮಿಕ ಕಥೆಗಳು ಹೆಚ್ಚುಹೆಚ್ಚಾಗಿ ಸೃಷ್ಟಿಯಾಗಬೇಕಾಗಿದೆ. ಅಂಥ ಕಥೆಗಳಲ್ಲಿ, ಅರ್ಥವಿಲ್ಲದ್ದೆಂದು ಅಂದುಕೊಂಡಿರುವ ಘಟನೆಗಳನ್ನು ಹೊಸದೃಷ್ಟಿಯಿಂದ ನೋಡುವ, ಅವುಗಳಲ್ಲಿರುವ ನಿಗೂಢವಾದ ಅರ್ಥವನ್ನು ವಿವರಿಸುವ ಕಾರ್ಯ ಇನ್ನೂ ನಡೆಯಬೇಕಾಗಿದೆ. ಅಂಥ ಕಥೆಗಳಿಂದ ಧರ್ಮದ ಬಗ್ಗೆ ಅಸಡ್ಡೆಯಿಂದಿರುವ ಇಂದಿನ ಪೀಳಿಗೆಗೆ ಧಾರ್ಮಿಕ ಪರಿಚಯ ಸ್ವಲ್ಪವಾದರೂ ಆದೀತು.

**ಪಂಚವಟಿ** ಎಂಬುದು ಐವರು ಪ್ರಸಿದ್ಧ ತೆಲುಗು ಲೇಖಕಿಯರ ಕಥೆಗಳ ಕನ್ನಡ ಅನುವಾದ. ಅನುವಾದಿಸಿರುವವರು ಎಂ. ಜಿ. ಭೀಮರಾವ್. ಈ ಸಂಕಲನದ ಮೊದಲ ಕಥೆ 'ಹುಣ್ಣಿಮೆಯ ನಸುಕಿನಲ್ಲಿ'. ಶ್ರೀಮಂತ ಕುಟುಂಬವೊಂದರಲ್ಲಿ ಈರ್ಷ್ಯಾಸೂಯೆಗಳು ಹೇಗೆ ನೆಮ್ಮದಿಯನ್ನು ಕಲಕುತ್ತವೆ ಎಂಬುದರ ಚಿತ್ರಣ ಈ ಕಥೆಯಲ್ಲಿ ಬಂದಿದೆ. ಎರಡು ಗಂಡು, ಒಂದು ಹೆಣ್ಣು– ಈ ತ್ರಿಕೋನ ತಂತ್ರವೂ ಈ ಕಥೆಯಲ್ಲಿ ಬಂದಿದೆ. ಕಥೆಯಲ್ಲಿ ಒಂದು ವರ್ಗವನ್ನು ಅತಿಕ್ರೂರರಾದ ರಾಕ್ಷಸರಂತೆಯೂ ಮತ್ತೊಂದು ವರ್ಗವನ್ನು ಸಾಧು ಸಜ್ಜನರಂತೆಯೂ ಚಿತ್ರಿಸಿದ್ದಾರೆ. ದುಃಖಾಂತವಾದ ಈ ಕಥೆ ಒಂದು ಮಟ್ಟದ ಸ್ತ್ರೀ ಓದುಗರ ಮೆಚ್ಚುಗೆಗೆ ಪಾತ್ರವಾಗಬಹುದು. 'ಮನೋರೋಗಕ್ಕೆ ಮದ್ದು' ಸುಂದರವಾದ ಒಂದು ಕಥೆ: ಹೆಣ್ಣಿನ ಮನಸ್ಸಿಗೆ ಹಿಡಿದ ಕನ್ನಡಿ. ವಾಸ್ತವಿಕ ನೆಲಗಟ್ಟಿನ ಮೇಲೆ ಕಥೆ ನಿಂತಿದೆ. 'ಜನ–ದನ' ಕಥೆಯಲ್ಲಿ ಬಡ ರೈತನ ಗೋಳನ್ನೂ ರೈತನಿಗೂ ದನಗಳಿಗೂ ಇರುವ ಸಂಬಂಧವನ್ನೂ ತಿಳಿಸಬೇಕೆಂಬುದು ಕಥೆಗಾರ್ತಿಯ ಇಚ್ಛೆ. ಅದಕ್ಕಾಗಿ ಅವರು ಪಟ್ಟಿರುವ ಪಾಡು ಅಷ್ಟಿಷ್ಟಲ್ಲ. ಕಥೆಗಾರ್ತಿ ಕಗ್ಗಾಡಿನಲ್ಲಿ ದಾರಿತಪ್ಪಿದ ವ್ಯಕ್ತಿಯಂತೆ ಬರಿದೇ ಬಳಲಿದ್ದಾರೆ. ಓದುಗರಿಗೆ ಬರಿಯ ಶ್ರಮ. 'ಮಳೆ ಬಂದ ದಿನ' ಶ್ರೀಮಂತರಾದರೂ ಭೋಗಿಸಲು ಕೇಳಿಕೊಂಡು ಬಂದಿರಬೇಕು ಎಂಬುದನ್ನು ತಿಳಿಸುವ ಕಥೆ. ಈ ತತ್ತ್ವವನ್ನು ತಿಳಿಸುವುದಕ್ಕಾಗಿ ಮೂರು ಜೋಡಿಗಳ (ಸಂಸಾರದ) ಚಿತ್ರವನ್ನು ಕಥೆಗಾರ್ತಿ

ತಂದಿದ್ದಾರೆ. ಮೊದಲನೆಯ ಜೋಡಿ ಜಯರಾಂ, ಸುನಂದ: ಶ್ರೀಮಂತರಾದರೂ ಅದನ್ನು ಅನುಭವಿಸಲಾರದವರು. ಮೆಚ್ಚಿ ಮದುವೆಯಾದ ಗಂಡನ ಬಗೆಗೇ ಸದಾ ಸಂಶಯದಿಂದ ನೋಡುವ ನಿತ್ಯರೋಗಿ ಸುನಂದ ತಾನು ಊಹಿಸಿಕೊಳ್ಳುವ ಎಲ್ಲವನ್ನೂ ಗಂಡನೆದುರಿಗೆ ಕೊಂಕುಮಾತುಗಳಿಂದ ಆಡಿ ಗಂಡನನ್ನೂ ನೋಯಿಸುತ್ತಾಳೆ. ಎರಡನೆಯ ಜೋಡಿಯಲ್ಲಿ ಎಲ್ಲಮ್ಮ ತನ್ನ ಗಂಡ ದುಡಿಯದವನಾದರೂ ಅಪಾರವಾಗಿ ಪ್ರೀತಿಸುತ್ತಾಳೆ. ಇಂತಹುದೇ ಮತ್ತೊಂದು ಜೋಡಿ. ಈ ಜೋಡಿಗಳ ಸಾದೃಶ್ಯ ವೈದೃಶ್ಯಗಳು ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿಲ್ಲ. ಹಲವು ಮಂದಿಗಳ ಮಾನಸಿಕ ತುಮುಲವನ್ನು ಒಂದೆಡೆ ಹಿಡಿದಿಡುವ ಪ್ರಯತ್ನವನ್ನಿಲ್ಲಿ ಕಾಣುತ್ತೇವೆ. ಕಥಾಶೀರ್ಷಿಕೆಗೂ ಕಥಾವಸ್ತುವಿಗೂ ಏನು ಸಂಬಂಧವೋ ತಿಳಿಯದು. 'ಬೆಲೆಯ ಅರಿವಾದಾಗ' ಈ ಕಥಾಸಂಕಲನದ ಉತ್ತಮ ಕಥೆ. ಕಲ್ಪನಾಜೀವಿಯಾದ ಮಂಜುಳ ಕಾಲಿಗೆ ಪೆಟ್ಟಾದ ನೆವದಲ್ಲಿ ಸದಾ ಗಂಡನನ್ನು ಪ್ರೇಮಪಾಶದಲ್ಲಿ ಕಟ್ಟಲು ಪ್ರಯತ್ನಿಸುತ್ತಾಳೆ. ಆದರೆ ಗಂಡನಾದವನು ಸದಾ ಹೆಂಡತಿಯ ಮುಂದೆ ಕುಳಿತಿರಲು ಸಾಧ್ಯವೆ? ಕಾರ್ಯಗೌರವದ ಮೇಲೆ ಗಂಡ ಶೇಖರ ಹೊರಗೆ ಹೋಗಿ ಮನೆಗೆ ನಿಧಾನವಾಗಿ ಬಂದಾಗ ಕೋಪಿಸಿಕೊಳ್ಳುತ್ತಾಳೆ. ಮೂರನೆಯ ದಿನ ಶೇಖರನು ಕಣ್ಣಿಗೆ ಪೆಟ್ಟುಬಿದ್ದು ಕಣ್ಣುಗಳಿಗೆ ಪಟ್ಟಿಕಟ್ಟಿಕೊಂಡು ಬಂದಾಗ ಅವನು ತೋರುವ ಸ್ಥೈರ್ಯವನ್ನು ಕಂಡು ತನ್ನ ಪ್ರೇಮದ ಬೆಲೆಯನ್ನು ಅರಿತುಕೊಳ್ಳುತ್ತಾಳೆ. ಕಥೆ ಸಂಭಾಷಣೆ ಮತ್ತು ನಿರೂಪಣೆಗಳೊಂದಿಗೆ ಎಲ್ಲಿಯೂ ನಿಲ್ಲದೆ ಸರಾಗವಾಗಿ ಸಾಗುತ್ತದೆ.

ಅನುವಾದಕರಾದ ಎಂ. ಜಿ. ಭೀಮರಾವ್ ಅವರು ಲೇಖಕಿಯರ ಪರಿಚಯ ಮಾಡಿಕೊಡುತ್ತಾ ಒಬ್ಬರ ಬಗ್ಗೆ 'ಅವರ ಕಥೆ ಕಾದಂಬರಿಗಳಿಗೆ ಎಷ್ಟೊಂದು ಬೇಡಿಕೆ ಇದೆ ಎಂದರೆ ಅವು ಅರ್ಧ ಹಂತದಲ್ಲಿರುವಾಗಲೇ ನಿರ್ಮಾಪಕರು ಹಣ ಕೊಟ್ಟು ಅವುಗಳನ್ನು ಕೊಳ್ಳುತ್ತಾರೆ' – ಎಂದು ತಿಳಿಸಿದ್ದಾರೆ. ಅವರ ಈ ಮಾತು ಎಲ್ಲ ಕಥೆಗಾರ್ತಿಯರಿಗೂ ಅನ್ವಯವಾಗುತ್ತದೆ ಎಂದರೆ ಅತಿಶಯೋಕ್ತಿಯಲ್ಲ. ಎಲ್ಲ ಕಥೆಗಳೂ ಸಿನಿಮೀಯವಾಗಿ ಅವಾಸ್ತವಿಕ ಘಟನೆಗಳಿಂದ, ಅಸಂಬದ್ಧ ನಿರೂಪಣೆಗಳಿಂದ ಕೂಡಿವೆ. ಇಂಥಾ ಕಥೆಗಳಿಂದ ಕನ್ನಡದ ಸಾರಸ್ವತ ಪ್ರಪಂಚಕ್ಕೆ ಏನೇನೂ ಪ್ರಯೋಜನವಿಲ್ಲ. ಇಂಥಾ ಕಥೆಗಳ ಅನುವಾದ ವ್ಯರ್ಥ ಶ್ರಮ. ವಸ್ತುವಿನಲ್ಲಾಗಲಿ, ತಂತ್ರದಲ್ಲಾಗಲಿ, ನಿರೂಪಣೆಯಲ್ಲಾಗಲಿ ಹೊಸತನವಿಲ್ಲದ ಇಂಥ ಕಥೆಗಳಿಂದ ಏನು ಪ್ರಯೋಜನ? ಸಿನಿಮೀಯ ಶೈಲಿಯ ಈ ಕಥೆಗಳನ್ನು 'ಕನ್ನಡದ ಕಲಾಕುವರಿ ಕನ್ನಡಿಗರ ಅಚ್ಚುಮೆಚ್ಚಿನ ಮಿನುಗುತಾರೆ ಕುಮಾರಿ ಕಲ್ಪನಾರವರಿಗೆ' ಅರ್ಪಿಸಿರುವುದು ಉಚಿತವಾಗಿದೆ. ಅನುಪಮಾ ನಿರಂಜನ ಅವರು ಇದಕ್ಕೆ ಮುನ್ನುಡಿ ಬರೆದಿದ್ದಾರೆ. ಭಾಷಾಂತರದ ಉಪಯೋಗವನ್ನು ಕುರಿತ ಕೆಲವು ಮಾತುಗಳೂ, ಹಾಗೇ ಈ ಕಥಾಸಂಕಲನದ ಕಥೆಗಳ ಬಗ್ಗೆ ಒಂದೊಂದು ವಾಕ್ಯದ ವಿಮರ್ಶೆ ಮಾಡಿರುವ ಅವರ ವಿಮರ್ಶೆಯೂ ಪಕ್ಷಪಾತದಿಂದ ಕೂಡಿದ್ದು ಎನ್ನದೆ ನಿರ್ವಾಹವಿಲ್ಲ. ಏಕೆಂದರೆ ಮೂಲ ಕಥೆಗಾರರು ಲೇಖಕಿಯರು. ಕೊನೆಯದಾಗಿ 'ಪಂಚವಟಿ' ಎಂಬ ಈ ಕಥಾಸಂಕಲನದಲ್ಲಿ ಆ ಹೆಸರಿನ ಕಥೆ ಇಲ್ಲ. ಪಂಚವಟಿಗೆ ಬೇರೆ ಯಾವುದಾದರೂ ಸಂಕೇತಾರ್ಥ, ಧ್ವನ್ಯರ್ಥ ಇದೆಯೊ ಏನೊ ತಿಳಿಯದು.

**ಕಥಾಭಾರತಿ ಹಿಂದೀ ಕಥೆಗಳು** ಹದಿನೈದು ಕಥೆಗಳ ಸಂಕಲನ. ಕಥೆಗಳನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿರುವವರು ಎಂ. ಎಸ್. ಭಾರದ್ವಾಜ್. ಈ ಸಂಕಲನದ ಬಹುತೇಕ ಕಥೆಗಳು ಮಧ್ಯಮ ವರ್ಗದ ಅಥವಾ ತೀರ ಕೆಳವರ್ಗದ ಅಂದರೆ ಅನಾಗರಿಕ ಬುಡಕಟ್ಟಿನ ಜನರ ಕಥೆಗಳು. ಇದಕ್ಕೆ ಅಪವಾದವಾದ ಕಥೆಗಳೂ ಇವೆ: ಉದಾಹರಣೆಗೆ 'ಪರಕೀಯ ಸುಖ.'

'ಅವಳ ಕೋರಿಕೆ' ಎರಡನೆ ಮಹಾಯುದ್ಧದಲ್ಲಿ ಹೋರಾಡಿ ಮಡಿದ ಲಹನಾ ಸಿಂಗನ ಕಥೆ. ತಾನು ಬಾಲಕನಾಗಿದ್ದಾಗ ಪ್ರೀತಿಸಿದ್ದ ಆದರೆ ಸುಬೇದಾರನ ಪತ್ನಿಯಾಗಿರುವ ಅವಳ ಕೋರಿಕೆಯಂತೆ ತನ್ನ ಪ್ರಾಣವನ್ನು ಪಣವಾಗಿಟ್ಟು ಸುಬೇದಾರನನ್ನೂ ಅವನ ಮಗ ಬೋಧಾಸಿಂಗನನ್ನು ಉಳಿಸಿದ ಕಥೆ. ಲಹನಾಸಿಂಗ್ ಮರಣೋನ್ಮುಖನಾದಾಗ ಸುರುಳಿ ಸುರುಳಿಯಾಗಿ ಕಥೆ ಬಿಚ್ಚಿಕೊಳ್ಳುತ್ತದೆ. 'ಪ್ರೇತವಸ್ತ್ರ' ಮತ್ತು 'ಗದಲ್' ತೀರ ಕೆಳವರ್ಗದ ಅಥವಾ ಅನಾಗರಿಕ ಬುಡಕಟ್ಟಿನ ಜನರ ಕಥೆಗಳು. 'ಪ್ರೇತವಸ್ತ್ರ' ಘೀಸು ಮತ್ತು ಅವನ ಮಗ ಮಾಧವನ ಕುಡುಕ ಜೀವನದ ಕಥೆ. ಬುಧಿಯ ಘೀಸುವಿನ ಸೊಸೆ, ಮಾಧವನ ಹೆಂಡತಿ. ಬುಧಿಯ ಸತ್ತು ಬಿದ್ದಿದ್ದಾಗಲೂ ಅವಳ ಶವ ಸಂಸ್ಕಾರವನ್ನು ಮರೆತು ಕುಡಿತದಲ್ಲಿ ಮಗ್ನರಾಗುವ ಅವರು ಕುಡುಕರ ಪ್ರತಿನಿಧಿಗಳಾಗಿ ನಿಲ್ಲುತ್ತಾರೆ. 'ಗದಲ್' ಕಥೆಯಲ್ಲಿ ಅದೇ ಹೆಸರಿನ ವಿಧವೆ ಪ್ರೇಮ ಪ್ರೀತಿಗಳಿಗಾಗಿ ಏನೆಲ್ಲ ಮಾಡುತ್ತಾಳೆ, ಮಾಡಬಲ್ಲಳು ಎಂಬುದನ್ನು ನಿರೂಪಿಸುತ್ತದೆ. ಹಾಗೆಯೆ ಅವಳ ಮತ್ತು ಅವರ ಮೈದುನ ಡಾಂಡಿಯ ನಿಷ್ಕಾಮ ಪ್ರೇಮವನ್ನೂ ಚಿತ್ರಿಸುತ್ತದೆ. ಈ ಕಥೆಯಲ್ಲಿ ಆ ಬುಡಕಟ್ಟಿನ ಸಂಪ್ರದಾಯ ಓದುಗರಿಗೆ ಪರಿಚಯವಾಗುತ್ತದೆ. 'ಮೂರನೆಯ ಶಪಥ' ಹಳ್ಳಿಯ ವಿಧುರ ಹೀರಾಮನ್‌ನ ಮುಗ್ಧತೆಯನ್ನು ತೋರುವ ಕಥೆ. ವಸ್ತು ಸಣ್ಣಕಥೆಯ ಹರವಿಗೆ ವಿಸ್ತಾರವಾಯಿತೇನೋ ಎನ್ನಿಸುತ್ತದೆ. ಇದರಿಂದ ಕಥೆ ಏನನ್ನೂ ಸಾಧಿಸದೆ ವಿಫಲವಾದಂತೆ ಅನ್ನಿಸುತ್ತದೆ. ಮಕ್ಕಳು ಮಾಡದ ತಪ್ಪನ್ನು ಅವರ ಮೇಲೆ ಹೊರಿಸಿದಾಗ ಅವರ ವರ್ತನೆ ಹೇಗಿರುತ್ತದೆ ಎಂಬುದನ್ನು 'ನೂಪುರ' ಕಥೆಯಲ್ಲಿ ಕಾಣಬಹುದು. ಬಡತನದ ಬವಣೆಯಲ್ಲಿದ್ದ ಊರ್ಮಿಳಾ ಮತ್ತು ಮದನರನ್ನು ತನ್ನ ಉದಾರತೆಯಿಂದ, ಸನ್ನಡತೆಯಿಂದ, ಸಂಯಮದಿಂದ ಸೇಠಜಿ ಗೆದ್ದ ಕಥೆ 'ಪರಕೀಯ ಸುಖ'. ಊರ್ಮಿಳ ಮಾನಸಿಕವಾಗಿ ತನ್ನವಳಾಗಿದ್ದರೂ ಬಲಾತ್ಕರಿಸದ ಸೇಠಜಿ, ತನ್ನೆಲ್ಲವನ್ನೂ ಊರ್ಮಿಳಾಳ ಮಗ ಬಲ್ಲೂವಿಗೆ ಧಾರೆ ಎರೆಯಲು ಸಿದ್ಧವಿರುವ ಅವನ ಔದಾರ್ಯ ಮೆಚ್ಚುವಂತಹುದು. ತನಗೆ ಎಟುಕಲಾರದ ವೇಶ್ಯೆ ಇಮರತಿಯನ್ನು ಬಯಸಿದ್ದ ಜಲಗಾರ ಬನ್ಸೀಲಾಲ್ ಅವಳು ದಿಕ್ಕಿಲ್ಲದೆ ಸತ್ತಾಗ ಅವಳ ಶವ ಸಂಸ್ಕಾರದಲ್ಲಿ ತೋರುವ ಆಸಕ್ತಿ, ಉತ್ಸಾಹ, ಎಲ್ಲಕ್ಕೂ ಮಿಗಿಲಾಗಿ ತಾನು ಅವಳ ಗಂಡನೆಂದು ನಮೂದಿಸಿಕೊಳ್ಳುವುದು ಇವುಗಳನ್ನು ಕಂಡಾಗ ಬನ್ಸೀಲಾಲನಿಗೆ ಇಮರತಿಯ ಬಗ್ಗೆ ಇದ್ದುದು ಬರಿಯ ಕಾಮುಕ ದೃಷ್ಟಿಯಲ್ಲ ಎಂಬುದು 'ಶವಯಾತ್ರೆ'ಯಲ್ಲಿ ಕಂಡುಬರುತ್ತದೆ. 'ಅವಳ ರೊಟ್ಟಿ'ಯಲ್ಲಿ ತನ್ನ ಪತಿ ಸುಚ್ಚಾಸಿಂಗನ ಬಗ್ಗೆ ಹಾರಿಕೆಯ ಮಾತುಗಳನ್ನು ಕೇಳಿದ್ದರೂ, ಅವನ ಅನಾದರಕ್ಕೆ ಒಳಗಾಗಿದ್ದರೂ ಅವಳು ಅವನ ಬಗ್ಗೆ ತೋರುವ ಪ್ರೀತಿ ಆಸ್ವಾದ್ಯರಸವಾದುದು. ಸೀಮಾ

ತೀತವಾದ ಆ ಪ್ರೇಮಕ್ಕೆ ಡ್ರೈವರ್ ವೃತ್ತಿಗೆ ತಕ್ಕ ಒರಟನಾದ ಸುಚ್ಚಾಸಿಂಗನೂ ಬಾಗ ಬೇಕಾಗುತ್ತದೆ. 'ಗದಲ್', 'ಪರಕೀಯ ಸುಖ', 'ಅವಳ ರೊಟ್ಟಿ' ಮತ್ತು 'ಶವಯಾತ್ರೆ' ಗಳಲ್ಲಿ ಪ್ರೇಮದ ನಾನಾ ಮುಖಗಳು ಕಾಣುತ್ತವೆ. ರಿಕ್ಷಾವಾಲ ಸುಮೇರ ರಿಕ್ಷಾದಲ್ಲಿಯೆ ಕುಳಿತು ತನ್ನ ರಿಕ್ಷಾದಲ್ಲಿ ಪ್ರಯಾಣ ಮಾಡಿದ ನಾನಾ ವಯಸ್ಸಿನ ಜೋಡಿಗಳ ಬಗ್ಗೆ ಕಲ್ಪಿಸಿ ಕೊಳ್ಳುವ ಕಲ್ಪನೆ ಸುಂದರವಾಗಿ 'ಸುವಾಸನೆ' ಕಥೆಯಲ್ಲಿ ಮೂಡಿಬಂದಿದೆ. 'ಮಧ್ಯಾಹ್ನದ ಭೋಜನ' ಬಡಸಂಸಾರದ ಒಂದು ಕಥೆ. ಬಡತನವಿದ್ದರೂ ವಾತ್ಸಲ್ಯಕ್ಕೆ, ಪ್ರೀತಿಗೆ ಬಡ ತನವೆ? ಆ ಪ್ರೀತಿ ವಾತ್ಸಲ್ಯಗಳನ್ನು ಸಿದ್ಧೇಶ್ವರಿಯಲ್ಲಿ ಕಾಣುತ್ತೇವೆ. 'ಬೇಸಿಗೆಯ ದಿನ ಗಳು' ಅರ್ಥಪೂರ್ಣವಾದ ಶೀರ್ಷಿಕೆಯನ್ನು ಹೊಂದಿರುವ ಕಥೆ. 'ಫೆನ್ಸಿನ ಆ ಕಡೆ ಈ ಕಡೆ' ನೆರೆಹೊರೆಯವರನ್ನು ಕುರಿತ ಅನಾವಶ್ಯಕ ಆಸಕ್ತಿಯನ್ನು ಹೀಯಾಳಿಸುವ ವ್ಯಂಗ್ಯಪೂರಿತ ವಾದ ಕಥೆ. ಯಾರಿಗೆ ಯಾವುದು ಸುಖವೊ, ಸಂತೋಷವೊ ಅದು ಮತ್ತೊಬ್ಬರಿಗಲ್ಲ ಅದು ಮನಸ್ಥಿತಿಯನ್ನು ಅವಲಂಬಿಸಿರುತ್ತದೆ. ಇದನ್ನು 'ಸುಖ' ಕಥೆಯಲ್ಲಿ ಕಾಣಬಹುದು. ಇವಲ್ಲದೆ 'ಲಂಡನ್ನಿನ ಒಂದು ರಾತ್ರಿ' ಮತ್ತು 'ಗೂಂಡಾ' ಎಂಬ ಕಥೆಗಳೂ ಇವೆ.

ಇಲ್ಲಿಯ ಎಲ್ಲ ಕಥೆಗಳೂ ಉತ್ತಮ ವರ್ಗದವೆಂದು ಹೇಳಲಾಗದಿದ್ದರೂ ನಮ್ಮ ಅವಜ್ಞೆಗೆ ಗುರಿಯಾಗುವಂತಹ ಯಾವ ಕಥೆಗಳೂ ಇಲ್ಲ ಎಂದು ಹೇಳಬಹುದು. ಇದಕ್ಕೆ ಕಾರಣ ಸಂಪಾದಕರ ಮುಂದೆ ಇದ್ದ ಗುರಿ: 'ಜನಸಾಮಾನ್ಯರು ಆಸಕ್ತಿಯಿಂದ ಓದ ಬಹುದಾದ ಕಥೆಗಳು ... ಉತ್ತಮ ಕೃತಿಗಳಾಗಿರಬೇಕು, ಜನಪ್ರಿಯ ಕೃತಿಗಳಾಗಿರಬೇಕು. ಜೊತೆಗೆ ಸಂಬಂಧಪಟ್ಟ ಪ್ರದೇಶದ ಜನಜೀವನ, ಜನರ ಆಸೆ ಆಕಾಂಕ್ಷೆಗಳು ಹಾಗೂ ಅವರ ಮನೋಧರ್ಮವನ್ನು ಪ್ರತಿಬಿಂಬಿಸುವ ಕೃತಿಗಳಾಗಿರಬೇಕು. (ಕಥಾಭಾರತಿ ಹಿಂದೀ ಕಥೆಗಳು – ಪರಿಚಯ). ಮೇಲಿನ ಉದ್ದೇಶದಲ್ಲಿ ಸಂಪಾದಕರು ಯಶಸ್ಸನ್ನು ಪಡೆದಿದ್ದಾರೆ ಎಂದು ಹೇಳಬಹುದು. ಎಂ. ಎಸ್. ಭಾರದ್ವಾಜ್ ಅವರ ಅನುವಾದ ಹಿತಕರವಾಗಿಲ್ಲ ಎಂದರೆ ಸಾಕು.

**ಕಥಾ ಭಾರತೀ ತಮಿಳು ಕಥೆಗಳ**ಲ್ಲಿ ಇಪ್ಪತ್ತು ಕಥೆಗಳಿವೆ ರಾಜಾಜಿ ಅವರಿಂದ ಹಿಡಿದು ಇತ್ತೀಚಿನ ಕಥೆಗಾರರ ಕಥೆಗಳು ಇಲ್ಲಿ ಸ್ಥಾನ ಪಡೆದಿವೆ. ಇಲ್ಲಿನ ಬಹುಮಟ್ಟಿನ ಕಥೆಗಳು ಕೌಟುಂಬಿಕ ಕಥೆಗಳು. ಇತರ ವಿಷಯಗಳನ್ನು ಕುರಿತ ಕಥೆಗಳೂ ಇವೆ. 'ದೇವಾನೈ' ಕಥೆಯಲ್ಲಿ ಅದೇ ಹೆಸರಿನ ವ್ಯಕ್ತಿ ಹೇಗೆ ಸಮಾಜದ ಕ್ರೂರ ಪದಾಘಾತಕ್ಕೆ ಸಿಕ್ಕಿ ಜಾರಸಂತಾನವನ್ನು ಪಡೆದು ಭಿಕ್ಷುಕಿಯಾಗುತ್ತಾಳೆ ಎಂಬುದನ್ನು ಚಿತ್ರಿಸುತ್ತದೆ. ಸಮಾಜಬಾಹಿರ ವಾದ ಅನೀತಿಯುತವಾದ ನಡವಳಿಕೆಗಳಿಂದಲೋ, ಹೆಣ್ಣು ಗಂಡಿನ ಸಂಬಂಧದಿಂದಲೋ ಕೌಟುಂಬಿಕ ಸೌಖ್ಯ ಹೇಗೆ ಕೆಡುತ್ತದೆ ಎಂಬುದನ್ನು 'ಮಂದಪ್ರಕಾಶ' 'ಪೆಟ್ಟಿಗೆ ಗಾಡಿ' ಮತ್ತು 'ಅಪ್ಪ ಬೇಡ' ಕಥೆಗಳು ನಿರೂಪಿಸುತ್ತವೆ. ಜೀವನದ ಸಾರ್ವ ಕಾಲಿಕ ಮೌಲ್ಯಗಳನ್ನು ವಿವೇಚನೆಗೆ ಒಳಗು ಮಾಡುವಂತಹ ಕಥೆಗಳು 'ಕುಮಾರಪುರಂ ನಿಲ್ದಾಣ', 'ಜಲಪಾತದ ದಂಡೆಯಲ್ಲಿ', 'ಕೆಸರಿನಲ್ಲಿ ಅರಳಿದ ಹೊಂದಾವರೆ' ಮುಂತಾ ದುವು. 'ಕುಮಾರಪುರಂ ನಿಲ್ದಾಣ' ಕಥೆಯಲ್ಲಿ ತಾತ್ವಿಕ ಚರ್ಚೆ ನೇರವಾಗಿಯೇ ಬಂದಿದೆ ಯೇನೊ ಅನ್ನಿಸಿದರೆ 'ಕೆಸರಿನಲ್ಲಿ ಅರಳಿದ ಹೊಂದಾವರೆ'ಯಲ್ಲಿ ಧ್ವನಿಯ ಮೂಲಕ, 'ಜಲ

ಪಾತದ ದಂಡೆಯಲ್ಲಿ' ಘಟನೆಗಳ ಮೂಲಕ ಅಭಿವ್ಯಕ್ತವಾಗಿದೆ. 'ಉಂಗುರ' ಮತ್ತು 'ಮೌನವೇ ಒಂದು ಭಾಷೆ'ಗಳು ಸುಂದರವಾದ ಕೌಟುಂಬಿಕ ಚಿತ್ರಗಳಾಗಿವೆ. 'ಮೌನವೇ ಒಂದು ಭಾಷೆ' ಕಥೆಯಲ್ಲಿ, ನಮ್ಮ ಸಮಾಜದಲ್ಲಿ ವಯಸ್ಸಾದ ಹೆಂಗಸು ಗರ್ಭಿಣಿಯಾದರೆ ಅವಳ ಮಕ್ಕಳೂ ಕೂಡ ಹೇಗೆ ಕುಹಕ ದೃಷ್ಟಿಯಿಂದ ನೋಡುತ್ತಾರೆ ಎಂಬುದು ಚಿತ್ರಿತ ವಾಗಿದೆ. ಇದು ನಮ್ಮ ಸಮಾಜದ ಅಪ್ರಬುದ್ಧ ಸ್ಥಿತಿಯ ಮೇಲೆ ಒಂದು ಕ್ಷಕಿರಣವನ್ನು ಬೀರುತ್ತದೆ. 'ಬೆರಳು' ಕಥೆ ನಡೆಗೂ ನುಡಿಗೂ ಇರುವ ಪೊಳ್ಳುತನವನ್ನು ತೋರಿಸು ತ್ತದೆ. 'ಪ್ರಜ್ಞೆಯ ಹೊರಗೆ' ಮತ್ತು 'ಹಿಂಬಾಲಿಸುವಿಕೆ' ಅತೀಂದ್ರಿಯ ಶಕ್ತಿಯ ಬಗೆಗಿನ ಕಥೆಗಳು. ಆದರೆ ಅದನ್ನು ಅತಿಯಾಗಿ ಮಾಡಲು ಹೋಗಿಲ್ಲ. ಅದನ್ನು ವೈಚಾರಿಕತೆಗೆ ಒಳಗು ಮಾಡುವ ಪ್ರಯತ್ನವನ್ನಿಲ್ಲಿ ಕಾಣುತ್ತೇವೆ. 'ಧನಕೋಟಿಯ ಮನೋರಥ' ಮತ್ತು 'ಹಣ ಬದುಕಿತು' ಕಥೆಗಳು ಹಣವನ್ನು ಕುರಿತ ಕಥೆಗಳೇ ಆದರೂ ಒಂದರಿಂದ ಒಂದು ಭಿನ್ನವಾಗಿವೆ. 'ಹಣ ಬದುಕಿತು' ಲೋಭಿಯೊಬ್ಬನ ಕಥೆಯಾದರೆ 'ಧನಕೋಟಿಯ ಮನೋ ರಥ' ವೇಶ್ಯೆಯಾದರೂ ಉದಾರಚರಿತಳಾದ ಧನಕೋಟಿಯ ಕಥೆಯನ್ನು ಹೇಳುತ್ತದೆ. ಪೌರಾಣಿಕವೆನ್ನಬಹುದಾದ 'ಶಾಪ ವಿಮೋಚನೆ' ಎಂಬ ಕಥೆಯೂ ಈ ಸಂಕಲನದಲ್ಲಿದೆ. ಆದರೆ ಅದು ತನ್ನ ಉದ್ದೇಶದಲ್ಲಿ ಸೋತಿದೆ ಎಂದೇ ಹೇಳಬೇಕು. 'ಅವು ಒಳ್ಳೆಯ ಮೃಗ ಗಳಲ್ಲ' ಮೃಗಗಳ ಸಂಭಾಷಣೆಯ ಮೂಲಕ ಮನುಷ್ಯನ ಸ್ವಾರ್ಥವನ್ನು ಎತ್ತಿ ತೋರುವ ಕಥೆ. ಇಂತಹ ಕಥೆಗಳು ಆಂಗ್ಲ ಭಾಷೆಯಲ್ಲಿ ಹೇರಳವಾಗಿವೆ. ಆ ದೃಷ್ಟಿಯಿಂದ ಈ ಕಥೆ ಮೆಚ್ಚುವಂತಹುದು.

'ಕಥಾಭಾರತಿ ಹಿಂದೀ ಕಥೆಗಳಿ'ಗಿದ್ದ ಉದ್ದೇಶವೇ ಈ ಕಥಾಸಂಕಲನದ ಸಂಪಾದಕರ ಉದ್ದೇಶವೂ ಕೂಡ. ಹೀಗೆ ಸಂಪಾದಕರ ಗುರಿ ಸೀಮಿತವಾಗಿದ್ದುದರಿಂದ ತಮಿಳು ಸಾಹಿತ್ಯದ ಅತ್ಯುತ್ತಮ ಕಥೆಗಳ ಪರಿಚಯ ನಮಗಾಗದೆ ಹೋದರೂ ಸಂಪಾದಕರ ಉದ್ದೇಶ ನೆರವೇರಿದೆ ಎಂದು ಹೇಳಬಹುದು. ಶೇಷನಾರಾಯಣ ಅವರ ಅನುವಾದ ಚೆನ್ನಾಗಿದೆ, ಅಚ್ಚುಕಟ್ಟಾಗಿದೆ.

**ಕಥಾಭಾರತಿ** ಭಾರತದ ಹದಿನಾಲ್ಕು ಭಾಷೆಗಳಿಂದಲೂ ಒಂದೊಂದು ಕಥೆ ಯನ್ನು ಒಳಗೊಂಡ ಸಂಕಲನ. ಬೇರೆ ಭಾಷೆಯ ಕಥೆಗಳ ಒಬ್ಬರೇ ಲೇಖಕರ ಕಥೆಗಳ ಸಂಕಲನ ಕನ್ನಡಕ್ಕೆ ಹೊಸದಲ್ಲವಾದರೂ ಭಾರತ ರಾಜ್ಯಾಂಗ ಮಾನ್ಯ ಮಾಡಿರುವ ಹದಿ ನಾಲ್ಕು ಭಾಷೆಗಳ ಉತ್ತಮ ಕಥೆಗಳ ಸಂಕಲನ ಹೊರಬರುತ್ತಿರುವುದು ಇದೇ ಮೊದ ಲೆಂದು ಹೇಳಬಹುದು. ಈ ಸಂಕಲನಕ್ಕೆ ಇಟ್ಟಿರುವ ಶೀರ್ಷಿಕೆ 'ಕಥಾಭಾರತಿ' ಅನ್ವರ್ಥ ವಾದುದು. ಬಹುಶಃ 'ಕಥಾಭಾರತಿ' ಎಂಬ ಹೆಸರು ಈ ಸಂಕಲನದಿಂದ ಕನ್ನಡದಲ್ಲಿ ಮೊದಲಬಾರಿಗೆ ಪ್ರಯೋಗದಲ್ಲಿ ಬಂದಿತೆನ್ನಬಹುದು. ಈ ಸಂಕಲನದ ಕಥೆಗಳ ಅನು ವಾದಕರು ಮತ್ತು ಸಂಪಾದಕರು ಹ. ಕ. ರಾಜೇಗೌಡ ಅವರು. ಇಲ್ಲಿನ ಕಥೆಗಳನ್ನು ಅನುವಾದಿತ ಕಥೆಗಳೆಂದು ಹೇಳದೆ ಹೋದರೆ ಅವು ಬೇರೆ ಭಾಷೆಯ ಕಥೆಗಳೆಂದು ಓದು ಗರಿಗೆ ತಿಳಿಯುವುದೇ ಇಲ್ಲ ಎಂದರೆ ಒಂದು ಮಾತಿನಲ್ಲಿ ಈ ಕಥಾಸಂಕಲನದ ವಿಮರ್ಶೆ ಮಾಡಿದಂತೆ ಆಗುತ್ತದೆ. ಆದರೆ ಇಷ್ಟನ್ನೇ ಹೇಳಿ ನಿಲ್ಲಿಸಿದರೆ ಕೃತಿಗೆ ಅಪಚಾರಮಾಡಿ

ದಂತಾಗುವುದರಿಂದ ಕೆಲವು ಕಥೆಗಳನ್ನಾದರೂ ವಿವರವಾಗಿ ನೋಡಬೇಕಾಗುತ್ತದೆ. ಮೊದಲ ಕಥೆ 'ಹೂವಿನ ಬೆಲೆ' ನಡೆಯುವುದು ವಿದೇಶದಲ್ಲಿ. ಅಲ್ಲಿಯ ಜನರ ನಡೆನುಡಿ, ಮೂಢನಂಬಿಕೆ, ಸಂಪ್ರದಾಯಗಳು ನಮ್ಮಿಂದ ಏನೂ ಬೇರೆ ಅಲ್ಲ ಎಂಬುದನ್ನು ತೋರಿಸಿ ಕೊಡುತ್ತದೆ. 'ಟಾಂಗಾವಾಲ' ಕಥೆಯಲ್ಲಿ ಟಾಂಗಾವಾಲ ಗುಲಾಮುದ್ದೀನನ ಹೆಂಗಸರ ಬಗೆಗಿನ ನಿಲುವನ್ನು ನಾವು ಒಪ್ಪದಿದ್ದರೂ ಆಶಾಳ ಬಗೆಗಿನ ಅವನ ತೀವ್ರವೂ ಅನಿಂದಿತವೂ ಆದ ಪ್ರೇಮವನ್ನು ಪ್ರಶ್ನಿಸುವಂತಿಲ್ಲ. ಟಾಂಗಾ ಓಡುತ್ತಿರುವಂತೆಯೆ ಕಥೆ ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತದೆ. ಕಥಾತಂತ್ರ ತುಂಬಾ ಮೆಚ್ಚುವಂಥದು. 'ಖೋಟಾ ನಾಣ್ಯ'ದಲ್ಲಿ ಪ್ರೇಮ ಮತ್ತು ವಿವಾಹ ಬೇರೆ ಬೇರೆ ಎಂದು ವಾದಿಸಿದ್ದ ಮಿನಿ ಆಂಡ್ರ್ಯೂಸ್ ತನ್ನ ಬಾಲ್ಯದ ಗೆಳತಿ ಲತಿಕಾಳ ಪತಿ ಬರುವಾನನ್ನೇ ತಾನು ಪ್ರೀತಿಸಿರುವುದಾಗಿ ತಿಳಿದು ಗೆಳತಿಯ ಬಾಳಿನಲ್ಲಿ ಪ್ರವೇಶಿಸಲಿಚ್ಛಿಸದೆ ದೂರ ಹೋಗುತ್ತಾಳೆ. ಪ್ರೇಮ ಮತ್ತು ವಿವಾಹ ಬೇರೆ ಬೇರೆ ಎಂದು ವಾದಿಸಿದ್ದ ಮಿನಿ ಆಂಡ್ರ್ಯೂಸಳೇ ತನ್ನ ವಾದದಂತೆ ನಡೆಯಲಾರದೆ ಪ್ರೀತಿಸಿದ ಬರುವಾನನ್ನು ಬಿಟ್ಟು ದೂರ ಹೋಗಬೇಕಾಗಿ ಬಂದುದು ದುರಂತ ವ್ಯಂಗ್ಯ. ಅವಳ ಮತ್ತು ಬರುವ ಅವರ ಪ್ರೀತಿ ಚಲಾವಣೆ ಇಲ್ಲದ ಖೋಟಾನಾಣ್ಯದಂತೆ ಉಳಿದು ಹೋಗುತ್ತದೆ. 'ಮಗು' ಕಥೆಯಲ್ಲಿ ಗಂಗು ಆಗಲೆ ಮೂರುಬಾರಿ ವಿವಾಹವಾಗಿದ್ದವಳೂ ಪ್ರಣಯಪಾಠ ಕಲಿಯಲಾಶಿಸುವ ಯುವಕರ ತೀವ್ರಾಸಕ್ತಿಯ ಕೇಂದ್ರವಾಗಿದ್ದವಳೂ ಆದ ಗೋಮತೀದೇವಿಯನ್ನು ವಿವಾಹವಾಗುತ್ತಾನೆ. ಮದುವೆಯಾದ ಆರು ತಿಂಗಳಿಗೆ ಮಗು ಹುಟ್ಟಿದಾಗ ತನ್ನನ್ನು ಹಂಗಿಸಲು ಬಂದ ತನ್ನ ಹಿಂದಿನ ಯಜಮಾನನಿಗೆ "ಬೆಳೆಯಿಂದ ತುಂಬಿದ ಹೊಲವನ್ನು ಕೊಂಡ ಯಾರೂ ಆ ಬೆಳೆ ಬೇರೆ ಯಾರೊ ಬಿತ್ತಿದ್ದು ಎಂಬ ಕಾರಣದಿಂದ ತಿರಸ್ಕರಿಸುವುದಿಲ್ಲ" ಎಂದು ಗಂಗು ಹೇಳುವ ಮಾತುಗಳು ಅವನ ವಿನಯ ಪ್ರಾಮಾಣಿಕತೆಗಳನ್ನು ಸೂಚಿಸುವಂತೆಯೆ ಸಮಾಜ ಸುಧಾರಕರು ನಾಚಿ ತಲೆ ತಗ್ಗಿಸುವಂತೆ ಮಾಡುತ್ತವೆ.

ಪಾಕಿಸ್ತಾನ ಭಾರತದಿಂದ ಬೇರೆಯಾದಾಗ ದೇಶಮಾತ್ರ ಇಬ್ಭಾಗವಾಗಲಿಲ್ಲ, ವ್ಯಕ್ತಿಗಳ ಮನಸ್ಸೂ ಇಬ್ಭಾಗವಾದುವು. ಈ ಪ್ರಸಂಗದಲ್ಲಿ ಪರಿಸ್ಥಿತಿಗೆ ವಶರಾಗಿ ತಮ್ಮ ಬಾಳನ್ನು ಹಾಳುಮಾಡಿಕೊಂಡವರೆಷ್ಟು ಮಂದಿ. ಅಂಥವರಲ್ಲಿ ಲಾಜವಂತಿಯೂ ಒಬ್ಬಳು. ಲಾಜವಂತಿಯ ಗಂಡ ಸುಂದರಲಾಲ ಬಲಾತ್ಕಾರದಿಂದ ಪರಮತೀಯರ ಬಳಿ ಇರಬೇಕಾಗಿ ಬಂದ ಹೆಂಗಸರನ್ನು ಮರಳಿ ಜನರು ತಮ್ಮ ಹೃದಯದಲ್ಲಿ ಪ್ರತಿಷ್ಠಾಪಿಸಬೇಕೆಂದು ತೀವ್ರವಾಗಿ ಪ್ರಚಾರ ಮಾಡಿದವರಲ್ಲಿ ಒಬ್ಬ. ಆದರೆ ತನ್ನ ಹೆಂಡತಿ ಲಾಜವಂತಿಯೆ ಹಿಂತಿರುಗಿ ಬಂದಾಗ ಅವಳನ್ನು ಸ್ವೀಕರಿಸಿದರೂ ಹಿಂದಿನಂತೆ ಪ್ರೀತಿಸಲಾರದೆ ಅವಳನ್ನು ಕರುಣೆಯಿಂದ ನೋಡತೊಡಗುತ್ತಾನೆ. ಲಾಜವಂತಿಗೆ ಬೇಕಾಗಿದ್ದುದು ಹಿಂದಿನಂತೆ ಹೊಡೆದು ಬಡಿದು ಗೋಳುಗುಟ್ಟಿಸುತ್ತಿದ್ದ ಗಂಡನೇ ಹೊರತು ಕರುಣೆ ತೋರುವವನಲ್ಲ. ಹೀಗಾಗಿ ಲಾಜವಂತಿ ಗಂಡನ ಕರುಣೆಯ ಮಡಿಲಲ್ಲಿ ಜೀವಚ್ಛವದಂತೆ ಬಾಳುತ್ತಾಳೆ. ಈ ದುರಂತ ಕಥೆ 'ಲಾಜವಂತಿ' ಕಥೆಯಲ್ಲಿ ಬಹು ಸುಂದರವಾಗಿ ನಿರೂಪಿತವಾಗಿದೆ.

'ಮದುವಣಗಿತ್ತಿಯ ಕಿರೀಟ'ದಲ್ಲಿ ಮದುವೆಯ ಸಂದರ್ಭದಲ್ಲಿ ನಡೆಯುವ ಅರ್ಥ

ಹೀನ ಸಂಪ್ರದಾಯಗಳ, ಶಾಸ್ತ್ರಗಳ ವಿಡಂಬನೆಯಿರುವಂತೆಯೆ ವರದಕ್ಷಿಣೆಯಿಂದ ಒದಗಬಹುದಾದ ಅನಾಹುತಗಳ ಮುನ್ಸೂಚನೆಯೂ, ಕ್ಷಣ ಮಾತ್ರದಲ್ಲಿ ತೌರಿನ ತನ್ನ ಎಲ್ಲ ಸಂಬಂಧಗಳನ್ನು ಕಿತ್ತೊಗೆದು ಪತಿಯ ಹಿತಚಿಂತನೆಯಲ್ಲಿ ಮಗ್ನಳಾಗುವ ವಧುವಿನ, ಸೀಮಾತೀತವಾದ ಮಾತೃಹೃದಯದ ಸುಂದರ ಚಿತ್ರಣವೂ ಇದೆ.

ಎರಡು ಕೋಳಿಗಳ ನೆಪದಲ್ಲಿ ಇಬ್ಬರು ಹೆಂಗಸರ ಮನಸ್ಸಿನ ಈರ್ಷ್ಯಾಸೂಯೆಗಳನ್ನು, ಸ್ಪರ್ಧಾಭಾವನೆಗಳನ್ನು ಕುತೂಹಲಕಾರಿಯಾಗಿ ಚಿತ್ರಿಸುವ ಕಥೆ 'ಕೋಳಿಯ ಜಗಳ'. ದೇಸಿಯ ಸೊಗಡು ಉದ್ದಕ್ಕೂ ಕತೆಗೆ ಸಹಜತೆಯನ್ನಿತ್ತಿದೆ. ಅನುವಾದದಲ್ಲೂ ಅದು ವ್ಯಕ್ತವಾಗಿದೆ. ಕೋಳಿಗಳ ವರ್ತನೆ, ಮಾನವನ ಚಿತ್ತದ ವ್ಯಾಪಾರಗಳು ಒಟ್ಟೊಟ್ಟಿಗೆ ಸೊಗಸಾಗಿ ಒಡಮೂಡಿವೆ.

'ಗುಲಾಬಿಯ ಅತ್ತರು' ಕಥೆಯಲ್ಲಿ ಹೇಗೆ ಅಧಿಕಾರಶಾಹಿ ನಿರ್ದಯವಾಗಿ ವರ್ತಿಸಿ ಕೈಕೆಳಗಿನವರಿಗೆ ಹಿಂಸೆಯನ್ನು ಕೊಡಬಹುದೆಂಬುದು ನಿರೂಪಿತವಾಗಿದೆ. ಉಳಿದ ಕಥೆಗಳಲ್ಲಿ ಗಮನಿಸಬೇಕಾದಂಥ ಅಂಶಗಳೇನೂ ಇಲ್ಲ. ಆದರೆ ಕನ್ನಡದ ಕಥೆಯಾದ 'ಧನ್ವಂತರಿಯ ಚಿಕಿತ್ಸೆ' ನಿರೂಪಣಾ ವಿಧಾನದಿಂದ, ಸಂಕೇತಾರ್ಥಗಳ ಮೂಲಕ ಕತೆಗಿಂತ ಹೆಚ್ಚಾಗಿ ಕವಿತೆಯಾಗಿದೆ. ಮೂಲ ಕಥೆಗಾರರಾದ ಶ್ರೀ ಕುವೆಂಪು ಅವರೂ ಈ ಸಂಕಲನದ ಸಂಪಾದಕರಾದ ಶ್ರೀ ಹ. ಕ. ರಾಜೇಗೌಡರೂ ಈ ಕಥೆಯನ್ನು ಮೆಚ್ಚಿಕೊಂಡಿದ್ದಾರೆ. ಶ್ರೀ ಕುವೆಂಪುರವರ ಕಥೆಗಳಲ್ಲೇ ಈ ಕಥೆಗಿನ್ನ ಉತ್ತಮವಾದ ಕಥೆಗಳಿದ್ದುವು ಎಂದು ಹೇಳಿದರೆ ತಪ್ಪಾಗಲಾರದು.

ಈ ಕಥಾಸಂಕಲನದ ಕಥೆಗಳ ಒಂದು ಗುಣ ನೇರವಾಗಿ ಸರಳವಾಗಿರುವುದು. ಅಂದರೆ ಯಾವುದೇ ನಾವೀನ್ಯತೆ ಇಲ್ಲವೆಂದಲ್ಲ. ಕಥಾತಂತ್ರ, ಪಾತ್ರಪೋಷಣೆ, ಸನ್ನಿವೇಶ ಚಿತ್ರಣ ಈ ಯಾವ ದೃಷ್ಟಿಯಿಂದ ನೋಡಿದರೂ ಈ ಕಥೆಗಳು ಮೆಚ್ಚಿಕೆಯಾಗುತ್ತವೆ. ಈ ಕಥೆಗಳನ್ನು ಓದಿದಾಗ ಮಾನಸಿಕವಾಗಿ ಭಾರತ ಪ್ರವಾಸ ಮಾಡಿದ ಅನುಭವವಾಗುತ್ತದೆ. ಇಂಥ ಭಾಷಾಂತರಗಳಿಂದ ನಮ್ಮ ಸೋದರ ಭಾಷೆಗಳಲ್ಲಿ ನಡೆಯುತ್ತಿರುವ ಚಟುವಟಿಕೆ ಗೊತ್ತಾಗುವುದಲ್ಲದೆ ನಮ್ಮ ಸಾಹಿತ್ಯವನ್ನೂ ಅದರೊಡನೆ ವಿಮರ್ಶಾತ್ಮಕವಾಗಿ ಹೋಲಿಸಿ ನೋಡಿಕೊಳ್ಳಬಹುದು. ಇಂಥ ಅನುವಾದ ಸಾಹಿತ್ಯ ಹೆಚ್ಚುಹೆಚ್ಚಾಗಿ ಬಂದಂತೆಲ್ಲಾ ಕನ್ನಡ ಸಾರಸ್ವತ ಲೋಕಕ್ಕೆ ಹೆಚ್ಚುಹೆಚ್ಚು ಉಪಯೋಗವಾಗುತ್ತದೆ.

'ಪಂಚವಟಿ', 'ಕಥಾಭಾರತಿ ಹಿಂದೀ ಕಥೆಗಳು'. 'ಕಥಾಭಾರತಿ ತಮಿಳು ಕಥೆಗಳು' ಮತ್ತು 'ಕಥಾಭಾರತಿ' ಈ ನಾಲ್ಕು ಅನುವಾದಿತಕೃತಿಗಳು. ಮೊದಲಿನದು ತೆಲುಗಿನಿಂದಲೂ, ಎರಡನೆಯದು ಮತ್ತು ಮೂರನೆಯದು ಹಿಂದಿ ಮತ್ತು ತಮಿಳು ಭಾಷೆಗಳಿಂದಲೂ, ನಾಲ್ಕನೆಯದು ಭಾರತರಾಜ್ಯಾಂಗ ಮಾನ್ಯಮಾಡಿರುವ ಹದಿನಾಲ್ಕು ಭಾಷೆಗಳಿಂದಲೂ ಅನುವಾದಿತವಾದುವು. ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಅವರು ಅಂತರ ಭಾರತೀಯ ಪುಸ್ತಕಮಾಲೆಯಲ್ಲಿ ಭಾರತದ ಪ್ರಾಂತೀಯ ಭಾಷೆಗಳ ಉತ್ತಮ ಕಥಾ ಸಂಕಲನವನ್ನು ತರುವ ಒಂದು ಯೋಜನೆ ಹಾಕಿಕೊಂಡಿದ್ದಾರೆ. ಆ ಯೋಜನೆಯ

ಪ್ರಕಾರ ಪ್ರಕಟವಾದ ಕೃತಿಗಳು 'ಕಥಾಭಾರತಿ ಹಿಂದೀ ಕಥೆಗಳು' ಮತ್ತು 'ಕಥಾಭಾರತಿ ತಮಿಳು ಕಥೆಗಳು' ಇವುಗಳ ಸಂಪಾದಕರಿಗೆ ಒಂದು ಮಿತಿಯನ್ನು ಹಾಕಿರುವುದರಿಂದ ಅವರ ಕೈಗಳನ್ನು ಕಟ್ಟಿದಂತಾಗಿದೆ. ಆದರೂ ಈ ಸಂಕಲನಗಳಲ್ಲಿ ಬಂದಿರುವ ಕಥೆಗಳಿಗಿಂತ ಇನ್ನೂ ಉತ್ತಮವಾದ ಕಥೆಗಳನ್ನು ಆರಿಸಬಹುದಿತ್ತೇನೋ ಎನ್ನಿಸುತ್ತದೆ. 'ಪಂಚವಟಿ'ಯ ಸಂಪಾದಕರಿಗೆ ಯಾವುದೇ ರೀತಿಯ ಕಟ್ಟುಪಾಡುಗಳು ಇದ್ದಂತೆ ಇಲ್ಲ. ಹಾಗಿದ್ದೂ ಅವರ ಆಯ್ಕೆ ಉತ್ತಮವಾಗಿಲ್ಲ. ಇಂತಹ ಕಥೆಗಳನ್ನು ಅನುವಾದ ಮಾಡುವುದರಿಂದ ಅನುವಾದಗೊಳ್ಳುವ ಭಾಷೆಯ ಸಾಹಿತ್ಯದ ಬಗ್ಗೆ ನಮ್ಮಲ್ಲಿ ಲಘುಭಾವನೆ ಉಂಟಾಗುತ್ತದೆ. ಅಲ್ಲದೆ ಇಂತಹ ಕಥೆಗಳಿಂದ ನಮ್ಮ ಭಾಷೆಯ ಸಾಹಿತ್ಯದ ಹಿರಿಮೆ ಗರಿಮೆಗಳೇನೂ ಹೆಚ್ಚಾಗುವುದಿಲ್ಲ. ಇಂತಹ ಅನುವಾದ ವ್ಯರ್ಥಶ್ರಮ ಎನ್ನದೆ ವಿಧಿಯಿಲ್ಲ. ಅನುವಾದಕ್ಕೆ ಕಥೆಗಳನ್ನು ಆರಿಸುವಾಗ ವಸ್ತು, ಶೈಲಿ, ಭಾಷೆ, ತಂತ್ರ ಈ ದೃಷ್ಟಿಗಳಿಂದ ಉತ್ತಮವಾದ ಕಥೆಗಳನ್ನು ಆರಿಸುವುದು ಒಳ್ಳೆಯದು. 'ಕಥಾಭಾರತಿ'ಯ ಸಂಪಾದಕರು ಒಳ್ಳೆಯ ಅಭಿರುಚಿಯನ್ನು ಕಥೆಗಳ ಆಯ್ಕೆಯಲ್ಲಿ ತೋರಿದ್ದಾರೆ. ಅವರ ಶ್ರಮ ಸಾರ್ಥಕ. ಭಾರತದ ಗ್ರಾಮ್ಯಜೀವನಕ್ಕೆ ಸಂಬಂಧಿಸಿದ ಕಥಾಸಂಕಲನ ಮತ್ತು ವಿಶ್ವಜಾನಪದ ಕಥಾಸಂಕಲನ ಹೊರತರುವ ಅವರ ಯೋಜನೆ ಯಶಸ್ವಿಯಾಗಲಿ ಎಂದು ಹಾರೈಸಬಹುದು. ಬೇರೆ ಭಾಷೆಗಳಿಂದ ನಮ್ಮ ಭಾಷೆಗೆ ಕಥೆಗಳು ಅನುವಾದಗೊಳ್ಳುತ್ತಿವೆ, ನಿಜ. ಆದರೆ ನಮ್ಮ ಭಾಷೆಯ ಕಥೆಗಳು ಬೇರೆ ಭಾಷೆಗಳಿಗೆ ಎಷ್ಟೆಷ್ಟು ಭಾಷಾಂತರವಾಗಿವೆ ಎಂದು ನಮ್ಮ ಲೇಖಕರನ್ನು ಪ್ರಶ್ನೆ ಮಾಡಿದರೆ ತಪ್ಪಾಗಲಿಕ್ಕಿಲ್ಲ.

**ಮೃಗಶಿರ** ಹನ್ನೊಂದು ಕಥೆಗಳನ್ನೊಳಗೊಂಡ ರಾ. ಶಿ. ಅವರ ಕಥಾಸಂಕಲನ. ಪ್ರಾಣಿಗಳ ಸ್ವಭಾವ ಇಂದಿಗೂ ಮಾನವರಲ್ಲಿ ಹೇಗೆ ಕಂಡುಬರುತ್ತದೆ ಎಂಬುದನ್ನು ಕಥೆಗಳ ಮೂಲಕ ರಾ. ಶಿ. ಅವರು ಹೃದಯಂಗಮವಾಗಿ ತೋರಿಸಿಕೊಟ್ಟಿದ್ದಾರೆ. ಈಸೋಪನ ಕಥೆಗಳಂತೆ, ಪಂಚತಂತ್ರದ ಕಥೆಗಳಂತೆ ಹೊರನೋಟಕ್ಕೆ ಕಂಡರೂ ಅವುಗಳಿಗಿನ್ನ ಭಿನ್ನವಾದ ಕಥೆಗಳು ಓದುಗರ ಮನಸ್ಸನ್ನು ಸೆರೆಹಿಡಿಯುವುದರಲ್ಲಿ ಆಶ್ಚರ್ಯವಿಲ್ಲ. ಕಥೆಗಳ ಕೊನೆಯಲ್ಲಿ ಬರುವ ಮಾನವನ ನಡತೆಯೊಡನೆ ಮೃಗೀಯ ಸ್ವಭಾವದ ಹೋಲಿಕೆ ಕಥೆಯೊಡನೆ ಹಾಸುಹೊಕ್ಕಾಗಿ ಕಥೆಯ ಅಂಗವೇ ಎಂಬಂತೆ ಕಾಣುತ್ತದೆ. ಮನೋವಿಶ್ಲೇಷಣಾತ್ಮಕ ಕಥೆಗಳಿಂದಾಗಬಹುದಾದ ಪರಿಣಾಮವೇ ಈ ಕಥೆಗಳಿಂದಲೂ ಆಗುತ್ತದೆ. ಕಥಾಸಂಕಲನದ ಕೊನೆಯಲ್ಲಿ ಮೃಗಗಳ ಸ್ವಭಾವ, ಅವುಗಳಲ್ಲಿ ಕಾಮ, ಇವುಗಳ ಮತ್ತು ಮನುಷ್ಯ ನೈಸರ್ಗಿಕವಾಗಿ ಸಂತಾನಾಭಿವೃದ್ಧಿಗಾಗಿ ರತಿಕ್ರೀಡೆಯಲ್ಲಿ ತೊಡಗದೆ ಮನೋರಂಜನೆಗಾಗಿ ಅನೈಸರ್ಗಿಕವಾಗಿ ಹೇಗೆ ರತಿಕ್ರೀಡೆಯಲ್ಲಿ ತೊಡಗಿದ್ದಾನೆ ಎಂಬ ದೀರ್ಘವೂ ವಿವರಣಾತ್ಮಕವೂ ಆದ ಪ್ರಸ್ತಾವನೆ ತುಂಬ ಉಪಯುಕ್ತವಾಗಿರುವುದಲ್ಲದೆ ಈ ಕಥಾಸಂಕಲನದ ಬೆಲೆಯನ್ನು ಹೆಚ್ಚಿಸಿದೆ.

**ನಾಲ್ಕು ರೇಖೆಗಳು** ಟಿ. ಕೆ. ರಾಮರಾಯರ ಮೂರನೆಯ ಕಥಾಸಂಕಲನ. ಇಂಗ್ಲಿಷ್ ಪ್ರಬಂಧಗಳ ನಾಲ್ಕು ಪಂಕ್ತಿಗಳ ಆಧಾರದ ಮೇಲೆ ರಚಿಸಿರುವ ಎರಡು ಗಳೂ ಇದರಲ್ಲಿ ಸೇರಿವೆ. ಕುತೂಹಲಕಾರಿಯಾದ ಒಟ್ಟು ಹತ್ತು ಕಥೆಗಳಿವೆ.

'ಹೆಣದ ವಾಸನೆ' ಕಥೆ ಕುತೂಹಲವನ್ನೇ ಕೆರಳಿಸುವುದಿಲ್ಲ. ಬೇಯಿಸಿದ ಹೆಣದ ವಾಸನೆ ಹಿಡಿಯುವುದರಲ್ಲಿ ನಿಸ್ಸೀಮನಾದ ಚಿನ್ನಪ್ಪ, ನಾಗಣ್ಣ ತನ್ನ ತಮ್ಮನನ್ನು ಸುಟ್ಟು ವರುಷವಾಗುವವರೆಗೂ ಏಕೆ ಸುಮ್ಮನಿದ್ದನೆಂದು ಲೇಖಕರೇ ಹೇಳಬೇಕು. ಮೇಲಿನ ಜಾತಿಗೇ ಸೇರಿದ ಕಥೆ 'ಕೂಡುಹುಬ್ಬಿನ ರಮಣಿ'. ಕೂಡುಹುಬ್ಬಿನ ರಮಣಿ–ಮಂಗಳಾ ಸತ್ತ ಕಾರಣ ತಿಳಿಯುವುದಿಲ್ಲ. ಬಹುಶಃ ಅವಳು ಹೃದ್ರೋಗಿಯಾದುದರಿಂದ ಸಹಜ ವಾಗಿ ಸತ್ತಿದ್ದಾಳೆ ಎಂದುಕೊಳ್ಳಬಹುದು. 'ವೆಂಕಟೇಶ ಸಿಕ್ಕಿದ' ಸ್ವಲ್ಪ ಮಟ್ಟಿಗೆ ಕುತೂ ಹಲ ಬೆಳೆಸುವ ಸಾಮಾನ್ಯ ಕಥೆ. 'ತುಂಡು ಓದುಗ' ದಲ್ಲಿ ಅರಿಯದ ಭಾಷೆಯಿಂದ, ಅರೆ ಓದಿನಿಂದ ಆಗುವ ಅನಾಹುತದ ಹಾಸ್ಯಮಯ ಕಥನವಿದೆ; ತಕ್ಕಮಟ್ಟಿಗೆ ಕುತೂಹಲ ವನ್ನೂ ಕೆರಳಿಸುತ್ತದೆ. ಅಸಂಬದ್ಧ ಕಥೆಗೆ ಒಳ್ಳೆಯ ನಿದರ್ಶನ 'ಯಾರು ಹಿತವರು', ಕಥಾಸಂಕಲನದ ಉಳಿದ ಕಥೆಗಳಾದ 'ನಿಮ್ಮವ ಮರಿ ಬಾಂಡ್', 'ಮರೆತ ಕನ್ನಡಕ'. 'ದಾರಿಹೋಕ', 'ಮೂರು ತೊಟ್ಟು ರಕ್ತ' ಮತ್ತು 'ನಾಲ್ಕು ರೇಖೆಗಳು' ತಕ್ಕ ಮಟ್ಟಿಗೆ ಕುತೂಹಲವನ್ನು ಕೆರಳಿಸುವ ಪತ್ತೇದಾರಿ ಕಥೆಗಳು. 'ನಿಮ್ಮವ ಮರಿ ಬಾಂಡ್' ಮತ್ತು 'ದಾರಿಹೋಕ' ಕಥಾಸಂಕಲನದ ಉತ್ತಮ ಕಥೆಗಳೆನ್ನಬಹುದು. ಅನುಭವಿ ಲೇಖಕರಲ್ಲಿ ಇರಬಾರದ ದೋಷಪೂರಿತ ಬರವಣಿಗೆ ಸಾಕಷ್ಟು ಕಂಡುಬರುತ್ತದೆ. ಮುದ್ರಾರಾಕ್ಷಸನ ಹಾವಳಿಯನ್ನು ತಡೆಯುವ ಯಾವ ಪ್ರಯತ್ನವನ್ನೂ ಮಾಡಿಲ್ಲ. ಮುಂದಿನ ಬರವಣಿಗೆ ಗಳಲ್ಲಿ ಸಾಕಷ್ಟು ಎಚ್ಚರವಹಿಸಿದರೆ ಒಳ್ಳೆಯದೆಂದು ಹೇಳಬಹುದು.

ಎ. ಭರತ್ ಅವರ **ಮೃತ್ಯುಗೋಲ** ಅದೇ ಹೆಸರಿನ ಮತ್ತು ಇತರ ಒಂಬತ್ತು ಕಥೆಗಳನ್ನು ಒಳಗೊಂಡಿರುವ ಕಥಾಸಂಕಲನ. 'ಅವಳಿಗೆ ಗೊತ್ತು' ಮತ್ತು 'ಪೂರ್ಣಿಮಾ' ಈ ಎರಡು ಕಥೆಗಳನ್ನು ಬಿಟ್ಟರೆ ಉಳಿದೆಲ್ಲ ಕಥೆಗಳೂ ಪತ್ತೇದಾರಿ ಕಥೆ ಗಳು. 'ಅವಳಿಗೆ ಗೊತ್ತು' ಕಥೆಯಲ್ಲಿ ಕೊಲೆಯ ಆಲೋಚನೆ ಕಥೆಯ ಉದ್ದಕ್ಕೂ ಇರುವುದರಿಂದ ಅದನ್ನು ಪತ್ತೇದಾರಿ ಕಥೆಗಳ ಸಾಲಿಗೆ ಸೇರಿಸಬಹುದು. 'ಪೂರ್ಣಿಮಾ' ಮಾತ್ರ ಪತ್ತೇದಾರಿ ಜಾಡಿನಿಂದ ಹೊರತಾದ ಸುಂದರವಾದ ಕಥೆ. ಈ ಕಥಾಸಂಕಲನ ದಲ್ಲಿ ಏಕೆ ಸೇರಿಸಿದರೊ ಕಾರಣ ತಿಳಿಯದು. ಆ ಕಥೆಯ ಬಗ್ಗೆ ಲೇಖಕರಿಗೆ ಮೆಚ್ಚುಗೆ ಇದೆ (ಇದು ತಮಿಳು ಕಥೆಯೊಂದರ ಅನುವಾದ). ಓದುಗರೂ ಅವರ ಅಭಿಪ್ರಾಯ ದಲ್ಲಿ ಒಮ್ಮತ ಹೊಂದುತ್ತಾರೆಂದರೆ ಅತಿಶಯೋಕ್ತಿಯಲ್ಲ. ಮೇಲೆ ಹೇಳಿದ ಎರಡು ಕಥೆಗಳನ್ನುಳಿದು ಉಳಿದೆಲ್ಲವೂ ಪತ್ತೇದಾರಿ ಕಥೆಗಳು. ಕಥೆಗಳು ತುಂಬ ದೊಡ್ಡವೂ ಅಲ್ಲ ಚಿಕ್ಕವೂ ಅಲ್ಲ. ವಾಸ್ತವಿಕ ನೆಲೆಗಟ್ಟಿನ ಮೇಲೆ ಬೆಳೆಯುತ್ತಾ, ಕುತೂಹಲವನ್ನು ಕೆರಳಿಸುತ್ತಾ, ಬುದ್ಧಿಗೆ ವ್ಯಾಯಾಮವನ್ನು ಕೊಡುತ್ತಾ ಹಂತಕನನ್ನು ಸೆರೆಹಿಡಿಯುವುದ ರೊಂದಿಗೆ ಕಥೆಗಳು ಮುಕ್ತಾಯವಾಗುತ್ತವೆ. ಎಲ್ಲಿಯೂ ಅನವಶ್ಯಕವಾದ ಘಟನೆಗಳಾ ಗಲಿ, ವಿವರಣೆಗಳಾಗಲಿ ಬಂದಿಲ್ಲ. ಶೈಲಿ ಎಲ್ಲಿಯೂ ಆರಕ್ಕೆ ಏರಿಲ್ಲ ಮೂರಕ್ಕೆ ಇಳಿ ದಿಲ್ಲ. ಪತ್ತೇದಾರಿ ಕಥೆಗಳಲ್ಲಿ ಅದ್ಭುತ ಭಯಾನಕ ಸನ್ನಿವೇಶಗಳನ್ನು ಚಿತ್ರಿಸುವಾಗ ಭಾಷೆ ಗಂಭೀರವೂ ಪ್ರೌಢವೂ ಆಗುವುದು ಸಹಜ. ಇದು ಕೆಲವು ವೇಳೆ ಕೃತಕತೆಯನ್ನುಂಟು ಮಾಡುತ್ತದೆ. ಈ ಕಥಾಸಂಕಲನದಲ್ಲಿ ಅಂತಹ ಶೈಲಿಯ ಚಮತ್ಕಾರ ಏನೂ ಇಲ್ಲ. ನೇರ

ವಾಗಿ ಸರಳವಾಗಿ ಕಥೆಯನ್ನು ಹೇಳಿಕೊಂಡು ಹೋಗಿದ್ದಾರೆ. "ಈ ಪುಸ್ತಕದ ಉದ್ದೇಶ... ಕೆಲವು ನಿಮಿಷ ಕಾಲವಾದರೂ ಪಠನಾನಂದವನ್ನು ಕಲ್ಪಿಸುವುದು" ಎಂದು ಲೇಖಕರೇ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಅವರ ಉದ್ದೇಶ ಸಫಲವಾಗಿದೆ ಎಂದು ಹೇಳಿದರೆ ಅತಿಶಯೋಕ್ತಿ ಆಗಲಾರದು.

'ನಾಲ್ಕು ರೇಖೆಗಳು' ಮತ್ತು 'ಮೃತ್ಯುಗೋಲ' ಎರಡೇ ಪತ್ತೇದಾರಿ ಕಥಾಸಂಕಲನಗಳು. ಪತ್ತೇದಾರಿ ಕಾದಂಬರಿಯನ್ನು ಬರೆಯುವುದಕ್ಕಿಂತ ಪತ್ತೇದಾರಿ ಕಥೆಯನ್ನು ಬರೆಯುವುದು ಕಷ್ಟದ ಕೆಲಸ. ಬುದ್ಧಿಗೆ ಕಸರತ್ತು ಕೊಡುವಂತಹ ಪತ್ತೇದಾರಿ ಕಥೆಗಳು, ಕಾದಂಬರಿಗಳು ಹೆಚ್ಚುಹೆಚ್ಚಾಗಿ ಬಂದರೆ ಅವುಗಳ ಬಗ್ಗೆ ಇರುವ ನಿಕೃಷ್ಟವಾದ ಅಭಿಪ್ರಾಯ ಕರಗಿಹೋಗುವುದರಲ್ಲಿ ಸಂಶಯವಿಲ್ಲ.

ಬಳ್ಳಾರಿ ಜಿಲ್ಲೆಯ ಹನ್ನೆರಡು ಮಂದಿ ಲೇಖಕರ ಪ್ರಾತಿನಿಧಿಕ ಕಥೆಗಳನ್ನೊಳಗೊಂಡ ಕಥಾಸಂಕಲನ **ಪಂಪಾತುಂತುರ.** ಇದರ ಸಂಪಾದಕರು ಶ್ರೀ ಜಯತೀರ್ಥ ರಾಜಪುರೋಹಿತ, ಶ್ರೀ ಕೆ. ವಿರೂಪಾಕ್ಷಗೌಡ. ಶ್ರೀ ಜಿ. ವಿ. ಪೆಂಡಕೂರು ಮತ್ತು ಶ್ರೀ ಎನ್. ಹನುಮಂತ ಶೆಟ್ಟಿ. 'ಕಾಲಗರ್ಭದಾಳದಲ್ಲಿ' ಕಥೆ ವಿರೂಪಾಕ್ಷಗೌಡರ ಕಾಲ್ಪನಿಕವೂ, ಕೊಂಚಮಟ್ಟಿಗೆ ವೈಜ್ಞಾನಿಕವೂ ಆದ ಕಥೆ. ಕನಸಿನಲ್ಲಿ ಅವರು ಕಾಣುವ ನಾನೂರು ವರ್ಷಗಳ ಹಿಂದಿನ ವಿಜಯನಗರದ ವೈಭವ ಸಮಗ್ರ ಕಂಡಂತೆ ಭಾಸವಾಗುತ್ತದೆ. ಅವರ ಇನ್ನೊಂದು ಕಥೆಯಾದ 'ಅನಿರೀಕ್ಷಿತ' ಕಥೆಗಿಂತ ಹೆಚ್ಚಾಗಿ ವರದಿಯಾಗಿದೆ. ಅ.ಮ.ಸಿ. ಅವರ 'ಗೌರೀ' ಒಂದು ಅಸಂಗತ ಕಥೆ. ಕಥೆಗಾರರ ಹಸಿಹಸಿಯ ಭಾವನೆಗಳು ಅಸಂಬದ್ಧ ವಾಕ್ಯಗಳಲ್ಲಿ ರೂಪತಾಳಿ ಓದುಗನಿಗೆ ವೃಥಾ ಶ್ರಮ ಕೊಡುತ್ತದೆ. ಜಯತೀರ್ಥ ರಾಜಪುರೋಹಿತರ 'ನಂಬಿಕೆ' ಚುರುಕಾದ. ಅರ್ಥವತ್ತಾದ ಸಂಭಾಷಣೆಗಳ ಮೂಲಕ ಸಾಗುವ ಕಥೆ. ಎಚ್. ಎಂ. ವಿರೂಪಾಕ್ಷಯ್ಯ ಅವರ 'ತುಮುಲ' ಕಥೆಯಲ್ಲಿ ವೃದ್ಧನ ಕೈಹಿಡಿದಿರುವ ಶಕುಂತಲೆಯ ಮನಸ್ಸಿನಲ್ಲಿ ನಡೆಯುವ ತುಮುಲದ ಚಿತ್ರಣವಿದೆ. ತನ್ನ ಗೆಳತಿ ಶಶಿಯ ಅಣ್ಣನೊಂದಿಗೆ ಅವಳು ನಡೆಸುವ ಸಂಭಾಷಣೆ ಮುಂತಾದುವು ಅವಳ ಮನೋರಾಜ್ಯದಲ್ಲಿ, ಕನಸಿನಲ್ಲಿ ನಡೆದಂತೆ ಚಿತ್ರಿತವಾಗಿದ್ದರೆ ಕಥೆಗೆ ಇನ್ನಷ್ಟು ಮೆರುಗು ಬರುತ್ತಿತ್ತು. ದೇ. ಶಿವಾನಂದರ 'ಪುನರ್ಜನ್ಮ'ದ ನಾಯಕನ ಅಭಿಪ್ರಾಯದಂತೆ ಗಂಡನಾದವನ ನಡತೆ ಹೇಗಿದ್ದರೂ ಕ್ಷಮ್ಯ. ಹೆಂಡತಿಯಾದವಳು ಮಾತ್ರ ಅನುಸರಿಸಿಕೊಂಡು ಹೋಗಬೇಕು. ಇಲ್ಲದಿದ್ದರೆ ಅವಳಿಗೆ ಮುಂದಿನ ಜನ್ಮದಲ್ಲಿ ದುರ್ಗತಿ ಕಟ್ಟಿಟ್ಟಬುತ್ತಿ. ಅದಕ್ಕೆ ಉದಾಹರಣೆಯಾಗಿ ತನ್ನ ಹೆಂಡತಿ ಮತ್ತು ಸಂಗಾತಿ (ವೇಶ್ಯೆ) ಯರು ಪೂರ್ವಜನ್ಮದಲ್ಲಿ ಗಿಳಿ ಮತ್ತು ಹೆಂಡತಿಯರಾಗಿದ್ದರೆಂದೂ ಅವರ ನಡವಳಿಕೆಯಿಂದಾಗಿ ಹೆಂಡತಿ ಮತ್ತು ವೇಶ್ಯೆಯರಾಗಿ ಈ ಜನ್ಮದಲ್ಲಿ ಹುಟ್ಟಿರುವರೆಂದೂ ಹೇಳುತ್ತಾನೆ! (ಇಲ್ಲಿ ಕಥಾನಾಯಕನಿಗೆ ಪೂರ್ವಜನ್ಮದ ಸ್ಮರಣೆಯುಂಟು!) ಯಾವುದೋ ಕಾಲದ 'ಪತಿಯೆ ಪರದೈವ' ಎಂಬ ತತ್ವವನ್ನು ಎತ್ತಿಹಿಡಿಯಲು ಕಥೆಗಾರರು ಪ್ರಯತ್ನಿಸಿದ್ದಾರೆ. ಅವರ ತತ್ವವನ್ನು ಒಪ್ಪಲು ಸಾಧ್ಯವಿಲ್ಲ. ಕಥೆಯೂ ಅಷ್ಟಕ್ಕಷ್ಟೆ. ಗುರುಮೂರ್ತಿ ಪೆಂಡಕೂರು ಅವರ 'ಪ್ರತೀಕಾರ' ತಂತ್ರದ ದೃಷ್ಟಿಯಿಂದ ಗಮನಾರ್ಹವಾದುದು. ಈ ತಂತ್ರ

ಆಗಲೆ ಬೇರ ಬೇರೆ ಲೇಖಕರಿಂದ ಪ್ರಯೋಗವಾಗಿದೆ. ಅಂತಹವು ವಿರಳ ಎಂಬ ದೃಷ್ಟಿಯಿಂದ ಇಲ್ಲಿ ಗಮನಾರ್ಹ. ಶ್ರೀಮತಿ ಬೆಳಗೆರೆ ಪಾರ್ವತಮ್ಮ ಅವರ 'ಬೋರವ್ವನ ಬಯಕೆ'ಯಲ್ಲಿ ಮಕ್ಕಳಿಲ್ಲದ ಬೋರವ್ವ ಮಕ್ಕಳಿಗಾಗಿ ಹಂಬಲಿಸುವ ಚಿತ್ರ ಸ್ತ್ರೀಸಹಜವಾದ ಕೋಮಲತೆ ಮತ್ತು ಮಾರ್ದವಗಳಿಂದ ಕೂಡಿದೆ. 'ವರದ ಶಾಪ' ಸುಬೋಧ ಘೋಷರ ಬಂಗಾಲಿ ಕಥೆ. ಅನುವಾದಿಸಿರುವವರು ಮಾದೇನೂರ ಸಂಗಣ್ಣ. ದುರ್ವಾಸರು ಕುಂತಿಯು ಸೇವೆಗೆ ಮೆಚ್ಚಿ ಅವಳ ಬಾಲ್ಯದಲ್ಲಿ ಅವಳಿಗೆ ಕೊಟ್ಟ ವರ ಹೇಗೆ ಶಾಪ ಸಮಾನವಾಯಿತು ಎಂದು ಮಾರ್ಮಿಕವಾಗಿ ತೋರಿದ್ದಾರೆ. ಪೌರಾಣಿಕ ಕಥೆಗೆ ತಕ್ಕಂತೆ ಭಾಷೆ ಗಂಭೀರವೂ ಪ್ರೌಢವೂ ಆಗಿದೆ. ಪುಟ 84ರಿಂದ 89ರ ವರೆಗಿನ ಪುಟಗಳು ಬಿಟ್ಟು ಹೋಗಿರುವುದರಿಂದ ಜ. ಲ. ನಾ. ರಾಮಸಾಗರ ಅವರ 'ಸಾಕಿದ ನಾಯಿ'ಯ ಕೊನೆ ಮತ್ತು ಎಂ. ಪಿ. ಪ್ರಕಾಶ ಅವರ 'ಹೀಗೂ ಉಂಟೆ' ಕಥೆಯ ಮೊದಲ ಪುಟ ಇಲ್ಲವಾಗಿ ಆ ಎರಡು ಕಥೆಗಳೂ ಅಪೂರ್ಣವಾಗಿವೆ. ಮೊದಲ ಕಥೆಯ ವಸ್ತು ಎಂಥದೋ ಅಂತ್ಯ ಹೇಗಿದೆಯೋ ಎಂಬುದು ತಿಳಿಯಲಸಾಧ್ಯವಾದರೆ ಎರಡನೆಯ ಕಥೆಯ ಬಗ್ಗೆ ಸ್ವಲ್ಪ ಊಹಿಸಬಹುದು. ಯಾರ ಕರುಣೆಯಿಂದ ಪ್ರಾಣ ಉಳಿಸಿಕೊಂಡನೊ ಅಂಥವರಿಗೇ ಕೃತಘ್ನನಾಗಿ ನಡೆಯುವ ಹೂವಿನ ಪಂಡಗಲ್ಲು ವಿನ ಸಾಹುಕಾರ ಶರಣಪ್ಪನನ್ನು ಕಂಡಾಗ 'ಹೀಗೂ ಉಂಟೆ' ಎನಿಸುತ್ತದೆ. ಆದರೆ ಈ ಎರಡು ಕಥೆಗಳು ಅಪೂರ್ಣವಾಗಿರುವುದರಿಂದ ಏನನ್ನೂ ಹೇಳಲು ಸಾಧ್ಯವಿಲ್ಲ. ಕೆ. ಎಂ. ವೀರಭದ್ರ ಶರ್ಮರ 'ಹಸಿವು' ಕಥೆಯಲ್ಲಿ ಮುಗ್ಧ ರೈತರನ್ನು ಅಧಿಕಾರಿಗಳು ಹೇಗೆ ಶೋಷಿಸುತ್ತಾರೆ ಎಂಬುದು ತಿಳಿದು ಬರುತ್ತದೆ. ಕಥೆ ಇನ್ನಷ್ಟು ಸುಸಂಗತವಾಗಿ ಅಂತ್ಯ ಬೇರೆ ರೀತಿಯಲ್ಲಿದ್ದರೆ ಕಥೆ ಚೆನ್ನಾಗಿರುತ್ತಿತ್ತೇನೊ?

ಇದು ಬಳ್ಳಾರಿ ಜಿಲ್ಲೆಯ ಕಥೆಗಾರರ ಪ್ರಾತಿನಿಧಿಕ ಸಂಕಲನ ಎಂದ ಮೇಲೆ ಇಲ್ಲಿರುವ ಕಥೆಗಳೆಲ್ಲವೂ ಚೆನ್ನಾಗಿದ್ದಾವು ನಿರೀಕ್ಷಿಸುವುದು ಎಂದು ತಪ್ಪಾಗುತ್ತದೆ. 'ಕಾಲ ಗರ್ಭದಾಳದಲ್ಲಿ' ಮತ್ತು 'ನಂಬಿಕೆ'ಯಂತಹ ಒಳ್ಳೆಯ ಕಥೆಗಳಿದ್ದರೂ ಉಳಿದ ಕಥೆಗಳು ನಿರೀಕ್ಷೆಯ ಮಟ್ಟಕ್ಕೂ ಇಲ್ಲವಲ್ಲ ಎನಿಸುತ್ತದೆ. ಇಲ್ಲಿನ ಕಥೆಗಾರರಿಗೆ ಕಥಾತಂತ್ರ, ಪಾತ್ರ ಪೋಷಣೆ, ಸನ್ನಿವೇಶ ಚಿತ್ರಣ, ಭಾಷೆಯ ಮೇಲಿನ ಹಿಡಿತ ಎಲ್ಲವೂ ಇನ್ನೂ ಸಿದ್ಧಿಸಬೇಕು ಎನಿಸುತ್ತದೆ. ಸುಮಾರು ನಾಲ್ಕು ಪುಟಗಳು ಪುಸ್ತಕದಲ್ಲಿ ಸೇರದೆ ಬಿಟ್ಟುಹೋಗಿರುವುದೂ ಮೂರು ಪುಟಗಳ ತಿದ್ದುಪಡಿಯಿರುವುದೂ ಗ್ರಂಥವನ್ನು ಎಷ್ಟೊಂದು ಶ್ರದ್ಧೆಯಿಂದ ಸಂಪಾದಿಸಿದ್ದಾರೆ ಎಂಬುದನ್ನು ತೋರಿಸುತ್ತದೆ.

**ಕಾಡುಗಿಡಗಳು** ಮಂಡ್ಯ ಜಿಲ್ಲೆಯ ಕಥೆಗಾರರ ಪ್ರಾತಿನಿಧಿಕ ಸಂಕಲನವೆನ್ನಬಹುದು. ಬಹುಶಃ ಒಬ್ಬ ಲೇಖಕರು ಮಾತ್ರ ಮಂಡ್ಯ ಜಿಲ್ಲೆಯ ಹೊರಗಿನವರೆಂದು ಕಾಣುತ್ತದೆ. ಇನ್ನೂ ನಾಗರಿಕರಾಗದ ಗೊಲ್ಲ ಜನಾಂಗದಲ್ಲಿರುವ ರಾಕ್ಷಸ ರೀತಿಯ ವಿವಾಹ–ಬಲಾತ್ಕಾರವಾಗಿ ಹೆಣ್ಣನ್ನು ಹೊತ್ತುತಂದು ಮದುವೆಯಾಗುವುದು – ವನ್ನು ಜೀಶಂಪ ರವರ 'ಕಾಡುಗಿಡಗಳು' ಕಥೆಯಲ್ಲಿ ಕಾಣುತ್ತೇವೆ. ಕಾಡಿನಲ್ಲಿ ಮರಗಿಡಗಳು ಹೇಗೆ ನಿಯಮಬಾಹಿರವಾಗಿ ಸ್ವಚ್ಛಂದವಾಗಿ ಬೆಳೆದಿರುತ್ತವೋ ಬಲಿಷ್ಠಜಾತಿಯ

ಮರಗಿಡಗಳು ದುರ್ಬಲವರ್ಗದ ಸಸ್ಯವರ್ಗವನ್ನು ಪ್ರಬಲವಾಗಲು ಹೇಗೆ ಬಿಡುವುದಿಲ್ಲವೊ ಹಾಗೆ ಅನಾಗರಿಕ ಸಮಾಜ ಸುಸಂಸ್ಕೃತ ಸಮಾಜದ ಯಾವ ನಿಯಮ ನಿಬಂಧನೆಗಳಿಗೂ ಒಳಗಾಗದೆ ಇರುವುದನ್ನು ಈ ಕಥೆಯಲ್ಲಿ ಕಾಣುತ್ತೇವೆ.

ಮಗ ಸತ್ತ ದುಃಖದಲ್ಲಿರುವ ವೆಂಕಟಪ್ಪನೆದುರಿಗೆ ಆಪ್ತರೆನಿಸಿಕೊಂಡವರ ಕಾಡು ಮೃಗಗಳ ರೀತಿಯ ವರ್ತನೆ. ಮದುವೆಯ ಗಂಡಿಗೆ ಕೊಡಲೆಂದು ಕೊಟ್ಟಿದ್ದ ಐದು ಸಾವಿರ ರೂಪಾಯಿಗಳನ್ನು ಲಪಟಾಯಿಸಿದ್ದ ಪಟೇಲ್ ತಮ್ಮೇಗೌಡನ ಸ್ವಾರ್ಥ, ಅಳಿಯ ಸತ್ತು ತಿಥಿ ಕರ್ಮಾಂತರಗಳು ಮುಗಿಯುತ್ತಿದ್ದಂತೆಯೆ ಮೊಮ್ಮಗನನ್ನು ಮುಂದು ಮಾಡಿಕೊಂಡು ಪಾಲು ಕೇಳುವ ಮತ್ತು ಅದನ್ನು ತನ್ನ ಹೆಸರಿಗೆ ಬರೆಸಿಕೊಳ್ಳಲಪೇಕ್ಷಿಸುವ ಸ್ವಾರ್ಥ. ಪ್ರೇಮದ ಸಂಕೇತವೂ ಅಪ್ಪಟ ಬಂಗಾರದಿಂದ ಆದುದೂ ಅಣ ಮಾಧುವಿನಿಂದ ಅತ್ತಿಗೆಯ ಕೈಗೆ ಮದುವೆಯಲ್ಲಿ ತೊಡಿಸಿದುದೂ ಆದ ಉಂಗುರ ಅತ್ತಿಗೆ ಹೇಳಿದ ಸಂದೂಕದಲ್ಲಿ ವಿಶ್ವುಗೆ ಸಿಗದೆ ಹೋಗುವುದು, "ಅವರ ಸಾವಿಗೆ, ನಂಬು ವಿಶ್ವಾ• ನಾನಲ್ಲ ಕಾರಣ..." ಎಂದು ಮಗುವಿನ ಸಾಕ್ಷಿಯಾಗಿ ಹೇಳುವ ಅತ್ತಿಗೆ ಗೌರಿ, ಅವಳಿಗೆ ಅಣ್ಣ ಮಾಧವ ಬರೆದ ಕಾಗದದಲ್ಲಿ "ನಿನ್ನ ಮುದ್ದು ಮಗುವಿನ ಹೊಳಪು ಕಣ್ಣಾಲಿಗಳನ್ನು ದಿಟ್ಟಿಸುವಾಗ – ನನ್ನನ್ನು ನಾನು ಕಂಡೆ" ಎಂಬ ಮಾತುಗಳಲ್ಲಿ ದೊರೆಯುವ ಮಾಧುವಿನ ಸಾವಿನ ಸುಳಿವೂ. ಈ ಮಾತುಗಳ ಹಿನ್ನೆಲೆಯಲ್ಲಿ ಎಡೆಯಿಡುವಾಗ ದುಃಖಭಾರದಿಂದ ಗೌರಿ ಹೇಳುವ "ಅಯ್ಯೋ ಬಿಡಿ ನನ್ನಾ, ನಾನು ಬಳೆ ಹೊಡಿಸಿಕೊಳ್ಳೋಲ್ಲ. ಯಾರ್ದೊ ಹೆಣ ತಂದುಬಿಟ್ಟಿದ್ದೀರಿ. ನನ್ನ ಗಂಡ ಇನ್ನೂ ಬದುಕಿದ್ದಾರೆ. ದೇವ್ರೆ ಈಗಲಾದ್ರೂ ಬರಬಾರ್ದ ಅವ್ರು? ಬಿಟ್ಬುಬಿಡಿ. ನನ್ನ ಕುಂಕುಮ ಅಳಿಸಬೇಡಿ. ಈ ಹೆಣ ನನ್ನ ಗಂಡನಲ್ಲ. ಅವರು ಬದುಕಿದ್ದಾರೆ. ನೀವೆಲ್ಲಾ ಒಪ್ಪಿಕೊಳ್ಳೋದಾದರೆ ತೋರಿಸ್ತೀನಿ ಅವರ್ನ." ಮಾತುಗಳಲ್ಲಿ ಕಾಣುವ ವ್ಯಂಗ್ಯ ಎಲ್ಲವೂ ಸೇರಿ ರಮೇಶ ಹುಲ್ಲುಕೆರೆ ಅವರ 'ಸಾಕ್ಷಿ'ಯನ್ನು ಒಂದು ಸಂಕೀರ್ಣ ಕಥೆಯನ್ನಾಗಿ ಮಾಡಿದೆ.

'ಆಕಾಶಕ್ಕಿಂತ ಅಗಲವಾದದ್ದು ಆಸೆ. ಭೂಮಿಗಿಂತ ತೂಕವಾದದ್ದು ಸತ್ಯ' ಇದು ಹೊಲೆಯರ ನೀರಗಂಟಿ ಮೂಗಪ್ಪನ ತತ್ವ. ಈ ತತ್ವ ಗುರುಬೋಧನೆ ತೆಗೆದುಕೊಂಡು ತೋಟದಲ್ಲಿ ಮಠ ಕಟ್ಟಿಕೊಂಡಿದ್ದರೂ ಆಸ್ತಿ ಹಾಳಾದೀತೆಂದು ಅದರ ಜವಾಬ್ದಾರಿಯನ್ನೂ, ಬಿಲ್ಲಿನಂತೆ ಬಳುಕುವ ವಿಧವೆ ಪುಟ್ಟಮ್ಮನ ಅಂಗಸಂಗವನ್ನೂ ಮಠದಲ್ಲೇ ಪಡೆಯುತ್ತಿದ್ದ ಪುಟ್ಟಸ್ವಾಮಿ ಗೌಡರಿಗೆ ಚುಚ್ಚುತ್ತದೆ. ಹಳ್ಳಿಯ ಬಾಳಿನ ಒಂದು ಸುಂದರ ಚಿತ್ರವನ್ನು ಬೆಸಗರಹಳ್ಳಿ ರಾಮಣ್ಣ ಅವರ 'ಸ್ವಾರ್ಥ' ಕಥೆಯಲ್ಲಿ ಕಾಣುತ್ತೇವೆ. ಜೀಶಂಪ ಅವರ 'ಕಾಡುಗಿಡಗಳು' ಗುಂಪಿಗೇ ಸೇರುವ ಆದರೆ ಸ್ವಲ್ಪ ನಾಗರಿಕ ಸಮಾಜಕ್ಕೆ ಸೇರಿದ ಕಥೆ ಕಾಳೇಗೌಡ ನಾಗವಾರ ಅವರ 'ಕಾಡು'.

'ತೊಂಡು' ಕಥೆಯ ಹೆಸರೇ ಸೂಚಿಸುವಂತೆ ಹಳ್ಳಿಯ ಬಲಾಢ್ಯನೊಬ್ಬನ ಬಲಾತ್ಕಾರಕ್ಕೆ ಒಳಗಾಗಿ ಆತ್ಮಹತ್ಯೆ ಮಾಡಿಕೊಂಡ ಯುವತಿ ನರಸಿಯ ಕಥೆ. ಈ ಕಥೆಯ ನಾಗತ್ತೆಯೂ ಅಂತಹ ಒಂದು ತೊಂಡು. ವಯಸ್ಸಿನಿಂದ ತನಗಿಂತ ಕಿರಿಯರಾದ ಯುವಕರನ್ನೂ ಬಿಟ್ಟವಳಲ್ಲ. ನರಸಿ ಮತ್ತು ಅವಳ ಗಂಡ ಚಿಕ್ಕಮೊಗರ ಜೊತೆ ದೈಹಿಕವಾಗಿ

ಇಳಿಜ್ಜೋಡು. ಸಾಲದುದಕ್ಕೆ ಚಿಕ್ಕಮೊಗ ಷಂಡ ಬೇರೆ. ಹೀಗೆ ಬೇಲಿಯಿಲ್ಲದ 'ನರಸಿ' ಎಂಬ ಹೊಲಕ್ಕೆ ತೊಂಡು ದನಗಳು ಬೀಳುವುದು ಆಶ್ಚರ್ಯವೆ? ಡಿ. ಕೃಷ್ಣಪ್ಪಗೌಡರು ಈ ಸಮಸ್ಯೆಯನ್ನು 'ತೊಂಡು' ಕಥೆಯಲ್ಲಿ ಚಿತ್ರಿಸಿದ್ದಾರೆ.

"......ಎದುರು ನಿಂತಿತ್ತು ಮೋಹಕ ಮೈಕಟ್ಟಿನ ಮಾದಕ ನೋಟದ ಬೊಗಸೆ ಗಣ್ಣಿನ ಅಪರಿಚಿತ ಹೆಣ್ಣು! ಹತ್ತಿ ಇಳಿದು ಆಟವಾಡು ಬಾ ಎಂದು ಆಹ್ವಾನಿಸುವ ಹರೆಯ ಕೊರೆದ ದೇಹದ ಹಳ್ಳ ದಿಣ್ಣೆಗಳು! ಚುಟುಕದಲ್ಲಿ ಹೇಳಬೇಕೆಂದರೆ ನೋಡಿದವರ ನಾಲಗೆಯಲ್ಲಿ ನೀರೂರಿಸುವ ರೂಪ!... " ಅಪ್ಪನನ್ನು ಹೂಳಲು ಸ್ಮಶಾನಕ್ಕೆ ಬಂದಾಗಲೂ ಹೆಣ್ಣನ್ನು ಕಂಡ ಈ ಅನ್ನಿಸಿಕೆ, ಆದರ ಸೆಳೆತ ಎಷ್ಟೆಂಬುದನ್ನು ತೋರಿಸುತ್ತದೆ. ಇದಕ್ಕೆ ಹೇಸಿಕೊಂಡವರಿಗೆ ಉತ್ತರ ಕಥೆಯ ಕೊನೆಯಲ್ಲಿ ಸಿದ್ಧವಿದೆ: ಜೀವನದ ವಸ್ತುಸ್ಥಿತಿಗೆ ಪ್ರತಿಮೆಯಂತೆ ಸತ್ತ ತಾಯಿಯ ಮೊಲೆಯನ್ನು ಚೀಪುತ್ತಿರುವ ನಾಯಿಮರಿಗಳು! ಕಥೆಯ ಉದ್ದಕ್ಕೂ ದ್ವಂದ್ವಾರ್ಥದಿಂದ ಕೂಡಿದ ವಾಕ್ಯಗಳು ಬಂದು ಕಥೆಯ ಸ್ವಾರಸ್ಯವನ್ನು ಹೆಚ್ಚಿಸಿವೆ. ಉದಾಹರಣೆಗೆ "...ಕಾಲೆತ್ತಿದರೆ ಕೆಟ್ಟೆ! ನೆಲ ಸವರಿಕೊಂಡೇ ಹೆಜ್ಜೆ ಇಕ್ಕಬೇಕು. ಸ್ವಲ್ಪ ಕಾಲಕೆಳಗೆ ಸಂದು ಸಿಕ್ಕಿದರೂ ನೀರು ನುಗ್ಗಿ ಕೆಳಕ್ಕೆ ಕೆಡವಿ ಬಿಡುತ್ತದೆ!" ಎಂಬ ವಾಕ್ಯವನ್ನು ಗಮನಿಸಬಹುದು. ದ್ವಂದ್ವಾರ್ಥದಿಂದ ಕೂಡಿದ ಸಂಭಾಷಣೆ ಅಥವಾ ವಿವರಣೆಯ ವಾಕ್ಯಗಳು ಪುಟ್ಟ ಪುಟ್ಟದಾಗಿ ಕಾವ್ಯಮಯವಾಗಿ ಸುಧಾಕರರ 'ಸೆಳೆತ'ವನ್ನು ಈ ಕಥಾಸಂಕಲನದ ಅತ್ಯುತ್ತಮ ಕಥೆಯನ್ನಾಗಿ ಮಾಡಿದೆ.

ಈ ಕಥಾಸಂಕಲನದ ಎಲ್ಲ ಕಥೆಗಳೂ ಪ್ರಥಮವಾಗಿ ಅವುಗಳ ವಸ್ತುವಿನಿಂದ ಮತ್ತು ಶೈಲಿಯಿಂದ ನಮ್ಮ ಗಮನವನ್ನು ಸೆಳೆಯುತ್ತವೆ. ವಸ್ತು ಗ್ರಾಮೀಣ ಜೀವನದ್ದು. ಶೈಲಿಯ ಆಡುಮಾತಿನ ಸೊಗಡು, ಮಣ್ಣಿನವಾಸನೆ ಮೂಗಿಗೆ ಬಡಿಯುತ್ತದೆ. ಎಲ್ಲ ಕಥೆಗಾರರೂ ಸತ್ವಪೂರ್ಣವಾದ ಬರವಣಿಗೆಯಲ್ಲಿ ಸಿದ್ಧಹಸ್ತರು ಎಂಬುದನ್ನು ಅವರ ಕಥೆಗಳೇ ಸಾರುತ್ತಿವೆ. ಈ ಕಥಾಸಂಕಲನವನ್ನು ಸಂಪಾದಿಸಿದ ಶ್ರೀ ರಮೇಶ ಹುಲ್ಲುಕೆರೆ ಅವರ ಶ್ರಮ ಸಾರ್ಥಕವಾಗಿದೆ.

ಮ. ಗಂ. ರೇಣುಕ ಪ್ರಸನ್ನ, ಟಿ. ಜಿ. ರಾಘವ, ಕೆ. ಸದಾಶಿವ ಮತ್ತು ಕೆ. ವೀರಭದ್ರರ ತಲಾ ಎರಡು ಕಥೆಗಳುಳ್ಳ ಸಂಕಲನ **ಐದು ಮತ್ತು ಹತ್ತು**. ಸಂಪಾದಕರು ಶ್ರೀ ಕೆ. ವೀರಭದ್ರ.

ಕಡಲೆಮಿಕ್ಕೆ ದಿಬ್ಬ ನೆನಪಾದ ಕೂಡಲೆ ದಿವ್ಯವನ್ನು ಕೈಯಲ್ಲಿ ಹಿಡಿದವನಂತೆ, ತನ್ನ ತನವನ್ನೇ ಕಳೆದುಕೊಂಡವನಂತೆ ತೊಳಲಾಡುವ, ಆತ್ಮಶೋಧ ಮಾಡಿಕೊಳ್ಳುವ ನಾಯಕನ ಒಳತೋಟಿ 'ದಿಬ್ಬ' ಕಥೆಯಲ್ಲಿ ಸೂಕ್ಷ್ಮವಾಗಿ ನಿರೂಪಿತವಾಗಿದೆ. ಬಾಡಿಗೆ ಮನೆಯಲ್ಲಿರುವ ವ್ಯಕ್ತಿ ಬೆಳೆಸಿದ ಪಪ್ಪಾಯಿಗಿಡಗಳ ಹಣ್ಣನ್ನು ಅವನೇ ತಿನ್ನಬೇಕೆಂದೇನಿಲ್ಲವಷ್ಟೆ? ಬೇರೆಯವರು ತಿಂದು ಪಡುವ ತೃಪ್ತಿಯನ್ನು ಕಂಡು ತಾನೂ ತೃಪ್ತಿಪಟ್ಟುಕೊಳ್ಳಬಹುದು. ಮನಸ್ಸು ವಿಶಾಲವಾಗಿದ್ದರೆ. ಹಾಗೇ ತಾನು ಪ್ರೇಮಿಸಿದ ವ್ಯಕ್ತಿ ತಿರಸ್ಕರಿಸಿದಾಗಲೂ ಅವಳು ಬೇರೊಬ್ಬನ ಜೊತೆ ಸುಖವಾಗಿರಲೆಂದು ಹಾರೈಸಬಹುದಲ್ಲವೆ?

ಇಂತಹ ಅಭಿಪ್ರಾಯವನ್ನು 'ಪಪ್ಪಾಯಿ ಗಿಡಗಳು' ಕಥೆಯಲ್ಲಿ ಕಾಣುತ್ತೇವೆ. ಈ ಎರಡು ಕಥೆಗಳು ಮ. ಗಂ. ರೇಣುಕ ಪ್ರಸನ್ನರವು. ಕಥೆಗಳು ಚಿಕ್ಕವಾಗಿ ಎಲ್ಲಿಯೂ ಅನವಶ್ಯಕ ನಿರೂಪಣೆಯಿಲ್ಲದೆ ಚೊಕ್ಕವಾಗಿವೆ.

ವಿಚಾರವಂತ. ಆಚಾರ ವಿಚಾರಗಳನ್ನು ಸಂಪ್ರದಾಯ ಮೂಢ ನಂಬಿಕೆಗಳನ್ನು ನಂಬದಿದ್ದರೂ ಮನಸ್ಸಿನಾಳದಲ್ಲಿ ಚಿಕ್ಕಂದಿನಲ್ಲಿ ಬೇರುಬಿಟ್ಟ ಅವುಗಳನ್ನು ಕಿತ್ತು ಹಾಕುವುದು ಸುಲಭವಲ್ಲವೆನ್ನುವುದು 'ಶ್ರಾದ್ಧ' ಕಥೆಯಲ್ಲಿ ಕಂಡುಬರುತ್ತದೆ. 'ಸತ್ತವನು' ಕಥೆಯ ರಾಮನಾಥ ಜೀವನವನ್ನು ಅನುಭವಿಸಬೇಕೆನ್ನುವ ಆಶಾಜೀವಿ. ಆದರೆ ಅದಕ್ಕೆ ತಕ್ಕಂತಹ ಪರಿಸರವನ್ನು ನಿರ್ಮಿಸಿಕೊಂಡಿಲ್ಲ. ಹೀಗಾಗಿ ತನ್ನತನವನ್ನು ಕಳೆದುಕೊಂಡು ಸತ್ತ ವ್ಯಕ್ತಿಯಂತೆ ಬೀದಿ ಬೀದಿಗಳಲ್ಲಿ ಅಲೆಯುತ್ತಾ ಬಾರುಗಳಿಗೆ ನುಗ್ಗುತ್ತಾ ಸಿಕ್ಕ ಹೆಣ್ಣುಗಳೊಡನೆ ಮಲಗುವುದೇ ಜೀವನವೆಂದು ಭ್ರಮಿಸುತ್ತಾನೆ. ಈ ಎರಡು ಕಥೆಗಳಲ್ಲಿ ಟಿ. ಜಿ. ರಾಘವ ಅವರು ಮಾನವನ ಅಂತರಂಗದ ಜೀವನವನ್ನು ಸಫಲವಾಗಿ ಚಿತ್ರಿಸಿದ್ದಾರೆ.

'ಮಬ್ಬು ಜಾರಿದ ಕಣಿವೆಯಲ್ಲಿ' ಮತ್ತು 'ಕಾಡುಗಿಡಗಳು' ಜೀಶಂಪರವರ ಕಥೆಗಳು. ಹಳ್ಳಿಯ ಬಾಳಿನ ಎರಡು ಚಿತ್ರಗಳು ಈ ಕಥೆಗಳಲ್ಲಿವೆ. 'ಕಾಡು ಗಿಡಗಳ'ಲ್ಲಿ ಅನಾಗರಿಕ ಜನಾಂಗವಾದ ಗೊಲ್ಲರ ರಾಕ್ಷಸ ವಿವಾಹ ಪದ್ಧತಿಯ ಚಿತ್ರವಿದ್ದರೆ 'ಮಬ್ಬು ಜಾರಿದ ಕಣಿವೆಯಲ್ಲಿ' ಹೀನಜಾತಿಗೆ ಸೇರಿದ ಜೀತದಾಳಿನ ಕಥೆ ಬರುತ್ತದೆ. ನಾಲ್ಕು ತುತ್ತು ಅನ್ನಹಾಕಿದರೆ ಹೇಗೆ ನಾಯಿ ಬಾಲವಲ್ಲಾಡಿಸಿ ಹಿಂದೆ ಮುಂದೆ ಓಡಾಡುತ್ತದೋ ಹಾಗೆ ರಾಮಜ್ಜ ತಾನು 20–30 ವರ್ಷ ಜೀತದಾಳಾಗಿ ದುಡಿದ ಮನೆಯವರು ಕೊಟ್ಟ ಹರಕಲು ಚಾಪೆ, ಹೊದೆಯಲು ಚಿಂದಿ, ಉಣ್ಣಲು ತಂಗಳನ್ನೇ ಸ್ವರ್ಗಸುಖಕ್ಕೆ ಸಮವೆಂದು ಭಾವಿಸಿಕೊಂಡು, ತನ್ನ ಮೊಮ್ಮಗ ಪುಟ್ಟರಂಗನನ್ನು "ನರಮನೇ ಜೀತಕ್ಯಾಕ ಬ್ಯಾಡಿ ಮಕ್ಕಳ..." ಎಂಬ ಸೊಸೆಯ ಮಾತನ್ನು ಧಿಕ್ಕರಿಸಿ, ತಾನು ಮೊದಲಿದ್ದ ಮನೆಯಲ್ಲಿ ಜೀತಕ್ಕೆ ಸೇರಿಸಲು ಕರೆದುಕೊಂಡು ಬಂದು, ಕೊರೆಯುವ ಚಳಿಯ ರಾತ್ರಿಯಲ್ಲಿ ಗೂಬೆಯ ಕೂಗನ್ನು ಕೇಳಿ, ಹಿಂದೆ ಕೆಂಚ (ನಾಯಿ) ನನ್ನು ಕಿರುಬ ಹಿಡಿದುದನ್ನು ನೆನೆಸಿಕೊಂಡು, ಕೆಟ್ಟಕನಸನ್ನು ಕಂಡು ಬೆಚ್ಚಿದಂತೆ ಎಚ್ಚತ್ತು, ಬೆಳಗಿನ ಜಾವದ ರಾಗಿಕಲ್ಲಿನ "...ಅಪ್ಪನ ಮನೆ ಬಿಟ್ಟು ಹೋಗೋಕೆ ಮನಸಿಲ್ಲ" ಎಂಬ ಪದವನ್ನು ಕೇಳಿ, ತನ್ನ ನಿರ್ಧಾರವನ್ನು ಬದಲಾಯಿಸಿ, ತನ್ನ ಮನದ ಮಬ್ಬು ಹರಿದು, ಬೆಳಗಿನ ಜಾವ ಮೊಮ್ಮಗನನ್ನು ಕರೆದುಕೊಂಡು ಊರಿಗೆ ಮರಳುತ್ತಾನೆ! ಜಾನಪದ ಸತ್ವದಿಂದ ಕೂಡಿರುವ ಈ ಎರಡು ಕಥೆಗಳೂ ಸುಂದರವಾಗಿವೆ.

ಮನುಷ್ಯ ಮನುಷ್ಯರ ನಡುವೆ ಎಂತಹ ಭೇದ. ಅವು ಏನಿದ್ದರೂ ಮಾನವನಿಂದ ನಿರ್ಮಿತವಾದದ್ದು. ರಾಮು ಕುಡಿದ ಅಮಲಿನಲ್ಲಿ ಹೊಲೆಯರ ಗಿಡ್ಡಿಯನ್ನು ಕೂಡುತ್ತಾನೆ. ಅವಳನ್ನು ಗೆಳೆಯ ಶೀನುವಿನ ತಂಗಿ ಹೇಮಾವತಿ ಎಂದುಕೊಳ್ಳುತ್ತಾನೆ. ಕಾಲವಲ್ಲದ ಕಾಲದಲ್ಲಿ ಆರ್ಭಟಿಸಿ ಮಿಂಚು ಗುಡುಗುಗಳ ಸಮೇತ ಬಂದ ಮಳೆ, ಸಭ್ಯತೆಯ ಹೊದಿಕೆಯೊಳಗಿರುವ ಕಾಮು. ಸಮಯ ಸಿಕ್ಕಿದಾಗ ಉಕ್ಕಿಬಂದು ಸಾಮಾಜಿಕವಾದ

ಎಲ್ಲ ಬಂಧನಗಳನ್ನೂ ಹೇಗೆ ತೊಡೆಯಬಲ್ಲುದು ಎಂಬುದಕ್ಕೆ ಪ್ರತಿಮೆಯಾಗುತ್ತದೆ. ಸದಾಶಿವರ 'ಗಿಡ್ಡಿ' ಕಥೆಯಲ್ಲಿ. 'ರಾಮನ ಸವಾರಿ ಸಂತೆಗೆ ಹೋದದ್ದು' ಕಥೆಯಲ್ಲಿ ಇನ್ನೂ ಬಾಲಕನಾಗಿರುವ ರಾಮುವಿನ ದೃಷ್ಟಿಯಲ್ಲಿ ಅವನ ಹಿರಿಯರ ನಡೆನುಡಿಗಳ ಚಿತ್ರಣವಿದೆ. ಹಿರಿಯರ ಮಾತು ಕಥೆಗಳು ಯಾವುವೂ ಅವನಿಗೆ ಅರ್ಥವಾಗುವುದಿಲ್ಲ. ಕೆಲವು ವೇಳೆ ಅವರು ಅವರ ಚರ್ಯೆಯಿಂದಾಗಿ ರಾಕ್ಷಸರಂತೆ ಕಾಣುತ್ತಾರೆ. ಪಾರ್ವತಿ, ಶಿವರಾಮ ಅವರ ವಿಫಲ ದಾಂಪತ್ಯದ ಚಿತ್ರಣವೂ ಇಲ್ಲಿದೆ. ಹಿರಿಯರಾದ ಮಂಜಯ್ಯ, ಕಲ್ಯಾಣಿ ಪಾರ್ವತಿ, ಶಿವರಾಮ ಇವರ ಸ್ವಾರ್ಥ, ದ್ವೇಷಾಸೂಯೆಗಳೂ, ಇವಾವುದನ್ನೂ ಅರಿಯಲಾರದ ರಾಮುವಿನ ಮುಗ್ಧತೆಯೂ ಕಥೆಯ ಸೊಗಸನ್ನು ಹೆಚ್ಚಿಸಿವೆ.

ವೀರಭದ್ರ ಅವರ 'ಬೇಲಿಗೆ ಸಿಕ್ಕ ಬಯಲು' ಸ್ವಚ್ಛಂದ ಮನುಷ್ಯನ ಲಹರಿಯನ್ನು ಚಿತ್ರಿಸುವ ಒಂದು ಕಥೆ. ಬಯಲಿಗೆ ಬೇಲಿ ಹಾಕಲಾದೀತೆ? ಹಾಗೇ ಮನಸ್ಸಿಗೆ ಕಡಿವಾಣ ಹಾಕಲಾದೀತೆ? ಒಂದು ವಿಷಯದಿಂದ ಮತ್ತೊಂದಕ್ಕೆ ಸ್ವಚ್ಛಂದವಾಗಿ ಕುಪ್ಪಳಿಸುವ ಮನಸ್ಸಿನ ಭಾವವನ್ನು ಹಾಗೇ ಚಿತ್ರಿಸಿರುವ ವೀರಭದ್ರರ ಕೌಶಲ ಮೆಚ್ಚುವಂಥದು. ಧ್ವನಿಪೂರ್ಣವಾದ ಸಂಭಾಷಣೆಯಿಂದ, ಅರ್ಥಪೂರ್ಣವಾದ ವಿವರಣೆಯಿಂದ, ರೋಚಕವಾದ ವರ್ಣನೆಗಳಿಂದ ವೀರಭದ್ರರ 'ಮರೆಯುವರು' ಈ ಸಂಕಲನದ ಅತ್ಯುತ್ತಮ ಕಥೆಯಾಗುತ್ತದೆ. ಕಥಾನಾಯಕ ತನಗಿನ್ನ ಕೇವಲ ಆರೇ ವರ್ಷ ದೊಡ್ಡವಳಾದ ಚಿಕ್ಕಮ್ಮನನ್ನು ಕಾಣಲು ಅವಳಿರುವ ಹಳ್ಳಿಗೆ ಹೋಗುತ್ತಾನೆ. ಅವಳು ವಿಧವೆ. ತನ್ನ ಗಂಡನ ಜಮೀನಿನಲ್ಲೆ ಮನೆಮಾಡಿಕೊಂಡು ಊರಿನಿಂದ ದೂರ ಇದ್ದಾಳೆ. ಕಥೆಗಾರರ ಮಾತುಗಳಲ್ಲೇ ಮುಂದಿನಚಿತ್ರವನ್ನು ಕೊಟ್ಟರೆ ಒಳಿತು. ನೀರೊಲೆಗೆ ಹೊಟ್ಟು ಒಟ್ಟುತ್ತಿರುವ ಚಿಕ್ಕಮ್ಮನ ಖಣಿಖಣಿ ಮಿಣಿಮಿಣಿ ಕಂಚು ಮಿಂಚಾದ ದೇಹವನ್ನು ಕಾಣುತ್ತಾನೆ. ನಂತರ "ಹಣೆಗೆ ಕುಂಕುಮವಿಟ್ಟು. ಕೋಡುಗಳ ಮಧ್ಯೆ ಹೂ ಏರಿಸಿ. ಲಿಂಗಾಕಾರದ ಭುಜದ ಮೇಲೊಂದು ಹೂ ನಿಲ್ಲಿಸಿ, ಬಾಲದ ಮೇಲೊಂದು ಇರಿಸಿ, ಬಾಲಕ್ಕೆ ಅರಿಸಿನ ಕುಂಕುಮ ಬೊಟ್ಟಿಟ್ಟು..." ಹಸುವನ್ನು ಪೂಜಿಸುತ್ತಿರುವ ಚಿಕ್ಕಮ್ಮನನ್ನು ಕಾಣುತ್ತಾನೆ. ತೋಟದಲ್ಲಿ ಅವನು ಚಿಕ್ಕಮ್ಮನೊಂದಿಗೆ ನಡೆಸುವ ಸಂಭಾಷಣೆಯನ್ನು ಕೇಳಿ–

"ಚಿಕ್ಕಮ್ಮಾ" ಎಂದೆ. ಹಿಂತಿರುಗಿ ನಿಂತು ಏನು ಎಂಬಂತೆ ನೋಡಿದಳು.

"ಒಬ್ಬೊಂಟಿಗರಾಗಿರೋಕೆ ನಿನಗೆ ಭಯವಾಗಲ್ವ?"

"ಎಂಥ ಭಯ ಬಿಡು. ಅರಸನ ಅಂಕೆಯಿಲ್ಲ ದೆವ್ವದ ಕಾಟವಿಲ್ಲ. ಜನರದಂತೂ ಮೊದಲೇ ಇಲ್ಲ."

"ಅದಲ್ಲ, ಹಾವಿನದಾದರೂ?"

"ಏನು ಮಾಡುತ್ತೆ? ಎಲ್ಲರನ್ನೂ ಕಚ್ಚುತ್ತದೆ ಅಂತ ತಿಳಿದೆ? ಒಂದು ವೇಳೆ ನನ್ನನ್ನು ಕಚ್ಚಿದರೆ ಕಚ್ಚಲಿ ಬಿಡು."

ಇಲ್ಲಿ ಹಾವು ಕಾಮದ ಸಂಕೇತವಾಗಿ ಬರುತ್ತದೆ. ಮುಂದೆ ನಡೆಯಬಹುದಾದ ಘಟನೆಯನ್ನು ಇಲ್ಲಿಯೆ ಧ್ವನಿಸುತ್ತದೆ. ಇದಕ್ಕೆ ಪೂರಕವಾಗಿ ಅಂದು ರಾತ್ರಿ ನಡೆಯುವ ಸಂಭಾಷಣೆ ಅರ್ಥವತ್ತಾಗಿದೆ.

ಮಾರನೆಯ ದಿನ ಹಸುವಿಗೆ ಹೋರಿ ಕೊಡಿಸಿ ಹಿಂದಿರುಗುವಾಗ ಹಿಂದಿನಿಂದ ಚಿಕ್ಕಮ್ಮನನ್ನು ಕಂಡು "ಈಕೆ – ಯಾರೀಕೆ–ಮಿರ್ರನೆ ಮಿಂಚುವ ತೋಳ ಹಿಂಭಾಗ, ಸುಳಿ ಸುಳಿಸುತ್ತಾ ಇಳಿಬಿದ್ದ ಕೂದಲ ಜೊಂಪೆಯ ಸೀಳುಗಳಲ್ಲಿ ನಿಗಿನಿಗಿಸುವ ಮೃದು ನೀಳ ಕತ್ತು, ಭುಜಗಳಿಂದ ಹರಡಿಕೊಂಡು ಬರಬರುತ್ತ ಬಡವಾಗಿ. ನಡುವಾಗಿ, ಮತ್ತೆ ಅತ್ತ ಇತ್ತ ಉಬ್ಬಾಗಿ ಕಾಣುತ್ತಿರುವ ಆ ಪೊತ್ತಗಳ ಥೈಥಕ್ಕ, ಎದುರು ಬಿಸಿಲಿಗೆ ನಡೆಯುತ್ತಿರುವುದರಿಂದಾಗಿ ಸೀರೆಯೊಳಗೆ ಬಿಸಿಲು ಪ್ರತಿಫಲಿಸಿ, ದಷ್ಟಪುಷ್ಟ ತೊಡೆ ಗಳಿಂದ ಪಾದಗಳ ತನಕ ಗಟ್ಟಿ ಸುಣ್ಪುಗಳ ಸ್ಪಷ್ಟ ರೇಖಾವಿನ್ಯಾಸ – ಮುಗ್ಗರಿಸಿದೆ, ಕಲ್ಲೆ ಡವಿ."

ಹೌದು, ಕಥಾನಾಯಕ ಎಡವಿದ್ದು ಸಮಾಜದ ಕಟ್ಟುಪಾಡಿನ, ನೀತಿಯ ಕಲ್ಲು ಹೀಗೆ ಕಥೆ ಮೊದಲಿನಿಂದಲೂ ಕೊನೆಯವರೆಗೂ ದ್ವಂದ್ವಾರ್ಥಗಳಿಂದ ಕೂಡಿದ ಸಂಭಾ ಷಣೆಯಿಂದ ಲಯಬದ್ಧವಾಗಿ ಛಂದೋಗತಿಯಲ್ಲಿ ಕಾವ್ಯಮಯವಾಗಿ ಬರುವ ವರ್ಣನೆ ಗಳಿಂದ, ಸಂಕೇತಾರ್ಥಗಳಿಂದ. ಧ್ವನಿಯಿಂದ ಸಾಗಿ ಈ ಸಂಕಲನದ ಅತ್ಯುತ್ತಮ ಕಥೆ ಎನಿಸುತ್ತದೆ. ಈ ಕಥೆಯನ್ನು ಓದಿದಾಗ ತಟ್ಟನೆ ಸುಧಾಕರರ 'ಸೆಳೆತ' ನೆನಪಿಗೆ ಬರು ತ್ತದೆ.

'ಪಂಪಾ ತುಂತುರ', 'ಕಾಡು ಗಿಡಗಳು' ಮತ್ತು 'ಐದು ಮತ್ತು ಹತ್ತು' ಬೇರೆ ಬೇರೆ ಲೇಖಕರ ಕಥಾಸಂಕಲನಗಳು. 'ಪಂಪಾತುಂತುರ' ಮತ್ತು 'ಕಾಡುಗಿಡಗಳು' ಜಿಲ್ಲಾ ಪ್ರಾತಿನಿಧಿಕ ಸಂಕಲನಗಳು. 'ಪಂಪಾತುಂತುರ' ಬರಡು ಬರಡಾಗಿ ಕಂಡುಬಂದರೆ ಶ್ರೀಮಂತವೂ ಸಂಪದ್ಭರಿತವೂ ಆದ ಮಂಡ್ಯ ಜಿಲ್ಲೆಯಂತೆ 'ಕಾಡುಗಿಡಗಳು' ಉತ್ತಮ ವಾದ ಸತ್ವಪೂರ್ಣ ಕಥೆಗಳನ್ನು ಒಳಗೊಂಡಿದೆ. 'ಐದು ಮತ್ತು ಹತ್ತು'ವಿನ ಸಂಪಾದ ಕರು ಅಲ್ಲಿಯ ಕಥೆಗಾರರು ಇಂತಹ ಜಿಲ್ಲೆಯವರಾಗಬೇಕೆಂಬ ನಿರ್ಬಂಧ ಹಾಕಿಕೊಂಡಿಲ್ಲ ವಾದ್ದರಿಂದ ಸಹಜವಾಗಿಯೆ ಅಲ್ಲಿ ಒಳ್ಳೆಯ ಕಥೆಗಳಿಗೆ ಸ್ಥಾನ ಸಿಕ್ಕಿದೆ. ಯಾವುದೆ ಒಬ್ಬ ಕಥೆಗಾರನ ಕಥೆಗಳೆಲ್ಲವೂ ಉತ್ತಮ ಕಥೆಗಳಾಗಿರುವುದಿಲ್ಲ. ಹೀಗಾಗಿ ಓದುಗ ಒಂದು ಒಳ್ಳೆಯ ಕಥೆಯನ್ನು ಓದಬೇಕಾದರೆ ಆದರ ಜೊತೆಯಲ್ಲಿ ಹಲವಾರು ಸಾಧಾರಣ ಕಥೆ ಗಳನ್ನೂ ಓದಬೇಕಾಗುತ್ತದೆ. ಆದ್ದರಿಂದ ಬೇರೆಬೇರೆಯ ಕಥೆಗಾರರ ಉತ್ತಮ ಕಥೆಗಳ ಸಂಗ್ರಹ ಆವಶ್ಯಕ. ಜಿಲ್ಲಾವಾರು ಪ್ರಾತಿನಿಧಿಕ ಸಂಕಲನಗಳಲ್ಲಿ ಆದರ ವ್ಯಾಪ್ತಿ ಸೀಮಿತ ವಾಗಿಹೋಗುತ್ತದೆ. ಆದರೂ ಆ ಜಿಲ್ಲೆಯ ವೈಶಿಷ್ಟ್ಯವನ್ನು ತೋರುವಂತಹ ಅಥವಾ ಪ್ರತಿಭಾವಂತ ಲೇಖಕರ ಉತ್ತಮ ಕಥೆಗಳ ಸಂಗ್ರಹ (ಉದಾಹರಣೆಗೆ 'ಕಾಡುಗಿಡಗಳು') ವನ್ನು ತರುವುದಾದರೆ ಅಂತಹ ಸಂಕಲನಗಳಿಗೆ ಸದಾ ಸ್ವಾಗತ ಇದ್ದೇ ಇರುತ್ತದೆ.

**ಸ್ಫೂರ್ತಿ** ಶ್ರೀಮತಿ ಎಂ. ಕೆ. ಇಂದಿರಾರವರ ಹನ್ನೆರಡು ಕಥೆಗಳ ಸಂಕಲನ. 'ವಧು ಬೇಕಾಗಿದೆ' ಕಥೆಯಲ್ಲಿ ಕಾಮತ್. ಸಿಂಗ್ ಮತ್ತು ಹರಿಣಾ ಆವರು ವರಮಾನ ತೆರಿಗೆಯ ಅಧಿಕಾರಿಗಳು ಮತ್ತು ಸ್ಟೆನೊ ಎಂಬುದು ಕೊನೆಯವರೆಗೂ ತಿಳಿಯದೆ ಕಥೆ ಅನಿರೀಕ್ಷಿತ ತಿರುವನ್ನು ಪಡೆದು ಮುಕ್ತಾಯವನ್ನು ಹೊಂದುತ್ತದೆ. ಪ್ರಕಾಶನನ್ನು ಪ್ರೀತಿ ಸಿದ್ದ ಹರಿಣಾಳಿಗೆ ಆದ ನಿರಾಶೆಯ ಬಗ್ಗೆ ಕಥೆ ಗಮನವನ್ನು ಹರಿಸುವುದಿಲ್ಲ. 'ಮಾರ್ಗ

ದರ್ಶಿ' ಕಥೆಯಲ್ಲಿ ಆಗರ್ಭ ಶ್ರೀಮಂತ ಪುತ್ರಿ ಅಶ್ವಿನಿ ತನ್ನವನಾಗಬಹುದಾಗಿದ್ದ ಅರೋಗ ದೃಢಕಾಯನೂ, ಸುಂದರನೂ, ವಿದ್ಯಾವಂತನೂ ಆದ ಅನಂತಮೂರ್ತಿಗೆ ತನ್ನಲ್ಲಿರುವ ಕುಂದನ್ನು ತಿಳಿಸಿ ಅವನನ್ನು ದೂರಮಾಡಿ ಅವನ ಮುಂದಿನ ಬಾಳಿಗೂ ಮಾರ್ಗದರ್ಶನ ಮಾಡುವ ಅವಳ ವ್ಯಕ್ತಿತ್ವ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. ಅವಳ ದಿಟ್ಟತನ, ಚಾತುರ್ಯ ಬೆರಗುಗೊಳಿಸುತ್ತದೆ. 'ವಧು ಬೇಕಾಗಿದೆ' ಮತ್ತು 'ಮಾರ್ಗದರ್ಶಿ' ಎರಡೂ ಪ್ರೇಮದ ಕಥೆಗಳೇ ಆದರೂ ಎರಡೂ ಬೇರೆಬೇರೆ ರೀತಿಯ ಕಥೆಗಳು. 'ಹೀನಸುಳಿ' ಕಥೆ ಯಲ್ಲಿ ಸೊರಬದ ಶೇಷಪ್ಪನ ದುಷ್ಟಚಾಳಿ ಕೊನೆಯವರೆಗೂ ಉಳಿದು ಬಂದಿರುವುದು ಕಾಣುತ್ತದೆ. ಸತ್ತು ಹೋಗಿದ್ದಾನೆಂದು ಭಾವಿಸಿದ ಶೇಷಪ್ಪ ಕಥೆಯ ಕೊನೆಗೆ ಪುನಃ ಕಾಣಿಸಿಕೊಂಡು ತನ್ನ ಸ್ವಭಾವವನ್ನು ಮತ್ತೆ ಪ್ರಕಟಿಸುತ್ತಾನೆ. 'ಕೃತಜ್ಞತೆ'ಯಲ್ಲಿ ದೊಡ್ಡವ ರಿಂದ ಮುಂದೆ ಬಂದ ಅಪ್ಪಣ್ಣ ಭಟ್ಟರು ಆ ಉಪಕಾರವನ್ನು ಮರೆಯದೆ ದೊಡ್ಡವರ ಮಗ ದಾರಿಬಿಟ್ಟು ಕೆಟ್ಟಾಗ ಅವನ ನೆರವಿಗೆ ನಿಲ್ಲುವುದನ್ನು ಕಾಣುತ್ತೇವೆ. ದೊಡ್ಡವರ ಮಗ ವಿಷ್ಣುವನ್ನು 'ಹೀನಸುಳಿ'ಯ ಶೇಷಪ್ಪನಿಗೆ ಹೋಲಿಸಬಹುದು. 'ಪಂಜು ಕಳ್ಳರು' ಕಥೆ ಕಥೆ ಗಿಂತ ಹೆಚ್ಚಾಗಿ ಒಂದು ವರದಿಯಂತಿದೆ. 'ಸುಖಾಂತ' ಕಥೆಯಲ್ಲಿ ಹಿರಿಯರ ದ್ವೇಷದಿಂ ದಾಗಿ ಅಕ್ಕಪಕ್ಕದ ಮನೆಯ ಕಮಲಿ ಮತ್ತು ರಾಮು ಪರಸ್ಪರ ಪ್ರೀತಿಸುತ್ತಿದ್ದರೂ ಬೇರೆ ಬೇರೆಯಾಗಿ ಹತ್ತು ವರ್ಷದ ನಂತರ ಮುಂಬಯಿಯಲ್ಲಿ ಭೇಟಿಯಾಗಿ ದುಃಖಪೂರಿತ ವಾಗಿದ್ದ ತಮ್ಮ ಬಾಳನ್ನು ಅತಿಯಾಗಿ ನಿದ್ರೆಗುಳಿಗೆ ಸೇವಿಸಿ 'ಸುಖಾಂತ' ಮಾಡಿಕೊಳ್ಳು ತ್ತಾರೆ.

'ಮೃತ್ಯುಂಜಯ' ಸುಂದರವಾದ ಕಥೆ. ಕಥೆಯ ನಿರೂಪಣಾ ವಿಧಾನವೂ ಅಷ್ಟೇ ಚೆನ್ನಾಗಿದೆ. ಕಥೆ ವ್ಯಂಗ್ಯವಾಗಿ ಇಂದಿನ ಆಸ್ಪತ್ರೆಗಳ ಸ್ಥಿತಿಯನ್ನು ವರ್ಣಿಸುತ್ತದೆ. 'ಸ್ವರ್ಗ ದಲ್ಲಿ ಸುಖವಿಲ್ಲ' ಕಥೆಯಲ್ಲಿ ಸ್ವರ್ಗಲೋಕಕ್ಕಿಂತ ಭೂಲೋಕವೇ ಮೇಲೆಂಬ ಅಭಿಪ್ರಾಯ ದೇವತೆಗಳು, ಅಪ್ಸರೆಯರು ಮತ್ತು ಸ್ವರ್ಗದಲ್ಲಿರುವ ಮಾನವರಲ್ಲಿ ಕಂಡುಬರುತ್ತದೆ. ಇದು ಕಥೆಗಿಂತ ಹೆಚ್ಚಾಗಿ ಹರಟೆಯಂತಿದೆ. ವೈವಿಧ್ಯವಿಲ್ಲದ ಜೀವನ ಬೇಸರದ ಆಗರ ಎಂಬುದನ್ನು ಕಥೆ ಧ್ವನಿಸುತ್ತದೆ. ಪೋಲೀಸು ಇಲಾಖೆಗೆ ಚಳ್ಳೆಹಣ್ಣು ತಿನ್ನಿಸುತ್ತಿದ್ದ ಕಿಕ್ಕೇರಿ ನಂಜನನ್ನು ಅರಸೀಕೆರೆಯ ಪೋಲೀಸ್ ಇನ್‌ಸ್ಪೆಕ್ಟರ್ ನರಸಿಂಹರಾಯರ ಹೆಂಡತಿ (ಪೋಲೀಸ್) ಪುಟ್ಟಮ್ಮ ಹಿಡಿದ ಕಥೆ 'ಪೋಲೀಸ್ ಪುಟ್ಟಮ್ಮ'. ಕಥೆಯ ಪ್ರಾರಂಭದ ಬಹುಭಾಗ ಅನವಶ್ಯಕವಾಗಿದ್ದು ಕಥೆಯ ಶಿಲ್ಪ ಜಾಳುಜಾಳಾಗಿದೆ. 'ಪಶುವಿಜ್ಞಾನಿ' ಯಲ್ಲಿ ದೊಳ್ಳಸಿಗೆ ಪ್ರಾಣಿಗಳನ್ನು ವಾಸನೆಯಿಂದಲೇ ಗುರುತು ಹಿಡಿಯುವುದು. ಅವು ಗಳ ಖಾಯಿಲೆಯನ್ನು ಗುಣಪಡಿಸುವುದು ಮುಂತಾದುವು ತಾತ ದೊಳ್ಳನಿಂದಲೇ ರಕ್ತ ಗತವಾಗಿ ಬಂದಿದ್ದು. ಆ ಅಲೌಕಿಕ ಶಕ್ತಿಯನ್ನು ಕಾರ್ಯ ಕಾರಣ ಸಂಬಂಧವನ್ನು ಕೊಟ್ಟು ವಿವರಿಸಲಾರ. ಆದರೆ ಅವನು ಪ್ರಾಣಿಗಳ ವಿಚಾರವಾಗಿ ನುಡಿದದ್ದು ಎಂದೂ ಸುಳ್ಳಾಗಿಲ್ಲ. ಹೀಗೆ ದೊಳ್ಳನ ಸಂಬಂಧಿತವಾದ ನಾಲ್ಕಾರು ಚಿತ್ರಗಳು 'ಪಶುವಿಜ್ಞಾನಿ' ಕಥೆಯಲ್ಲಿ ಬರು ತ್ತವೆ. ಇದು ಕಥೆಗಿಂತ ಹೆಚ್ಚಾಗಿ ಮಲೆನಾಡಿನ ಒಂದು ಚಿತ್ರವಾಗಿದೆ. 'ಮೌನಗೌರಿ' ಕಥೆಯಲ್ಲಿ ಗಂಡ ಮತ್ತು ಅತ್ತೆ ಓಡಿಸಿದ್ದರಿಂದ ಬೀದಿಪಾಲಾಗಿದ್ದ ಅಂಬಚ್ಚಿಗೆ ತಮ್ಮಯ್ಯ-

ಆ ಊರಿನ ದೇವಸ್ಥಾನದ ಪಾರುಪತ್ತೇಗಾರ – ದೇವಸ್ಥಾನದಲ್ಲಿ ಇರಲು ಅನುಕೂಲ ಮಾಡಿಕೊಡುತ್ತಾನೆ. ತಮ್ಮಯ್ಯ–ಪುಟ್ಟತಾಯಿಯರ ಸಂಸಾರದೊಳಕ್ಕೆ ಇವಳ ಪ್ರವೇಶ ವಾಗುವಾಗ ಪುಟ್ಟತಾಯಿಯ ಸೇವೆಯಿಂದಾಗಿ ಆ ಊರನ್ನೇ ಬಿಟ್ಟು ತೊಲಗುತ್ತಾಳೆ ಅಂಬಕ್ಕ. ಆ ಸೇವೆ ಏನು ಎಂಥದು ಎಂಬುದು ಪುಟ್ಟತಾಯಿಗೊಬ್ಬಳಿಗೆ ಗೊತ್ತು. ಅವ ಳಾದರೋ ಮೌನಗೌರಿ. ಉಳಿದವರಿಗೆ ಹೇಗೆ ತಿಳಿದೀತು? ಹೀಗೆ ಗಂಡ ತಪ್ಪುದಾರಿ ಹಿಡಿ ದಾಗಲೂ ಉದ್ವೇಗಕ್ಕೆ ಒಳಗಾಗದೆ ಸದಾ ಸ್ಥಿತಪ್ರಜ್ಞಳಂತೆ ಮೌನವಾಗಿರುವ ಪುಟ್ಟ ತಾಯನ್ನು ಕಂಡರೆ ಮೌನ ಬಂಗಾರ ಎನ್ನದೆ ವಿಧಿಯಿಲ್ಲ. 'ಸ್ಫೂರ್ತಿ' ಕಥೆಯ ಉಮಾ ಮತ್ತು ಕಮಲಾಕಾಂತ ಗೆಳೆಯರು. ಎರಡು ಮೂರು ವರ್ಷ ಅಗಲಿದ ಮೇಲೆ ಒಬ್ಬರ ಪತ್ರೆ ಮತ್ತೊಬ್ಬರಿಗಾಗುತ್ತದೆ. ಅದೂ ಉಮಾ ಬರೆದ ಕಥೆ 'ಸ್ಫೂರ್ತಿ'ಯಿಂದ. ಬಹು ಕಾಲದ ನಂತರ ಗೆಳೆಯನಿಗೆ ಬರೆಯುವ ಕಮಲಾಕಾಂತನ ಪತ್ರ ಮತ್ತು ಅದಕ್ಕೆ ಉತ್ತರ ವಾಗಿ ಉಮನ ಹೆಂಡಿತಿ ಉಮಾ ತನ್ನ ಗಂಡನೇ ಬರೆದಂತೆ ಬರೆಯುವ ಪತ್ರಗಳು ಸೊಗ ಸಾಗಿವೆ. ತನ್ನ ಸ್ನೇಹಿತ ಕಥೆಗಾರನಾದ ಎಂದುಕೊಂಡಿದ್ದ ಕಮಲಾಕಾಂತನಿಗೆ ಮಾರನೆಯ ದಿನ ಮತ್ತೊಂದು ಪತ್ರ ಬಂದು ನೈಜ ಸಂಗತಿ ತಿಳಿದು ತನ್ನ ಸ್ನೇಹಿತ ಕಥೆಗಾರನಲ್ಲವೆಂದೂ ಆದರೆ ಅವನ ಹೆಂಡತಿ ಉಮಾಳೇ ಕಥೆಗಾರ್ತಿಯೆಂದೂ ಅವಳ ಅಪೇಕ್ಷೆಯಂತೆ ಉಮನ ಹೆಸರಲ್ಲೇ ಕಥೆ ಪ್ರಕಟವಾಗಿದೆ ಎಂದೂ ತಿಳಿದು ಬೇಸ್ತು ಬೀಳುತ್ತಾನೆ. ಇಷ್ಟಕ್ಕೆಲ್ಲಾ ಕಾರಣ ಗಂಡ ಹೆಂಡಿರ ಹೆಸರು ಒಂದೇ ಆಗುವುದು. ಕಥೆಯ ನಿರೂಪಣಾ ವಿಧಾನ ಚೆನ್ನಾ ಗಿದೆ.

ಶ್ರೀಮತಿ ಎಂ. ಕೆ. ಇಂದಿರಾ ಅವರ ಕೆಲವು ಕಥೆಗಳನ್ನು ಬಿಟ್ಟು ಉಳಿದವನ್ನು ಕಥೆ ಗಳು ಎನ್ನುವುದಕ್ಕಿಂತ ಹರಟೆಗಳು ಅಥವಾ ಚಿತ್ರಗಳು ಎಂದರೆ ಸರಿಹೋಗುತ್ತದೆ. ಕಥೆ ಹೇಳುವುದರಲ್ಲಿ ನಾವೀನ್ಯತೆ ಏನೂ ಇಲ್ಲ. ಸರಳವಾದ ನೇರವಾದ ಕಥಾತಂತ್ರ. ಇವರ ಬರವಣಿಗೆಯಲ್ಲಿ ಮಲೆನಾಡಿನ ಭಾಷೆ ಅಲ್ಲಲ್ಲಿ ಹಣಕುವುದೊಂದು ವೈಶಿಷ್ಟ್ಯ. ಶ್ರೀಮತಿ ಎಂ. ಕೆ. ಇಂದಿರಾರವರಿಂದ ಇನ್ನೂ ಉತ್ತಮ ದರ್ಜೆಯ ಕಥೆಗಳನ್ನು ನಿರೀಕ್ಷಿಸಿದರೆ ತಪ್ಪಲ್ಲ.

**ತುಂಗಭದ್ರೆಯ ಮಡಿಲಲ್ಲಿ** ಶ್ರೀಮತಿ ನಿರುಪಮಾ ಅವರ ಹತ್ತು ಕಥೆಗಳ ಸಂಕ ಲನ. 'ತುಂಗಭದ್ರೆಯ ಮಡಿಲಲ್ಲಿ' ಈ ಕಥಾಸಂಕಲನದ ಮೊದಲ ಕಥೆ. ತುಂಗಭದ್ರೆಯ ಅಣೆಕಟ್ಟಿನಿಂದಾಗಿ ಹಳ್ಳಿಗಳು ಸ್ಥಳಾಂತರಗೊಂಡಾಗ ಹುಟ್ಟೂರನ್ನು ಬಿಟ್ಟು ಹೊಸ ಊರಿಗೆ ಹೋದ ರಂಗಪ್ಪ ಆರು ವರ್ಷಗಳು ಗತಿಸಿದರೂ ಹಳೆಯ ಊರಿನ ನೆನಪಿನಿಂದ ಸುಳಿ ಯಲ್ಲಿ ಸಿಕ್ಕಿದ ಮೀನಿನಂತೆ ತೊಳಲಾಡುವ ಚಿತ್ರಣವಿದೆ. 'ನಾಗಸಮಸ್ಯೆ' ಒಂದು ವಿಡಂಬ ನಾತ್ಮಕ ಕಥೆ. ಸರಕಾರದ ನಿಧಾನ ಪ್ರವೃತ್ತಿಯನ್ನೂ, ಅದ ಕೆಲಸಗಳಿಗೂ ಸಂಭಾವನೆ ಕೊಡದೆ ಸತಾಯಿಸುವ ಅಧಿಕಾರಶಾಹಿ ಪ್ರವೃತ್ತಿಯನ್ನೂ ವಿಡಂಬಿಸುತ್ತದೆ ಈ ಕಥೆ. 'ವಿಜ್ಞಾನದ ಅಗ್ನಿಗೋಳದಲ್ಲಿ' ಒಂದು ಕಾಲ್ಪನಿಕ ಕಥೆ. ವಿಜ್ಞಾನದ ಮುನ್ನಡೆ ಮಾನವನ ಶಾಂತ ಬದುಕಿಗೆ ಹೇಗೆ ಮಾರಕವಾಗಬಲ್ಲುದು ಎಂಬುದನ್ನು ಈ ಕಥೆಯಲ್ಲಿ ಚಿತ್ರಿಸಲಾ ಗಿದೆ. 'ಯೋಗಿ' ಕಥೆಯಲ್ಲಿ ಭಾರತದ ಪ್ರವಾಸಿ ಜಪಾನೀಯರ ನಡೆನುಡಿಗಳನ್ನು ಮುಕ್ತ

ಕಂಠದಿಂದ ಹೊಗಳುತ್ತಾನೆ. ಅದಕ್ಕೆ ಪ್ರತಿಯಾಗಿ ಯೋಷಿಕೆ ಅವರು ಗೀತೆಯನ್ನು ಮೆಚ್ಚಿಕೊಂಡು ಅದರಲ್ಲಿನ ಯೋಗಿಯ ಲಕ್ಷಣಗಳನ್ನು ಉದಾಹರಿಸುತ್ತಾರೆ. ಕಥೆಯ ಕೊನೆಯಲ್ಲಿ ಯೋಷಿಕೆ ಯಾವ ಯೋಗಿಗೂ ಕಡಿಮೆಯಿಲ್ಲ ಎಂಬುದು ತಿಳಿದುಬರುತ್ತದೆ. ಸುಮಾರು ಇಪ್ಪತ್ತು ಸಾವಿರ ಡಾಲರಿನ ಅಂಗಡಿ ಸುಟ್ಟುಹೋದಾಗಲೂ, ಪ್ರೀತಿಪಾತ್ರನಾದ ತಮ್ಮ ಮರಣೋನ್ಮುಖನಾಗಿದ್ದಾಗಲೂ ನಗುಮುಖದಿಂದಲೇ ಇದ್ದು ಅತಿಥಿಗೆ ಅದರ ಸುಳಿವು ಹತ್ತದಂತೆ ಆಚರಿಸಿದ ಅವರು ಯೋಗಿಯಲ್ಲದೆ ಮತ್ತೇನು? ತಮಿಳು ಕಥೆಯೊಂದಕ್ಕೆ ಅಂಶತಃ ಋಣಿಯಾಗಿರುವ ಈ ಕಥೆ ಈ ಸಂಕಲನದ ಉತ್ತಮ ಕಥೆ ಎಂದು ಹೇಳಬಹುದು. ಜ್ಯೋತಿಷ್ಯವನ್ನು ನಂಬಿ ಬಾಳನ್ನು ಹಾಳು ಮಾಡಿಕೊಳ್ಳುವವರನ್ನು ವಿಡಂಬಿಸುವ ಕಥೆ 'ಕೆಂಪುದೀಪ'. ಕಥಾ ಶೀರ್ಷಿಕೆ ಔಚಿತ್ಯಪೂರ್ಣವಾಗಿಲ್ಲ. ಅಧಿಕಾರದಲ್ಲಿದ್ದಾಗ ಮತ್ತು ಅಧಿಕಾರವನ್ನು ಕಳೆದುಕೊಂಡಾಗ ಜನರ ನಡವಳಿಕೆ ಅಧಿಕಾರಿಯ ಬಗೆ ಹೇಗಿರುತ್ತದೆ ಎಂಬುದನ್ನು 'ಇನ್‌ಸ್ಪೆಕ್ಟರ್ ನಾಯಿ' ಕಥೆಯಲ್ಲಿ ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. 'ತಿಂಮನ ಪ್ರೇಮಾಯಣ' ಒಂದು ಸಾಧಾರಣ ಕಥೆ. ತಿಂಮನ ಮಂಗಚೇಷ್ಟೆಗಳು ನಗು ಬರಿಸುತ್ತವೆ. ಈ ಸಂಗ್ರಹದ ಒಂದೇ ಒಂದು ಐತಿಹಾಸಿಕ ಕಥೆ ಎಂದರೆ 'ಪರಿವರ್ತನೆ'. ಹುಯನ್‌ತ್ಸಾಂಗನಿಗೆ ಸಂಬಂಧಪಟ್ಟ ಕಥೆ ಇದು. ಐತಿಹಾಸಿಕ ಕಥೆಗೆ ಬೇಕಾದ ಬಿಗಿ, ಪ್ರೌಢಭಾಷೆ ಇಲ್ಲದೆ ಕಥೆ ಜಾಳುಜಾಳಾಗಿದೆ. ಈ ಸಂಕಲನದ ಕೊನೆಯ ಕಥೆ 'ಬಲಿದಾನ' ಕಾಮರೂಪದ ಜನಪದ ಕಥೆಯ ಆಧಾರದಿಂದ ರಚಿತವಾಗಿದೆ. ಪರೀಕ್ಷಿತ್ತರ ಮಹಾ ಶಿಷ್ಯ ಪುಂಡರೀಕ ತನ್ನ ವೇಣುವಾದನದಿಂದ ಮಹಾಗಾಯಕ ಸೂರದಾಸರ ಮೆಚ್ಚುಗೆ ಪಡೆಯಬೇಕೆಂದು ಮಾಯಾವಿ ಕಾಳಿಕಾರಾಧಕನನ್ನೇ ಸೂರದಾಸನೆಂದು ಅಂದುಕೊಂಡು ಅವನೆದುರಿಗೆ ತನ್ನ ಗಾನಸುಧೆಯನ್ನು ಹರಿಸಿ. ದೇವಿಯನ್ನು ವಶ ಮಾಡಿಕೊಟ್ಟು, ತನ್ನ ತಪ್ಪಿನ ಅರಿವಾದ ಮೇಲೆ ದೇವಿಯ ಬಿಡುಗಡೆಗೆ ಪ್ರಯತ್ನಿಸಿ, ಪ್ರಾಣಾರ್ಪಣೆ ಮಾಡಬೇಕಾಗಿ ಬಂದರೂ ಹಿಂದೆಗೆಯದೆ ತನ್ನನ್ನೇ ಅರ್ಪಿಸಿಕೊಂಡ ಕಥೆ 'ಬಲಿದಾನ'. ಈ ಕಥೆ ಸುಂದರವಾಗಿ ಮೂಡಿಬಂದಿದೆ.

ಎಲ್ಲ ಕಥೆಗಳೂ ಚೆನ್ನಾಗಿವೆ. 'ಯೋಗಿ' ಈ ಸಂಕಲನದ ಉತ್ತಮ ಕಥೆ. ತೀರ ಕಳಪೆ ಎನ್ನುವಂತಹುವು ಯಾವುವೂ ಇಲ್ಲ. ಎಲ್ಲವನ್ನೂ ಸರಳೀಕರಿಸಿ ನೋಡದೆ ಜೀವನದ ಆಳವಾದ ಅನುಭವಗಳಿಗೆ ಅಂತಹುದೇ ಅಭಿವ್ಯಕ್ತಿಯನ್ನು ಕೊಟ್ಟರೆ ಶ್ರೀಮತಿ ನಿರುಪಮಾರವರು ಇನ್ನೂ ಉತ್ತಮ ಕಥೆಗಳನ್ನು ಕೊಡಬಲ್ಲರು.

ಶ್ರೀಮತಿ ಎಚ್. ಎಸ್. ಪಾರ್ವತಿ ಅವರ **ಸ್ವರ–ಅಪಸ್ವರ** ಹತ್ತು ಕಥೆಗಳ ಕಥಾಸಂಕಲನ. ಇದು ಶ್ರೀಮತಿ ಎಂ. ಕೆ. ಇಂದಿರಾ ಅವರ ಆಶೀರ್ವಚನದಲ್ಲಿ ಲೇಖಕಿಯ ತಿಳಿಸಿರುವ 'ಅದರ ಸ್ವರ'ವನ್ನೂ ಒಳಗೊಂಡಿದೆ.

ಮೊದಲನೆ ಕಥೆ 'ಯಾರಿಗಾಗಿ ಕಾದಿರುವೆ'ಯಲ್ಲಿ ತುಂಬಿದ ಸಂಸಾರದಲ್ಲಿ ನಿರ್ಯೋಚನೆಯಿಂದ ಇದ್ದ ರಾಯರು ತಮ್ಮ ಬಾಳ ಕೊನೆಗಾಲದಲ್ಲಿ ಮೈಸೂರಿಗೆ ಹೋಗಿದ್ದಾಗ ತಮ್ಮ ಮನೆಯಲ್ಲಿ ಕೆಲಸಕ್ಕಿದ್ದ ಸುಂದರಮ್ಮನನ್ನು ಕಂಡು ಹಿಂದಿನದೆಲ್ಲವೂ ನೆನಪಾಗಿ

ಪಾಪಪ್ರಜ್ಞೆಯಿಂದ ನರಳಿ ಸಾಯುತ್ತಾರೆ. ರಾಯರನ್ನು ಸಾಯಿಸುವುದರ ಮೂಲಕ ಕಥೆಗಾರ್ತಿ ಕಥೆಯನ್ನು ಸರಳಗೊಳಿಸಿದ್ದಾರೆ ಎನ್ನಬಹುದು. 'ರೇಷ್ಮೆಸೀರೆ' ಕಥೆಯಲ್ಲಿ ಬಡತನದ ನೈಜ ಚಿತ್ರಣವೇ ಬಂದಿದೆ. ಒಂದು ರೇಷ್ಮೆಸೀರೆಗಾಗಿ ನಿಂಗಿ ಪಡುವ ಬವಣೆ, ಹಣ ಕೂಡಿಡಲು ಅವಳು ಪಡುವ ಪ್ರಯತ್ನ, ಮಾಡುವ ದೃಢ ನಿರ್ಧಾರಗಳು, ಆದರೆ ಮಾನವೀಯ ಕಾರಣಗಳಿಗಾಗಿ ತನ್ನ ಜೀವನದ ಏಕೈಕ ಆಸೆಯನ್ನು ಕಡೆಗಣಿಸಿ ಅವಳು ಕೂಡಿಟ್ಟ ಹಣವನ್ನು ತೆಗೆಯುವುದು ಎಂಥವರ ಹೃದಯವನ್ನಾದರೂ ತಟ್ಟುತ್ತದೆ. ಭಾಷೆ ಬೇಕೆಂದೇ ಗ್ರಾಮ್ಯವಾದಂತೆ ತೋರುತ್ತದೆ. 'ನೆನಪು ಸಾಯಲಿಲ್ಲ' ಕಥೆಯಲ್ಲಿ ಗೀತ ತನಗೆ ಅನುರೂಪನಾದ ವರ, ನಾಗರಾಜ ಸಿಕ್ಕಿದ್ದಾಗಲೂ, ಮದುವೆ ನಿಶ್ಚಯವಾಗಿದ್ದಾಗಲೂ ಎರಡು ವರ್ಷದ ಹಿಂದೆ ಶೇಖರನ ಜೊತೆ ಆಡಿದ ಮಾತುಗಳನ್ನು ನೆನಸಿಕೊಂಡು (ನಾಗ ರಾಜನೂ ಅದೇ ಮಾತುಗಳನ್ನಾಡುತ್ತಾನೆ) ಶೇಖರನ ನೆನಪಿನಿಂದ ಹೊರಬರಲಾರದೆ ನಾಗರಾಜನನ್ನು ನಿರಾಕರಿಸುತ್ತಾಳೆ. 'ಪ್ಲಾಸ್ಟಿಕ್ ಹೂ' ಕಥೆಯಲ್ಲಿ ರಾಜಶೇಖರನು ತನ್ನ ಸ್ನೇಹ ಸರೋಜಳ ಜೊತೆಯಲ್ಲಿ ಸ್ನೇಹದ ಎಲ್ಲೆಯನ್ನು ದಾಟಿದ್ದರೂ ಹಣದಾಸೆಗೆ ಬಲಿ ಬಿದ್ದು ಸವಿತಾಳನ್ನು ಕೈಹಿಡಿದು ಹತ್ತಾರು ವರ್ಷಗಳಾದ ಮೇಲೆ ತಾನು ನಿಸರ್ಗಸಹಜ ಹೂವಾದ ಸರೋಜಳನ್ನು ಬಿಟ್ಟು ಪ್ಲಾಸ್ಟಿಕ್ ಹೂವಾದ ಸವಿತಾಳನ್ನು ಆರಿಸಿಕೊಂಡು ದಾಗಿ ಅರಿತುಕೊಳ್ಳುತ್ತಾನೆ. ಹಣದಾಸೆಗೆ ಬಲಿಬಿದ್ದು ತನ್ನತನವನ್ನೇ ಕಳೆದುಕೊಂಡ ರಾಜ ಶೇಖರನ ಮೂಲಕ ಸಮಾಜದಲ್ಲಿರುವ ಹಣ ಪಿಪಾಸು ವರಗಳಿಗೆ ಸೌಮ್ಯವಾದ ಎಚ್ಚ ರಿಕೆಯನ್ನು ಲೇಖಿಕಿ ಕೊಡುತ್ತಿದ್ದಾರೆ ಎನಿಸುತ್ತದೆ. 'ಮಾಯವಾದ ಮೋಡ' ಕಥೆಯ ಸವಿತಾ ಬಾಲ್ಯದಲ್ಲಿ ತನ್ನ ಜೊತೆ ಆಡುತ್ತಿದ್ದ ಪಕ್ಕದ ಮನೆ ಪ್ರಮೋದನನ್ನೇ ಗಂಡನೆಂದು ಭಾವಿಸಿಕೊಂಡಿದ್ದಳು. ಅವನ ನೆನಪಿನಿಂದಲೇ ಬಂದ ಎಲ್ಲ ವರಗಳನ್ನೂ ನಿರಾಕರಿಸು ತ್ತಿದ್ದಳು. ಆದರೆ ಆ ಭಾವನೆ ಒಡೆದು ಹೋಗಲು ಬಹುಕಾಲ ಬೇಕಾಗಲಿಲ್ಲ. ಪ್ರಮೋ ದನೇ ಎದುರಿಗೆ ಬಂದಾಗ ತನ್ನ ಕನಸಿನ ಪ್ರಮೋದನಿಗೂ ಎದುರಿಗಿರುವ ಪ್ರಮೋದನಿಗೂ ಇರುವ ಅಜಗಜಾಂತರ ವ್ಯತ್ಯಾಸ! ಮನಸ್ಸಿನ ಮೇಲಿನ ಮೋಡ ಚದುರಿ ಅದು ನಿರ್ಮಲ ವಾಗಿ, ತಂದೆ ತಾಯಿ ಆರಿಸಿದ ವರನಿಗೆ ಒಪ್ಪಿಗೆ ಕೊಡುತ್ತಾಳೆ ಸವಿತಾ. ಈ ಕಥೆಯಲ್ಲಿ ಮಕ್ಕಳಾಗಿದ್ದಾಗ ಮೂಡಿದ ಭಾವ, ಅಭಿಪ್ರಾಯಗಳನ್ನು ಬದಲಾಯಿಸಬೇಕಾದರೆ ಎಷ್ಟು ಕಷ್ಟ ಎಂಬುದನ್ನು ಕಾಣುತ್ತೇವೆ. 'ಸ್ವರ–ಅಪಸ್ವರ' ಕಥೆಯಲ್ಲಿ ಶಂಕರ ಅಂದ ಒಂದು ಮಾತಿಗೆ ಬೇಸರಪಟ್ಟುಕೊಂಡ ಉಮಾ ತನ್ನ ಗೆಳತಿಯ ಸಂಸಾರವನ್ನು ಕಂಡು ತನ್ನ ಸಂಸಾರ ಅವರದಕ್ಕಿಂತ ಉತ್ತಮ ಎಂದುಕೊಳ್ಳುತ್ತಾಳೆ. ಅವಳ ಸಂಸಾರದಲ್ಲಿ ಮೂಡಿದ್ದ ಅಪಸ್ವರ ತನಗಾಗಿ ತನ್ನ ಗಂಡ ಶಂಕರ ಆಫೀಸಿಗೆ ರಜ ಹಾಕಿ ಬಂದಿರುವುದು ತಿಳಿದು ಮಾಯವಾಗುತ್ತದೆ. ಸಂಸಾರ ಎಂದ ಮೇಲೆ ಸ್ವರ–ಅಪಸ್ವರ ಇದ್ದದ್ದೇ. ಎಲ್ಲರ ಸಂಸಾರವೂ ಸ್ವರ–ಅಪಸ್ವರಗಳಿಂದ ಕೂಡಿರುವುದೇ. 'ರಾಜು–ಬೇಬಿ' ಕಥೆಯಲ್ಲಿ ಬೇಬಿ ಹುಟ್ಟಿ ತನ್ನ ಸ್ಥಾನವನ್ನೆಲ್ಲಾ ಆಕ್ರಮಿಸಿಕೊಂಡಳು ಎನ್ನುವ ಭಾವನೆ, ತಂದೆ ತಾಯಿ ನನ್ನನ್ನು ತಿರಸ್ಕರಿಸುತ್ತಿದ್ದಾರೆ ಎನ್ನುವ ಭಾವನೆ ರಾಜುವಿನ ಮುಗ್ಧ ಮನಸ್ಸಿಗೆ ಬರು ತ್ತದೆ. ಮಕ್ಕಳ ಮನದಲ್ಲಿ ಮೂಡಬಹುದಾದ ಇಂಥ ಭಾವನೆಗಳನ್ನು ತಂದೆ ತಾಯಿಗಳು ಜಾಗರೂಕರಾಗಿದ್ದರೆ ಮೊಳಕೆಯಲ್ಲಿ ಚಿವುಟಿಹಾಕಬಹುದು. 'ಹೊಸತು–ಹಸಿರು' ಕಥೆ

ಯಲ್ಲಿ ಯವ್ವನದಲ್ಲಿರುವ ಉತ್ಸಾಹ ಆಸಕ್ತಿಗಳು ಕಾಲ ಕಳೆದಂತೆ, ಅನುಭವ ವಾದಂತೆ, ಮನಸ್ಸು ಮಾಗಿದಂತೆ ಉತ್ಸಾಹ ಇಂಗಿಹೋಗಿ ಆ ಸ್ಥಾನದಲ್ಲಿ ಒಂದು ರೀತಿಯ ಉದಾಸೀನ, ನಿರ್ಲಿಪ್ತಭಾವ ಹೇಗೆ ಮೂಡುತ್ತದೆ ಎಂಬುದನ್ನು ಕಾಂತ ಮತ್ತು ಕೆಲಸಕ್ಕೆ ಸೇರಿದ ಒಬ್ಬ ಯುವಕರ ಮೂಲಕ ಚಿತ್ರಿಸಿದ್ದಾರೆ. 'ಪ್ರವಾಹ' ಕಥೆಯಲ್ಲಿ "ಹೌದು ಗೌರಿ, ಪ್ರವಾಹ ಇಲ್ಲದೆ, ದಡ ಮೀರದೆ ಹರಿಯೋ ಈ ಕಾಲದ ನದಿ ನಿಜಕ್ಕೂ ಬಹಳ ಚೆನ್ನ. ಅದೇ ಮಳೆಗಾಲದಲ್ಲಿ ನೋಡೋದಕ್ಕೆ ಭಯ ವಾಗೋ ಹಾಗಿರುತ್ತದೆ. ಹೆಣ್ಣಿನ ಬಾಳೂ ಹೀಗೆ. ಹದ್ದುಮೀರಿ ಹರೀತು ಅಂದ್ರೆ ನೋಡೋದಕ್ಕೆ ವಿಕಾರ; ಬೇರೆಯವರಿಗೂ ಉಪಯೋಗವಿಲ್ಲ" ಎಂದು ಗೌರಿಯ ತಾಯಿ ಹೇಳುತ್ತಾಳೆ. ಕಾಕತಾಳೀಯ ನ್ಯಾಯದಂತೆ ಗೌರಿಯ ಬಾಳೂ ಸಂಗಣ್ಣನ ಪ್ರವೇಶದಿಂದಾಗಿ ಹದ್ದುಮೀರುತ್ತದೆ. ವಿಷಯ ಗಂಡ ಶಂಕರನಿಗೆ ಗೊತ್ತಾಗುತ್ತದೆ. ಈ ಕಥೆಯಲ್ಲಿ ಬರುವ ಪ್ರವಾಹದ ಸಂಕೇತ ಸಫಲವಾಗಿಲ್ಲ ಎನಿಸುತ್ತದೆ. ಈ ಕಥಾಸಂಕಲನದ ಕೊನೆಯ ಕಥೆ 'ಸಿಂಗಾರಿ'. ಇದು ಹಿಂದಿಯಿಂದ ಅನುವಾದವಾದ ಕಥೆ, ಐತಿಹಾಸಿಕವಾದ ಕಥೆ: ಸಿಂಗಾರಿ ಹೆಸರಿನ ಡೊಂಬರ ಹುಡುಗಿ ಮತ್ತು ಜಾಲೋರಿನ ಯುವರಾಜ ಬೀರಮ್‌ರ ಪ್ರಣಯ ಕಥೆ.

'ಸಿಂಗಾರಿ' ಒಂದು ಕಥೆಯನ್ನು ಬಿಟ್ಟರೆ ಉಳಿದ ಕಥೆಗಳೆಲ್ಲವೂ ನಿತ್ಯಜೀವನದ ವಸ್ತುಗಳನ್ನು ಕಥಾವಸ್ತುವಾಗಿ ಉಳ್ಳವು. ಕಥೆಗಳನ್ನು ಕುತೂಹಲ ಕೆರಳುವಂತೆ ಆಳಕ್ಕೆ ಇಳಿಯುವ ಧೈರ್ಯವನ್ನು ಕಥೆಗಾರ್ತಿ ಮಾಡುವುದಿಲ್ಲ. ಕಥೆಗಳನ್ನು ನೇರವಾಗಿ, ಸರಳ ವಾಗಿ ತೇಲಿಸಿ ಹೇಳಿಕೊಂಡುಹೋಗುವುದರಲ್ಲೇ ಲೇಖಕಿಯರ ಆಸಕ್ತಿ ಕಾಣುತ್ತದೆ.

**ನಕ್ಕಿತು ಹಾಲಿನ ಬಟ್ಟಲು** ಶ್ರೀಮತಿ ಕಮಲಾ ಹಂಪನಾ ಅವರ ಮೊದಲ ಕಥಾ ಸಂಗ್ರಹ. ಒಟ್ಟು ಹನ್ನೆರಡು ಕಥೆಗಳಿವೆ. 'ನಕ್ಕಿತು ಹಾಲಿನ ಬಟ್ಟಲು' ಈ ಸಂಕಲನದ ಮೊದಲ ಕಥೆ. ಅರವತ್ತು ವರ್ಷಗಳ ಮುದುಕ ರಾಮರಾಯರ ಜೀವನದಲ್ಲಿ ಹಾಲಿನ ಪ್ರಾಮುಖ್ಯತೆಯನ್ನು, ಹಾಲಿಗೂ ಅವರಿಗೂ ಅಂಟಿದ ನಂಟಿನ ಕಥೆಯನ್ನು ಹೇಳುವುದೇ ಈ ಕಥೆಯ ಮುಖ್ಯ ಉದ್ದೇಶ. ಕಥೆಗಿಂತ ಹೆಚ್ಚಾಗಿ ಇದು ಹಾಲಿನ ಉಪಯೋಗವನ್ನು ಕುರಿತ ಒಂದು ಪ್ರಬಂಧದಂತಿದೆ. 'ಊರಿಗೆ ಹೊರಟೇಹೋದರು' ಅಂತರಜಾತೀಯ ವಿವಾಹದ ದುರಂತತೆಯನ್ನು ಮಾರ್ಮಿಕವಾಗಿ ತಿಳಿಸುವ ಕಥೆ. ಕಥೆಯ ಪ್ರಧಾನ ಘಟನೆ ಯಾದ ಅಪಘಾತದ ಬಗ್ಗೆ ಇನ್ನಷ್ಟು ವಿವರಗಳು ಬಂದಿದ್ದರೆ ಚೆನ್ನಾಗಿತ್ತು. ಪ್ರಭಳ ಗಂಡ ಸುಧೀರನ ಗೆಳೆಯನಾದ ಡಾ॥ ಚಂದ್ರಶೇಖರ್ ಮಾಲಳಿಗೋಸ್ಕರ ಮಾಡುವ ಶುಶ್ರೂಷೆ ಮೊದಲಾದುವು ಮನಸೆಳೆಯುತ್ತವೆ. ಕಥಾಶೀರ್ಷಿಕೆ ಕಥೆಯ ಅಂತ್ಯವನ್ನು ಮೊದಲೇ ತಿಳಿಸಿಬಿಡುತ್ತದೆ. 'ಯೌವನ ನುಡಿಯಿತು' ಕಥೆಯಲ್ಲಿ ಕಥೆಗಾರ್ತಿ ಹೇಳಬೇಕೆಂದಿರುವುದು ಗಂಡಿನ ಆಸರೆ ಇಲ್ಲದೆ ಹೆಣ್ಣು ಬದುಕಲಾರಳು ಎಂದು. ಇದಕ್ಕಾಗಿ ಗಂಡು ಸಮಾಜವನ್ನೇ ದುಷ್ಟರನ್ನಾಗಿ ಚಿತ್ರಿಸಬೇಕಾಗಿರಲಿಲ್ಲ. ಇಂದಿನ ಕಾಲದಲ್ಲಿ ಗಂಡಿನ ಆಸರೆ ಇಲ್ಲದೆ ಹೆಣ್ಣು ಬದುಕಲಾರಳು ಎಂಬ ಮಾತನ್ನು ಒಪ್ಪಲು ಸಾಧ್ಯವಿಲ್ಲ. ಅದರಲ್ಲೂ ಸರಳೆಯಂಥವರ ಬಗ್ಗೆ ಈ ಮಾತು ಸುಳ್ಳಾಗುತ್ತದೆ. ಕಥೆಗಾರ್ತಿ ಹೇಳಬೇಕೆಂದಿ

ರುವ ಅಭಿಪ್ರಾಯವನ್ನು ಇನ್ನೂ ಸಮರ್ಥವಾಗಿ ಬೇರೆ ರೀತಿಯಲ್ಲಿ ಹೇಳಬಹುದಿತ್ತು. 'ಇದೇ ನಿನ್ನ ಬದುಕು' ಕಥೆಯಲ್ಲಿ ಸುಧೆ ಮಕ್ಕಳಿಲ್ಲದೆ ಪಡುವ ಮನೋವ್ಯಥೆ ಇದೆ. ಆದರೆ ಅವಳ ಅಳಲು ಓದುಗರ ಅಳಲಾಗುವುದಿಲ್ಲ. ಆ ಹೆಣ್ಣಿನ ಮನೋವ್ಯಥೆ, ಇತರರಿಂದ ನೊಂದ ರೀತಿ ಇವುಗಳು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಬಂದಿದ್ದರೆ ಚೆನ್ನಾಗಿತ್ತು. 'ಕಾನ್ವೊಕೇಷನ್ ಸೀರೆ'ಯಲ್ಲಿ ರುಕ್ಮಿಣಿಯ ಮಗಳು ಶೀಲಾ ತನ್ನ ಕಾನ್ವೊಕೇಷನ್‌ಗಾಗಿ ಪಡುವ, ಪಟ್ಟ ಸಡಗರದಿಂದ ತನ್ನ ಹಿಂದಿನ ಬಾಳಿನ ಪುಟಗಳನ್ನು ತೆರೆದು ತನ್ನ ಕಾನ್ವೊಕೇಷನ್ನಿನಂದು ತಾನು ಪಟ್ಟ ಬವಣೆಯನ್ನು ಜ್ಞಾಪಿಸಿಕೊಳ್ಳುತ್ತಾಳೆ ರುಕ್ಮಿಣಿ. ಕಥೆಯೇನೂ ಚೆನ್ನಾಗಿದೆ. ಆದರೆ ಉದ್ದೇಶ ಸೀಮಿತವಾದದ್ದು. 'ಸಮಸ್ಯೆಯ ಸುಳಿಯಲ್ಲಿ' ಕಥೆಯಲ್ಲಿ ವಾಸಂತಿ ತನ್ನ ತಾಯಿ ಮಾಡುತ್ತಿರುವ ತಪ್ಪಿನಿಂದಾಗಿ ನೊಂದು, ತನ್ನ ಭವಿಷ್ಯದ ಬಗ್ಗೆ ಭೀತಳಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. (ಅಂತಹ ಸೂಚನೆ ಕಥೆಯಲ್ಲಿದೆ.) ವಾಸಂತಿಯ ಸಮಸ್ಯೆಗೆ ಆತ್ಮಹತ್ಯೆಯೆ ಪರಿಹಾರವೆ? ಅವಳು ತಾಯಿಯನ್ನು ತಿದ್ದುವ ಪ್ರಯತ್ನ ಮಾಡಬಹುದಿತ್ತಲ್ಲಾ? ತಂದೆಗೆ ವಿಷಕೊಟ್ಟು ಕೊಂದ ತಾಯಿಯ ಮೇಲೆ ಪೋಲೀಸಿನವರು ಕ್ರಮ ಕೈಗೊಳ್ಳಲಿಲ್ಲವೆ? ಅಥವಾ ಅನುಮಾನವೆ ಬರಲಿಲ್ಲವೆ? ತನ್ನ ಹೆಂಡತಿಯ ಶೀಲದ ಬಗ್ಗೆ ಸಂದೇಹಗ್ರಸ್ತನಾಗಿದ್ದ ವಾಸಂತಿಯ ತಂದೆ ಸುಮ್ಮನಿದ್ದನೆ? ಕೃಷ್ಣಸ್ವಾಮಿಯನ್ನು ಸುಮ್ಮನೆ ಬಿಟ್ಟನೆ? ವಾಸಂತಿಯ ಅಜ್ಜಿ ತನ್ನ ಸೊಸೆ ಅಥವಾ ಮಗಳು (ಅಜ್ಜಿ ವಾಸಂತಿಯ ತಾಯಿಯ ತಾಯಿಯೊ ತಂದೆಯ ತಾಯಿಯೊ ತಿಳಿಯದು) ಮಾಡುತ್ತಿದ್ದ ವ್ಯಭಿಚಾರವನ್ನು ತಿಳಿದೂ ತಿಳಿದೂ ಸುಮ್ಮನಿದ್ದಳೆ? ವಾಸಂತಿಯ ತಂದೆಯ ಪರಮ ಸ್ನೇಹಿತನಾದ ಕೃಷ್ಣಸ್ವಾಮಿಗೆ ತಾನು ಮಾಡುತ್ತಿರುವುದು ಮಿತ್ರದ್ರೋಹ ಎನ್ನಿಸಲಿಲ್ಲವೆ? ಹೀಗೆ 'ಸಮಸ್ಯೆಯ ಸುಳಿಯಲ್ಲಿ' ಕಥೆ ನಮ್ಮನ್ನು ಸಂದೇಹಗಳ ಸುಳಿಯಲ್ಲಿ ಸಿಲುಕಿಸುತ್ತದೆ. 'ನಾನು ಹೀಗಾಗುತ್ತಿರಲಿಲ್ಲ' ಕಥೆಯಲ್ಲಿ ಅಣ್ಣಂದಿರ ಅನಾದರದಿಂದಾಗಿ ಛಲದಿಂದ ಜೀವನದಲ್ಲಿ ಮುಂದುವರಿದು 'ವಿಜ್ಞಾನದ ಮುನ್ನಡೆ' ಎಂಬ ತನ್ನ ಕೃತಿಗೆ ಸರಕಾರದಿಂದ ಪ್ರಶಸ್ತಿ ಗಳಿಸಿದಾಗ ಅಜಿತ ತನ್ನ ಬಾಳಿನ ಹಾಳೆಗಳನ್ನು ತಿರುವಿಹಾಕುತ್ತಾನೆ. ಬಡತನ ಪ್ರಗತಿಗೆ ಅಡ್ಡಿಯಾಗದು ಎಂಬುದನ್ನು ಈ ಕಥೆ ನಿರೂಪಿಸುತ್ತದೆ. 'ನಾನು ಎಲ್ಲಿಗೂ ಹೋಗೋಲ್ಲಾಮ್ಮಾ' ಒಂದು ಉತ್ತಮ ಕಥೆ. ಸುಧೀರನಿಗೆ ಕಾಲುಗಳು ಹೋಗಿರುವುದು ಕಥೆಯ ಕೊನೆಯವರೆಗೂ ಗೊತ್ತಾಗುವುದಿಲ್ಲ. ಅದರಿಂದ ಕಥೆಯಲ್ಲಿ ಒಂದು ರೀತಿಯ ಆಕರ್ಷಣೆ ಉಳಿದುಕೊಳ್ಳುತ್ತದೆ. ವಿಜಿ ಮತ್ತು ಸುಧೀಂದ್ರರ ಪ್ರೇಮದ ಬಗ್ಗೆ ಪುಟಗಟ್ಟಲೆ ಬರೆಯಬಹುದಾಗಿದ್ದ ಕಡೆ ಲೇಖಕಿ ಸಂಯಮ ತೋರಿದ್ದಾರೆ. ಕೆಲವೇ ಮಾತುಗಳಲ್ಲಿಯಾದರೂ ಪರಿಣಾಮಕಾರಿಯಾಗಿ ವಿಜಿಯ ಮನಸ್ಸನ್ನು ನಮಗೆ ತಿಳಿಸುತ್ತಾರೆ. 'ಸಲಹಿದವರು ಯಾರೊ!' ಕಥೆಯಲ್ಲಿ ಶೀಲಳಿಗೆ ಅವಳು ದೊಡ್ಡವಳಾಗುವವರೆಗೂ ಎದೆಹಾಲು ಕೊಡುವುದರಿಂದ ಹಿಡಿದು ನಾನಾರೀತಿಯಲ್ಲಿ ಕಾಪಾಡಿದ ಯಶೋದಮ್ಮನ ವಿಚಾರ ತಿಳಿದು ಶೀಲಳ ಗಂಡ ಬಾಹುಬಲಿ 'ನಿನ್ನನ್ನು ಹಡೆದವರು ಒಬ್ಬರಾದರೆ ಸಲಹಿದವರು ಯಾರೊ!' ಎನ್ನುತ್ತಾನೆ. ಹೆಂಗರುಳನ್ನು ಮಿಡಿಯುವ ಕಥೆ. 'ವರ್ತುಲ' ಕಥೆಯಲ್ಲಿ ಎರಡು ಗಂಡು ಒಂದು ಹೆಣ್ಣಿನ ತ್ರಿಕೋಣ ಸಮಸ್ಯೆ ಇದೆ. ಕಥಾಸೂತ್ರ ಹಳೆಯದಾದರೂ ಹೇಳಿರುವ ರೀತಿಯಲ್ಲಿ

ನಾಮೀನ್ಯತೆ ಇದೆ. ಗೋಪಿಯ ಆಳವಾದ ಪ್ರೇಮ, ಪ್ರಣಯಭಂಗ ಹೊಂದಿದ್ದರೂ, ಶಶಿಯ ಜೊತೆಯಲ್ಲಿ ಸೌಜನ್ಯದಿಂದ ವರ್ತಿಸುವ ಸುಚೀಂದ್ರ ಗತಿಸಿದ ಶ್ರೀನಾಥನನ್ನು ಮನದಲ್ಲಿಯೆ ವರಿಸಿ ಕನ್ಯೆಯಾಗಿಯೆ ಉಳಿದಿದ್ದರೂ, ಗೋಪಿಯ ಮೇಲಿನ ಅನುಕಂಪೆ ಯಿಂದ ಅವನ ಕೈಹಿಡಿಯಲು ನಿರ್ವಿಕಾರವಾಗಿ ಒಪ್ಪಿದ ಶಶಿ ಎಲ್ಲರೂ ಓದುಗರ ಮುಂದೆ ಪರಿಣಾಮಕಾರಿಯಾಗಿ ಸುಳಿದು ಹೋಗುತ್ತಾರೆ. ಇದು ಒಂದು ಸುಂದರವಾದ ಭಾವ ನಾತ್ಮಕವಾದ ಕಥೆ. 'ಸೂಕ್ಷ್ಮ' ಕಥೆಯಲ್ಲಿ ಹೆಣ್ಣಿನ ಮನಸ್ಸು ಎಷ್ಟು ಸೂಕ್ಷ್ಮ ಎನ್ನುವುದು ವಿದಿತವಾಗುತ್ತದೆ. ಗಂಡ ಯಾವುದೊ ಸಂದರ್ಭದಲ್ಲಿ ಅಂದ ಮಾತನ್ನೇ ಗಂಭೀರವಾಗಿ ತೆಗೆದುಕೊಂಡು ನಳಿನಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ತನ್ನ ಮಾತಿನಿಂದ ಹೆಂಡತಿ ಸತ್ತಿದ್ದಾಳೆ ಎಂದು ಮಕ್ಕಳ ಮಾತಿನಿಂದ ಅರಿತ ನಾಗೇಂದ್ರ ತನ್ನ ಹೆಂಡತಿಯದು ಆತ್ಮ ಹತ್ಯೆಯಲ್ಲ ಕೊಲೆ, ಆ ಕೊಲೆಗಾರ ತಾನೆ ಎಂಬ ತೀರ್ಮಾನಕ್ಕೆ ಬರುತ್ತಾನೆ. ತನ್ನ ತಪ್ಪಿನ ಅರಿವಾದೊಡನೆಯೆ ತನ್ನ ಮುನಿದಿರುವ ಹೆಂಡತಿಯನ್ನು ಸಂತೈಸಲೊ ಎಂಬಂತೆ ಅವ ಳನ್ನು ಹಿಂಬಾಲಿಸುತ್ತಾನೆ! ಈ ಕಥೆಯಲ್ಲಿ ಬರುವ ಪತಿಪತ್ನಿಯರ ಪ್ರೇಮ ಆದರ್ಶ ವಾದುದು. ನಳಿನಿಯು ಆತ್ಮಹತ್ಯೆ ಮಾಡಿಕೊಂಡ ಮೇಲೆ ಹಲವು ವ್ಯಕ್ತಿಗಳು ವ್ಯಕ್ತ ಪಡಿಸುವ ಪ್ರತಿಕ್ರಿಯೆ ಸಮಾಜವನ್ನು ಪ್ರತಿಬಿಂಬಿಸುವುದಾದರೂ ಅದೇ ಹೆಚ್ಚಾಗಿ, ಕಥೆಯ ಕ್ರಿಯೆಗೆ ಧಕ್ಕೆ ಬಂದಂತಾಗುತ್ತದೆ. ಈ ಕಥೆಯ ಪೀಠಿಕಾ ಭಾಗಕ್ಕೂ ಇದಕ್ಕೂ ಯಾವುದೇ ಸಾವಯವ ಸಂಬಂಧವಿಲ್ಲದೆ ಅದು ಕಥೆಯಿಂದ ಬೇರೆಯಾಗಿಯೆ ನಿಲ್ಲುತ್ತದೆ. ಹೆಣ್ಣಿನ ಮನಸ್ಸು ಎಷ್ಟು ಸೂಕ್ಷ್ಮ ಎನ್ನುವುದನ್ನು ಈ ಕಥೆ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. 'ಮಂಗಳಾ' ಕಥೆಯಲ್ಲಿ ಕಾಮದ ಅದಮ್ಯತೆಯ ಚಿತ್ರಣವಿದೆ. ರಾಮು–ರಾಮಮೂರ್ತಿ– (ಹೆಸರಿನಲ್ಲಿರುವ ವ್ಯಂಗ್ಯವನ್ನು ಗಮನಿಸಬೇಕು) ತಾನು ಬಯಸಿದ ಉಮಾ ಬೇರೆ ಯುವನ–ಶಂಕರನ–ಹೆಂಡತಿಯಾಗಿದ್ದರೂ ಅವಳನ್ನು ಅಪವಿತ್ರಗೊಳಿಸಲು ಹಿಂತೆಗೆಯ ಲಿಲ್ಲ. ಶಂಕರ ಹೆಂಡತಿಯಿಂದ ಎಲ್ಲವನ್ನೂ ಅರಿತು ಉಮೆಯದು ಏನೂ ತಪ್ಪಿಲ್ಲ ವೆಂದೂ ಅವಳು ಪರಿಶುದ್ಧಳೆಂದೂ 'ಮಂಗಳೆ' ಎಂದೂ ಹೇಳಿ ಸಂತೈಸುತ್ತಾನೆ. ಸಮಾಜ ದಲ್ಲಿ ಇಷ್ಟವಿದ್ದೊ ಇಲ್ಲದೆಯೊ ಇನ್ನೊಬ್ಬರ ಬಲಾತ್ಕಾರಕ್ಕೆ ಬಲಿಯಾಗಿ ಬಾಳನ್ನು ಹಾಳು ಮಾಡಿಕೊಂಡಿರುವ ಹೆಣ್ಣುಗಳೆಷ್ಟೋ. ಎಲ್ಲ ಗಂಡಸರಿಗೂ ಶಂಕರನಂತೆ ಉದಾರ ಬುದ್ಧಿ ಇದ್ದರೆ 'ಹೆಣ್ಣಿನ ಬಾಳು ಕಣ್ಣೀರು' ಎಂಬ ಮಾತು ಸುಳ್ಳಾಗುವುದರಲ್ಲಿ ಸಂದೇಹ ವಿಲ್ಲ. ಈ ಕಥೆಯ ಮಧ್ಯೆ, ರಾಮಮೂರ್ತಿಯ ತಂದೆ ಉಮಾಳ ತಂದೆಯನ್ನು ಕುರಿತು "ನೀವು ಕೇಳಿದರೆ ನಾವು ಆಗುವುದಿಲ್ಲ ಎನ್ನಬಹುದು, ಆದರೆ ನಾವೇ ಕೇಳಿದಾಗ ನೀವು ಸಂತೋಷದಿಂದ ಒಪ್ಪಿಕೊಳ್ಳಬೇಕು" ಎನ್ನುವ ಮಾತಿನಲ್ಲಿ ತಾನು ಉತ್ತಮ ಜಾತಿಯ ವನು ಎನ್ನುವ ಠೇಂಕಾರ ಎದ್ದು ಕಾಣುತ್ತದೆ. ಜಾತಿಯ ಬಗ್ಗೆ ಹೆಚ್ಚಿನ ಮಾತುಗಳಿಲ್ಲ ದಿದ್ದರೂ ಆದೊಂದೇ ಮಾತು ಎಲ್ಲ ಅರ್ಥವನ್ನು ಕೊಡುತ್ತದೆ. ಕಥೆ ಸಹಜವಾಗಿ ಬೆಳೆದು ಬಂದಿದೆ.

ಈ ಕಥಾಸಂಕಲನದ ಒಟ್ಟು ಹನ್ನೆರಡು ಕಥೆಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಉತ್ತಮ ಕಥೆಗಳು. ಉಳಿದವು ಕಳಪೆಯೇನಲ್ಲ. ಲೇಖಕಿಯ ಭಾಷೆ ಪ್ರೌಢವೂ ಅಲ್ಲದ ಸರಳವೂ

ಅಲ್ಲದ ಮಧ್ಯಮ ವರ್ಗದ ಭಾಷೆ. ಪ್ರಾರಂಭದ ಕಥೆಗಳಲ್ಲಿ ಕಥಾವಸ್ತು ಲೇಖಕಿಯ ಕೈಮೀರಿ ಅವರ ಹಿಡಿತಕ್ಕೆ ಸಿಕ್ಕಿಲ್ಲ ಎನ್ನಿಸುತ್ತದೆ. ಕೊನೆಯ ಕಥೆಗಳಲ್ಲಿ ಕಥೆಗಾರಿಕೆಯಲ್ಲಿ ಅವರ ಕೈ ಪಳಗಿರುವುದನ್ನು ಕಾಣಬಹುದು. ಇನ್ನೂ ಉತ್ತಮ ಕಥೆಗಳನ್ನು ಇವರಿಂದ ನಿರೀಕ್ಷಿಸಬಹುದು.

ಶ್ರೀಮತಿ ವಾಣಿ ಅವರ ಇಪ್ಪತ್ತಾರು ಕಥೆಗಳ ಸಂಕಲನ **ಅಪರೂಪದ ಅತಿಥಿ.** ಈ ಸಂಕಲನಕ್ಕೆ 'ಅತಿಥಿ' ಹೆಸರು ಕೊಡಲು ಕಾರಣವಾದ ಕಥೆ 'ಅಪರೂಪದ ಅತಿಥಿ', ಮರೆವಿನ ಬಗ್ಗೆ ಕುರಿತ ಒಂದು ಸುಂದರವಾದ ಕಥೆ ಇದು. 'ಉಪಕಾರಿ' ಕಥೆಯಲ್ಲಿ ಯಾರಿಂದ ತೊಂದರೆಗೆ ಒಳಗಾಗಿದ್ದರೊ ಅವರನ್ನೇ ಜೀವನ ಉದ್ದಕ್ಕೂ ಉಪಕಾರಿ ಎಂದು ಕರೆಯುತ್ತ ಸತ್ಕರಿಸುವಲ್ಲಿ ವ್ಯಂಗ್ಯವನ್ನು ಕಾಣುತ್ತೇವೆ. 'ಕೆಂಪು ಹೂ' ಕಥೆಯಲ್ಲಿ ಲಾಟರಿಯ ಹಣಕ್ಕಾಗಿ ಮನೆಮಂದಿಯೆಲ್ಲ ಹೇಗೆ ಆಸೆಪಟ್ಟು ನಿರಾಶರಾಗುತ್ತಾರೆಂಬುದರ ಚಿತ್ರಣವಿದೆ. ಹಣ ಹೇಗೆ ತಂದೆ ಮಕ್ಕಳಲ್ಲೇ ಒಡಕನ್ನು ತರಬಲ್ಲದು ಎಂಬುದನ್ನೂ ಇಲ್ಲಿ ಕಾಣಬಹುದು. 'ಮೂರು ಮೆಟ್ಟಿಲು' 'ಕೆಳಗೆ ಬಿದ್ದ ಕಾಗದ' ಮತ್ತು 'ನಿರೀಕ್ಷೆ' ಕಥೆಗಳಲ್ಲಿ ಕಥಾವಸ್ತು ವಾತ್ಸಲ್ಯ. ಮಗ ಶಶಿ, ಸೊಸೆ ದುರ್ಗಾ ಮತ್ತು ಕೆಲಸದ ಆಳಿ ನಿಂದಲೂ ತಿರಸ್ಕಾರಕ್ಕೆ ಗುರಿಯಾಗಿ ವೃದ್ಧಾಪ್ಯದಲ್ಲಿರುವ ಅನಂತಯ್ಯನ ಕಥೆ 'ಮೂರು ಮೆಟ್ಟಿಲು' ಅನಂತಯ್ಯನ ಬದುಕಿನ ಮೂರು ಅವಸ್ಥೆಗಳನ್ನು ಮೂರು ಮೆಟ್ಟಿಲುಗಳಿಗೆ ಹೋಲಿಸಿದೆ. ಆದರೆ ಆ ಸಂಕೇತ ಕಥೆಯೊಡನೆ ಬೆರೆಯದೆ ಹೊರಗೇ ನಿಲ್ಲುತ್ತದೆ. ಮಕ್ಕಳಾದ ಗೌರಿ, ಸೀತೆಯಿಂದ ದೂರವಿರುವವಳೂ, ಒಬ್ಬೊಂಟಿಗಳೂ ಆದ ವಿಧವೆ ನಂಜಮ್ಮನ ಕರುಣಾಜನಕ ಚಿತ್ರಣ 'ಕೆಳಗೆ ಬಿದ್ದ ಕಾಗದ'ದಲ್ಲಿ ಬರುತ್ತದೆ. ಮಾತೃ ವಾತ್ಸಲ್ಯವನ್ನು ಚಿತ್ರಿಸುವ ಕಥೆ 'ನಿರೀಕ್ಷೆ'. ಅರ್ಥವತ್ತಾದ ಕಥೆ 'ಅಪೂರ್ಣ'. ತನ್ನ ಬಾಳೇ ಅಪೂರ್ಣವೆಂದುಕೊಂಡಿದ್ದ ಕುಸುಮ ಕಲಾವಿದ ವಸಂತನಿಂದ ಆಕರ್ಷಿತಳಾಗಿ, ಅವನು ವಿವಾಹಿತನೆಂದು ತಿಳಿದು ನಿರಾಶಳಾಗಿ ವಸಂತನಿಂದ ಚಿತ್ರಿತವಾಗಿದ್ದ ತನ್ನ ಅಪೂರ್ಣ ಚಿತ್ರದ ಮೇಲೆ, ಬಾಳೇ ಅಪೂರ್ಣವಾಗಿರುವಾಗ ಚಿತ್ರ ಏಕೆ ಪೂರ್ಣವಾಗಬೇಕು ಎಂದೋ ಏನೋ ಅಡ್ಡಗೀಟುಗಳನ್ನು ಎಳೆದುಬಿಡುತ್ತಾಳೆ! ನೋವುಂಡಾಗ, ಸಾವನ್ನು ಕಂಡಾಗ ವೈರಾಗ್ಯ ಮೂಡುವುದು ಸಹಜ. ಆದರೆ ಈ ಭಾವ ಸ್ಥಾಯಿ ಅಲ್ಲ. ನಾಯಿಯ ಬಾಲದಂತೆ ಮನಸ್ಸು ಮತ್ತೆ ಹಿಂದಿನ ಚಂಚಲತೆಯನ್ನೇ ಪಡೆದುಕೊಳ್ಳುತ್ತದೆ. ಈ ತತ್ವ ಸುಂದರವಾಗಿ 'ವೈರಾಗ್ಯ' ಕಥೆಯಲ್ಲಿ ಮೂಡಿಬಂದಿದೆ. ಮನದಲ್ಲಿ ಮೂಡಿದ ಸೇಡಿನ ಕಿಡಿಯನ್ನು ಭೀಮಪ್ಪನಾಯಕ ಹೇಗೆ ನಿವಾರಿಸಿಕೊಂಡ ಎಂಬುದು 'ಸೇಡಿನ ಬಲೆ' ಕಥೆಯಲ್ಲಿ ಚಿತ್ರಿತವಾಗಿದೆ.

'ವಾರದ ಹುಡುಗ' ಮತ್ತು 'ಹಿರಿಮೆ' ಬಡತನವನ್ನು ಕುರಿತ ಕಥೆಗಳು. ರುಕ್ಕುವಿನ ಆತ್ಮೀಯತೆಯಿಂದ ವಾರದ ಹುಡುಗನಾಗಿದ್ದ ಅನಂತ ಒಂದು ದಿಕ್ಕು ಕಂಡ. ಇಂತಹ ಅನೇಕ ಕಥೆಗಳು ಹಿಂದೆ ಬಂದಿವೆ. ಇದರಲ್ಲಿ ಹೊಸತೇನೂ ಇಲ್ಲ. ಅಲ್ಲದೆ ಕಥೆಯನ್ನು ರುಕ್ಕು ಹೇಳಿದಂತಿರುವುದು ಅಸಹಜವಾಗಿ ಕಾಣುತ್ತದೆ. ಬಡತನಕ್ಕೆ ಶ್ರೀಮಂತರ ಔದಾರ್ಯ ಮದ್ದೆ? ಹೆಂಗರುಳನ್ನು ಮಿಡಿಯುವ ಕಥೆಯಿದು. ಇಂತಹುದೇ ಕಥೆ

'ಹಿರಿಮೆ'. ವ್ಯಕ್ತಿ ಮನುಷ್ಯನಾಗಬೇಕಾದರೆ ವಿವೇಕ, ಆಲೋಚನೆಗಳು ಇರಬೇಕು. ತಾವು ಸಾಕಿದ ಕಾಳ ಅಂತಹ ವ್ಯಕ್ತಿಯಾದ ಎಂಬ ತೃಪ್ತಿ 'ಹಿರಿಮೆ'ಯ ರಾಯರಿಗೆ ಆಗುತ್ತದೆ.

'ಮಾರ್ಗದರ್ಶಿ' ಮತ್ತು 'ಉಪಕಾರ ಸ್ಮರಣೆ' ದೆವ್ವವನ್ನು ಕುರಿತ ಕಥೆಗಳು. 'ಮಾರ್ಗದರ್ಶಿ'ಯಲ್ಲಿ ಮುಂಬಯಿನಗರದಿಂದ ಅಕ್ಕನ ಮನೆಗೆ ಎಂದು ಬಂದ ಸುರೇಶನಿಗೆ ಮುಸ್ಸಂಜೆಯ ಸಮಯದಲ್ಲಿ ದೆವ್ವವೊಂದು ದಾರಿ ತೋರುತ್ತದೆ. ಕಥೆಯನ್ನು ಓದಿದಾಗ ಒಂದಿಷ್ಟೂ ಹೆದರಿಕೆ, ರೋಮಾಂಚನ ಆಗದಿರುವುದೇ ಕಥೆಯ ವೈಶಿಷ್ಟ್ಯ. 'ಉಪಕಾರ ಸ್ಮರಣೆ' ಕಥೆಯಲ್ಲಿ ಶಾರದಮ್ಮನ ತಮ್ಮ ಅಕ್ಕನ ಮನೆಗೆ ಬಂದು ಕಾಲಿಗೆ ಪೆಟ್ಟು ಮಾಡಿ ಕೊಂಡು ಮನೆಯಲ್ಲೇ ವಿಶ್ರಾಂತಿ ಪಡೆಯುತ್ತಿದ್ದ. ಶಾರದಮ್ಮನಿಂದ ಉಪಕೃತನಾಗಿದ್ದು ಸತ್ತುಹೋಗಿದ್ದ ಸದಾನಂದ ಪ್ರೇತವಾಗಿ ಬಂದು ರಮೇಶನ ಬೇಸರವನ್ನು ಕಳೆಯುತ್ತಾನೆ. ನಂತರ ವಿಷಯ ತಿಳಿದ ಶಾರದಮ್ಮ ಬೆಚ್ಚುತ್ತಾಳೆ. ಕಥೆ ಚೆನ್ನಾಗಿದೆ.

'ಹೆಂಡತಿಯ ಹರಕೆ' 'ಕಂಕಣ' ಮತ್ತು 'ಸಂಜೀವಿನಿ' ದೈವವನ್ನು ಕುರಿತ ಅಥವಾ ನಂಬಿಕೆಯನ್ನು ಕುರಿತ ಕಥೆಗಳು. 'ಹೆಂಡತಿಯ ಹರಕೆ' ಕಥೆಯಲ್ಲಿ ಹೆಂಡತಿ ವನಜಳ ಮಾತಿಗೆ ಕಟ್ಟುಬಿದ್ದು ಮಗ ರಂಗನೊಡನೆ ರಂಗನಾಥನ ಜಾತ್ರೆಗೆ ಹೋಗಿ ಜಾತ್ರೆಯಲ್ಲಿ ಹಳೆಯ ಗೆಳೆಯ ರಘುವಿನೊಡನೆ ಮಾತನಾಡುತ್ತಾ ಮಗನನ್ನು ಕಳೆದುಕೊಂಡು, ಹುಡುಕಿ ನಿರಾಶನಾಗಿ 'ರಂಗ'ನನ್ನು ಕೂಗುವಾಗ, ನಾಸ್ತಿಕನಾಗಿದ್ದವನು ಆಸ್ತಿಕನಾಗು ತ್ತಾನೆ. ಹೃದಯಸ್ಪರ್ಶಿಯಾದ ಕಥೆ. ಶಕುನ ಸರಿಯಿಲ್ಲದಿದ್ದರೂ ಕಂಕಣಬಲ ಇದ್ದರೆ ಕಂಕಣ ಕೂಡಿಬರುತ್ತದೆ ಎಂಬುದನ್ನು ಹೇಳುವ ಕಥೆ 'ಕಂಕಣ'. ಒಂದೇ ಮನಸ್ಸಿನಿಂದ ಏನನ್ನು ಕೊಟ್ಟರೂ ಅದು 'ಸಂಜೀವಿನಿ'ಯಂತೆ ಕೆಲಸಮಾಡುತ್ತದೆಂಬುದನ್ನು 'ಸಂಜೀ ವಿನಿ' ಕಥೆ ಹೇಳುತ್ತದೆ. ಈ ಮೂರು ಕಥೆಗಳು ದೈವ ಅಥವಾ ನಂಬಿಕೆಯನ್ನು ಕಥಾ ವಸ್ತುವಾಗಿ ಹೊಂದಿವೆ.

'ವೈಶಾಖಿ', 'ಅವಳ ಪ್ರೇಮ', 'ಒಲುಮೆಯ ಸುಳಿಯಲ್ಲಿ', 'ಬೀಸಿ ಬಂದ ಗಾಳಿ' ಮತ್ತು 'ರಾಧೆಯ ಕೊಡುಗೆ' ಕಥೆಗಳಲ್ಲಿ ಪ್ರೀತಿಯ ನಾನಾ ಮುಖಗಳ ಚಿತ್ರಣವಿದೆ. ವೈಶಾಖಿ ಒಂದು ಸುಂದರವಾದ ಕಥೆ. ಕಥೆಯನ್ನು ನೇರವಾಗಿ ಸರಳವಾಗಿ ಹೇಳಿದ್ದಾರೆ. ಮರೆತು ಮದುವೆಯ ದಿನದ ನೆನಪಿಗಾಗಿ ಉಡುಗೊರೆಯನ್ನು ತರದ ಗಂಡ ಸತೀಶ ನೊಂದಿಗೆ ಮುನಿಸಿಕೊಳ್ಳುವ ಮನೋರಮ, ಹೊಡೆಯುತ್ತಿದ್ದರೂ ಕುಂಟ ಮಾರುತಿ ರಾಯನನ್ನು ಪ್ರೀತಿಸಿ ಮಗುವಿನಂತೆ ಆರೈಕೆ ಮಾಡುವ ಕಲ್ಯಾಣಿ ಈ ಇಬ್ಬರಲ್ಲಿ ಯಾರ ಪ್ರೇಮ ಹೆಚ್ಚು ಎಂಬುದನ್ನು 'ಅವಳ ಪ್ರೇಮ'ದಲ್ಲಿ ತೂಗಿ ನೋಡಿದ್ದಾರೆ. ತಮ್ಮಿಂದ ಕಣ್ಣು ಪಡೆದ ಸೀತಾಳನ್ನು ತಮಗೆ ಧಾರೆಯೆರೆಯಲು ಸೀತಳ ತಾತ ರಾಮಣ್ಣ ಸಿದ್ಧ ರಿದ್ದರೂ ಅದನ್ನು ತಿರಸ್ಕರಿಸಿ ಸೀತಳನ್ನು ತಮ್ಮ ಅಕ್ಕನ ಮಗ ರಾಜುವಿಗೆ ತಂದುಕೊಂಡು ತಮ್ಮ ಪ್ರೀತಿಯನ್ನು ಸಾರ್ಥಕ ಪಡಿಸಿಕೊಂಡರು ಡಾಕ್ಟರು. ಕಥೆಯ ಅಂತ್ಯದಲ್ಲಿ ಬರುವ ತಿರುವು ಅನಿರೀಕ್ಷಿತವಾಗಿದ್ದು ಕಥೆಗೆ ಸೊಗಸನ್ನು ಕೊಡುವುದಲ್ಲದೆ ಪ್ರೀತಿಗೆ ಹೊಸ ದೊಂದು ಆಯಾಮವನ್ನೆ ಕಲ್ಪಿಸಿಕೊಡುತ್ತದೆ. 'ಬೀಸಿಬಂದ ಗಾಳಿ'ಯಲ್ಲಿ ಗಿರೀಶನಲ್ಲಿ ಮೂಡಿದ ಸಂಶಯದ ಗಾಳಿ ಹೇಗೆ ಮಾಯವಾಗುತ್ತದೆ ಎಂದು ಚಿತ್ರಿಸಿದ್ದಾರೆ. ಗಿರೀಶ

ನನ್ನು ತೀರ ಪುಕ್ಕಲನಂತೆಯೂ ಸುಂದರನನ್ನು ಸ್ಫುರದ್ರೂಪಿಯೂ ಸುಸಂಸ್ಕೃತನೂ ಎನ್ನುವಂತೆಯೂ ಚಿತ್ರಿಸಿರುವುದು ಅಸಹಜವಾಗಿ ಕಾಣುತ್ತದೆ. ಈ ಕಥೆಯಲ್ಲಿ ಮಂಡರಗಪ್ಪೆಯನ್ನು ಚೇಳು ಎಂದು ಕರೆದಿರುವುದು ಒಂದು ವಿಶೇಷ. 'ರಾಧೆಯ ಕೊಡುಗೆ' ಕಥೆಯಲ್ಲಿ ಪಟ್ಟಣದ ಜೀವನ ಮತ್ತು ಹಳ್ಳಿಯ ಜೀವನಗಳ ಹೋಲಿಕೆ ಬರುತ್ತದೆ. ಪಟ್ಟಣದ್ದು ಆಡಂಬರ ಆದರೆ ಸತ್ವಹೀನ ಜೀವನವಾದರೆ ಹಳ್ಳಿಯದು ಆಡಂಬರರಹಿತ ಸಮೃದ್ಧ ಜೀವನ. ಹಳ್ಳಿಗೆ ಸೇರಿದ್ದ ರುಕ್ಮಿಣಿ ತನ್ನ ತಂಗಿ ರಾಧಳ ಪಟ್ಟಣದ ಬಾಳನ್ನು ಕಂಡು ಹಳ್ಳಿಯಬಗ್ಗೆ ತನಗುಂಟಾಗಿದ್ದ ಅತೃಪ್ತಿಯನ್ನು ಕಳೆದುಕೊಳ್ಳುತ್ತಾಳೆ. ಹೀಗೆ ಈ ಕಥೆಗಳಲ್ಲಿ ಪ್ರೀತಿಯ ನಾನಾ ಮುಖಗಳ ಚಿತ್ರಣವಿದೆ.

'ರತ್ನವಿಲಾಸ', 'ತಾರಾ', 'ಆಯ್ಕೆ', 'ಎಲ್ಲವೂ ಒಳಿತೇ' ಮತ್ತು 'ಬದುಕಿನ ದಾರಿ' ಕಥೆಗಳಲ್ಲಿ ಹುಡುಗಿ ಹುಡುಗನನ್ನೂ, ಹುಡುಗ ಹುಡುಗಿಯನ್ನೂ ಮೆಚ್ಚುವ ಆರಿಸಿಕೊಳ್ಳುವ ವಸ್ತುವಿದೆ. 'ರತ್ನವಿಲಾಸ'ದಲ್ಲಿ ಜಮೀನ್ದಾರ್ ಹಿರಣ್ಣಯ್ಯ ತಮ್ಮ ಭಾವಿ ಅಳಿಯ ತಮ್ಮ ಸಂಪತ್ತನ್ನು ಮೋಹಿಸಿ ಮದುವೆಯಾಗುವುದರ ಬದಲು ಹೆಣ್ಣಿನ ಗುಣ ನೋಡಿ ಮದುವೆ ಆಗಲಿ ಎಂದು ಒಂದು ನಾಟಕವನ್ನೇ ಆಡುತ್ತಾರೆ. ಜಮೀನ್ದಾರ್ ಹಿರಣ್ಣಯ್ಯನವರನ್ನು ಅಂಗಡಿ ರಾಮಚಂದ್ರಯ್ಯನ ವೇಷದಲ್ಲಿ, ಅವರ ಮಗಳು ರತ್ನಳನ್ನು ನಾಗುವಿನ ವೇಷದಲ್ಲಿ ಯಾರೂ ಗುರುತಿಸದಿದ್ದುದು ಸೋಜಿಗ! ಸುಖಾಂತವಾಗಿ ಕೊನೆಗೊಳ್ಳುವ 'ರತ್ನವಿಲಾಸ' ಪಕ್ಕಾ ತಮಿಳು ಸಿನಿಮಾಕ್ಕೆ ಹೇಳಿ ಬರೆಸಿದ ಕಥೆಯಂತಿದೆ. 'ತಾರಾ' ಕಥೆಯಲ್ಲಿ ರಾಮು ಹಗಲುಹೊತ್ತಿನಲ್ಲೇ ಶ್ರೀರಂಗಪಟ್ಟಣದ ಹತ್ತಿರದ ರಾಂಪುರದಲ್ಲೇ ತಾನು ತೆಗೆದ ಫೋಟೋ ಡೆವಲಪ್ ಮಾಡುವುದು ಒಂದು ವಿಶೇಷ. ತಾರಾ ಮತ್ತು ರಾಮುವಿನ ಲಗ್ನ ನೆರವೇರಿತೆಂದು ಮತ್ತೆ ಹೇಳಬೇಕಾಗಿಲ್ಲ. 'ಆಯ್ಕೆ' ಕಥೆ ಎರಡು ಗಂಡು ಒಂದು ಹೆಣ್ಣು ಈ ತ್ರಿಕೋನದ ಮೇಲೆ ಹೆಣೆಯಲ್ಪಟ್ಟಿದೆ. ಲಲಿತೆಗೆ ತನ್ನ ಸೋದರ ಮಾವ ಗುರುಮೂರ್ತಿಯನ್ನು ಆರಿಸಬೇಕೊ ಅಥವಾ ಶ್ರೀನಿವಾಸನನ್ನು ಆರಿಸಬೇಕೊ ತಿಳಿಯದಾದಾಗ ಅವಳ ತಂದೆ ರಾಯರು ಹೂಡಿದ ನಾಟಕದಲ್ಲಿ ಜೊಳ್ಳಾದ ಶ್ರೀನಿವಾಸ ತೂರಿಹೋಗಿ ಗಟ್ಟಿಯಾದ ಗುರುಮೂರ್ತಿ ಉಳಿದುಕೊಳ್ಳುತ್ತಾನೆ. 'ಎಲ್ಲವೂ ಒಳಿತೇ' ಕಥೆಯಲ್ಲಿ ಕಮಲ, ವಿಮಲ ಮತ್ತು ಪರಿಮಳ ಎಂಬ ಸಹೋದರಿಯರಲ್ಲಿ ಒಬ್ಬಳನ್ನು ಆರಿಸಬೇಕಾದ ಸಮಸ್ಯೆ ಶ್ರೀನಾಥನಿಗೆ ಬಂದಾಗ ಆ ಜವಾಬ್ದಾರಿಯನ್ನು ಅವನು ಹುಡುಗಿಯರಿಗೇ ಬಿಡುತ್ತಾನೆ. ಹನುಮಂತನ ಗುಡಿಯಲ್ಲಿ ಚೀಟಿ ಎತ್ತುವ ಮೂಲಕ ಶ್ರೀನಾಥನ ವಧು ನಿರ್ಧಾರವಾಗುತ್ತಾಳೆ. ಮೂರು ಚೀಟಿಗಳನ್ನು ಪರಿಮಳ ಬರೆಯುತ್ತಾಳೆ. ಮೂರರಲ್ಲೂ ತನ್ನ ಹೆಸರನ್ನೇ ಬರೆದುಕೊಂಡಿದ್ದ ಪರಿಮಳ ಶ್ರೀನಾಥನ ಮಡದಿಯಾಗುತ್ತಾಳೆ. ವಿಷಯ ತಿಳಿದ ಶ್ರೀನಾಥ "ಒಲವಿನಲ್ಲಿ ಮತ್ತು ಯುದ್ಧದಲ್ಲಿ ಎಲ್ಲವೂ ಒಳಿತೇ" ಎನ್ನುತ್ತಾನೆ. 'ಬದುಕಿನ ದಾರಿ'ಯ ಅರುಣಾ ಸುಂದರಿ. ಹಿರಿಯರು ತೋರಿಸಿದ ವರನನ್ನು ಮದುವೆಯಾಗುತ್ತಾಳೆ. ಅರುಣಾಳ ಗೆಳತಿ ಅರ್ಪಣಾ ಅರುಣಾಳ ಭಕ್ತ ಲಕ್ಷ್ಮೀಶನನ್ನು ತನ್ನವನನ್ನಾಗಿ ಮಾಡಿಕೊಂಡಳು. ಒಬ್ಬಳದು ಸಿದ್ಧಪಡಿಸಿದ ದಾರಿ; ಮತ್ತೊಬ್ಬಳದು ಶ್ರಮ ವಹಿಸಿ ನಿರ್ಮಿಸಿಕೊಂಡ ದಾರಿ. ಈ ಕಥೆಯಲ್ಲಿ ಕಥೆಗಾರ್ತಿಯ ಉದ್ದೇಶ ಏನು ಎಂಬುದು ತಿಳಿಯುವುದಿಲ್ಲ.

ಇಪ್ಪತ್ತಾರು ಕಥೆಗಳ ಈ ಸಂಕಲನದಲ್ಲಿ 'ಅಪರೂಪದ ಅತಿಥಿ', 'ಹೆಂಡತಿಯ ಹರಕೆ', 'ಅವಳ ಪ್ರೇಮ', 'ಒಲುಮೆಯ ಸುಳಿಯಲ್ಲಿ', 'ರತ್ನವಿಲಾಸ', 'ಆಯ್ಕೆ' ಮತ್ತು 'ಎಲ್ಲವೂ ಒಳಿತೇ' ಮೆಚ್ಚಬಹುದಾದ ಕಥೆಗಳು. ಆದರೆ ಯಾವುದೂ ಮನಸ್ಸಿನ ಮೇಲೆ ಪರಿಣಾಮವನ್ನು ಉಂಟುಮಾಡುವುದಿಲ್ಲ. ಸಂಕೀರ್ಣವಾದ ಬದುಕನ್ನು ಸರಳಗೊಳಿಸಿ ನೋಡುವುದರಿಂದ ನೀರಸವಾಗಿವೆ. ಲೇಖಕಿ ಬರವಣಿಗೆಗೆ ಹಳಬರಾದುದರಿಂದ ಕಥೆಗಳನ್ನು ಸುಂದರವಾಗಿ ಹೆಣೆಯಬಲ್ಲರು, ಹೇಳಬಲ್ಲರು. ಈ ಇಪ್ಪತ್ತಾರು ಕಥೆಗಳನ್ನು ವಸ್ತುವಿಗೆ ತಕ್ಕಂತೆ ವಿಂಗಡಿಸಿ ಎರಡು ಅಥವಾ ಮೂರು ಸಂಕಲನಗಳನ್ನಾಗಿ ಹೊರ ತಂದಿದ್ದರೆ ಚೆನ್ನಾಗಿತ್ತು.

ಸಂಖ್ಯೆಯಲ್ಲಿ ಲೇಖಕರಿಗಿಂತ ಕಡಿಮೆ ಸಂಖ್ಯೆಯ ಕಥಾಸಂಗ್ರಹಗಳನ್ನು ತಂದಿರುವ ಲೇಖಕಿಯರು ಲೇಖಕರಂತೆ ಸತ್ವಪೂರ್ಣವಾದ ಕಥೆಗಳನ್ನು ಕೊಡುವುದರಲ್ಲಿಯೂ ಹಿಂದೆಬಿದ್ದಿದ್ದಾರೆ. ಇದನ್ನು ಲೇಖಕಿಯರು ತೀವ್ರವಾಗಿ ಆಲೋಚಿಸಬೇಕು. ಬಹುಶಃ ಬಾಳಿನ ಎಲ್ಲ ರಂಗಗಳ ನಿಕಟ ಪರಿಚಯ ಸ್ತ್ರೀಯರಿಗೆ ಆಗದೆ ಇರುವುದು ಮೇಲಿನ ಕೊರತೆಗೆ ಒಂದು ಕಾರಣ ಇರಬಹುದು. ಬದುಕನ್ನು ಸರಳಗೊಳಿಸದೆ ಅದರ ಸಂಕೀರ್ಣ ಸ್ವರೂಪದಲ್ಲಿಯೆ ಅದಕ್ಕೆ ತಕ್ಕ ಭಾಷೆಯಲ್ಲಿ ಚಿತ್ರಿಸಲು ಪ್ರಯತ್ನಿಸದಿರುವುದು ಮತ್ತೊಂದು ಕಾರಣ ಎನ್ನಬಹುದು.

**ಚಂದ್ರಿಕಾ** ಕೃಷ್ಣಮೂರ್ತಿ ಪುರಾಣಿಕರ ಹತ್ತನೆಯ ಕಥಾಸಂಗ್ರಹ: ಹದಿಮೂರು ಕಥೆಗಳನ್ನೊಳಗೊಂಡಿದೆ. ಈ ಸಂಗ್ರಹದ ಮೊದಲ ಕಥೆ 'ಚಂದ್ರಿಕಾ'. ಹನುಮಕೊಂಡದ ಬಳಿ ವರ್ಷಕ್ಕೊಮ್ಮೆ ನಡೆಯುವ ಹಾರಾಟದ ಹಬ್ಬದಲ್ಲಿ ಯಾರೂ ಗೆಲ್ಲಲಾರದ ಚಂದ್ರಿಯನ್ನು ಸೋಮನಗೌಡ ಗೆದ್ದು ತನ್ನವಳನ್ನಾಗಿ ಮಾಡಿಕೊಂಡ. ಸ್ತ್ರೀ ಸಹಜವಾದ ಅಸೂಯೆಯಿಂದ ರತಿಯಂತಿದ್ದ ಗೌಡನ ಹೆಂಡತಿ ಹೃದ್ರೋಗಕ್ಕೆ ತುತ್ತಾದಳು. ಚಂದ್ರಿ ತಾನು ಸತ್ತು ಗೌಡಿತಿಯನ್ನುಳಿಸಿದಳು. ಗೌಡತಿ ತಾನು ಉಳಿದು ಗೌಡನನ್ನು ಜೀವಚ್ಛವವನ್ನಾಗಿ ಮಾಡಿದಳು. ಚಂದ್ರಿಯ ಹೆಸರಿನಲ್ಲಿ ಸೋಮನಗೌಡ ಕಟ್ಟಿಸಿದ ಮನೆಯೆ 'ಚಂದ್ರಿಕಾ'. ಸರ್ಕಸ್ಸನ್ನು ನೋಡಲೇಬೇಕೆಂದು ರಾಜೀವನ ಬಯಕೆ. ತಾಯಿಗೆ ಕಳುಹಿಸಲು ಇಷ್ಟವಿದ್ದರೂ ತಂದೆಗೆ ಇಷ್ಟವಿಲ್ಲ. ಕೊನೆಯ ದಿನ ತಂದೆಯ ಜೇಬಿನಿಂದ ಹಣ ಕದ್ದು ಹೊರಟ ರಾಜೀವನಿಗೆ ಮನಸ್ಸೊಪ್ಪುವುದಿಲ್ಲ. ಹಿಂತಿರುಗಿ ಬಂದು ತಪ್ಪೊಪ್ಪಿಕೊಳ್ಳುತ್ತಾನೆ. ಈ ಕಥೆಯ ಶೀರ್ಷಿಕೆ 'ಹೋದವನು ಮರಳಿ ಬಂದ' ಕಥೆಯ ವ್ಯಾಪ್ತಿಗೆ ದೊಡ್ಡದಾಯಿತೆನಿಸುತ್ತದೆ. 'ಇನ್ನಷ್ಟು ಬೇಕು' ಕಥೆಯಲ್ಲಿ ಶ್ರೀಮಂತ ಬೀಗರಿಂದ ಸಾಕಷ್ಟು ಸುಲಿಯಬೇಕೆಂದು ಡಾ॥ ರಂಗವಿಠ್ಠಲ ಮತ್ತು ಅವನ ತಂದೆ ತಾಯಿಗಳ 'ಇನ್ನಷ್ಟು ಬೇಕು'ಗಳಿಂದ ರೋಸಿಹೋಗಿ ವಧುವಾದ ಡಾ॥ ಸುಶೀಲ ಲಗ್ನದ ಸಮಯದಲ್ಲಿ ಮದುವೆಯನ್ನು ನಿಲ್ಲಿಸಿ ಅವರಿಗೆ ತಕ್ಕ ಬುದ್ಧಿ ಕಲಿಸುತ್ತಾಳೆ. ವರದಕ್ಷಿಣೆ ಪ್ರಿಯರಿಗೆ ಎಚ್ಚರಿಕೆಯಂತಿದೆ ಈ ಕಥೆ. 'ತಾಯಿ ಬದುಕಿದಳು' ಕಥೆಯಲ್ಲಿ ಬಡತನದ ಬೇಗೆಯಲ್ಲಿದ್ದ ನಿಂಬೆಪ್ಪನಿಗೆ ತನ್ನ ಮಗಳು ಪಾರೂತಿ ಊರ ಗೌಡನ ಮಗನಾದ ಸಂಗನಗೌಡನಿಗೆ ವಶಳಾಗದೆ ತನಗೆ ಅನುರೂಪನಾದ ಈರಣ್ಣನನ್ನು ವರಿಸಿದ್ದರಿಂದ ಸಮಾಧಾನವಾಗುತ್ತದೆ.

'ಕೆನ್ನೆಗೊಂದು ಬಾಸುಂಡೆ' ಅನ್ಯಾಯ ಅತ್ಯಾಚಾರಗಳಿಗೂ ಒಂದು ಮಿತಿ ಇದೆ ಎಂಬುದನ್ನು ತೋರಿಸುತ್ತದೆ. 'ಅವರು ಆರಿಸಿದ ಹೂ' ಕಥೆಯಲ್ಲಿ ಬರುವ ರಾಷ್ಟ್ರೀಕರಣ (ಬ್ಯಾಂಕ್)ದ ಪ್ರಸ್ತಾಪ ಕಥೆಯಲ್ಲಿ ಹಾಸುಹೊಕ್ಕಾಗಿ ಬಂದಿಲ್ಲ. ಈ ಕಥೆಯ ಭಾಷೆ ಸಹಜವಾದ ಗ್ರಾಮ್ಯ ಭಾಷೆ ಎನಿಸುವುದಿಲ್ಲ. 'ಧರ್ಮದ ಹೆಸರಿನ ಧರ್ಮಗೇಡಿಗಳು' ಕಥೆಯೂ ಅಲ್ಲದ ಹರಟೆಯೂ ಅಲ್ಲದ ಒಂದು ಬರಹ. ಇದನ್ನು ಈ ಸಂಕಲನದಲ್ಲಿ ಸೇರಿಸಿದ್ದರ ಔಚಿತ್ಯ ಅರ್ಥವಾಗುವುದಿಲ್ಲ. 'ಜ್ಯೋತಿಷ್ಯ ಸುಳ್ಳಾಗಲಿಲ್ಲ' ಕಥೆಯಲ್ಲಿ ಬರುವುದು ಜ್ಯೋತಿಷ್ಯದ ವಿಡಂಬನೆಯೊ. ಸಮರ್ಥನೆಯೊ ತಿಳಿಯುವುದಿಲ್ಲ. 'ಅಪ್ಪನ್ನ ಹೊರಗ ತೆಗಿತೀನಿ' ಭಾಗವ್ವನ ಮತ್ತು ಅವಳ ಮಗು ಪುಟ್ಟನ ಕಥೆ. 'ನನಗೇಕೆ ಹೇಳಲಿಲ್ಲ' ಮಾತೃಹೃದಯವನ್ನು ತೆರೆದು ತೋರಿಸುವ ಒಂದು ಕಥೆ. 'ಹೊತ್ತವನು ಒಬ್ಬನೆ' ಕಥೆ ಮಾನವೀಯ ಗುಣಗಳಿಂದ ಕೂಡಿದ್ದು ಕಥಾತಂತ್ರವೂ ಚೆನ್ನಾಗಿದ್ದು ಓದುಗರ ಕುತೂಹಲವನ್ನು ಕೊಂಚ ಮಟ್ಟಿಗೆ ಸೆರೆಹಿಡಿಯುತ್ತದೆ. 'ಮಗನ ಬೆಲೆ ಹದಿನಾಲ್ಕು ರೂಪಾಯಿ' ಕಥೆಯಲ್ಲಿ ಬಡವರ ಆಶೋತ್ತರಗಳು ಹೇಗೆ ಗಗನಕುಸುಮಗಳಾಗುತ್ತವೆಂಬುದನ್ನು ಕಾಣಬಹುದು. ದ್ವೇಷ ಏನನ್ನೂ ಮಾಡಿಸೀತು ಎಂಬುದಕ್ಕೆ ನಿದರ್ಶನ 'ಆ ಎರಡು ಕಣ್ಣುಗಳು' ಕಥೆ.

ಕೃಷ್ಣಮೂರ್ತಿ ಪುರಾಣಿಕರ ಬರವಣಿಗೆ ತೀರ ಸರಳವಾಗಿರುವುದರಿಂದ, ಯಾವ ಕಥೆಯೂ ಅಷ್ಟಾಗಿ ಪ್ರಭಾವ ಬೀರುವುದಿಲ್ಲ. ಕಥೆಗಳಲ್ಲಿ ಬಹು ಸುಲಭವಾಗಿ ಹೆಣ್ಣು ಮಕ್ಕಳನ್ನು ಉದ್ವಿಗ್ನಗೊಳಿಸುವಂತಹ ಭಾವುಕತೆ ಇದೆ. ಹಲವಾರು ಕಾದಂಬರಿಗಳನ್ನೂ, ಕಥಾಸಂಗ್ರಹಗಳನ್ನೂ ಬರೆದಿರುವ ಕೃಷ್ಣಮೂರ್ತಿ ಪುರಾಣಿಕರ ಈ ಕಥಾಸಂಗ್ರಹ ನಿರಾಶೆಯನ್ನುಂಟುಮಾಡುತ್ತದೆ.

**ಋಣ** ಚಿರಂಜೀವಿ ಅವರ ಹದಿಮೂರು ಕಥೆಗಳ ಸಂಕಲನ. ಇಲ್ಲಿಯ ಕಥೆಗಳನ್ನು ಕುರಿತು ಎಲ್. ಎಸ್. ಶೇಷಗಿರಿರಾಯರು ನಾಲ್ಕು ಒಳ್ಳೆಯ ಮಾತುಗಳನ್ನು ಹೇಳಿದ್ದಾರೆ. ಈ ಸಂಕಲನದ ಮೊದಲ ಕಥೆ 'ಆಸ್ಫೋಟ'. ರಹಸ್ಯವಾಗಿಡಬೇಕಾಗಿದ್ದ ವಿಷಯವನ್ನು ವಿಧಿಯಿಲ್ಲದೆ ಹೃದ್ರೋಗಿ ತಂದೆಗೆ ತಿಳಿಸಬೇಕಾಗಿ ಬಂದುದೆ ಆಸ್ಫೋಟ. 'ಅವಳು ಹಿಂತಿರುಗಿ ಬರಲಿಲ್ಲ' ಅನಿರೀಕ್ಷಿತ ಅಂತ್ಯವನ್ನು ಹೊಂದಿರುವ ಕಥೆ. ಉದ್ದಕ್ಕೂ ಕಥಾನಾಯಕ ತನ್ನ ಗತಬಾಳಿನ ಸ್ಮೃತಿಪುಟಗಳನ್ನು ತಿರುವುತ್ತಿದ್ದನೆಂಬುದು ಕೊನೆಯವರೆಗೂ ತಿಳಿಯುವುದಿಲ್ಲ. 'ಅಳ್ಬೇಡಾ ಅಜ್ಜಿ ಅಳ್ಬೇಡಾ'ದಲ್ಲಿ ತಂದೆ ತಾಯಿಯರನ್ನು ಕಳೆದುಕೊಂಡ ಉಷಾ ಚಿಕ್ಕ ಮಗುವಾಗಿದ್ದರೂ ಪ್ರಬುದ್ಧಳಂತೆ ಆಲೋಚಿಸುವುದು ಅಸಹಜವಾಗಿ ಕಾಣುತ್ತದೆ. ಉಷಳ ಬಗ್ಗೆ ಎಲ್ಲರೂ ವಿಶೇಷ ಮರುಕ ತೋರುವುದು ಮತ್ತು ತಬ್ಬಲಿತನವನ್ನು ನೆನಪಿಗೆ ತರುವಂತಹ ಸಂಗತಿಗಳನ್ನು ಬೇಕೆಂದೇ ಚಿತ್ರಿಸಿರುವುದು ಅತಿಯಾದಂತೆ ಅನ್ನಿಸುತ್ತೆ. 'ಹ್ಯಾಂಗೆ ಬರೆದಿತ್ತೋ ಪ್ರಾಚೀನ' ಕಥೆಯಲ್ಲಿ ಹಿಂದೂ ಹೆಣ್ಣಿನ ದೃಷ್ಟಿಯಲ್ಲಿ ಕುಂಕುಮದ ಬೆಲೆ, ಹೂವಿನ ಬೆಲೆ ಏನು ಎಂಬುದನ್ನು ಚಿತ್ರಿಸಿದ್ದಾರೆ. ಸತಿಪದ್ಧತಿಯ ವಿಚಾರವೂ ಬರುತ್ತದೆ. ಗೋಡೆಯಲ್ಲಿ ಬಿರುಕು ಬಿಟ್ಟಿದ್ದು, ಮೂಲೆಯಲ್ಲಿ ಜೇಡ ಬಲೆ ನೇಯ್ದಿದ್ದು, ಅದರ ಮೇಲೆ ಬೆಳಕು ಬಿದ್ದಾಗ ಅದು ಬಂಗಾರದಂತೆ ಹೊಳೆಯುತ್ತಿದ್ದುದು – ಈ ಸಂಕೇತ ಕಥೆಯಲ್ಲಿ ಅರ್ಥರಹಿತವಾಗಿ ಉಳಿದುಹೋಗಿದೆ. ಪ್ರೀತಿ

ಪ್ರಣಯಗಳು ಪ್ರತಿಯೊಬ್ಬರ ಬಾಳಲ್ಲೂ ಬಂದು ಹೋಗುತ್ತಲೇ ಇರುತ್ತವೆ ಎಂಬ ಅರ್ಥದಲ್ಲಿ 'ಸಂಭವಾಮಿ ಯುಗೇ ಯುಗೇ!' ಎಂಬ ಶೀರ್ಷಿಕೆ ಕಥೆಗೆ ಭಾರವಾಯಿತೇನೊ ಅನ್ನಿಸುತ್ತದೆ. ಹಣಕ್ಕಿಂತ ಗುಣ, ವಿಶ್ವಾಸ, ಸ್ನೇಹಗಳು ಮುಖ್ಯ ಎಂಬುದು 'ಈ ಪರಿಯ ಸೊಬಗು' ಕಥೆಯಲ್ಲಿ ನಿರೂಪಿತವಾಗಿದೆ. ಕಥೆಗೂ ಶೀರ್ಷಿಕೆಗೂ ಸಂಬಂಧವಿಲ್ಲ. ಭಾವನಾತ್ಮಕವಾದ ಕಥೆ 'ಕರುಣಾಳು ಬಾ ಬೆಳಕೆ' ಕಥೆಯಲ್ಲಿ ಮಕ್ಕಳಾದ ಮುರಳೀಧರ ಮತ್ತು ರಾಜುವಿಗೆ ವಿರಸ ಏಕೆ ಬಂದಿತ್ತು ಎಂಬುದರ ಬಗ್ಗೆ ಸ್ವಲ್ಪ ವಿವರವಿದ್ದರೆ ಚೆನ್ನಾಗಿತ್ತು. 'ಆ ತಾತನ ಮೊಮ್ಮಗ' ಕಥೆಯಲ್ಲಿ ಅರುಣನ ಆಲೋಚನೆಗಳೆಲ್ಲವೂ ಪ್ರಬುದ್ಧನಂತೆ; ಕಥೆಯ ಕೊನೆಯಲ್ಲಿ ಅವನು ಆಡುವ ಮಾತಂತೂ ಹೆಂಗಳೆಯರ ಮನಸ್ಸನ್ನು ಮಿಡಿಯಬಲ್ಲದಾದರೂ ಅರುಣನ ವಯಸ್ಸಿಗೆ ಮೀರಿದ ಮಾತದು. 'ಸ್ವಾಮಿ ಇದೂ ಒಂದು ಕಥೆ!' ಎಂಬ ಕಥಾಶೀರ್ಷಿಕೆಗೆ ಆಶ್ಚರ್ಯ ಚಿಹ್ನೆ ಇದೆ. ಕಥೆ ಓದಿದ ಮೇಲೆ ಸ್ವಾಮಿ ಇದೂ ಒಂದು ಕಥೆಯೆ ಎಂದು ಕೇಳಬೇಕೆನ್ನಿಸುತ್ತದೆ. 'ಅನುಗಾಲವೂ ಚಿಂತೆ ಜೀವಕೆ', 'ಹೂವು', ಮತ್ತು 'ಭೂತ' ಸಾಧಾರಣ ಕಥೆಗಳು. ಈ ಕಥಾಸಂಕಲನದ ಕೊನೆಯ ಕಥೆ 'ಋಣ'ದ ಕಥಾತಂತ್ರದಲ್ಲಿ ನಾವೀನ್ಯತೆ ಇದೆ. ಹುಟ್ಟಿದ ಮಗು ಋಣವಿದ್ದಷ್ಟು ದಿನವಿದ್ದು ಸತ್ತುಹೋದುದನ್ನು ಕುರಿತು ತಂದೆಯಾದವನು ಬರೆದ ದಿನಚರಿಯಂತೆ ಕಥೆ ಇದೆ. ಕಥೆಗಾರರು ನಿರ್ಲಿಪ್ತರಾಗಿ ಕಥೆಯನ್ನು ಹೇಳಿಕೊಂಡು ಹೋಗಿದ್ದಾರೆ.

ಈ ಕಥಾಸಂಕಲನದ ಉತ್ತಮ ಕಥೆ 'ಅವಳು ಹಿಂತಿರುಗಿ ಬರಲಿಲ್ಲ'. ಈ ಸಂಕಲನದ ಕಥೆಗಳನ್ನು ನೋಡಿ ಚಿರಂಜೀವಿ (ಬಿ. ಆರ್. ಗೋಪಿನಾಥ್) ಅವರು ಕಥನಕಲೆಯಲ್ಲಿ ಇನ್ನೂ ಪಳಗಬೇಕು ಎನ್ನಿಸುತ್ತದೆ. ಕಥೆಗಳಿಗೆ ಅಸಂಬದ್ಧ ಶೀರ್ಷಿಕೆಗಳನ್ನು ಕೊಡುವುದನ್ನು ನಿಲ್ಲಿಸಿ ಅರ್ಥವತ್ತಾದ ಶೀರ್ಷಿಕೆಗಳನ್ನು ಕೊಡುವುದೊಳ್ಳೆಯದು. ಅಲ್ಲಲ್ಲಿ ಕಥೆಗಳಲ್ಲಿ ಸಂಕೇತಗಳನ್ನು ತರುವ ಪ್ರಯತ್ನ ಮಾಡಿದ್ದರೂ ಅವು ಸಾರ್ಥಕವಾಗಿಲ್ಲ. ಜೀವನದ ಎಲ್ಲ ಸಮಸ್ಯೆಗಳನ್ನೂ ಸರಳಗೊಳಿಸಿ ನೋಡುವ ಅಭ್ಯಾಸವನ್ನು, ಸುಲಭವಾಗಿ ಭಾವೋದ್ವೇಗಗೊಳಿಸುವಂತಹ ವಿಷಯಗಳನ್ನು ನಿರೂಪಿಸುವ ಚಟವನ್ನು ಬಿಟ್ಟಲ್ಲಿ ಚಿರಂಜೀವಿ ಅವರು ಒಳ್ಳೆಯ ಕಥೆಗಳನ್ನು ಕೊಡಬಲ್ಲರು.

**ಸೊಸೆಗೊಂದು ಉಡುಗೊರೆ** ಅಶ್ವತ್ಥರ ಹದಿನಾರು ಕಥೆಗಳ ಸಂಕಲನ. ಮೊದಲ ಕಥೆ 'ಕಾನೂನಿನಂತೆ'. ಮರಣದಂಡನೆಗೆ ಒಳಗಾದ ವ್ಯಕ್ತಿಯೊಬ್ಬ ಅದರ ನಿರೀಕ್ಷೆಯ ಯಾತನೆಯನ್ನು ಅನುಭವಿಸಲಾರದೆ ಆತ್ಮಹತ್ಯೆಗೆ ಪ್ರಯತ್ನಿಸಿದಾಗ ಅವನನ್ನು ಬಹು ಕಷ್ಟದಿಂದ ಉಳಿಸಿ ನಂತರ ಕಾನೂನಿನಂತೆ ಗಲ್ಲಿಗೇರಿಸುತ್ತಾರೆ! ಈ ಕಥೆಯಲ್ಲಿ ಕುರುಡು ಕಾನೂನನ್ನು ಕುರಿತ ವ್ಯಂಗ್ಯವಿದೆ. ಈ ಕಥೆಯನ್ನೋದಿದಾಗ ಪರ್ವತವಾಣಿಯವರ ನಾಟಕವೊಂದು ನೆನಪಿಗೆ ಬರುತ್ತದೆ. 'ಒಂದು ಸಾಹಸ' ಮೆಣಸಿನಪುಡಿ ಮಾಡಲು ಹೆದರುತ್ತಿದ್ದ ಲಲಿತ ಮೊದಲು ಊರಿನಿಂದ ಅದನ್ನು ತರಿಸಿಕೊಳ್ಳುತ್ತಿದ್ದು, ಒಂದು ಸಾರಿ ತಾನೆ ಅದನ್ನು ತಯಾರು ಮಾಡಲು ಹೊರಟು ಪಟ್ಟ ಬವಣೆಯ ಕಥೆ. ಕಥೆಯ ಉದ್ದಕ್ಕೂ ತಿಳಿನವಿರಾದ ಹಾಸ್ಯವಿದೆ. ಈ ಕಥೆ ಆನಂದರ ಕಥೆಗಳನ್ನು ನೆನಪಿಗೆ ತರುತ್ತದೆ. ತಿಂದ ಊಟವನ್ನು ಅರಗಿಸಲಾರದೆ ಒದ್ದಾಡುತ್ತಿದ್ದವನು ಸಂಗದಹಳ್ಳಿಯ

ಸಂಗಮೇಶ್ವರನನ್ನು ನೋಡಲು ಹೋಗಿ ಅಲ್ಲಿಯ ಕಾಳಿಲಿಂಗವನ್ನೂ, ಗರ್ಭಗುಡಿಯ ಹಿಂದೆ ತೀರ್ಥಕೊಳದ ಬಳಿ ಅಲುಗಾಡಿದ ಚಪ್ಪಡಿಯನ್ನೂ ಕಂಡು, ಅನಂತರ ಆಯಾಸ ದಿಂದ ನಿದ್ರೆಹೋದಾಗ – ಮಾಸ್ತಿ ಅವರ 'ಸೋಜಿಗದ ಹೊಸಲು' ವಿನ ಪ್ರಭಾವ ದಿಂದಲೊ, ರೋಮನ್ನರ ಐಸಿಸ್ ಗುಡಿಯ ಕಥೆಯ ನೆನಪಿನಿಂದಲೊ – ಕಾಳಿಲಿಂಗಕ್ಕೂ ದೇವಾಲಯಕ್ಕೂ ಸಂಬಂಧವುಂಟಾಗಿ ಕಲ್ಪಿತ ಕಥೆಯೊಂದು ಕನಸಿನ ರೂಪದಲ್ಲಿ ಕಾಣಿಸಿ ಕೊಳ್ಳುತ್ತದೆ–'ಪೂಜಾರಿಯ ಕಥೆ'ಯಲ್ಲಿ. 'ಉತ್ಸವ' ಕಥೆಯಲ್ಲಿ ಬುದ್ಧಿಜೀವಿಗಳೆನ್ನಿಸಿ ಕೊಂಡವರು ಯಾವ ನಿಯಮಗಳೂ ತಮಗೆ ಅನ್ವಯಿಸುವುದಿಲ್ಲ ಎಂಬುದನ್ನು ಕಾರ್ಯತಃ ತೋರಿಸಿಕೊಡುತ್ತಾರೆ. ಪ್ರೊಫೆಸರುಗಳೂ ಪ್ರಿನ್ಸಿಪಾಲರುಗಳೂ ಆಗಿರುವ ವಿದ್ಯಾವಂತರ ಗುಂಪುಗಾರಿಕೆಯನ್ನೂ ಸ್ವಾರ್ಥಪರತೆಯನ್ನೂ ಎತ್ತಿತೋರಿಸಲೋಸು ಗವೇ ಈ ಕಥೆಯನ್ನು ಬರೆದಂತಿದೆ. 'ಸಂಕಟ ವಿಮೋಚನೆ' ಕಥೆಯಲ್ಲಿ ಜ್ಯೋತಿಷ್ಯವನ್ನು ನಂಬಿ ತನ್ನ ಬಾಳನ್ನು ಹಾಳುಮಾಡಿಕೊಂಡ ವಿಶ್ವನಾಥ ಮತ್ತು ಮಂಗಳೆಯರ ಕಥೆ ಬರು ತ್ತದೆ. ವಿಶ್ವನಾಥನೇ ತನ್ನ ಕಥೆಯನ್ನು ಹೇಳಿಕೊಳ್ಳುತ್ತಾನೆ. 'ಸೀರೆಯ ವ್ಯಾಪಾರ' ಕಥೆಯ ಗೋಪಾಲ ಮತ್ತು ರಾಧೆಯರ ಸ್ಥಿತಿಗತಿಗಳು ಬೆಲೆಬಾಳುವ ಸೀರೆಯನ್ನು ಕೊಳ್ಳುವಂತಿರ ಲಿಲ್ಲ. ಅಂಗಡಿಯ ಮಾಲೀಕ ರಾಧಳ ಆಸೆಯನ್ನು ಗಮನಿಸಿ ಸೀರೆಯನ್ನು ಅವಳಿಗೆ ತಿಳಿಯದಂತೆ ಉಡುಗೊರೆಯಾಗಿ ಕೊಡುತ್ತಾನೆ. ರಾಧಳ ಆಸೆ, ಸೇಠಜಿಯ ವ್ಯವಹಾರ ಚಾತುರ್ಯ, ಮಾನವೀಯ ದೃಷ್ಟಿಗಳು ಓದುಗರ ಮನಸ್ಸನ್ನು ಸೆಳೆಯುತ್ತವೆ. 'ಧರ್ಮ ಕೊಂಡದ ಕಥೆ'ಯಲ್ಲಿ ಹಿಂದೂಧರ್ಮ (ಬ್ರಾಹ್ಮಣಸಮಾಜ) ಹೊರ ಆಚಾರಗಳಿಗೇ ಕಟ್ಟುಬಿದ್ದು ಶೂನ್ಯವೂ, ಶುಷ್ಕವೂ, ದಯಾರಹಿತವೂ ಆಗಿರುವುದನ್ನು, ಅದರಿಂದ ಹೇಗೆ ಅನೇಕ ಜೀವಿಗಳು ಬಲಿಯಾಗುತ್ತಿದ್ದಾರೆಂಬುದನ್ನು ತೋರಿಸುತ್ತದೆ. ಈ ಕಥೆ ಎಂ. ಆರ್. ಶ್ರೀ. ಅವರ 'ಧರ್ಮದುರಂತ'ವನ್ನು ನೆನಪಿಗೆ ತರುತ್ತದೆ. ಸೂರಪ್ಪ ಗಂಗಮ್ಮರಲ್ಲಿ ಅನುಕಂಪ, ದಯಾಗುಣಗಳಿದ್ದರೂ ಹೇಗೆ ಅವು ಸಮಾಜಕ್ಕೆ ಹೆದರಿ ಕ್ರಿಯಾ ಹೀನವಾಗಬೇಕಾಗುತ್ತದೆಂಬುದು, ಹೊರ ಆಚಾರವನ್ನೇ ಶ್ರೇಷ್ಠವೆಂದು ನಂಬಿರುವ ಗುಂಡಮ್ಮ, ಕಾಳಪ್ಪ ಶಾಸ್ತ್ರಿಗಳು, ಅನುಕಂಪೆಗೆ ಪಾತ್ರಳಾಗುವ ದೇವು (ದೇವಮ್ಮ) ಇವರ ಪಾತ್ರಗಳು ಕಥೆಯಲ್ಲಿ ಚೆನ್ನಾಗಿ ಮೂಡಿಬಂದಿವೆ. 'ಯೋಗಾಭ್ಯಾಸ'ದಲ್ಲಿ ಪ್ರಕೃ ತಿಗೆ ವಿರುದ್ಧವಾದ ಬ್ರಹ್ಮಚರ್ಯವನ್ನು ಕೈಗೊಳ್ಳುತ್ತೇನೆ ಎಂದು 'ಯೋಗಾಭ್ಯಾಸ' ಪ್ರಾರಂಭಮಾಡಿದ ಆರುಮಕ್ಕಳ ತಂದೆ ಮೋಠಾಬಾಯಿಯ ಸಂಸಾರಕ್ಕೆ ಹೊಸ ಎರಡು ಜೀವಿಗಳು ಬಂದು ಸೇರಿಕೊಳ್ಳುತ್ತವೆ. ಹೀಗೆ ಅವನ ವ್ಯರ್ಥಸಾಹಸ ನಗೆಬರಿಸುತ್ತದೆ. 'ಆಗಮನ' ಸಿಮ್ಲಾದಲ್ಲಿ ಉದ್ಯೋಗದಲ್ಲಿರುವ ಲೇಖಕ, ರಂಗಪ್ಪ ಮತ್ತು ರಾಯರು ತಮ್ಮ ತಮ್ಮ ಮಡದಿಯರನ್ನು ನಿರೀಕ್ಷಿಸುವ ಕಥೆ. ಈ ಕಥೆ ಮಾಸ್ತಿ ಅವರ 'ರಂಗಪ್ಪನ ದೀಪಾವಳಿ' ಮತ್ತು 'ರಂಗಪ್ಪನ ಕೋರ್ಟ್‌ಶಿಪ್' ಕಥೆಗಳನ್ನು ನೆನಪಿಗೆ ತರುತ್ತದೆ. ಕಥೆಯ ಉದ್ದಕ್ಕೂ ನವಿರಾದ ಹಾಸ್ಯದ ಲೇಪನವಿದೆ. 'ಮೇಲೆಲ್ಲ ತಳಕು ಒಳಗೆಲ್ಲ ಹುಳುಕು' ಎಂಬ ಮಾತನ್ನು ನೆನಪಿಗೆ ತರುವ ಸೋಗಿನ ಶ್ರೀಮಂತಿಕೆಯ, ದೊಡ್ಡಸ್ತಿಕೆಯ ಕಥೆ 'ಸೊಸೆಗೊಂದು ಉಡುಗೊರೆ' ವ್ಯಂಗ್ಯದಿಂದ ಕೂಡಿದೆ. 'ಹವಾಲ್ದಾರ' ಕರ್ತವ್ಯನಿಷ್ಠ ಹವಾಲ್ದಾರನೊಬ್ಬನ ಮಾನವೀಯ ಕಥೆ. 'ಭಯ್ಯಾನ ಗಣಪತಿ'ಯಲ್ಲಿ ಮುಗ್ಧಮನಸ್ಸಿನ

ಅವಿನಾಶನ (ಮೂರು ವರ್ಷದ ಮಗು) ಗಣಪತಿ ವಿಗ್ರಹದ ಬಗ್ಗೆ ಇರುವ ಮೋಹ ವನ್ನು (ಅದನ್ನು ಭಕ್ತಿ ಎಂದು ಕರೆಯಲಾಗದು) ಕಾಣುತ್ತೇವೆ. ಇದು ಒಂದು ಸುಂದರ ವಾದ ಕಥೆ.'ವ್ಯಭಿಚಾರ' ಕಥೆಯಲ್ಲಿ ಹೊಟ್ಟೆಯ ಪಾಡಿಗಾಗಿಯೊ. ಸನ್ನಿವೇಶ ಫಲದಿಂದಲೊ ವ್ಯಭಿಚಾರಕ್ಕಿಳಿದಿದ್ದ ಹುಡುಗಿ ತಕ್ಕ ಅವಕಾಶ ದೊರೆತ ಕೂಡಲೆ ವ್ಯಭಿಚಾರ ವೃತ್ತಿಯಿಂದ ದೂರವಾಗಲು ಯತ್ನಿಸುತ್ತಾಳೆ. ಈ ಕಥೆಯಲ್ಲಿ ಉದ್ದಕ್ಕೂ ವ್ಯಭಿಚಾರದ ನಾನಾ ಮುಖ ಗಳನ್ನು ಪರಿಚಯಿಸಿದ್ದಾರೆ. ಕಥೆಯ ಕೊನೆಯಲ್ಲಿ ಬರುವ ವ್ಯಭಿಚಾರದ ವ್ಯಾಖ್ಯಾನ ತೀರ ವಾಚ್ಯವಾದಂತೆನಿಸುತ್ತೆ. ಹೊರ ಆಚಾರವನ್ನೇ ಭಕ್ತಿ ಎಂದು ಭ್ರಮಿಸಿ ಬಾಳನ್ನು ಹಾಳುಮಾಡಿಕೊಳ್ಳುವ 'ದೇವಿಯವರ' ಬಗ್ಗೆ ಕಥೆಯ ಉದ್ದಕ್ಕೂ ನವಿರಾದ ವ್ಯಂಗ್ಯವೂ, ತಿರಸ್ಕಾರವೂ ಇದೆ. ಪ್ರೊಫೆಸರರ ಮರೆವಿನ ಬಗ್ಗೆ ಹಾಸ್ಯ ಚಟಾಕಿಗಳನ್ನು ಹಾರಿಸುವ ಕಥೆ 'ನಾಚಿಕೆಗೇಡು'. ಮರೆವಿಗೆ ತಾವು ಆಕ್ಷೇಪವೆಂದು ಹೇಳಿಕೊಂಡ ಪ್ರೊ॥ ಮರೆವಾಡರು (ಹೆಸರಿನಲ್ಲಿರುವ ವ್ಯಂಗ್ಯವನ್ನು ಗಮನಿಸಿ) ತಾವು ರೈಲಿನಲ್ಲಿ ತಮ್ಮ ಹ್ಯಾಟನ್ನು ಮರೆತು ಪ್ರೊಫೆಸರ ಮರೆವಿಗೆ ಜೀವಂತ ಸಾಕ್ಷಿಯಾಗುವುದು ಹಾಸ್ಯ ಚಟಾಕಿಗಳ ಮಾಲೆಗೆ ಸೇರಿದ ಮತ್ತೊಂದು ಚಟಾಕಿ. 'ಖುಷಿ ಮುಹಮ್ಮದ' ಹಾಸ್ಯಪ್ರಧಾನವಾದ ಕಥೆ. ಓದಿ ನಗ ಬಹುದು. ಖುಷಿ ಮುಹಮ್ಮದನಿಗೂ ಅವನ ಹೆಂಡತಿ ಮೆಹರ ಉನ್ನೀಸಳಿಗೂ ನಡೆಯುವ ಸಂಭಾಷಣೆಯಲ್ಲಿ ಕಮ್ಯೂನಿಸ್ಟ್ ತತ್ವ ಇಣಿಕಿ ನೋಡುತ್ತೋ ಏನೊ ಅನ್ನಿಸುತ್ತೆ.

ಅಶ್ವತ್ಥರಿಗೆ ಕಥೆಗಾರಿಕೆ ನೀರು ಕುಡಿದಂತೆ. ಯಾವ ಕಥೆಯನ್ನಾದರೂ ಬೇಸರ ಬರದಂತೆ ಹೇಳಬಲ್ಲರು. ಅದಕ್ಕೆ ತಕ್ಕಂತಹ ನುಡಿಗಟ್ಟು. ಇವರ ಕಥೆಗಳು ಮಾಸ್ತಿ, ಆನಂದರ ಕಥೆಗಳನ್ನು ನೆನಪಿಗೆ ತರುತ್ತವೆ. ಕಥೆಗಳಲ್ಲಿ ನವಿರಾದ ಹಾಸ್ಯ. ವ್ಯಂಗ್ಯ, ಸಮಾಜ ಸುಧಾರಣೆಯ ಬಗ್ಗೆ ಕಳಕಳಿ. ಮೂಢ ನಂಬಿಕೆಗಳು ಆಚಾರಗಳ ಬಗ್ಗೆ ಆಕ್ರೋಶ ಇವು ಕಂಡುಬರುತ್ತವೆ. ಕಥೆಗಳೆಲ್ಲವೂ ಸಾಮಾನ್ಯವಾಗಿ ಸುಸಂಸ್ಕೃತ ವರ್ಗಕ್ಕೆ ಅದರಲ್ಲೂ ಪ್ರೊಫೆಸರುಗಳಿಗೆ ಸಂಬಂಧಿಸಿದ್ದು. ಇತರ ಕಥೆಗಳೂ ಇಲ್ಲದಿಲ್ಲ. ಉದಾಹರಣೆಗೆ 'ಹವಾಲ್ದಾರ'. 'ಸೊಸೆಗೊಂದು ಉಡುಗೊರೆ', 'ಸೀರೆಯ ವ್ಯಾಪಾರ', 'ಧರ್ಮಕೊಂಡದ ಕತೆ'... ಇತ್ಯಾದಿ. ರಮ್ಯ ಸಂಪ್ರದಾಯದ ಕಥೆಗಳು ಇವರಲ್ಲಿ ಮುಂದುವರಿಯುತ್ತಿವೆ. ನವ್ಯ ಕಥೆಗಳನ್ನು ಓದಿ ಅರ್ಥಮಾಡಿಕೊಳ್ಳಲಾರದ ಅಥವಾ ಯೋಚಿಸಲಾರದ ಓದುಗ ರಿಗೆ ಅಶ್ವತ್ಥರ ಕಥೆಗಳು ಸೊಗಸುತ್ತವೆ. ಹೀಗೆಂದರೆ ಅಶ್ವತ್ಥರಿಗೆ ಅನ್ಯಾಯ ಮಾಡಿ ದಂತೆ ಆಗುವುದಿಲ್ಲ. ಈ ಸಂಕಲನದಲ್ಲಿ ಬೇರೆಬೇರೆಯ ಕಾಲದಲ್ಲಿ ಬರೆದ ಕಥೆಗಳು ಸೇರಿವೆ. ಅವುಗಳ ಕಾಲವನ್ನು ಸೂಚಿಸಿದ್ದರೆ ಚೆನ್ನಾಗಿರುತಿತ್ತು.

**ಪ್ರಸವ** ಎ. ಎಸ್. ವೇಣುಗೋಪಾಲರಾವ್ ಅವರ ಹತ್ತು ಕಥೆಗಳ ಸಂಗ್ರಹ. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ ಪುಸ್ತಕ ಅರ್ಪಿತವಾಗಿದೆ. ಈ ಸಂಗ್ರಹದ ಮೊದಲ ಕಥೆ 'ಪ್ರಸವ' ಕಥೆಯಲ್ಲಿ ವಾಲ್ಮೀಕಿಯ ಆಶ್ರಮದ ನಂದಿನಿಯ ಪ್ರಸವ ವೇದನೆಯನ್ನೂ, ವಾಲ್ಮೀಕಿಯು ಕ್ರೌಂಚ ಪಕ್ಷಿಯನ್ನು ಕೊಂದ ವ್ಯಾಧನನ್ನು ಶಪಿಸಿ ಶೋಕತಪ್ತರಾಗಿ ಆ ಶೋಕವೇ ಶ್ಲೋಕವಾಗಿ ಬರುವವರೆಗೂ ಪಟ್ಟ ಬವಣೆ ಯನ್ನೂ ವರ್ಣಿಸಿದೆ. ಇಲ್ಲಿ ಎರಡು ಪ್ರಸಂಗಗಳಲ್ಲಿಯೂ ಪ್ರಸವದ ಹೋಲಿಕೆಯಿದ್ದರೂ

ಒಂದಕ್ಕೊಂದು ಸಂಬಂಧವಿಲ್ಲದೆ ಬೇರೆಬೇರೆಯಾಗಿಯೆ ನಿಲ್ಲುತ್ತವೆ. 'ಹಿಂತಿರುಗಿಬಾರದ ಹೊನ್ನ' ಕಥೆಯು ನೀರಗಂಟಿ ಹೊನ್ನ ಅತಿವೃಷ್ಟಿಯಿಂದ ಒಡೆಯಲಿದ್ದ 'ಅಯ್ಯನ ಕೆರೆ'ಯನ್ನು ಕಾಯುವಂತೆ ಊರದೇವಿಯನ್ನು ಪ್ರಾರ್ಥಿಸಿ 'ಹೊನ್ನಾ ಬೇಗ ಬಾ. ನಿನಗಾಗಿ ಕಾಯುತ್ತೇನೆ. ಒಡ್ಡು ಒಡೆಯದಂತೆ ಕೆರೆಯ ಕಾಯುತ್ತೇನೆ' ಎಂಬ ಅಭಯವನ್ನು ಪಡೆದು ಅರಸನಿಗೆ ಸುದ್ದಿಯನ್ನು ತಿಳಿಸಲು ಹೊರಡುತ್ತಾನೆ. ಈ ಕಥೆಯಲ್ಲಿ ದೇವಿಯ ಮಾತಿನಿಂದಲೆ ಅವಳನ್ನು ಬಂಧಿಸಿದ ಚಮತ್ಕಾರವನ್ನು ಕಾಣುತ್ತೇವೆ. ಜಾನಪದ ಕಥೆ ಈ ಕಥೆಗೆ ಮೂಲ ಇರಬಹುದು. 'ಆತ್ಮನಸ್ತು ಕಾಮಾಯ' ಈ ಸಂಕಲನದ ಉತ್ತಮ ಕಥೆಗಳಲ್ಲಿ ಒಂದು. ಕಥೆ ನೇರವಾಗಿ ಸರಳವಾಗಿದೆ. ವನಿತಾಶ್ರಮದ ಅಧಿಕಾರಿ ಸವಿತಾ ದೇವಿ ಆಶ್ರಮದ ಒಬ್ಬೊಬ್ಬ ಬಾಲಿಕೆಯೂ ವಿವಾಹವಾಗಿ ಹೊರಗೆ ಹೋದಾಗಲೂ ಮನಸ್ಸು ಬರಿದಾದಂತೆ, ಬಾಳೇ ಶೂನ್ಯವಾದಂತೆ ಪರಿತಪಿಸುತ್ತಾಳೆ. ಇದು ಕಸ್ತೂರಿಯ ವಿಚಾರದಲ್ಲಿ ಅತಿರೇಕಕ್ಕೆ ಹೋಗುತ್ತದೆ. ತಾವು ಸಾಕಿದ ಕಸ್ತೂರಿಯಿಂದಲೆ "...ನೀವು ಇನ್ನೂ ದೊಡ್ಡವರಾಗಬೇಕು!" ಎಂಬ ಬುದ್ಧಿವಾದವನ್ನು ಪಡೆಯುತ್ತಾಳೆ. ಸವಿತಾ ದೇವಿಯ ಮನಸ್ಸಿನ ಹೊಯ್ದಾಟ ಪದರ ಪದರವಾಗಿ ಚಿತ್ರಿತವಾಗಿದೆ. ಅದರಲ್ಲಿ ಒಂಟಿ ಜೀವನದ ಅಸಹನೀಯ ಸ್ಥಿತಿಯನ್ನು ಕಾಣುತ್ತೇವೆ. 'ಪಲಾಯನ' ಒಂದು ಸಾಧಾರಣ ಕಥೆ. 'ನಿದ್ರೆ' ಒಂದು ಧ್ವನಿಪೂರ್ಣವಾದ ಕಥೆ. ಮಿಸ್ ಲಾರಾ ಸ್ಮಿತ್ ಅಮೆರಿಕೆಯ ಹುಡುಗಿ, ಸಮಾಜಶಾಸ್ತ್ರದ ವಿದ್ಯಾರ್ಥಿನಿ. ಆಕೆಗೆ ತಮ್ಮ ಮನೆಯನ್ನು ಬಾಡಿಗೆಗೆ ಕೊಟ್ಟರೆ ತಮ್ಮ ಮಗಳು ಶಾಮಲೆ ಎಲ್ಲಿ ಕೆಡುವಳೋ ಎಂದು ಪಾಟೀಲರ ಹೆದರಿಕೆ. ಆದರೆ ಅವರು ಕಂಡದ್ದೇನು? ಆ ವಿದೇಶಿ ಹುಡುಗಿಯಲ್ಲಿ ಸಂಸ್ಕೃತಿಯನ್ನು ಕಂಡರು. ಅದೇ ತಮ್ಮ ಮಗಳಲ್ಲಿ ತಮ್ಮ ಸಂಸ್ಕೃತಿಯ ಬಗೆಗಿನ ಅಜ್ಞಾನವನ್ನು ಕಂಡರು. ಕಥೆಯ ಕೊನೆಯಲ್ಲಿ ಲಾರಾ ಸ್ಮಿತ್ ಹೇಳುವ "ಬೇಡಿ! ನಿದ್ರೆಯಿಂದ ಎಬ್ಬಿಸುವುದನ್ನು ಯಾರೂ ಸಹಿಸುವುದಿಲ್ಲ. ಅರೆನಿದ್ರೆಯಲ್ಲಿ ಬಲವಂತವಾಗಿ ಎದ್ದರೆ, ಹಗಲು ಹರ್ಷವಾಗುವುದಿಲ್ಲ, ಮತ್ತಷ್ಟು ನಿದ್ರೆಗೆ ಸೆಳೆಯುತ್ತದೆ..." ಎಂಬ ಮಾತುಗಳು ಧ್ವನಿಪೂರ್ಣವಾಗಿವೆ. ಬಾಳಿನ ಉದ್ದಕ್ಕೂ ನಿಷ್ಠಾವಂತರಾಗಿದ್ದು ಕೊನೆಯಲ್ಲಿ ಯಾವುದೋ ಮನೋದೌರ್ಬಲ್ಯಕ್ಕೊಳಗಾಗಿ ಬಾಪೂಜಿಗೆ (ಗಾಂಧಿಗೆ) ಅಪ್ರಿಯವಾದ ಕೆಲಸವನ್ನು ಬಾಪೂಜಿ ಜಯಂತಿಯಂದೇ ಮಾಡಿದ ಕಥೆ 'ಬಾಪೂಜಿ ನಕ್ಕರು'. 'ಹಾಡು-ಪಾಡು'ವಿನ ರಾಯರು ಕವಿಗಳು. 'ಕುಟುಂಬ ಭಾಗ್ಯ' ಅವರ ಬಹುಮಾನಿತ ಕೃತಿ. ಅವರ ಕವನಸಂಕಲನಗಳನ್ನು ಓದಿದ ಸಹೃದಯರು ಅವರದು ತುಂಬುಬಾಳು ಎಂದು ತಿಳಿದುಕೊಂಡಿದ್ದರು. ವಾಸ್ತವವಾಗಿ ಅವರದು ಇಜ್ಜೋಡು. ರಾಯರು ತಮ್ಮ ಸನ್ಮಾನ ಸಮಾರಂಭದ ಅಂತ್ಯದಲ್ಲಿ ಹೇಳುವ ಬೇಂದ್ರೆ ಅವರ "ಎನ್ನ ಪಾಡು ಎನಗಿರಲಿ ರಸಿಕಾ, ಅದರ ಹಾಡನ್ನಷ್ಟೆ ನಿನಗೆ ನೀಡುವೆ" ಎಂಬ ಸಾಲುಗಳು ಅರ್ಥಪೂರ್ಣವಾಗಿವೆ. 'ಮದರ್ ಸುಪೀರಿಯರ್' ಕಥೆಯಲ್ಲಿ ಹೆತ್ತ ತಾಯಿ ಪಾರ್ವತಮ್ಮ ಮತ್ತು ಪಾಠ ಹೇಳಿದ ಚರ್ಚಿನ ಶಾಲೆಯ ಮದರ್ ಸುಪೀರಿಯರ್ ಇವರಿಬ್ಬರ ವ್ಯಕ್ತಿತ್ವ ಸ್ಫುಟವಾಗಿ ಮೂಡಿಬಂದಿದೆ. ಮಾತು ಮಾತಿನಲ್ಲೂ ಕೊಂಕನ್ನು ಕಾಣುವ, ಹೊನ್ನು, ಮಣ್ಣುಗಳಿಲ್ಲದೆ ಸುಖವಿಲ್ಲವೆನ್ನುವ ತಾಯಿ. ಪ್ರೀತಿ ವಾತ್ಸಲ್ಯಗಳೇ ಜೀವನದ ನಿಜವಾದ ಆಸ್ತಿ, ಗಂಡನೇ ಒಡವೆ ಎನ್ನುವ ಮದರ್! ಯಾರು ಇಬ್ಬರಲ್ಲಿ

ನಿಜವಾದ ಮದರ್ ಸುಪೀರಿಯರ್? ಈ ಕಥೆಯಲ್ಲಿ ಬರುವ ನೊಗಕ್ಕೆ ಕಟ್ಟಿದ ಎತ್ತು ಗಳು ವಿವಾಹಬಂಧನದಿಂದ ಬಂಧಿತರಾಗಿ ದೃಷ್ಟಿಯಲ್ಲಿ ಭಿನ್ನರಾಗಿ ಆದರೂ ಸಂಸಾರ ರಥವನ್ನು ಎಳೆಯುತ್ತಿರುವ ಸಾವಿತ್ರಿಯ ತಂದೆ ತಾಯಿಯರಿಗೆ ಸಂಕೇತವಾಗಿವೆ. ಚಿಕ್ಕಂದಿ ನಲ್ಲಿ ಬೇರುಬಿಟ್ಟ ನಂಬಿಕೆಗಳನ್ನು ಅಳಿಸಿಹಾಕುವುದು ಎಷ್ಟು ಕಷ್ಟ ಎಂಬುದು 'ಮಸಣವ್ವ' ಕಥೆಯಲ್ಲಿ ಚಿತ್ರಿತವಾಗಿದೆ. 'ಅಜ್ಜನ ಮರಣಶಾಸನ' ಹೆಣ್ಣುಮಕ್ಕಳ ಸ್ವಾರ್ಥವನ್ನು ತೆರೆದು ತೋರಿಸುವ ಕಥೆ. 'ಸಹ್ಯಾದ್ರಿ' ನಿರ್ಲಿಪ್ತ ವ್ಯಕ್ತಿಯೊಬ್ಬನ ಜೀವನವನ್ನು ಚಿತ್ರಿಸುತ್ತದೆ. ಈ ಕಥೆಯ ರಾಯರಿಗೆ ಸುಖ ದುಃಖಗಳು ಸಮ. ಕೋಪತಾಪಗಳೇ ಇಲ್ಲ. ಚಂಚಲೆ ಮೋಹನರು ಪ್ರೀತಿಸಿದಾಗ ಸಂತೋಷವಾಗಲಿ ಅದು ಕಿತ್ತುಹೋದಾಗ ದುಃಖವಾಗಲಿ ಆಗದೆ ಸಹ್ಯಾದ್ರಿಯಂತೆ ಅಚಲವಾಗಿ ಎಲ್ಲರಿಗೂ ಒಳ್ಳೆಯದನ್ನೇ ಬಯಸುವವರು ರಾಯರು. 'ಸಹ್ಯಾದ್ರಿ' ರಾಯರ ಸ್ಥಿರಮನಸ್ಸಿಗೆ ಸಂಕೇತವಾಗಿ ಬಂದಿದೆ.

ಈ ಕಥಾಸಂಕಲನದಲ್ಲಿ ಒಟ್ಟು ಹತ್ತು ಕಥೆಗಳಿವೆ. ಅನುಭವಿಯಾದ ಲೇಖಕನೊ ಬ್ಬನಿಂದ ಮೂಡಿಬಂದ ಕಥೆಗಳಂತಿವೆ. ಸಾದೃಶ್ಯ ಅಥವಾ ವಿರುದ್ಧವಾದ ಘಟನೆಗಳನ್ನೂ ಪಾತ್ರಗಳನ್ನೂ ಕಥೆಗಳಲ್ಲಿ ತರುವುದು ಇವರಿಗೆ ಅತ್ಯಂತ ಪ್ರಿಯವಾದುದು. ಇಂಥ ಕಥೆಗಳಲ್ಲಿ 'ಪ್ರಸವ' ಬಿಟ್ಟು ಉಳಿದ ಕಥೆಗಳು ಯಶಸ್ವಿಯಾಗಿವೆ.

**ಗುಂಪಿನಲ್ಲಿ ಕಂಡ ಮುಖ** ಈಶ್ವರಚಂದ್ರರ ಎರಡನೆಯ ಕಥಾಸಂಕಲನ ಇದರಲ್ಲಿ ಹದಿಮೂರು ಕಥೆಗಳಿವೆ. ಈ ಸಂಕಲನದ ಮೊದಲನೆಯ ಕಥೆ 'ಗುಂಪಿನಲ್ಲಿ ಕಂಡ ಮುಖ'. ಕಥಾನಾಯಕನಿಗೆ ತನ್ನ ಜಮೀನನ್ನು ಜೀವನಕ್ಕೆ ಅವಲಂಬಿಸಿಕೊಂ ಡಿದ್ದ ಕೆಂಪಯ್ಯನನ್ನು ಗುತ್ತಿಗೆಯಿಂದ ಬಿಡಿಸಿದಾಗ ಅವನ ಹೆಂಡತಿಯ ಗೋಳು ಕಣ್ಣಿಗೆ ಕಟ್ಟಿದಂತಾಗುತ್ತದೆ. ಕಥಾನಾಯಕನಿಗೆ ತಾನು ಮಾಡಿದ್ದು ಅನ್ಯಾಯ ಎನಿಸುತ್ತದೆ. ಆ ಪಾಪಪ್ರಜ್ಞೆ ಸದಾ ಅವನನ್ನು ಕಾಡುತ್ತದೆ. ಎಲ್ಲೆಲ್ಲಿಯೂ ಕೆಂಪಯ್ಯನ ಹೆಂಡತಿಯ ದುಃಖ ಪೂರಿತ ಕಣ್ಣುಗಳು ತನ್ನನ್ನು ಹಿಂಬಾಲಿಸುತ್ತಿವೆ ಎಂಬ ಭ್ರಾಂತಿ ಉಂಟಾಗುತ್ತದೆ. ಈ ಪಾಪಪ್ರಜ್ಞೆಯ ಸೋಂಕು ಇಲ್ಲದ ಕಥಾನಾಯಕನ ಮಗಳಿಗೆ ಕೆಂಪಯ್ಯನ ಹೆಂಡತಿ ಮನೆಯ ಬಳಿ ಮತ್ತು ಕಡಲೆಕಾಯಿ ಪರಿಷೆಯಲ್ಲಿ ಕಾಣಿಸಿಕೊಂಡದ್ದು ಆಶ್ಚರ್ಯ. ಅದಕ್ಕೆ ಲೇಖಕರೇ ಸಮಾಧಾನ ಹೇಳಬೇಕು. ಅದನ್ನು ಬಿಟ್ಟರೆ ಕಥೆ ಸುಂದರವಾಗಿದೆ. 'ಉಸುಬು ತುಂಬಿದ ಬಾವಿ'ಯ ಉಸುಬು ತುಂಬಿದ ಬಾವಿ ಸಾಹುಕಾರರು ಒಡ್ಡುವ ಆಸೆ ಆಮಿಷ ಗಳಿಗೆ. ನಯವಾದ ಮಾತುಗಾರಿಕೆಗೆ ಸಂಕೇತವಾದರೆ. ಉಸುಬಿಗೆ ಹುಲ್ಲುಕಡ್ಡಿಯ ಆಸೆ ಗಾಗಿ ಹೋಗಿ ಉಸುಬಿನಲ್ಲಿ ಸಿಕ್ಕುವ ಹಸು 'ದೇವಿ' ಮುಗ್ಧರಿಗೆ ಸಂಕೇತವಾಗುತ್ತದೆ. ಉಸುಬಿನಲ್ಲಿ ಸಿಕ್ಕಿಬಿದ್ದ ಹಸು 'ನಿಮಗೆ ಹಾಲು ಕೊಡಬೇಕೆಂದೇ ಹುಲ್ಲು ತಿನ್ನಲು ಬಂದು ತಾನು ಉಸುಬಿನಲ್ಲಿ ಹೂತುಹೋದದ್ದಲ್ಲವೇ' ಎಂದು ಕೇಳುತ್ತಿರುವ ಹಾಗಾಗಿ ಈ ಆಲೋಚನೆ ಸಾಹುಕಾರನ ಹತ್ತಿರ ಸಾಲಮಾಡಿರುವ ತಂದೆ ಹೇಳಿದಂತೆ ಅನ್ನಿಸಿ. 'ಹಲ್ಲ ದಂಥ ಅರೆಘನ ಉಸುಬು ಆಗೆದಷ್ಟೂ ಜರುಗಿ. ಜರುಗಿ ಬರುವಾಗ ಮೂಡುವುದು' ಎಂಬ ವಿವರಣೆ ಸಾಹುಕಾರನ ಹಿಡಿತಕ್ಕೆ ಸಮನಾದ ಅರ್ಥವನ್ನು ಧ್ವನಿಸಿ ಕಥೆಯ ಸ್ವಾರಸ್ಯ ವನ್ನು ಹೆಚ್ಚಿಸುತ್ತದೆ. ಉತ್ತಮವಾದ ಕಥೆ ಇದು. 'ಬಿಳಲುಗಳು' ಕಥೆಯಲ್ಲಿ ಶುಭಾಶುಭಕ್ಕೆ

ಸಾಕ್ಷಿಯಾಗಿರುವ ಆಲದ ಮರ ವಯಸ್ಸಾಗಿ ಈಗಲೋ ಆಗಲೋ ಅನ್ನುತ್ತಿರುವ ಅಜ್ಜಿಗೆ ಸಂಕೇತವಾಗುತ್ತದೆ. ಆ ಆಲದ ಮರದ ಕೆಳಗೆ ಹೇಗೆ ಗರಿಕೆ ಕೂಡ ಹುಟ್ಟುವುದಿಲ್ಲವೊ ಹಾಗೆ ಅಜ್ಜಿ ಇರುವವರೆಗೂ ಹೊಸ ಅಭಿಪ್ರಾಯಗಳು, ಆಚರಣೆಗಳು ಮನೆಯನ್ನು ಪ್ರವೇಶಿಸಲಾರವೆಂದು ರಾಜನಿಗೆ ಅನ್ನಿಸುತ್ತದೆ. 'ಮೇಲೆ ರೆಂಬೆಯ ಆಧಾರವನ್ನೂ ಕಳೆದುಕೊಳ್ಳುತ್ತಾ ಕೆಳಗೆ ಭೂಮಿಯಲ್ಲಿ ಸರಿಯಾಗಿ ಇಳಿಯಲಾರದೆ ಬಿಳಲುಗಳು ಆಗೀಗ ನಲ್ಲಿ ಕೆಳಗೆ ಬೀಳುವಂತಿದ್ದುವು, ಬಿದ್ದು ಮಣ್ಣಿನೊಡನೆ ಮಣ್ಣಾಗುವುದರಲ್ಲಿದ್ದುವು' ಎಂಬ ಬಿಳಲುಗಳ ವರ್ಣನೆ ಆದರ್ಶವನ್ನೂ ಹಿಡಿಯಲಾರದೆ ಸಮಕಾಲೀನ ವಾಸ್ತವ ವನ್ನೂ ಒಪ್ಪಿಕೊಳ್ಳಲಾರದೆ ಉದುರಿಹೋಗುವ ಎಲೆಯಂತಿರುವ ಅಜ್ಜಿಗೆ ಅನ್ವಯಿಸು ತ್ತದೆ. ಹೀಗೆ ಮನೆಯ ಹಿಂದಿನ ಆಲದಮರದ ಬಗ್ಗೆ ರಾಜನಲ್ಲಿ ಮೂಡುವ ಆಲೋಚನೆ ಗಳು ಅಜ್ಜಿಗೆ ಅನ್ವಯವಾಗಿ ಕಥೆ ಹೆಚ್ಚು ಸ್ವಾರಸ್ಯಪೂರ್ಣವಾಗಿದೆ. 'ನಗಲಾರದವ' ಕಥೆ ಯಲ್ಲಿ ವಿಶೇಷವೇನೂ ಇಲ್ಲ. ಅಲ್ಲಿ ಬರುವ 'ಬಕಾಸುರ' ನಾಟಕದ ವರ್ಣನೆ 'ಲಂಚಾವ ತಾರ' ನಾಟಕವನ್ನು ಕುರಿತದ್ದು ಎನಿಸುತ್ತದೆ. 'ಯಾರೊ ಬಂದರು' ಕಥೆಯಲ್ಲಿ ಬರುವ ಕುರುಡ ಅಜ್ಜ, ಕಿವುಡಿ ಅಜ್ಜಿಯ ಚಿತ್ರಗಳು ಚೆನ್ನಾಗಿವೆ. ಕಥೆಯ ಕೊನೆಯಲ್ಲಿ ಮನೆಯ ಗೇಟನ್ನು ಬಾಗಿಲನ್ನು ತೆರೆದು ಯಾರೊ ಬಂದಂತೆ ನಂತರ ಹೋದಂತೆ ಅಜ್ಜನಿಗೆ ಆಗುವ ಅನುಭವ ಸಾವು ಬಂದು ಹೋದುದನ್ನು ಸೂಚಿಸುತ್ತದೆ. ಈ ಕಥೆ 'ಪಯಣ' ಕಥೆಯನ್ನು ನೆನಪಿಗೆ ತರುತ್ತಾದರೂ ಅದರಷ್ಟು ಪರಿಣಾಮಕಾರಿಯಾಗಿಲ್ಲ. 'ದಾರಿಯಲ್ಲಿ ಸಿಕ್ಕಿದ ಚಿತ್ರಗಳು' ಕಥೆಯಲ್ಲಿ ದಾರಿಯಲ್ಲಿ ಸಿಕ್ಕಿದ ಚಿತ್ರಗಳನ್ನು – ಸುಂದರಿಯೊಬ್ಬಳ ಚಿತ್ರವೂ ಸೇರಿ – ಮುಂದಿಟ್ಟುಕೊಂಡು ಕಟ್ಟುವ ಕಲ್ಪನೆ, ಕಾಣುವ ಕನಸು ಮನೋಹರವಾದುದು. ಕೇಶವಯ್ಯನಿಂದ ತಪ್ಪಿಸಿಕೊಳ್ಳಲು ಕುಶಲವಸ್ತು ಸಂಗ್ರಹಾಲಯಕ್ಕೆ ನುಗ್ಗಿ ರಾಧಾಕೃಷ್ಣರ ವಿಗ್ರಹಕ್ಕೆ ಮರುಳಾಗಿ ಅದನ್ನು ಕದಿಯುವ ಆಮಿಷಕ್ಕೆ ಒಳಗಾಗಿ ರಾಧಾಕೃಷ್ಣರ ವಿಗ್ರಹ ವೆಂದು ಕುಂಕುಮದ ಭರಣಿಯನ್ನು ಕದ್ದು, ಒಂದು ದಿನವೆಲ್ಲಾ ಕಳ್ಳತನದ ಪ್ರಜ್ಞೆಯಿಂದ ಕ್ಲೇಶಪಟ್ಟು ಮಾರನೆಯ ದಿನ ಅದನ್ನು ಹಿಂದಿರುಗಿಸಲು ಬಂದರೆ ಅಂಗಡಿಯಲ್ಲಿ ನಿನ್ನೆ ನಮ್ಮ ಗಿರಾಕಿಗಳಿಗೆಲ್ಲಾ ಕುಂಕುಮದ ಭರಣಿಯನ್ನು ಮುಫತ್ತಾಗಿ ಕೊಟ್ಟೆವಲ್ಲಾ ಎನ್ನೋಣವೆ ನಟರಾಜನಿಗೆ 'ಆಮಿಷ' ಕಥೆಯಲ್ಲಿ. ನಿನ್ನೆ ಟೇಪುಕೊಂಡಿದ್ದ ನಟರಾಜನಿಗೆ ಏಕೆ ಕುಂಕುಮದ ಭರಣಿ ಮುಫತ್ತಾಗಿ ದೊರಕಲಿಲ್ಲವೆಂಬ ಒಂದು 'ಜುಲ್ಬಾರಿ' ಸಮಸ್ಯೆ ಯನ್ನು ಬಿಟ್ಟರೆ ಕಥೆಯ ಅನಿರೀಕ್ಷಿತ ಅಂತ್ಯ ಓದುಗರ ಮೇಲೆ ನಿರೀಕ್ಷಿತ ಪರಿಣಾಮವನ್ನೇ ಉಂಟುಮಾಡುತ್ತದೆ. ನಿರುದ್ಯೋಗಿಯೊಬ್ಬನ ಮನಸ್ಸಿನ ತಳಮಳವನ್ನೂ ಚಡಪಡಿಕೆ, ಯನ್ನೂ ನಿರೂಪಿಸುವ ಕಥೆ 'ಗೋಡೆ'. ಹೆಂಡತಿ ಗಿರಿಜಳನ್ನು ಕಳೆದುಕೊಂಡು ಅವಳ ಆತ್ಮಶಾಂತಿಗಾಗಿ ಕೇರಿಗೆ ಅನ್ನಹಾಕಿಸಲಾರದೆ ಅದಕ್ಕಾಗಿ ತನ್ನ ಒಡೆಯರ ಬಳಿ ಸಾಲಕ್ಕಾಗಿ ಬಂದು ಯಾವ ಉತ್ತರವನ್ನೂ ಪಡೆಯದ ಲಿಂಗ ದೀನನೊ ಅಥವಾ ಗಿರಿಜಳ ಸಂಬಂಧ ಹೊಂದಿದ್ದು ಅದರ ಅನುಮಾನ ಲಿಂಗನಿಗೆ ಬಂದಿರಬೇಕೆಂದೂ ಹಣಕೊಟ್ಟರೆ ತನ್ನ ಅವಳ ಸಂಬಂಧ ನಿಜವೆಂದು ಲಿಂಗ ಮತ್ತು ಇತರರು ಭಾವಿಸಬಹುದೆಂದೂ ಹಣ ಕೊಡದಿದ್ದರೆ ಗಿರಿಜಳಿಗೆ ಮೋಸಪಡಿಸಿದಂತೆ ಆಗುವುದೆಂದೂ ಚಡಪಡಿಸುವ. ಲಿಂಗನಿಗೆ ಮುಖತೋರಿ ಸಲೂ ಅಂಜುವ ಲಿಂಗನ ಒಡೆಯನು ದೀನನೊ ಎಂಬ ಭಾವನೆ 'ದೀನ' ಕಥೆಯನ್ನು ಓದಿ

ದಾಗ ಉಂಟಾಗುತ್ತದೆ. 'ಸುಳಿವು' ಕಥೆಯಲ್ಲಿ ಖಾಯಿಲೆ ಮಲಗಿದ್ದ ರಾಯರಿಗೆ ಸಾವಿನ ಸುಳಿವು ತಿಳಿದುಹೋಗಿತ್ತೋ ಏನೊ ಎನ್ನಿಸುತ್ತದೆ, ಅವರು ತಮ್ಮ ವಯಸ್ಸಿಗೆ ಬಂದ ಮಗ ರಮೇಶನನ್ನು ಮತ್ತೆ ಮತ್ತೆ ಕರೆಯುವ, ಅವನಿಂದ ಆಗಬೇಕಾದ ಕೆಲಸಗಳನ್ನು ಮಾಡಿಸುವ, ಅವನನ್ನು ಮುಂಡಾಡುವ ರೀತಿಯನ್ನು ಕಂಡರೆ. ಈ ಭಾವನೆ ಖಚಿತವಾದ ಓದುಗರಿಗೆ ರಾಯರು ಕಂಡದ್ದು ತಮ್ಮ ಮಗ ರಮೇಶನ ಸಾವಿನ ಸುಳಿವು ಎಂದು ಕಥೆ ಪೂರೈಸಿದ ಮೇಲೆ ಗೊತ್ತಾಗುತ್ತದೆ. ಇದು ಕೂಡ ಅನಿರೀಕ್ಷಿತ ಮುಕ್ತಾಯವನ್ನೇ ಹೊಂದಿದೆ. 'ಬಂದಿ' ಕಥೆಯಲ್ಲಿ ರಾಜ ತಾನು ಬಳಪ ಕೊಟ್ಟು ಕೊಂಡಿದ್ದ ಜೀರುಂಡೆಗೆ ದಾರ ಕಟ್ಟಿ ಆಡಿಸುತ್ತಿದ್ದ. ಜೀರುಂಡೆ ಆ ದಾರದ ಪರಿಧಿಯೊಳಗೇ ಸುತ್ತಬೇಕು. ಹೀಗೆ ಅದು ಸ್ವಾತಂತ್ರ್ಯ ಕಳೆದುಕೊಂಡ ಬಂದಿ. ರಾಜನ ಅಕ್ಕ ಹೇಮ ತಂದೆ ತಾಯಿಗೆ ಹೆದರಿ ಕಾಲೇಜು–ಮನೆ, ಮನೆ–ಕಾಲೇಜು ತಪ್ಪಿದರೆ ಹತ್ತಿರದ ಒಂದಿಬ್ಬರು ಗೆಳತಿಯರ ಮನೆ ಹೀಗೆ ಮನಸ್ಸಿನ ಆಸೆ ಆಕಾಂಕ್ಷೆಗಳನ್ನು ಅದುಮಿ ಮತ್ತೊಂದು ರೀತಿಯ ಬಂದಿಯಾಗಿದ್ದಳು. ಕಥೆಯ ಉದ್ದಕ್ಕೂ ಈ ಸಾದೃಶ್ಯ ಬಂದು ಇದು ತೀರ ವಾಚ್ಯವಾಯಿತೇನೊ ಎನಿಸುತ್ತದೆ. 'ಒಂದೇ ಕೊಡೆಯ ಕೆಳಗೆ' ಕಥಯನ್ನು ಓದಿದಾಗ ಜನ್ನನ ಅನಂತನಾಥಪುರಾಣದ ಚಂಡಶಾಸನನ ಕಥೆಯಲ್ಲಿ ಅವನ ಹೆಂಡತಿಯರು ಹೇಳುವ ಮಾತುಗಳು ನೆನಪಿಗೆ ಬರುತ್ತವೆ. ಇಲ್ಲಿಯೂ ಹಾಗೇ ಹೇಮಂತ ತನ್ನ ಅಕ್ಕನ ಮಗಳು ಮನುವನ್ನು ಅಪೇಕ್ಷೆ ಪಟ್ಟರೆ ಅವಳ ಬಯಕೆಯ ವ್ಯಕ್ತಿ ಮತ್ತೆ ಯಾರೂ, ಹಾಗೆ ಕುಮುದ ಹೇಮಂತನನ್ನು ಅಪೇಕ್ಷಿಸಿದರೆ ಹೇಮಂತ ಅವಳಿಂದ ದೂರವಾಗಲು ಯತ್ನಿಸುತ್ತಾನೆ. ಪ್ರೇಮದ ಬಗೆಯೆ ಅಂತಹುದು. ಬಯಸಿದವರು ಬಯಸಿದವರಿಗೆ ಸಿಗುವುದಿಲ್ಲ. ಹೇಮಂತ ಮನುವಿಗೆ ಹೇಳಿದ–ಕೇಳಿದ–ಮಾತುಗಳನ್ನೇ ಹೇಳಿ–ಕೇಳಿ–ಕುಮುದ ಹೇಮಂತನನ್ನು ಪೇಚಿಗೆ ಸಿಕ್ಕಿಸುವುದು, ಕಥೆಯ ಸೊಗಸನ್ನು ಹೆಚ್ಚಿಸಿದೆ. 'ಕಣ್ಣೊತ್ತು' ಕಥೆಯಲ್ಲಿ ಮಮತಳನ್ನು ಯಾವ ಕಾರಣವೂ ಕೊಡದೆ ನಿರಾಕರಿಸಿದ ಶಶಿಧರ, ತನಗೆ ಕಣ್ಣಿನಲ್ಲಿ ಕಸಬಿದ್ದು ಕಣ್ಣೊತ್ತಾದಾಗ ಅದನ್ನು ನಿವಾರಿಸಲು ಅಯಾಚಿತವಾಗಿ ಆಗಲೆ ತಾಯಿಯಾಗಿದ್ದ ಮಮತಾ ಬಂದು ಎದೆ ಹಾಲನ್ನು ಕರೆದಾಗ ಅವಳ ಮಮತೆಯ ಸೋನೆಯಲ್ಲಿ ಕರಗಿಹೋಗುತ್ತಾನೆ. ಶಶಿಧರನ ಕಣ್ಣೊತ್ತು ಮಮತಳ ಬಗೆಗಿನ, ನೆನಪಿನ ಕಣ್ಣೊತ್ತಾಗಿ ಸಂಕೇತವಾಗಿದೆ ಕಥೆಯಲ್ಲಿ.

ಕಥೆಗಾರ ಈಶ್ವರಚಂದ್ರ ಅವರಿಗೆ ಕಥೆಹೇಳುವ ಕಲೆಗಾರಿಕೆ ವಶವಾಗಿದೆ. ಕಥೆಗಳಲ್ಲಿ ಸಾದೃಶ್ಯವನ್ನೋ ಸಂಕೇತವನ್ನೋ ಸಮರ್ಥವಾಗಿ ಬಳಸಬಲ್ಲರು. ವಸ್ತುವಿನ ಆಯ್ಕೆಯಲ್ಲಿಯೂ ಅದನ್ನು ನಿರ್ವಹಿಸುವಲ್ಲಿಯೂ ಅವರು ತೋರಿರುವ ಕೌಶಲ ಮೆಚ್ಚುವಂಥದು. ಅವರಿಂದ ಹೆಚ್ಚಿನ ಉತ್ತಮ ಕಥೆಗಳನ್ನು ನಿರೀಕ್ಷಿಸಬಹುದು. ನವ್ಯವೂ ಅಲ್ಲದ ರಮ್ಯವೂ ಅಲ್ಲದ ತಮ್ಮದೇ ಆದ ರೀತಿಯನ್ನು ಕಂಡುಕೊಂಡು ಅದರಲ್ಲಿ ಸಾಫಲ್ಯವನ್ನು ಪಡೆದಿದ್ದಾರೆ ಕಥೆಗಾರ ಈಶ್ವರಚಂದ್ರ ಅವರು.

**ಮೊದಲ ಮೊಗ್ಗು** ಸಂತೋಷಕುಮಾರ ಗುಲ್ವಾಡಿ ಅವರ ಎಂಟು ಕಥೆಗಳ ಮೊದಲ ಕಥಾಸಂಕಲನ. ಇನ್‌ಕಂ ಟ್ಯಾಕ್ಸ್ ಆಫೀಸರ್ ರಾಜಾರಾಯರ ಮತ್ತು ಸೀತಮ್ಮ

ನವರ ಏಕಮಾತ್ರ ಪ್ರೀತಿಯ ಪುತ್ರಿ ಸುಶೀಲ. ಹೆಸರಿಗೆ ತಕ್ಕಂತೆ ಶೀಲಸಂಪನ್ನಳೂ ಸುಂದರಿಯೂ ಆದ ಅವಳು ದುರಾಚಾರಿಯ ಬಲಾತ್ಕಾರಕ್ಕೆ ಸಿಕ್ಕಿ ಶೀಲಚ್ಯುತಳಾಗಿ ಆ ಆಘಾತದಿಂದಲೇ ಸ್ಮೃತಿಯನ್ನು ಕಳೆದುಕೊಂಡ ಕರುಣಾಜನಕ ಕಥೆ 'ಕೆಂಪು ಚುಕ್ಕಿಯ ನೀಲಿಸೀರೆ'. '...ಆ ಕೆಂಪು ಬೊಟ್ಟುಗಳು ಸೌಮ್ಯವಾದ ನೀಲಿಸೀರೆಯಂತಿದ್ದ ಆಕೆಯ ಜೀವನದ ಮೇಲಿನ ದುಷ್ಟ ಕೃತ್ಯದ ಸಂಕೇತವೊ...' ಎಂದು ಕಥೆ ಹೇಳುವ ಹಿರಿಯರು ಹೇಳುವ ಮಾತು ಸಂಕೇತವಾಗದೆ ನಿರೂಪಣಾ ಓಘದಲ್ಲಿ ಬಂದ ಮಾತಾಗಿದೆ. ಇದು ಸರಳವಾದ ನೇರವಾದ ಸುಂದರ ಕಥೆ. ಬೊಂಬಾಯಿಯ ವೈವಿಧ್ಯಮಯ ಜೀವನದ ಒಂದು ನಾಟಕೀಯವಾದಂತಹ ಕಥೆ 'ಅಂಕ 1 – ದೃಶ್ಯ 2'. ಬೊಂಬಾಯಿ 'ಚಾಳ್' ಒಂದರಲ್ಲಿ ನೆಮ್ಮದಿಯಿಂದ ಸಂಸಾರ ಮಾಡುತ್ತಿದ್ದ ಮಧುಕರ ನಾಯಕ ಬೆಳಗ್ಗೆ ಕಾರಖಾನೆಗೆ ಕೆಲಸಕ್ಕೆ ಹೋದವನು ರೈಲಿಗೆ ಸಿಕ್ಕಿ ಸತ್ತನೆಂದು ಹೆಂಡತಿ ಮಾಯಾ ಮೊದಲುಗೊಂಡು ಚಾಳಿನ ಎಲ್ಲರೂ ವ್ಯಥಿತರಾಗಿದ್ದಾಗ ಮಧುಕರನೇ ಸಿನಿಮಾದಲ್ಲೆಂಬಂತೆ ಪ್ರತ್ಯಕ್ಷವಾಗ ಬೇಕೆ! ಹೀಗೆ ಮಾಯಾಳಿಗೆ ಕವಿದುಬಂದಿದ್ದ ದುಃಖ ಮಂಜಿನಂತೆ ಕರಗಿ ಹೋದುದೇ ಈ ಕಥೆ. ಬಡತನದ ಸಂಸಾರವಾದರೂ ನೆಮ್ಮದಿಯಿಂದ, ಸಂತೋಷದಿಂದ ಬಾಳುವ ಅವರ ಸಂಸಾರ ಚಿತ್ರವೂ ಸುಂದರವೂ, ಮನೋಜ್ಞವೂ ಆಗಿದೆ. 'ಮರೆಯಾದ ಮುಖ' ಸಾಧಾರಣವಾದ ಕಥೆ. ಮುಂಬಯಿಯ ಪತ್ರಿಕೋದ್ಯೋಗಿ ಮೂರ್ತಿ ತನ್ನ ಆರನೆಯ ಇಂದ್ರಿಯದ ಶಕ್ತಿಯಿಂದ ಒಮ್ಮೆ ನೋಡಿದ ಮುಖವನ್ನು, ಕೇಳಿದ ಧ್ವನಿಯನ್ನು ಮರೆ ಯುವುದಿಲ್ಲ ಎನ್ನುತ್ತಿದ್ದವನು, ಪೋಲೀಸರಿಗೆ ಬೇಕಾಗಿದ್ದ, ತಾನು ಹತ್ತಾರುಬಾರಿ ಫೋಟೋ ನೋಡಿ ನೆನಪಿದ್ದ ಕೇಡಿಯೊಡನೆ ರೈಲಿನಲ್ಲಿ ಪ್ರಯಾಣ ಮಾಡಿ ಅವನನ್ನು ಗುರುತುಹಿಡಿಯಲಾರದೆ ಬೇಸ್ತು ಬಿದ್ದ ಕಥೆ. 'ಪುನರ್ಜನ್ಮ' ಕಥೆಯ ವಸ್ತು ಸಣ್ಣಕಥೆಯ ಹರವಿಗೆ ವಿಸ್ತಾರವಾದುದು ಎನಿಸುತ್ತದೆ. 'ಸಹ ಪ್ರಯಾಣಿಕರು' ಕಥೆ ಉಳಿದ ಕಥೆಗಳಿಗಿಂತ ಭಿನ್ನವಾಗಿದೆ. ಇದು ಒಂದು ಪತ್ತೇದಾರಿ ಕಥೆ. ಕಥೆ ಚೆನ್ನಾಗಿದ್ದರೂ ಈ ಸಂಗ್ರಹಕ್ಕೆ ಈ ಕಥೆ ಒಪ್ಪುವುದಿಲ್ಲ ಎಂದು ಹೇಳಬಹುದು. 'ಹೆಣ್ಣಿನ ಜೀವನ ಪೂರ್ಣವಾಗಬೇಕಾದರೆ, ಅದರ ಮಹತ್ವಪೂರ್ಣ ಉದ್ದೇಶ ಈಡೇರಬೇಕಾದರೆ ಆಕೆ ತಾಯಿಯಾದಾಗಲೇ...' ಈ ಅಭಿಪ್ರಾಯವನ್ನು ನಿರೂಪಿಸುವಂತಹ ಕಥೆ 'ಫಲ–ಪುಷ್ಪ'. 'ಅನುರಾಗ' ಹೊಸರೀತಿಯ ಕಥಾತಂತ್ರವನ್ನು ಹೊಂದಿರುವ ಕಥೆ. ಕಥೆಯೆಲ್ಲವೂ ಗೆಳೆಯರ ನಡುವಿನ ಪತ್ರ ವ್ಯವಹಾರದಲ್ಲೇ ಮುಕ್ತಾಯವಾಗು ತ್ತದೆ. ಸೈನಿಕ ವೃತ್ತಿಯ ಗಿರೀಶ ವರ್ಷಾನುಗಟ್ಟಲೆ ಊರಿನಲ್ಲಿರುವುದು ಸಾಧ್ಯವೆ ಎಂಬ ಪ್ರಶ್ನೆ ಈ ಕಥೆಯಲ್ಲಿ ಏಳುತ್ತದೆ. ಅದನ್ನು ಬಿಟ್ಟರೆ ಕಥೆ ಚೆನ್ನಾಗಿದೆ. ತಂತ್ರ ನವೀನ ವಾಗಿದೆ. ಅರ್ಥಪೂರ್ಣವಾದ ಶೀರ್ಷಿಕೆಯನ್ನು ಹೊಂದಿರುವ ಕಥೆ 'ಗಂಡ ಕಳೆದು ಗಂಡ ದೊರೆತ'. ಬಂದಿದ್ದ ಗಂಡ–ಅಪಘಡ–ಸಾವಿತ್ರಿಯಿಂದಾಗಿ ಕಳೆದು ಹೋದುದರಿಂದ ಡಾ॥ ಮಧುಸೂದನ ಅವರು ಸಾವಿತ್ರಿಗೆ ತಾವು ಗಂಡನಾಗಲು ನಿರ್ಧರಿಸುತ್ತಾರೆ. ಇಲ್ಲಿ ಸಾವಿತ್ರಿಯ ಹೆಸರೂ ಅರ್ಥಪೂರ್ಣ.

ಸಂತೋಷಕುಮಾರ ಗುಲ್ವಾಡಿ ಅವರ ಕಥೆಗಳು ಮನೋಜ್ಞವಾಗಿವೆ, ಆತ್ಮೀಯ

ವಾಗಿವೆ, ವೈವಿಧ್ಯಮಯವಾಗಿವೆ. ಇಲ್ಲಿಯ ಬಹುತೇಕ ಕಥೆಗಳ ಭೂಮಿಕೆ ಮುಂಬಯಿ. ಕಥೆಗಳಲ್ಲಿ ಅಂತಃಕರಣ ಕರಗಿಸುವ ವಸ್ತುವಿಗೇನೂ ಕೊರತೆಯಿಲ್ಲ. 'ಸಹ ಪ್ರಯಾಣಿಕರು' ಮಾತ್ರ ಬೇರೆ ರೀತಿಯ ಕಥೆ. ಕಥೆಗಳು ನೇರ. ನಿರೂಪಣೆ ಸರಳ. ಓದುಗನನ್ನು ಎಲ್ಲಿಯೂ ಗೊಂದಲಕ್ಕೀಡು ಮಾಡುವುದಿಲ್ಲ. 'ಕೆಂಪು ಚುಕ್ಕಿಯ ನೀಲಿ ಸೀರೆ', 'ಅಂಕ 1 – ದೃಶ್ಯ 2', 'ಗಂಡ ಕಳೆದು ಗಂಡ ದೊರೆತ' ಈ ಸಂಕಲನದ ಅತ್ಯುತ್ತಮ ಕಥೆಗಳೆನ್ನಬಹುದು. ಇದು ಕಥೆಗಾರರ ಪ್ರಥಮ ಸಂಕಲನ. ಆದರಿಂದಲೇ ಅದರ ಹೆಸರು 'ಮೊದಲ ಮೊಗ್ಗು'. ಮೊಗ್ಗು ಅರಳುವ ಕಾಲ ಮುಂದೆ ಬಂದೀತು ಎಂದು ಕಥೆ ಗಾರರೇ ಹೇಳಿಕೊಂಡಿದ್ದಾರೆ. ಅವರ ಭರವಸೆ, ನಿರೀಕ್ಷೆ ಸುಳ್ಳಾಗಲಾರವು ಎಂಬುದನ್ನು ಇಲ್ಲಿನ ಕಥೆಗಳು ಹೇಳುತ್ತವೆ.

**ಅಪರಿಚಿತರು** ಸದಾಶಿವರ ಹತ್ತು ಕಥೆಗಳ ಸಂಕಲನ. ಇದು ಎರಡನೆಯ ಕಥಾಸಂಕಲನ. ಯು. ಆರ್. ಅನಂತಮೂರ್ತಿ ಅವರ ಮುನ್ನುಡಿ ಸದಾಶಿವರ ಬೆಳ ವಣಿಗೆಯನ್ನೂ ಕಲಾವಂತಿಕೆಯನ್ನೂ ತಿಳಿಸುತ್ತದೆ. 'ನೋಡಿದೆಯಾ ಅಮ್ಮ ಅವಳ ಧಿಮಾಕು' ಕಥೆಯಲ್ಲಿ ಮುರಿದುಹೋದ ತನ್ನ ಬಾಳು ಸರಿಹೋಗಬಹುದೆಂದು ಪದ್ಮ ಳಿಗೆ ಒಂದು ಗಳಿಗೆ ಅನ್ನಿಸಿತ್ತು. ಆದರೆ ಬದಲಾಗದ ತನ್ನ ಅತ್ತೆಯನ್ನೂ ಗಂಡನನೂ ಕಂಡಾಗ ಅವರನ್ನು ತೊರೆದು ಮತ್ತೆ ಮೊದಲಿನ ಒಂಟಿಬಾಳಿಗೆ ಹೊರಡುತ್ತಾಳೆ. 'ನೋಡಿ ದೆಯಾ ಅಮ್ಮ ಅವಳ ಧಿಮಾಕು' ಎಂಬ ಗಂಡನ ನುಡಿಯಿಂದ ಪದ್ಮಳಿಗೆ ದುಃಖವಾಗುವ ಬದಲು ನಗುಬರುತ್ತದೆ. ಅದು ಅವಳ ಅತ್ತೆ, ಗಂಡನ ಬಗೆಗಿನ ತಿರಸ್ಕಾರವನ್ನು ತೋರಿ ಸುವಂತೆಯೆ ಸರಳವಾಗಬಹುದಾಗಿದ್ದ ಕಥೆಯನ್ನು ಸಂಕೀರ್ಣಗೊಳಿಸುತ್ತದೆ. 'ಹುಲಿಯ ಕರೆ', 'ಸರಳುಗಳ ನಡುವೆ' ಮತ್ತು 'ಮಗು ಮಲಗಿತು' ಸಾಧಾರಣವಾದ ಕಥೆಗಳು. 'ಮಗು ಮಲಗಿತ್ತು' ಕಥೆಯಲ್ಲಿ ಜಾರಿಣಿಯೊಬ್ಬಳು ವೇಶ್ಯಾವೃತ್ತಿಯಲ್ಲಿರುವವರನ್ನು ಕಂಡು ಅಪಹಾಸ್ಯ ಮಾಡುವ ವ್ಯಂಗ್ಯವಿದೆ. 'ಮತ್ತೆ ಮಳೆ ಹೊಯ್ಯುತಿದೆ ... ಎಲ್ಲ ನೆನ ಪಾಗುತಿದೆ' ಕಥೆಯಲ್ಲಿ ಸುಧಾಳನ್ನು ಪ್ರೀತಿಸುವ ನರಹರಿಯನ್ನು ವಿಚಾರಿಸುವ ಪ್ರೊಫೆ ಸರ್ ರಂಗನಾಥರ ಆತ್ಮಕಥೆ ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತದೆ. ಕಥೆ ಹೇಳುವ ರೀತಿಗೇ ಈ ಕಥೆಯನ್ನು ಮೆಚ್ಚಿಕೊಳ್ಳಬೇಕು. 'ಹೆಳವನ ಹೆಗಲಮೇಲೆ ಕುರುಡ ಕುಳಿತಿ ದ್ದಾನೆ' ಒಂದು ವಿಫಲ ಕಥೆ ಎನಿಸುತ್ತದೆ. ಯಮುನೆಯಿಂದ ಯಾವ ಉತ್ತರವನ್ನೂ ಪಡೆಯದ ಶ್ರೀನಾಥ ಗೋಪಾಲನ ಮನೆಗೆ ಬಂದು, ಸಂವೇದನೆಯನ್ನೆ ಕಳೆದುಕೊಂಡಿ ರುವ ಅವನಿಂದ ಯಾವುದೇ ರೀತಿಯ ಮಾರ್ಗದರ್ಶನವನ್ನು ಪಡೆಯಲಾರದೆ ಹಿಂತಿರು ಗುತ್ತಾನೆ. ಈ ಮಧ್ಯೆ ಶ್ರೀನಾಥನ ಎದುರಿಗೇ ನಡೆಯುವ, ಅವನಿಗೆ ಅಪರಿಚಿತರಾದ ಉಮಾ ಮತ್ತು ರಾಮದಾಸರ ಪ್ರಣಯಕಥೆ ಅವನಿಗೆ ಯಾವುದೇ ರೀತಿಯ ಬೆಳಕನ್ನೂ ತೋರುವುದಿಲ್ಲ. 'ನೆರಳು ಬೆಳಕಿನಾಟದಲ್ಲಿ ಕಂಡದ್ದೇನು' ಕಥೆ ವಾಚ್ಯಾರ್ಥವನ್ನೂ, ಅದ ಕ್ಕಿಂತ ಭಿನ್ನವಾದ ವ್ಯಂಗ್ಯಾರ್ಥವನ್ನೂ ಕೊಡುತ್ತದೆ. ಶಿವರಾಮ ತನ್ನ ಹೆಂಡತಿ ಪೈಲೂರ ನೊಂದಿಗೆ ಓಡಿಹೋದಾಗ ಸಿಟ್ಟಿಗೇಳುವುದಿಲ್ಲ, ಚಡಪಡಿಸುವುದಿಲ್ಲ. ಇದು ಅವನ ಪುರುಷತ್ವಕ್ಕೆ ಸವಾಲು. ಹಾಗೆಂದು ಮುರಿದ ಮನಸ್ಸಿನವಳನ್ನು ಮತ್ತೆ ಕರೆತಂದು ಬಾಳುವೆ

ಮಾಡಲಾಗುತ್ತದೆಯೆ? ಇದನ್ನು ಬಾಯಿ ಬಿಟ್ಟು ಹೇಳದಿದ್ದರೂ ತನ್ನ ಅಕ್ಕ ಸೀತೆಯ ವೃತ್ತಾಂತವನ್ನು ಹೇಳುವಾಗ ಸೂಚ್ಯವಾಗಿ ಹೇಳುತ್ತಾನೆ. ಕಾಮತರನ್ನು ಅನೀತಿಯುತ ವಾಗಿ ಕೂಡುವ ಮುನ್ನ ಸೀತೆ ದೀಪದ ಬೆಳಕಿನಲ್ಲಿ 'ಆ ನೆರಳು ಬೆಳಕಿನಾಟದಲ್ಲಿ ಅವಳು ನನ್ನನ್ನು ನೋಡುವಾಗ ಅವಳ ಮುಖ ವಿಚಿತ್ರವಾಗಿ, ವಿಕಾರವಾಗಿ ಕಂಡುಬಂದಿತು. ಆದರೆ ಮತ್ತೊಮ್ಮೆ ದೀಪದ ಕಡೆಯೇ ಅವಳ ಕಣ್ಣು ನಟ್ಟಾಗ ದೇವತೆಯಂತೆ ಕಂಡಳು.' ಹೀಗೆ ತನ್ನ ಬಾಲ್ಯದ ನೆನಪನ್ನು ತಂದುಕೊಂಡು ಅದರಿಂದ ಪಾಠ ಕಲಿತು, ಆದರೆ ಅದನ್ನು ತನ್ನ ಚಿಕ್ಕಪ್ಪನಿಗೆ ಹೇಳಲಾಗದೆ ಶಿವರಾಮು ತೊಳಲಾಡುತ್ತಾನೆ. ನೆರಳು ಬೆಳಕು ಅಜ್ಞಾನಕ್ಕೂ ಜ್ಞಾನಕ್ಕೂ ಸಂಕೇತವಾಗಿದೆ. ಹೆಂಡತಿಯಾದವಳು ಕೂಡ ಹೇಗೆ ಅಪರಿಚಿತಳಾಗಿಯೆ ಉಳಿಯುತ್ತಾಳೆ ಎಂಬುದು 'ಅಪರಿಚಿತರು' ಕಥೆಯಲ್ಲಿ ನಿರೂಪಿತವಾಗಿದೆ. 'ರಾಮನ ಸವಾರಿ ಸಂತೆಗೆ ಹೋದದ್ದು' ಈ ಸಂಕಲನದ ಅತ್ಯುತ್ತಮ ಕಥೆ. ರಾಮು ಸಂತೆಗೆ ಹೊರಡುವಾಗಿನ ಬಾಲಸಹಜ ಉತ್ಸಾಹ ನೈಜವಾಗಿ ಚಿತ್ರಿತವಾಗಿದೆ. ಮಂಜಯ್ಯನ ಮಗಳು ಪಾರ್ವತಿ ಮತ್ತು ಅವಳ ಗಂಡ ಶಿವರಾಮಯ್ಯನ ಸಂಸಾರ ಚಿತ್ರವನ್ನು ರಾಮನ ದೃಷ್ಟಿಯಲ್ಲಿ ಚಿತ್ರಿಸಿದ್ದಾರೆ. ಒಡೆದುಹೋದ ಸಂಸಾರದ ಸುಂದರ ಚಿತ್ರ ಈ ಕಥೆಯಲ್ಲಿ ಸಿಗುತ್ತದೆ. ಜೀವನದ ದುಃಖ, ಕಹಿಗಳನ್ನು ರಾಮನ ಮುಗ್ಧ ಉತ್ಸಾಹ ಮರೆಸಿ ಕಥೆಗೆ ಒಂದು ಮೆರುಗನ್ನು ಕೊಡುತ್ತದೆ. 'ಹಾವು' ಕಥೆ ಸದಾಶಿವರ ಬೆಳವಣಿಗೆಯನ್ನು ತೋರುವ ಕಥೆ. ಕಥೆಯಲ್ಲಿ ಬರುವ ಹಾವು ಕಾಮಕ್ಕೆ ಸಂಕೇತವಾಗಿದ್ದರೂ ಕಥೆಯಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡು ಕಥೆಯ ಒಂದು ಪಾತ್ರವೇ ಆಗಿರುವುದರಿಂದ ಅದು ಸಂಕೇತವೆಂದೇ ಅನಿಸುವುದಿಲ್ಲ. ನಿತ್ಯ ತಿರುಗಾಡುವ, ಕುಳಿತುಕೊಳ್ಳುವ, ಹೊಸಿಲ ಬಳಿಯ ಹಾವು ಗೂಡು ಮಾಡಿಕೊಂಡಿದ್ದಿತೆ ಎನ್ನುವುದು ನಿತ್ಯ ಮನೆಗೆ ಬಂದು ಕೆಲಸ ಮಾಡಿ ಹೋಗುತ್ತಿದ್ದವಳ ಮೇಲೆ ಕಥಾನಾಯಕನ ಕಾಮದೃಷ್ಟಿ ಇದ್ದುದನ್ನೂ, ಚಿಮಟದಲ್ಲಿ ಸಿಕ್ಕು ವಿಲವಿಲ ಒದ್ದಾಡುವ ಹಾವಿನಂತೆಯೆ ಬಜಾರಿ ತಾಯಿ ಹೆಂಡತಿಯರ ರಂಪದಲ್ಲಿ ಸಿಕ್ಕ ದುರ್ಬಲ ವ್ಯಕ್ತಿ ಒದ್ದಾಡುವುದನ್ನೂ, ಚಿತ್ರಿಸುತ್ತದೆ. ತಾಯಿ ಹೆಂಡತಿಯರಿಲ್ಲದಾಗ ಅವನು ಗಂಗಿಯೊಡನೆ ಬೆಳೆಸುವ ಸಂಬಂಧದ ಸಂಕೇತವಾಗಿ ಹಾವು ಬಂದಿದೆ.

ಈ ಸಂಕಲನದ ಎಲ್ಲ ಕಥೆಗಳೂ ಕೊನೆಯ ಎರಡು ಕಥೆಗಳಂತೆ ಸಫಲವಾಗಿವೆ ಎನ್ನುವಂತಿಲ್ಲವಾದರೂ ಈ ಕಥೆಗಳಲ್ಲಿ ಸದಾಶಿವರ ಆರೋಗ್ಯಕರವಾದ ಬೆಳವಣಿಗೆಯನ್ನು ಕಾಣಬಹುದು. 'ಮತ್ತೆ ಮಳೆ ಹೊಯ್ಯುತಿದೆ ... ಎಲ್ಲ ನೆನಪಾಗುತಿದೆ', ನೆರಳು ಬೆಳಕಿನಾಟದಲ್ಲಿ ಕಂಡದ್ದೇನು', 'ಅಪರಿಚಿತರು', 'ನೋಡಿದೆಯಾ ಅಮ್ಮ ಅವಳ ಧಿಮಾಕು', 'ರಾಮನ ಸವಾರಿ ಸಂತೆಗೆ ಹೋದದ್ದು' ಮತ್ತು 'ಹಾವು' ಈ ಸಂಕಲನದ ಉತ್ತಮ ಕಥೆಗಳು.

'ಮಂಜುಗಡ್ಡೆ' ಮತ್ತು 'ಕ್ಷಿತಿಜ'ಗಳ ನಂತರ ಬರುತ್ತಿರುವ **ದಂಡೆ** ಶಾಂತಿನಾಥ ದೇಸಾಯಿಯರ ಏಳು ಕಥೆಗಳ ಸಂಕಲನ. 'ದಂಡೆ' ಮತ್ತು 'ಏಕಾಂಗಿ' ಕಥೆಗಳಲ್ಲಿ ಕಥಾನಾಯಕನ ಬೇಸರ ಕಂಡುಬರುತ್ತದೆ. ಆದರೆ ಅವೆರಡರಲ್ಲೂ ಸೂಕ್ಷ್ಮ ವ್ಯತ್ಯಾಸ ಇದೆ. ಒಂದು ಬಾಳನ್ನು ತೊರೆಯಲು ಹಂಬಲಿಸಿದರೆ ಮತ್ತೊಂದು ಬಾಳನ್ನು ಹಚ್ಚಿ

ಕೊಳ್ಳಲು ಹಂಬಲಿಸುತ್ತದೆ. ಎರಡರಲ್ಲೂ ನಾಗರಿಕತೆಯ, ವೈಚಾರಿಕತೆಯ ಪ್ರಭಾವ ಗಾಢವಾಗಿದೆ. 'ಅವರು, ಕಾರು ಮತ್ತು ನಗೆ' ಮತ್ತು 'ತೃಪ್ತ' ವೈವಾಹಿಕ ಜೀವನದ ಚಿತ್ರಗಳು. ಶಕುಂತಲೆ, ಪ್ರಭು ಮತ್ತು ಮಾಧವರಾಯರ ಗತಬಾಳನ್ನು ತೆರೆದು ತೋರಿಸುತ್ತಾಳೆ. 'ಅವರು, ಕಾರು ಮತ್ತು ನಗೆ' ಕಥೆಯಲ್ಲಿ, ಒಬ್ಬೊಬ್ಬರಿಗೂ ಒಬ್ಬೊಬ್ಬರ ಜೀವನದಲ್ಲಿ ಹುಳುಕು ಕಂಡುಬಂದರೂ ತಮ್ಮ ಇತಿಹಾಸವೂ ಅಂತಹುದೇ ಎಂದು, ಮುಂದೆ ಎಲ್ಲವೂ ಸರಿ ಇದ್ದರೆ ಸರಿ ಎಂದು ಸುಮ್ಮನಾಗುತ್ತಾರೆ. 'ತೃಪ್ತ' ಕಥೆಯ ವಿಶ್ವನಾಥನಿಗೂ ಪದ್ಮಿನಿಗೂ, 'ಅವರು, ಕಾರು ಮತ್ತು ನಗೆ' ಯ ಮಾಧವರಾಯನಿಗೂ ಮತ್ತು ಶಕುಂತಲೆಗೂ ವ್ಯತ್ಯಾಸವಿಲ್ಲ. 'ನಿರ್ಣಯ' ಕಥೆ ಕೂಡ ವೈವಾಹಿಕ ಜೀವನದ ಕಥೆಯಾದರೂ ಮೇಲಿನ ಎರಡಕ್ಕಿಂತಲೂ ಭಿನ್ನವಾದುದು. ಇನ್ನೂ ಹನ್ನೊಂದು ವರ್ಷದ ಬಾಲಕ ರಘುವಿನ ದೃಷ್ಟಿಯಲ್ಲಿ ಅದನ್ನು ಚಿತ್ರಿಸಿರುವುದು ವೈಶಿಷ್ಟ್ಯ. ಮಲ್ಲೇಶಿ, ನಿಂಗಿಯರ ಬಗ್ಗೆ ರಘುವಿಗೆ ಉಂಟಾಗುವ ವಿಚಿತ್ರ ಕುತೂಹಲ, ಆಸಕ್ತಿ, ಅವುಗಳಿಗೆ ತನ್ನ ದೃಷ್ಟಿಯ ಮೂಲಕ ಕೊಡುವ ವ್ಯಾಖ್ಯಾನ ಇವು ಕಥೆಯ ಸ್ವಾರಸ್ಯವನ್ನು ಹೆಚ್ಚಿಸಿವೆ. ಈ ಕಥೆ ಸದಾಶಿವರ 'ರಾಮನ ಸವಾರಿ ಸಂತೆಗೆ ಹೋದದ್ದು'ನ್ನು ನೆನಪಿಗೆ ತರುತ್ತದೆ. 'ನೀಚ' ಸ್ವತಂತ್ರನಾಗಿ ಬಾಳಲಾರದೆ ಇನ್ನೊಬ್ಬರ ಮೂಲಕ ತನ್ನ ಅನ್ನಿಸಿಕೆಗಳನ್ನು ಆಗುಮಾಡಿಕೊಳ್ಳುವ ಆದರ ಅದರ ಫಲಕ್ಕೆ ಜವಾಬ್ದಾರನಾಗುವ ಅರುಣನ ದುರ್ಬಲ ವ್ಯಕ್ತಿತ್ವದ ಕಥೆ. ಅರುಣನ ವ್ಯಕ್ತಿತ್ವಕ್ಕೆ ವಿರುದ್ಧವಾದುದು ಕರೀಮನ ವ್ಯಕ್ತಿತ್ವ. ವಿಧಿಯಿಲ್ಲದೆ ಸಂದರ್ಭಕ್ಕೆ ಮೀನ ಹೊಂದಿಕೊಳ್ಳುವುದನ್ನು ನೋಡಿದರೆ ಕಥೆಗಾರರು ಸಂಕೀರ್ಣವಾಗಬಹುದಾಗಿದ್ದ ಕಥೆಯನ್ನು ಬೇಕೆಂದೇ ಸರಳಗೊಳಿಸಿದ್ದಾರೆ ಎನಿಸುತ್ತದೆ. 'ನಾನಾನ ತೀರ್ಥಯಾತ್ರೆ' ಉಳಿದ ಕಥೆಗಳಿಗಿಂತ ಭಿನ್ನವಾದದ್ದು. ಆದರೆ ಶಿಲ್ಪದಲ್ಲಿ. ಶೈಲಿಯಲ್ಲಿ ನಾನಾನಿಗೂ 'ದಂಡೆ'ಯ ನಾಯಕನಿಗೂ ವ್ಯತ್ಯಾಸವಿಲ್ಲ.

ಶಾಂತಿನಾಥ ದೇಸಾಯರಿಂದ ಇನ್ನೂ ಉತ್ತಮ ಕಥೆಗಳನ್ನು ನಿರೀಕ್ಷಿಸಬಹುದು. ನಮ್ಮ ನಿರೀಕ್ಷೆ ವ್ಯರ್ಥವಾಗುವುದಿಲ್ಲ.

ಲೇಖಕಿಯರಿಗಿಂತ ಲೇಖಕರು ಸಂಖ್ಯೆಯಲ್ಲಿ ಹೆಚ್ಚಾಗಿದ್ದಾರೆ. ಮಾತ್ರವಲ್ಲ ಪೌರಾಣಿಕ, ಪತ್ತೇದಾರಿ. ಸಾಮಾಜಿಕ ಕಥೆಗಳನ್ನೂ ಬರೆದು ವೈವಿಧ್ಯವನ್ನು ತೋರಿದ್ದಾರೆ. ಲೇಖಕರಲ್ಲಿ ಕೃಷ್ಣಮೂರ್ತಿ ಪುರಾಣಿಕರನ್ನುಳಿದರೆ ಉಳಿದವರೆಲ್ಲರೂ ಗಮನಾರ್ಹರು. ರಮ್ಯ ಸಂಪ್ರದಾಯದ ಕಥೆಗಾರರೂ, ನವ್ಯಕಥೆಗಾರರೂ, ಎರಡೂ ಗುಂಪಿಗೆ ಸೇರದೆ ತಮ್ಮದೇ ದಾರಿಯನ್ನು ಕಂಡುಕೊಳ್ಳುತ್ತಿರುವ ಕಥೆಗಾರರೂ ತಮ್ಮ ತಮ್ಮ ಕಥಾಸಂಗ್ರಹಗಳನ್ನು ಹೊರತಂದಿದ್ದಾರೆ. ನವ್ಯ ಕಥೆಗಾರರನ್ನು ಪ್ರತಿಭಾವಂತರೆಂದು ವಿಮರ್ಶಕರು ಗುರುತಿಸಿರುವುದರಿಂದ ಅಂತಹವರ ಕಥೆಗಳು ಸಾಧಾರಣವಾಗಿದ್ದರೂ ಅವುಗಳಲ್ಲಿ ಏನೋ ಅರ್ಥ ಇರಬೇಕೆಂದು ಓದುಗ ಬರಿದೇ ತೊಳಲಾಡುವಂತೆ ಆಗುತ್ತದೆ.

ತಮಿಳು ಭಾಷೆಯಲ್ಲಿ ವರ್ಷವೊಂದಕ್ಕೆ ಸುಮಾರು ಮೂರು ಸಾವಿರ ಕಥೆಗಳು ಪ್ರಕಟವಾಗುತ್ತವಂತೆ. ಬಹುಶಃ ಉಳಿದ ಭಾಷೆಗಳಲ್ಲಿಯ ಕಥೆಗಳ ಸಂಖ್ಯೆಯೂ ಅಷ್ಟೇ ಇರಬಹುದು. ಈ ಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ಕನ್ನಡದ ಕಥಾಸಂಕಲನಗಳ

ಸಂಖ್ಯೆಯನ್ನು ನೋಡಿದಾಗ ಪಿಚ್ಚೆನಿಸುತ್ತದೆ. ಸಾಕಷ್ಟು ಸಂಖ್ಯೆಯಲ್ಲಿ ಕಥಾಸಂಕಲನಗಳು ಬಂದಿಲ್ಲವೆಂದೇ ಹೇಳಬೇಕು. ಬಂದಿರುವ ಸಂಕಲನಗಳಲ್ಲಿಯೂ ಐತಿಹಾಸಿಕ ಸಂಕಲನಗಳೂ, ಜಾನಪದ ಕಥಾಸಂಕಲನಗಳೂ, ವೈಜ್ಞಾನಿಕ ಕಥಾಸಂಕಲನಗಳೂ ಇಲ್ಲದೆ ಇರುವುದು ಒಂದು ಕೊರತೆ.

ಕಾದಂಬರಿ

## ಜಿ. ಎಸ್. ಶಿವರುದ್ರಪ್ಪ

–1–

ಕಾದಂಬರಿ ಕ್ಷೇತ್ರದಲ್ಲಿ ಬಹುಶಃ ಪ್ರತಿ ವರ್ಷವೂ ಸಮೃದ್ಧವಾದ ಬೆಳೆ. ಈ ವರ್ಷ ಪ್ರಕಟವಾಗಿರುವ ಸುಮಾರು ನೂರಾಇಪ್ಪತ್ತರಷ್ಟು ಸಂಖ್ಯೆಯ ಕಾದಂಬರಿಗಳು ಇದಕ್ಕೆ ಸಾಕ್ಷಿ. ಸಾಹಿತ್ಯದ ಬೇರೆಬೇರೆಯ ಕ್ಷೇತ್ರಗಳಲ್ಲಿ ಕೊರತೆ ಬಿದ್ದೀತು. ಆದರೆ ಕಾದಂಬರಿಯ ಬರೆವಣಿಗೆಯಲ್ಲಿ ಬರಗಾಲವೆ ಇಲ್ಲ. ಇದಕ್ಕೆ ಕಾರಣ ಇದೊಂದು ಅತ್ಯಂತ ಜನಪ್ರಿಯವಾದ ಸಾಹಿತ್ಯಪ್ರಕಾರ; ಮನೋರಂಜನೆಗೆ ಕಾದ ಬಹುಮಂದಿಗೆ, ಸುಲಭವಾಗಿ ಬರೆದು ಒದಗಿಸಬಲ್ಲ ಕಾದಂಬರಿಕಾರರು ತಂಡತಂಡವಾಗಿದ್ದಾರೆ. ಅನೇಕ ಕಾದಂಬರಿಕಾರರಿಗೆ ಯಾವ ಗಂಭೀರವಾದ ಸಮಸ್ಯೆಗಳಾಗಲೀ, ವೈಚಾರಿಕತೆಯಾಗಲೀ ಇಲ್ಲ. ಏನೋ ಒಂದು ಕತೆಯನ್ನು, ಹೇಗೋ ರಂಜಕವಾಗಿ ಬೆಳೆಸಿ ಪುಟ ತುಂಬಿಸಿದರೆ ಒಂದು ಕಾದಂಬರಿಯಾಗುತ್ತದೆ ಎಂಬ ನಂಬಿಕೆಯೆ ಮಿಗಿಲಾಗಿದೆ. ಅತಿಯಾದ ಭಾವುಕತೆ; ಅಪಕ್ವವಾದ ವಿಚಾರ ಸರಣಿ; ಅಸಂಬದ್ಧ ಘಟನೆಗಳು; ವ್ಯಾಕರಣಶುದ್ಧಿ ಕೂಡ ಇಲ್ಲದ ಭಾಷಾಪ್ರಯೋಗ; ದುರ್ಬಲವಾದ ಪಾತ್ರಕಲ್ಪನೆ; ಜೀವಂತವಾದ ಅನುಭವದ ಅಭಾವ: ಕೇವಲ ಸಿನಿಮೀಯವಾದ ತಂತ್ರ – ಈ ಬಗೆಯ ಲಕ್ಷಣಗಳಿಂದ ನೂರಕ್ಕೂ ಮಿಗಿಲಾದ ಕಾದಂಬರಿಗಳು ನಿರಾಸೆಯನ್ನುಂಟುಮಾಡುತ್ತವೆ. ಇನ್ನು ಬೆರಳಲ್ಲಿ ಎಣಿಸಬಹುದಾದ ಎಂಟೋ ಹತ್ತೋ ಕಾದಂಬರಿಗಳು, ನಿಜವಾಗಿಯೂ ಕಾದಂಬರಿ ಎನ್ನಿಸಿಕೊಂಡಿವೆ ಎಂಬುದು ಓದುಗರ ಸುದೈವ.

ನಮ್ಮ ಗಮನಕ್ಕೆ ಬಂದ ಬಹುಪಾಲು ಕಾದಂಬರಿಗಳು ಹುಟ್ಟಿಸಿದ ನಿರಾಸೆಗೆ ಪ್ರಮುಖ ಕಾರಣ, ಆಯಾ ಕಾದಂಬರಿಗಳನ್ನು ಬರೆದವರೆಲ್ಲರಿಗೂ ತಮ್ಮ ಕಾದಂಬರಿ ಚಲನಚಿತ್ರವಾಗಿ ರಜತಪರದೆಯ ಮೇಲೆ ಮೆರೆಯಬಾರದೆ ಎಂಬ ಚಪಲವೆ – ಎಂದರೆ ಯಾರೂ ತಪ್ಪು ತಿಳಿಯಬಾರದು. ಕೆಲವು ಕಾದಂಬರಿಕಾರರಂತೂ 'ಚಲನಚಿತ್ರವಾಗಲಿರುವ ಕಾದಂಬರಿ' ಎಂದೇ ಹೊರಹೊದಿಕೆಯ ಮೇಲೆ ಅಚ್ಚುಹಾಕಿಸಿಕೊಂಡಿದ್ದಾರೆ. ಇಲ್ಲಿ ಗಮನಿಸಿರುವ ಕಾದಂಬರಿಗಳನ್ನು ಬರೆದವರ ಹಿಂದಿನ ಕೆಲವು ಕೃತಿಗಳು ಚಲನಚಿತ್ರಗಳಾಗಿರುವುದೂ ಉಂಟು. ಅಂತೂ ಜೀವನಾನುಭವದಿಂದ, ನಮ್ಮ ಕಾದಂಬರಿಕಾರರ ಕೇಂದ್ರ ಚಲನಚಿತ್ರಕ್ಕೆ ಸ್ಥಳಾಂತರವಾಗಿರುವುದು ಸ್ವಾರಸ್ಯವಾದ ಆದರೆ ವಿಷಾದದ ವಿಷಯವಾಗಿದೆ. ಎಷ್ಟೋ ಕಾಬಂಬರಿಗಳು. ಕನ್ನಡದ ಮತ್ತಿತರ ಚಲನಚಿತ್ರಗಳಿಂದ ಎತ್ತಿಕೊಂಡು ಜೋಡಿಸಿದ ಅಸಂಬದ್ಧ ಘಟನೆಗಳ ಸರಣಿಯಂತೆ ಕೂಡ ಕಾಣುತ್ತವೆ. ಪಾತ್ರಗಳ ನಡವಳಿಕೆಗಳಾಗಲಿ, ಸನ್ನಿವೇಶನಿರ್ಮಾಣಗಳಾಗಲಿ ಥೇಟ್ ಸಿನಿಮಾದ ದೃಶ್ಯಗಳಂತೆಯೇ ಕಾಣುತ್ತವೆ. ಹೀಗಾಗಿ ಸಿನಿಮಾದ ಪ್ರಭಾವ ಕನ್ನಡ ಕಾದಂಬರಿಕಾರರ ಮೇಲೆ ವಿಶೇಷವಾಗಿದೆ. ಅದರ ಪರಿಣಾಮವಾಗಿ ಈ ಕಾದಂಬರಿಗಳು ಸಾಧಾರಣ ದರ್ಜೆಯ ಸಾಮಾನ್ಯ ಚಲನಚಿತ್ರಗಳಂತಾಗಿವೆ.

ಹಾಗೆಂದ ಮಾತ್ರಕ್ಕೆ ಕಾದಂಬರಿ ಸಿನಿಮಾಕ್ಕೆ ಅಳವಡುವಂತಿದ್ದರೆ ತಪ್ಪೆಂದೂ, ಕಾದಂಬರಿ ಸಿನಿಮಾಗಳನ್ನು ನೆನಪಿಗೆ ತರುವಂತಿರಬಾರದೆಂದೂ ಮೇಲಿನ ಮಾತಿನ ಅರ್ಥವಲ್ಲ. 'ಸಂಸ್ಕಾರ' ಮತ್ತು 'ವಂಶವೃಕ್ಷ'ಗಳಂಥ ಕಾದಂಬರಿಗಳು ಅತ್ಯುತ್ತಮ ಚಲನ ಚಿತ್ರಗಳಾಗಿ ವಿಖ್ಯಾತವಾಗಿವೆ ಎಂಬುದೂ ಗೊತ್ತು. ಕಾದಂಬರಿ ಮೊದಲು ಅತ್ಯುತ್ತಮ ಸಾಹಿತ್ಯಕೃತಿಯಾಗುವುದು ಬೇರೆ; ಅನಂತರ ಅದು ಚಲನಚಿತ್ರವಾಗುವುದು ಬೇರೆ. ಆದರೆ ಚಲನಚಿತ್ರವಾಗಲೆಂಬ ಮೂಲೋದ್ದೇಶದಿಂದ ಬರೆದರೆ ಅಥವಾ ತಾವು ಕಂಡ ಹತ್ತಾರು ಚಲನಚಿತ್ರಗಳಿಂದ ಪ್ರಭಾವಿತರಾಗಿ ಬರೆದರೆ ಅದರ ದೃಷ್ಟಿ ಕೇವಲ ಅಗ್ಗದ ಜನಪ್ರಿಯತೆಯ ಕಡೆಗೆ ಬಿದ್ದು, ಸಾಹಿತ್ಯಿಕ ಮೌಲ್ಯ ಸೊನ್ನೆಯಾಗುವುದುಂಟು. ನಾವು ಗಮನಿಸಿದ ಈ ಕಾದಂಬರಿಗಳು ಈ ಬಗೆಯ ಹಳ್ಳಕ್ಕೆ ಬಿದ್ದಿವೆ ಎಂಬುದೆ ನಮ್ಮ ಆಕ್ಷೇಪಣೆಗೆ ಮುಖ್ಯ ಕಾರಣವಾಗಿದೆ.

ಈ ಕಾದಂಬರಿಯ ಬೆಳೆಯನ್ನು ಸಮೀಕ್ಷಿಸುವ ಮುನ್ನ, ಮೇಲಿನ ನಮ್ಮ ಆಕ್ಷೇಪಣೆಗೆ ನಿದರ್ಶನವಾಗಿ, ಲೇಖಕರ ಹೆಸರು ಹೇಳದೆ, ಎರಡು ಕಾದಂಬರಿಗಳ ಕಥಾ ಸಾರಾಂಶವನ್ನು ಇಲ್ಲಿ ಕೊಡುತ್ತೇವೆ:

ಬೆಂಗಳೂರಿನ ವಿಮಾನ ನಿಲ್ದಾಣ. ಬೊಂಬಾಯಿಂದ ಬಂದ ಕ್ಯಾರವೆಲ್ ವಿಮಾನದಿಂದ ಮೋಹನ ಇಳಿಯುತ್ತಾನೆ. ಮೋಹನ ವಿದೇಶದಿಂದ ಬರುವ ವೇಳೆಗೆ, ಅತ್ಯಂತ ಶ್ರೀಮಂತನಾದ ಅವನ ತಂದೆ ಹಠಾತ್ತನೆ ನಿಧನಹೊಂದಿದ ಕಾರಣ, ವಿಮಾನ ನಿಲ್ದಾಣದಲ್ಲಿ ಮ್ಯಾನೇಜರ್ ಮಹಾಬಲಯ್ಯ ಮತ್ತು ಅವನ ಮಗಳು ಸುಂದರಿಯಾದ ಮನೋರಮ ಮೋಹನನನ್ನು ಎದುರುಗೊಳ್ಳುತ್ತಾರೆ.

ಬಂಗಲೆಗೆ ಬಂದ ಮೋಹನ ಮರುದಿನ ಬಂಗಲೆಯೊಳಗಿನ ಖಜಾನೆಯಲ್ಲಿ ತನ್ನ ತಂದೆ ತನಗಾಗಿ ಗಳಿಸಿಟ್ಟ ಅಪಾರವಾದ ಹಣವನ್ನು ನೋಡುತ್ತಾನೆ. ಬಡಬಗ್ಗರನ್ನು ಸುಲಿದು ಕೂಡಿಸಿದ ಈ ಅನ್ಯಾಯದ ಹಣಕ್ಕೆ ನಾನು ವಾರಸುದಾರನಾಗಲಾರೆ ಅನ್ನುತ್ತದೆ, ಅವನ ಅಂತರಂಗ. ತನ್ನ ತಂದೆಯಿಂದ ಸಾಲಪಡೆದು ಬಡ್ಡಿಯನ್ನು ತೆರುತ್ತಾಇದ್ದ ಬಾಕಿದಾರರುಗಳನ್ನೆಲ್ಲಾ ಕರೆಯಿಸಿ ಅವರ ಸಾಲದ ಪತ್ರಗಳನ್ನೆಲ್ಲಾ ಹರಿದು ಅವರನ್ನು ಋಣಮುಕ್ತರನ್ನಾಗಿ ಮಾಡಿ 'ಜೈ' ಎನ್ನಿಸಿಕೊಳ್ಳುತ್ತಾನೆ.

ಈ ನಡುವೆ ಮನೋರಮೆ ಅವನ ಆಪ್ತಕಾರ್ಯದರ್ಶಿನಿಯಾಗಿ ತನ್ನ ವನಪು ವಯ್ಯಾರಗಳಿಂದ ಮೋಹನನ ಮನಸ್ಸನ್ನು ಗೆಲ್ಲಲು ಹವಣಿಸುತ್ತಾಳೆ. ಮೋಹನ ಯಾರಿಗೂ ತಿಳಿಯದ ಹಾಗೆ ಬೆಂಗಳೂರಿನ ಒಂದು ಬಡಾವಣೆಯಲ್ಲಿ ಪದ್ಮನಾಭರಾವ್ ಎಂಬ ಬೇರೊಂದು ಹೆಸರಿನಿಂದ ಭಾರೀ ಹೋಟಲನ್ನಿರಿಸಿ ನಡೆಸುತ್ತಾ, ಇನ್ನೊಂದೆಡೆ ಸ್ವಂತ ಹೆಸರಿನಲ್ಲಿ ಫ್ಯಾಕ್ಟರಿಯೊಂದನ್ನು ನಡೆಯಿಸುತ್ತಾನೆ. ತಾನು ನಡೆಯಿಸುವ ಹೋಟೆಲಿಗೆ ಯಾರೋ ಮೋಸಮಾಡಿ ಕರೆತಂದ ಹಳ್ಳಿಯ ಹೆಣ್ಣುಮಗಳು ನಾಗವೇಣಿಯನ್ನು ಅಪಾಯದಿಂದ ಪಾರುಮಾಡಿ ಅವಳ ಮತ್ತು ಅವಳ ತಾಯಿಯ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ.

ಈ ನಡುವೆ ಕುಮಾರ್ ಎನ್ನುವವನು, ಮನೋರಮೆಯ ಬಗ್ಗೆ ಆಸೆ ಇಟ್ಟುಕೊಂಡು ಪರಿತಪಿಸುತ್ತಾ, ಮೋಹನನ ಮೇಲೆ ವಿಷ ಕಾರುತ್ತಿರುತ್ತಾನೆ. ಇತ್ತ ಮನೋರಮೆಗೆ ಮೋಹನನು ನಾಗವೇಣಿಯನ್ನು ಪ್ರೀತಿಸುತ್ತಾನೆಂದು ತಿಳಿದು, ಅವಳನ್ನು ಹೇಗಾದರೂ ಕೊಲ್ಲಿಸಬೇಕೆಂದು ಹವಣಿಸುತ್ತಿರುತ್ತಾಳೆ.

ಕುಮಾರನು ಒಂದು ದಿನ ಕಾದು ಮೋಹನನ ಕಾರಿನಮೇಲೆ ಬಾಂಬ್ ಎಸೆಯುತ್ತಾನೆ. ಆದರೆ ಅದು ಗುರಿತಪ್ಪಿ ಸಿಡಿದು ಮೋಹನ ಅಪಾಯದಿಂದ ಪಾರಾಗುತ್ತಾನೆ. ಇನ್ನೊಂದು ದಿನ ನಾಗವೇಣಿಯನ್ನು ಕಾರ್ಖಾನೆಗೆ ಕರೆದುಕೊಂಡು ಹೋದಾಗ, ಕುಮಾರ್ ಕಾರಿನ ಮುಂದೆ ಸೀಟಿನ ಕೆಳಗೆ ಟೈಂಬಾಂಬ್ ಒಂದನ್ನು ಇಡುತ್ತಾನೆ. ಮೋಹನ ಹಿಂದಿರುಗುವ ವೇಳೆಗೆ, ಮನೋರಮ ಬಂದು ಕಾರಲ್ಲಿ ಕೂಡುತ್ತಾಳೆ. ನಾಗವೇಣಿ ಮೊದಲಾದವರು ಕಾರಣಾಂತರದಿಂದ ಇನ್ನೊಂದು ಕಾರಿನಲ್ಲಿ ಬರಬೇಕಾಗುತ್ತದೆ. ಮನೋರಮ ಕೂತ ಕಾರನ್ನು ಮೋಹನ ಡ್ರೈವ್ ಮಾಡಿಕೊಂಡು ಬರುವಾಗ ದಾರಿಯಲ್ಲಿ ಎಮ್ಮೆಯೊಂದು ಅಡ್ಡಲಾಗಿ ಮಲಗಿರುತ್ತದೆ. ಮೋಹನ ಕಾರಿನಿಂದ ಇಳಿದು ಆ ಎಮ್ಮೆಯನ್ನು ಓಡಿಸಲು ತೊಡಗುವ ವೇಳೆಗೆ, ಕಾರೊಳಗಿನ ಟೈಂಬಾಂಬ್ ಢಮಾರನೆ ಸಿಡಿದು ಕಾರು ಚೂರುಚೂರಾಗಿ ಮನೋರಮೆ ಸತ್ತುಹೋಗುತ್ತಾಳೆ.

–ಇದು ಒಂದು ಕತೆ. ಸಿನಿಮಾ ತೆಗೆಯಲು ಚೆನ್ನಾಗಿದೆಯಲ್ಲವೆ?

ಇನ್ನೊಂದು ಕಾದಂಬರಿಯ ಸಾರಾಂಶ. ಮಹಿಳಾ ಲೇಖಕಿಯರು ಬರೆದದ್ದು:

ಕಮಲಳ ಗಂಡ ಶ್ರೀನಿವಾಸ ಕೊಲೆ ಆರೋಪದ ಮೇಲೆ ಜೈಲಿಗೆ ಹೋಗುತ್ತಾನೆ. ಇದ್ದ ಒಂದು ಸಣ್ಣ ಕೈಕೂಸನ್ನು ಸಾಕುತ್ತಾ ದಿನತಳ್ಳುವ ಕಮಲಳ ಬದುಕು ಕಷ್ಟವಾಗುತ್ತದೆ. ಮನೆ ಮಾಲೀಕನ ತಗಾದೆಯಿಂದ ಬೇಸತ್ತು, ಇದ್ದ ವಸ್ತುಗಳೆಲ್ಲವನ್ನೂ ಮಾರಿ, ಬಾಡಿಗೆ ಕೊಟ್ಟು ಮಗುವಿನ ಸಮೇತ ಮೈಸೂರಿಗೆ ಹೋಗುತ್ತಾಳೆ. ಯಾರ್ಯಾರ ಮನೆಯ ಜಗುಲಿಯ ಮೇಲೆ ಕೂಡಾ ಸ್ಥಳ ದೊರೆಯದೆ ಮರದ ಕೆಳಗೆ ಕೂತು ಕಾಲ ತಳ್ಳುತ್ತಾಳೆ. ಮನೆಗೆಲಸಕ್ಕೆಂದು ಹೋದರೆ, ಮಗುವಿನ ಸಮೇತ ಇರುವ ಕೆಲಸದವಳು ಬೇಡ ಎಂದು ಎಲ್ಲರೂ ತಿರಸ್ಕರಿಸುತ್ತಾರೆ. ಕಡೆಗೆ ಜಯಮ್ಮ ಎಂಬ ಮನೆಗೆಲಸದ ಹೆಣ್ಣು, ಈ ಮಗುವನ್ನು ಅನಾಥ ಶಿಶುವೆಂದು ಹೇಳಿ ಅನಾಥಾಲಯಕ್ಕೆ ಸೇರಿಸಲು ಸಲಹೆ ಕೊಡುತ್ತಾಳೆ. ಒಲ್ಲದ ಮನಸ್ಸಿನಿಂದ ಕಮಲ ಒಪ್ಪುತ್ತಾಳೆ. ಜಯಮ್ಮ ಮಗುವನ್ನು ಒಯ್ದು ಆ ಊರಿನ ಅನಾಥಾಲಯಕ್ಕೆ ಸೇರಿಸುತ್ತಾಳೆ. ಕಮಲಳಿಗೆ ಕೃಷ್ಣಮೂರ್ತಿಯವರ ಮನೆಯಲ್ಲಿ ಕೆಲಸ ಸಿಕ್ಕುತ್ತದೆ.

ಕೃಷ್ಣಮೂರ್ತಿಯವರ ಹೆಂಡತಿ ರತ್ನ. ಬಹುಕಾಲ ಮಕ್ಕಳಿಲ್ಲದ ಆಕೆಗೆ ಒಂದು ಹೆಣ್ಣುಮಗುವಾಗುತ್ತದೆ. ಈ ನಡುವೆ ಕಮಲ ತಾನು ಸಂಪಾದಿಸಿದ ತಿಂಗಳ ಕೂಲಿಯನ್ನು ಅನಾಥಾಲಯಕ್ಕೆ ದಾನ ಕೊಡುವ ನೆಪದಿಂದ, ಅನಾಥಾಲಯಕ್ಕೆ ಹೋಗಿ ಅಲ್ಲಿ ಸುಖವಾಗಿ ಬೆಳೆಯುತ್ತಿರುವ ತನ್ನ ಮಗುವನ್ನು ನೋಡಿಕೊಂಡು ಬರುತ್ತಾಳೆ. ಈ ನಡುವೆ ರತ್ನಳ ಮಗು ಸತ್ತುಹೋಗುತ್ತದೆ. ಮಗುವನ್ನು ಕಳೆದುಕೊಂಡು ಹುಚ್ಚಿಯಂತಾದ ರತ್ನಳ ಅವಸ್ಥೆಯನ್ನು ನೋಡಲಾರದೆ, ಕೃಷ್ಣಮೂರ್ತಿಗಳು ಅನಾಥಾಲಯದಿಂದ ಹೆಣ್ಣುಮಗುವೊಂದನ್ನು ತಂದು ಸಾಕಲು ನಿರ್ಧರಿಸುತ್ತಾರೆ. ಗಂಡ ಹೆಂಡಿರಿಬ್ಬರೂ ಹೋಗಿ ಅನಾಥಾಲಯದಿಂದ ಚೆನ್ನಾಗಿರುವ ಹೆಣ್ಣುಕೂಸೊಂದನ್ನು ಮನೆಗೆ ತರುತ್ತಾರೆ. ಕಮಲಳಿಗೆ ಅದು ತಾನು ಅನಾಥಾಲಯಕ್ಕೆ ಕೊಟ್ಟ ತನ್ನ ಮಗು ಎಂಬುದು ಗೊತ್ತಾಗುತ್ತದೆ.

ಮನೆಯಲ್ಲಿ ಪೂರ್ಣಾವಧಿ ಕೆಲಸಕ್ಕಿದ್ದ ಕಮಲಳಿಗೆ ತನ್ನ ಮಗು ತನ್ನ ಕಣ್ಣೆದುರಿಗೆ ಇರುವುದನ್ನು ಕಂಡು ಸಂತೋಷವಾದರೂ ಅದು ತನ್ನ ಮಗು ಎಂದು ಹೇಳಿಕೊಳ್ಳಲು ಸಂಕಟ ಪ್ರಾಪ್ತವಾಗುತ್ತದೆ. ಕಾಲಕ್ರಮೇಣ ಮಗು ಬೆಳೆಯುತ್ತದೆ. ಆದರೆ ಮನೆಯೊಡತಿ ರತ್ನ ಇದ್ದಕ್ಕಿದ್ದಹಾಗೆ ತೀರಿಕೊಳ್ಳುತ್ತಾಳೆ. ಕೆಲಸದಾಕೆಯಾದ ಕಮಲಳೆ ಎಲ್ಲ ಯೋಗಕ್ಷೇಮವನ್ನೂ ನೋಡಿಕೊಳ್ಳಬೇಕಾಗುತ್ತದೆ.

ಕೃಷ್ಣಮೂರ್ತಿ ಯಾರ್ಯಾರು ಹೇಳಿದರೂ ಬೇರೆ ಮದುವೆ ಮಾಡಿಕೊಳ್ಳಲು ಒಪ್ಪುವುದಿಲ್ಲ. ಆದರೆ ಮನೆಗೆಲಸದಾಕೆಯಾದ ಕಮಲಳನ್ನು ಮಾತ್ರ ಮದುವೆ ಮಾಡಿಕೊಳ್ಳುವ ಆಸೆಯನ್ನು ವ್ಯಕ್ತಪಡಿಸು

ತ್ತಾನೆ. ಕಮಲ ನಿರಾಕರಿಸಿ ತನ್ನ ಪೂರ್ವ ವೃತ್ತಾಂತವನ್ನು ಹೇಳದೆ ಸದ್ದಿಲ್ಲದೆ ಮನೆಗೆಲಸ ಮಾಡಿಕೊಂಡು ಹೋಗುತ್ತಾಳೆ. ಈ ನಡುವೆ. ಬಹುಕಾಲದನಂತರ ಬೆಂಗಳೂರಿಗೆ ಹೋಗಿ ಒಮ್ಮೆ ಜೈಲಿನಲ್ಲಿದ್ದ ತನ್ನ ಗಂಡನನ್ನು ಭೇಟ್ಟಿಯಾಗುತ್ತಾಳೆ. ಕಮಲಳ ವೇಷಭೂಷಣಗಳನ್ನು ನೋಡಿ ಅವಳ ಗಂಡ ಶ್ರೀನಿವಾಸನಿಗೆ ಅವಳ ನಡತೆಯ ಬಗ್ಗೆ ಸಂಶಯ ಬರುತ್ತದೆ. ಈ ಸಂಶಯವನ್ನು ಕೆಲವರು ಪೋಷಿಸುತ್ತಾರೆ. ತಾನು ಜೈಲಿನಿಂದ ಬಿಡುಗಡೆಯಾದ ಮೇಲೆ, ಕಮಲಳ ಪೋಷಕನಾದ ಕೃಷ್ಣಮೂರ್ತಿಯನ್ನು ಕೊಲೆ ಮಾಡಲು ಶ್ರೀನಿವಾಸ ಸಂಕಲ್ಪಿಸುತ್ತಾನೆ.

ಕಮಲ ತನ್ನದೆ ಮಗುವನ್ನು ತನ್ನದೆಂದು ಹೇಳಿಕೊಳ್ಳದೆ ಕೃಷ್ಣಮೂರ್ತಿಗಳ ಮನೆಯಲ್ಲಿ ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಒಂದು ರಾತ್ರಿ ಆ ಮಗು ಕಥೆ ಹೇಳು ಎಂದು ಕಮಲಳನ್ನು ಕೇಳುತ್ತದೆ. ಆಗ ಕಮಲ ತನ್ನ ಕಥೆಯನ್ನ, ಕತೆಮಾಡಿ ಮಗುವಿಗೆ ಹೇಳುತ್ತಾಳೆ. ಅದೇ ವೇಳೆಗೆ ಪಕ್ಕದ ಕೊಠಡಿಯಲ್ಲಿದ್ದ ಕೃಷ್ಣಮೂರ್ತಿಯವರೂ ಈ ಕಥೆಯನ್ನು ಕೇಳಿಬಿಡುತ್ತಾರೆ. ಆಗ ಕೃಷ್ಣಮೂರ್ತಿಗಳಿಗೆ ಗೊತ್ತಾಗುತ್ತದೆ, ಕಮಲಳ ಗಂಡ ಜೈಲಿಗೆ ಹೋಗುವುದಕ್ಕೆ ತಾನೇ ಕೆಲವು ವರ್ಷಗಳ ಹಿಂದೆ ಕಾರಣವಾಗಿದ್ದೆನೆಂಬ ವಿಚಾರ !

ಈ ನಡುವೆ ಜೈಲಿನಿಂದ ಬಿಡುಗಡೆಯಾದ ಕಮಲಳ ಗಂಡ ಶ್ರೀನಿವಾಸ ಕಾವಿ ಬಟ್ಟೆ ಧರಿಸಿ ಸನ್ಯಾಸಿಯಾಗಿ. ಭಿಕ್ಷೆ ಬೇಡುತ್ತಾ ಮೈಸೂರಲ್ಲಿ ಅಲೆಯುತ್ತಾನೆ. ಒಂದು ರಾತ್ರಿ ಮಳೆ ಜೋರಾದಾಗ ಭಿಕ್ಷೆಗೆ ಬಂದ ಈತ ಒಂದು ಮನೆಯ ಜಗುಲಿಯ ಮೇಲೆ ನಿಲ್ಲುತ್ತಾನೆ. ಅದೇ ಮನೆಯಲ್ಲಿ ತನ್ನ ಹೆಂಡತಿ ಕಮಲಳು ಕೆಲಸಕ್ಕಿದ್ದುದು ! ಒಳಗೆ ಕಮಲಳ ಶೀಲ–ಸಂಯಮಗಳನ್ನು ಕೃಷ್ಣಮೂರ್ತಿಗಳು ಹೊಗಳುತ್ತಿರುವುದನ್ನು ಕಿವಿಯಾರೆ ಕೇಳಿದ ಸನ್ಯಾಸಿಯಾದ ಶ್ರೀನಿವಾಸನಿಗೆ ತನ್ನ ಹೆಂಡತಿಯ ಮೇಲಿದ್ದ ಸಂಶಯ ಕಳೆದುಹೋಗುತ್ತದೆ.

ಬೆಳಗಾದಾಗ ಸನ್ಯಾಸಿ, ಕಮಲಳು ಕೆಲಸಕ್ಕಿದ್ದ ಮನೆಯ ಬಳಿ ಬರುತ್ತಾನೆ. ಆ ವೇಳೆಗ ಕೃಷ್ಣಮೂರ್ತಿ ಸತ್ತುಹೋಗಿರುತ್ತಾರೆ. ಆದರೆ ಆಸ್ತಿಯನ್ನೆಲ್ಲಾ ತಾನು ಅನಾಥಾಲಯದಿಂದ ತಂದು ಸಾಕಿದ ಮಗು, ಅಪ್ಸರಳ ಹೆಸರಿಗೆ ಬರೆದಿರುತ್ತಾರೆ.

ಕೆಲವು ದಿನಗಳ ನಂತರ ಮತ್ತೆ ಈ ಸನ್ಯಾಸಿ ಅದೇ ಮನೆಗೆ ಬಂದು ಭಿಕ್ಷೆ ಕೇಳುತ್ತಾನೆ. ಲಕ್ಷಣವಾದ ಸಣ್ಣ ಹುಡುಗಿ ಭಿಕ್ಷೆ ತಂದು ಹಾಕುತ್ತದೆ. ಇವಳೇ ತನ್ನ ಮಗಳು ಎಂದು ಗುರುತಿಸಿ ಶ್ರೀನಿವಾಸ ಸಂತೋಷಪಡುತ್ತಾನೆ. ಬಾಗಿಲಿಗೆ ಬಂದ ಕಮಲಳನ್ನು ಕರೆದು 'ಕೈ ತೋರಿಸಿ ತಾಯಿ, ಭವಿಷ್ಯ ಹೇಳುತ್ತೇನೆ' ಎನ್ನುತ್ತಾನೆ. ಕಮಲ ಕೈ ತೋರಿಸುತ್ತಾಳೆ. 'ನಿನ್ನ ಪತಿ ಇಷ್ಟರಲ್ಲೇ ನಿನ್ನನ್ನು ಬಂದು ಸೇರುತ್ತಾನೆ' ಎಂದು ಕಣಿ ಹೇಳುತ್ತಾನೆ ಶ್ರೀನಿವಾಸ !

ಮರುದಿನ ಶ್ರೀನಿವಾಸ ತನ್ನ ಸನ್ಯಾಸಿಯ ಜಟೆ ಗಡ್ಡಗಳನ್ನೆಲ್ಲ ಕ್ಷೌರಿಕರಿಂದ ತೆಗೆಯಿಸಿ ಕಮಲಳ ಮನೆಗೆ ಬರುತ್ತಾನೆ. ಕಮಲಳಿಗೆ ತುಂಬ ಸಂತೋಷವಾಗುತ್ತದೆ. ಅಪ್ಸರಳಿಗೆ ಇವರಿಬ್ಬರೂ ತನ್ನ ತಂದೆ ತಾಯಿಗಳೆಂದು ಗೊತ್ತಾಗುತ್ತದೆ.

ಈ ಮನೆಯಲ್ಲಿದ್ದ ಕೃಷ್ಣಮೂರ್ತಿಯೇ ತಾನು ಹಿಂದೆ ಜೈಲಿಗೆ ಹೋಗಲು ಕಾರಣವೆಂಬುದು ಕಮಲಳಿಗೆ ಹೇಳಿದಾಗ. ಗಂಡಹೆಂಡಿರಿಬ್ಬರೂ ತಮ್ಮ ಮಗಳ ಹೆಸರಿಗೆ ಬಂದ ಕೃಷ್ಣಮೂರ್ತಿಯ ಅನ್ಯಾಯದ ಹಣಕ್ಕೆ ವಾರಸುದಾರರಾಗಲು ಒಪ್ಪದೆ, ದೇಹದಲ್ಲಿ ರಕ್ತವಿರುವವರೆಗೂ ದುಡಿದು ಸಂಪಾದಿಸೋಣ ಎಂದು ಪ್ರತಿಜ್ಞೆ ಮಾಡುತ್ತಾರೆ.

ಇದು ಒಂದು ಕತೆ. ಹೀಗೆ ಚಲನಚಿತ್ರದಲ್ಲಲ್ಲದೆ ನಿಜಜೀವನದಲ್ಲಿ ನಡೆಯಲು ಸಾಧ್ಯವೆ ಎನ್ನಿಸುತ್ತದೆ.

ಈ ಎರಡು ಕಾದಂಬರಿಗಳಂತೆಯೇ ನಾವು ಗಮನಿಸಿದ ತೊಂಬತ್ತರಷ್ಟು ಕಾದಂಬರಿಗಳು ಇವೆ ಎಂದರೆ ಆಶ್ಚರ್ಯವಾಗಬಹುದು. ಈ ಮೇಲಿನ ಕತೆಗಳಷ್ಟೇ ಎಲ್ಲವೂ ಅಸಂಬದ್ಧವಾಗಿರದಿದ್ದರೂ, ಈ ಅಸಂಬದ್ಧತೆಯ ಅಂಶ ಈ ಎಲ್ಲ ಕಾದಂಬರಿಗಳ ಬಹುಭಾಗವನ್ನು ತುಂಬಿಕೊಂಡಿದೆ.

–2–

ಈ ವರ್ಷ ಪ್ರಕಟವಾದ ಸುಮಾರು ನೂರಾ ಇಪ್ಪತ್ತರಷ್ಟು ಕಾದಂಬರಿಗಳಲ್ಲಿ ಅನ್ಯಭಾಷೆಗಳಿಂದ ಅನುವಾದಿತವಾದವು ಹತ್ತು; ಪತ್ತೇದಾರಿ ಕಾದಂಬರಿಗಳು ಹತ್ತೊಂಬತ್ತು; ಐತಿಹಾಸಿಕ ಕಾದಂಬರಿಗಳು ಎರಡು; ಪೌರಾಣಿಕ ವಸ್ತುವನ್ನು ಕುರಿತದ್ದು ಒಂದು; ಇನ್ನುಳಿದವು ಸಾಮಾಜಿಕ ಹಾಗೂ ಪ್ರಾದೇಶಿಕ ಕಾದಂಬರಿಗಳು. ಇವುಗಳಲ್ಲಿ ಮಹಿಳೆಯರು ಬರೆದ ಕಾದಂಬರಿಗಳ ಸಂಖ್ಯೆ ಮೂವತ್ತೇಳು.

ಹತ್ತೊಂಬತ್ತು ಪತ್ತೇದಾರಿ ಕಾದಂಬರಿಗಳಲ್ಲಿ ನರಸಿಂಹಯ್ಯ ಅವರು ಬರೆದ ಕಾದಂಬರಿಗಳು ಒಂಬತ್ತು. ಈ ಹತ್ತೊಂಬತ್ತು ಕಾದಂಬರಿಗಳಲ್ಲಿ 'ಸುಧಾಕರ್' ಬರೆದ **ದೆವ್ವ ವಿದೆ ಎಚ್ಚರಿಕೆ** ಎಂಬ ಒಂದು ಕಾದಂಬರಿ ಇದ್ದುದರಲ್ಲಿ ವಾಸಿ. ಇನ್ನುಳಿದ ಎಲ್ಲ ಪತ್ತೇದಾರಿ ಕಾದಂಬರಿಗಳ ಘಟನೆಗಳೆಲ್ಲ ನಮ್ಮ ದೇಶದ ಪರಿಸರದಲ್ಲಿ ನಡೆಯತಕ್ಕವೆಂದೇನೂ ಅನ್ನಿಸುವುದಿಲ್ಲ. ಮೊದಲ ಪುಟದಲ್ಲೇ ಕೊಲೆ, ರಕ್ತಪಾತ. ಅನಂತರ ಪತ್ತೇದಾರರ ಪ್ರವೇಶ. ಭಯಂಕರವಾದ ಅರಣ್ಯ; ಮಾಯ–ಮಂತ್ರ–ಗಾರುಡಿ; ರಹಸ್ಯಮಯ ಸನ್ನಿವೇಶಗಳು; ಹೋರಾಟ: ಕೊಲೆಪಾತಕಿಗಳ ಶರಣಾಗತಿ -- ಹೀಗೆ ಕೆಲವು ಹಾಸುಗಂಬಿಗಳ ಮೇಲೆ ಕಲ್ಪನೆಯ ಗಾಲಿ ಉರುಳುತ್ತದೆ. ಯಾಕೋ ಏನೋ ನಮ್ಮಲ್ಲಿ ಉತ್ತಮವಾದ ಪತ್ತೇದಾರಿ ಕಾದಂಬರಿಗಳು ಬರಲಿಲ್ಲ; ಅಂಥದೊಂದು ಪರಂಪರೆ ನಮ್ಮಲ್ಲಿ ಇಲ್ಲದಿರಲು ಕಾರಣ ಇದಕ್ಕೆ ತಕ್ಕ ವಸ್ತುವಿನ ಅಭಾವವಿದೆ ಎಂಬುದಲ್ಲ; ಇಂಥ ವಸ್ತುವನ್ನು ನಿರ್ವಹಿಸುವ ಪ್ರತಿಭೆಯ ಅಭಾವ ಎಂಬುದೆ ನಿಜವಾದ ಮಾತಾಗಿದೆ. ಈಗ ಬಂದಿರುವ, ಬರುತ್ತಿರುವ ಪತ್ತೇದಾರಿ ಕಾದಂಬರಿಗಳು ಕೂಡಾ ಸೀಕ್ರೆಟ್ ಏಜಂಟ್ ಚಿತ್ರಗಳ, ಜೇಮ್ಸ್ ಬಾಂಡ್ ಚಿತ್ರಗಳ ಅನುಕರಣಗಳಾಗಿ. ನಮ್ಮ ಪರಿಸರಕ್ಕೆ ಅಸಂಭಾವ್ಯವಾದ ನಡವಳಿಕೆಯನ್ನು ಚಿತ್ರಿಸಿವೆ. ಈ ಕಾದಂಬರಿಗಳ ಹೊರಹೊದಿಕೆಗಳು ಕೂಡ ಒಳಗಿನ ವಸ್ತುವಿಗೆ ಅನುಗುಣವಲ್ಲದ. ಪಾಶ್ಚಾತ್ಯ ಕಾದಂಬರಿಗಳ ಹೊರಹೊದಿಕೆಯನ್ನು ನಕಲು ಮಾಡಿದಂತಿವೆ. ಹೀಗೆ ಹೊರಹೊದಿಕೆಯಿಂದ ಒಳ ತಿರುಳಿನವರೆಗೆ ಬರೀ ಕಂಡವರ ಎಂಜಲಾಗಿರುವ ಇವುಗಳು. ತಮ್ಮ ರೋಚಕವಾದ ಬರೆವಣಿಗೆಯಿಂದ. ತೀರಾ ಸಾಧಾರಣ ದರ್ಜೆಯ ವಾಚಕರಿಗಾಗಿ ರಚಿತವಾದಂತೆ ತೋರುತ್ತವೆ.

ಬೇರೆಬೇರೆಯ ಭಾಷೆಗಳಿಂದ ಕನ್ನಡಕ್ಕೆ ಅನುವಾದಿತವಾಗಿರುವ ಕಾದಂಬರಿಗಳ ಸಂಖ್ಯೆ ಹತ್ತು. ಇವುಗಳಲ್ಲಿ ಹೆಸರಿಸಬಹುದಾದವು. ಆಲ್ಬರ್ಟ್ ಕಾಮುವಿನ **ಅನ್ಯ** (ಫ್ರೆಂಚ್ ನಿಂದ ಇಂಗ್ಲಿಷ್‌ಗೆ ಬಂದದ್ದು). ಚಾರ್ಲ್ಸ್ ಡಿಕೆನ್ಸ್‌ನ **ದಿ ಪಿಕ್‌ವಿಕ್ ಪೇಪರ್ಸ್** (ಇಂಗ್ಲಿಷ್). ತಳ್ಳೂರು ನಾಗೇಶ್ವರರಾಯರ **ಹೊಸ ಮನೆ** (ತೆಲುಗು). ಬಾಣರಾಮ್

ಅವರ **ನನ್ನ ಆಸೆಯ ಕಣ್ಣು** (ಬಂಗಾಳಿ). ಭಗವತೀಚರಣ ವರ್ಮರ **ಹೊಸ ನೀರು** (ಹಿಂದಿ). ಮಡಗುಳಕರ್ ಅವರ **ಬನಗರವಾಡಿ** (ಮರಾಠಿ) – ಇವೇ ಮೊದಲಾದ ಕಾದಂಬರಿಗಳು ಆಯಾ ಭಾಷೆಯ ಪ್ರಾತಿನಿಧಿಕ ಕೃತಿಗಳಾಗುವುದರ ಜತೆಗೆ ಕನ್ನಡಕ್ಕೆ ಒಳ್ಳೆಯ ಸೇರ್ಪಡೆಗಳಾಗಿವೆ. ಇವುಗಳಲ್ಲಿ ಡಿ. ಎ. ಶಂಕರ್ ಅವರು ಅನುವಾದಿಸಿರುವ ಆಲ್ಬರ್ಟ್ ಕಾಮುವಿನ Outsider ಕಾದಂಬರಿಯ ಅನುವಾದ 'ಅನ್ಯ' ಅತ್ಯುತ್ತಮ ವಾದ ಅನುವಾದವಾಗಿದೆ: ಅದರ ಭಾಷೆ ಅನುವಾದವೆಂದು ತೋರದಷ್ಟು ಸಹಜ ವಾಗಿದೆ, ಸೊಗಸಾಗಿದೆ.

ಪೌರಾಣಿಕ ವಸ್ತುವನ್ನು ಆಧರಿಸಿ ರಚಿತವಾದ ಒಂದೇ ಒಂದು ಕಾದಂಬರಿ, ಕಾ.ರಾ. ಸಾರಂಗ ಅವರ **ನೈಷಧ ಚಕ್ರವರ್ತಿ.** ಚೌಂಡರಸನ ನಳಚಂಪೂ ಎಂಬ ಹಳಗನ್ನಡ ಕೃತಿ ಇದಕ್ಕೆ ಆಕರ ಗ್ರಂಥ. ನಳ–ದಮಯಂತಿಯರ ಕತೆಗೆ ಕಾದಂಬರೀ ರೂಪವನ್ನು ಕೊಡುವ ಒಂದು ಸಾಧಾರಣ ಪ್ರಯತ್ನ ಇದು. ಭಾಷೆ ಅನಗತ್ಯವಾದ ಅತಿಶಯತೆ ಯಿಂದ ಆಲಂಕಾರಿಕವಾಗಿದೆ. ಚೌಂಡರಸನ ಕಲವು ಪದ್ಯಗಳನ್ನೆ ಕೆಲವೆಡೆ ತಪ್ಪಾಗಿ ಲೇಖ ಕರು ಅರ್ಥಮಾಡಿಕೊಂಡ ನಿದರ್ಶನಗಳಿವೆ. ಈ ಹಳೆಯ ಕತೆಗೆ ಯಾವ ಹೊಸದೃಷ್ಟಿ ಯನ್ನಾಗಲಿ, ವ್ಯಾಖ್ಯಾನವನ್ನಾಗಲಿ ಲೇಖಕರು ಒದಗಿಸಿಲ್ಲ.

ಈ ವರ್ಷದ ಕಾದಂಬರಿಗಳಲ್ಲಿ ಐತಿಹಾಸಿಕವೆಂದು ಕರೆಯಬಹುದಾದ ಕಾದಂಬರಿ ಗಳು ಎರಡು. ಒಂದು ಟಿ. ಕೆ. ರಾಮರಾಯರ **ಜಗದೇವರಾಯ**: ಮತ್ತೊಂದು ಮ.ನ. ಮೂರ್ತಿಯವರ **ಪುರುಷಕಸ್ತೂರಿ.** ರಾಮರಾಯರ **ಜಗದೇಕ ಮಲ್ಲ** ಚನ್ನಪಟ್ಟಣದ ಇತಿಹಾಸಕ್ಕೆ ಸಂಬಂಧಿಸಿದ್ದು: ಪುರುಷ ಕಸ್ತೂರಿ. ಸೀರ್ಯದ ಚರಿತ್ರೆಗೆ ಸಂಬಂಧಿಸಿದ್ದು. ಹಿರಿಯ ಕೆಂಪೇಗೌಡನ ಬಂದಿವಾಸದ ಕಾಲದಲ್ಲಿ ಐದು ವರ್ಷಗಳ ವರೆಗೆ ಬೆಂಗಳೂರನ್ನು ಆಳಿದ ಚೆನ್ನಪಟ್ಟಣದ ಸಾಮಂತರಾಜನಾದ ಜಗದೇವರಾಯನ ವಿಷಯದ ಅಧಿಕೃತ ದಾಖಲೆಗಳು ಆಂಧ್ರಪ್ರದೇಶದಲ್ಲಿ ದೊರಕಿವೆ: ಅದರ ಆಧಾರದ ಮೇಲೆ 'ಜಗದೇವ ರಾಯ' ಕಾದಂಬರಿಯನ್ನು ರಚಿಸಲಾಗಿದೆ ಎಂದು ಲೇಖಕರು ಹೇಳಿಕೊಂಡಿದ್ದಾರೆ. ಜಗದೇವರಾಯನ ಸಾಹಸಮಯ ಜೀವನ ಹಾಗೂ ಸಾಂಸಾರಿಕ ಜೀವನವನ್ನು ರಾಮ ರಾಯರು ಆಕರ್ಷಕವಾಗಿ ಬರೆದಿದ್ದಾರೆ. ರುಚಿ ಹುಟ್ಟಿಸುವಂಥ ಬರವಣಿಗೆಯೊಂದೇ ಇದರ ಮುಖ್ಯ ಲಕ್ಷಣವಾಗಿದೆ. ಮ. ನ. ಮೂರ್ತಿಯವರ 'ಪುರುಷ ಕಸ್ತೂರಿ' ಹೆಸರಿಗೆ ಮಾತ್ರ ಐತಿಹಾಸಿಕ ಕಾದಂಬರಿ. ಒಳಗೆ ಮಾತ್ರ ಪತ್ತೇದಾರಿ ಕಾದಂಬರಿಯ ಆವರಣ. ಮುನ್ನುಡಿಯಲ್ಲಿ ಲೇಖಕರು ಐತಿಹಾಸಿಕ ಕಾದಂಬರಿಗಳ ಅಭಾವ ಹಾಗೂ ಆವಶ್ಯಕತೆಗಳನ್ನು ಕುರಿತು ಪುಟ್ಟ ಉಪನ್ಯಾಸವನ್ನು ಕೊಟ್ಟಿದ್ದಾರೆ. ಆದರೆ ಅವರ ಕಾದಂಬರಿಯ ಘಟನೆಗಳು ಚಾರಿತ್ರಿಕ ಕಾದಂಬರಿ ಎಂಬ ನೆಪದಲ್ಲಿ ಸ್ವಚ್ಛಂದ ಕಲ್ಪನೆಯ ಕುದುರೆಯನ್ನೇರಿ ಸಾಹಸಮಯ ರೋಮಾಂಚಕಾರಿ. ಪತ್ತೇದಾರಿ ಆವರಣದಲ್ಲಿ ಸವಾರಿ ಮಾಡುತ್ತವೆ. ಸೀರ್ಯದ ರಂಗಪ್ಪನಾಯಕ ಈ ಕಾದಂಬರಿಯ ಮುಖ್ಯ ಪಾತ್ರ: ಚಿತ್ರದುರ್ಗದ ಮದಕರಿನಾಯಕನ ತಂಗಿ ಪುಟ್ಟಮ್ಮಣ್ಣಿ ಇದರ ನಾಯಿಕೆ; ಚೆಲುವಯ್ಯ ಖಳನಾಯಕ. ಈ ಮೂವರು ಇದ್ದ ಮೇಲೆ ಮುಗಿಯಿತು! ಪ್ರಯಾಣಮಾಡುವ ರಾಜ

ಕುಮಾರಿಯನ್ನು ಇರುಳಿನಲ್ಲಿ ದರೋಡೆಕೋರರು ಮುತ್ತುವುದು. ನಾಯಕನಾದ ರಂಗಪ್ಪ ಆ ದರೋಡೆಕೋರರ ಮೇಲೆ ಏಕಾಂಗಿಯಾಗಿ ಹೋರಾಡಿ ಅವರನ್ನು ಉರುಳಿಸುವುದು; ರಾಜಕುಮಾರಿ ರಂಗಪ್ಪನಾಯಕನನ್ನು ಪ್ರೇಮಿಸಿ, ಚಿತ್ರದುರ್ಗದಿಂದ ತಪ್ಪಿಸಿಕೊಂಡು ನಿಡುಗಲ್ ದುರ್ಗಕ್ಕೆ ಪಲಾಯನ ಮಾಡುವುದು; ಆಗ ಮರಾಠಾ ರಾಯಮುರಾರಿ ನಿಡುಗಲ್ ದುರ್ಗಕ್ಕೆ ಲಗ್ಗೆ ಇಡುವುದು; ರಂಗಪ್ಪನಾಯಕ 'ಕಸ್ತೂರಿ' ಎಂಬ ಗುಪ್ತನಾಮದಿಂದ ಹಾಗೂ ವೇಷಾಂತರದಿಂದ ದುರ್ಗದೊಳಗೆ ಪ್ರವೇಶಿಸಿ ರಾಜಕುಮಾರಿಯೊಂದಿಗೆ ಸರಸವಾಡಿ ಬಂದಿವಾಸಕ್ಕೆ ಗುರಿಯಾಗುವುದು; ಅನಂತರ ಆತ ಹೇಗೋ ತಪ್ಪಿಸಿಕೊಂಡು ರಾಯಮುರಾರಿಯ ದಾಳಿಯಿಂದ ರಾಜಕುಮಾರಿಯನ್ನು ಸಂರಕ್ಷಿಸುವುದು; ಖಳನಾಯಕ ಚೆಲುವಯ್ಯ ಕಂದಕಕ್ಕೆ ಬಿದ್ದು ಸಾಯುವುದು; ಕಡೆಗೆ ರಂಗಪ್ಪ, ಪುಟ್ಟಮ್ಮಣ್ಣಿ ಮದುವೆಯಾಗುವುದು. ಹೀಗೆ, ರಾಜಕುಮಾರಿ, ಅವಳ ಪ್ರಣಯ, ಖಳನಾಯಕ; ನಾಲ್ಕಾರು ಕುದುರೆಗಳು; ಸಾಹಸಮಯ ರಣರಂಗ; ಬೇಹುಗಾರಿಕೆ; ವೇಷಾಂತರ – ಇತ್ಯಾದಿಗಳನ್ನು ಕಲಸುಮೇಲೋಗರ ಮಾಡಿಟ್ಟರೆ ಅದು ಯಾವ ರೀತಿಯಿಂದ ಐತಿಹಾಸಿಕ ಕಾದಂಬರಿಯಾಗುತ್ತದೆಂದು ಲೇಖಕರು ನಂಬಿಕೊಂಡಿದ್ದಾರೋ ತಿಳಿಯದು.

ಕೆ. ವಿ. ಅಯ್ಯರ್ ಅವರ **ಲೀನಾ,** ಅವರು ಹಿಂದೆಯೇ ಬರೆದ ರೂಪದರ್ಶಿ ಕಾದಂಬರಿಯ ಮುಂದುವರಿಕೆ ಎನ್ನಬಹುದು. ಓದುಗರ ಮನಸ್ಸನ್ನು ಕರಗಿಸುವ ಲೀನಾಳ ಪಾತ್ರವನ್ನು ಈ ಕಾದಂಬರಿಯಲ್ಲಿ ಕೇಂದ್ರಪಾತ್ರವನ್ನಾಗಿಸಿಕೊಂಡು, ಕ್ರೂರಿಯಾದ ಅವಳ ಗಂಡ ಟಾಯಟ್ಟಸ ಮನಃಪರಿವರ್ತನೆಯಾದ ರೀತಿಯನ್ನು ಚಿತ್ರಿಸಿದ್ದಾರೆ. ಎಂತಹ ದಾರುಣವಾದ ಪರಿಸ್ಥಿತಿಯಲ್ಲಿಯೂ ಎದೆಗುಂದದೆ, ನ್ಯಾಯಮಾರ್ಗದಲ್ಲಿ ನಡೆದು ಆದರ್ಶ ಸ್ತ್ರೀರತ್ನದಂತೆ ಕಂಗೊಳಿಸುವ ಲೀನಾಳ ಪಾತ್ರ ಇಲ್ಲಿ ಸ್ಫುಟವಾಗಿ ಬಂದಿದೆ. ಪಾತ್ರಕಲ್ಪನೆ; ಆವರಣ ನಿರ್ಮಾಣ; ಕುತೂಹಲಜನಕವಾದ ಸನ್ನಿವೇಶಗಳಿಂದ, ಇದು 'ರೂಪದರ್ಶಿ' ಕಾದಂಬರಿಗೆ ಪೂರಕವಾಗಿ ಆದರೆ ಪ್ರತ್ಯೇಕ ಪರಿಭಾವನೆಗೆ ಯೋಗ್ಯವಾಗಿದೆ.

–3–

ಈ ವರ್ಷದ ಕಾದಂಬರಿಯಲ್ಲಿ ಮಹಿಳೆಯರು ಬರೆದ ಕಾದಂಬರಿಗಳ ಸಂಖ್ಯೆ ನಮ್ಮ ಗಮನಕ್ಕೆ ಬಂದಿರುವಂತೆ – ಮೂವತ್ತೇಳು. ಇವುಗಳಲ್ಲಿ ಹನ್ನೆರಡು ಕಾದಂಬರಿಗಳನ್ನು ಸರೋಜಾರಾವ್ ಅವರೊಬ್ಬರೆ ಬರೆದಿದ್ದಾರೆ. ಅನುಪಮಾ ನಿರಂಜನರ ಎರಡು ಕಾದಂಬರಿಗಳು; ವಾಣಿ ಅವರ **ಅನಿರೀಕ್ಷಿತ** ಮತ್ತು ಎಂ. ಕೆ. ಇಂದಿರಾ ಅವರ **ಚಿದ್ವಿಲಾಸ** ಇವುಗಳಂಥ. ತೀರಾ ವಿಶೇಷವಲ್ಲದ ಒಂದೆರಡು ಕಾದಂಬರಿಗಳನ್ನು ಬಿಟ್ಟರೆ ಉಳಿದವೆಲ್ಲ ಅಪ್ರಬುದ್ಧ, ಅಪಕ್ವ ಕೃತಿಗಳು ಎನ್ನಬೇಕಾಗಿದೆ. ಕೆಲವು ಸಿದ್ಧ ಸೂತ್ರಗಳ ನ್ನರಿಸಿಕೊಂಡು ನಡುನಡುವೆ ಭಾವಾತಿರೇಕದ ಸಂದರ್ಭಗಳನ್ನು ತುಂಬಿ, ಸಿನಿಮೀಯವಾದ ಶೈಲಿಯಲ್ಲಿ ಪುಟ ತುಂಬಿಸುವ ತಂತ್ರವನ್ನಷ್ಟೆ ಅನೇಕ ಕಾದಂಬರಿಗಳು ಪ್ರಕಟಿಸಿವೆ. ನಿಜವಾದ ಸಮಸ್ಯೆಗಳತ್ತ ಇವರ ಗಮನ ಹೋಗುವುದಿಲ್ಲ; ಕೆಲವು ಸಮಸ್ಯೆಗಳನ್ನೆತ್ತಿಕೊಂಡರೂ, ಅವು ವಾಸ್ತವವಾಗಿ ಸಮಸ್ಯೆಗಳೆಂದು ಗಂಭೀರವಾಗಿ ತೆಗೆದುಕೊಳ್ಳುವಂತಿಲ್ಲ.

ಹೀಗಾಗಿ ಮಹಿಳೆಯರು ಬರೆದ ಈ ಕಾದಂಬರಿಗಳು ಹೇಗೋ ಓದಿಸಿಕೊಂಡು ಹೋಗುತ್ತವೆ ಎಂದು ಮಾತ್ರ ಹೇಳಿದರೆ, ಅದೇನೂ ಮೆಚ್ಚುಗೆಯ ಮಾತಾಗುವುದಿಲ್ಲ.

ಸರೋಜಾರಾವ್ ಅವರೊಬ್ಬರೆ ಹನ್ನೆರಡು ಕಾದಂಬರಿಗಳನ್ನು ಬರೆದಿದ್ದಾರೆ ಎಂದು ಹೇಳಿದೆವು: ತಿಂಗಳಿಗೊಂದರಂತೆಯಾದರೂ ಇವರು ಬರೆದಿರಲೇಬೇಕು. ಇದರಿಂದ ಸಂಖ್ಯೆಯನ್ನು ಹೆಚ್ಚಿಸಬಹುದೆ ಹೊರತು. ಗುಣದ ಕಡೆಗಾಗಲಿ. ಸಾಹಿತ್ಯಿಕ ಮೌಲ್ಯದ ಕಡೆಗಾಗಲಿ ಲಕ್ಷ್ಯ ಕೊಡಲು ಸಹಜವಾಗಿಯೇ. ಇಷ್ಟೊಂದು ಕಾದಂಬರಿಗಳನ್ನು ಬರೆಯಬೇಕೆಂದು ಹೊರಟ ಯಾರಿಗಾದರೂ ಸಾಧ್ಯವಾಗುವುದಿಲ್ಲ. **ದೆವ್ವದ ಮನೆ** ಎಂಬ ಇವರ ಕಾದಂಬರಿಯಲ್ಲಿ, ಶೇಷಾದ್ರಿಯ ಹೆಂಡತಿಗೆ ದೆವ್ವದ ಬಗ್ಗೆ ಇದ್ದ ಭಯವನ್ನು ಅವಳ ಹೆರಿಗೆಗೆಂದು ಬಂದ ನರ್ಸ್ ಒಬ್ಬಳು ಅದನ್ನು ದ್ವಿಗುಣಗೊಳಿಸಿ, ಶೇಷಾದ್ರಿಯನ್ನು ಬುಟ್ಟಿಗೆ ಹಾಕಿಕೊಳ್ಳಲು ನಡೆಯಿಸಿದ ತಂತ್ರವೇ ಪ್ರಧಾನವಾಗಿದೆ. ಈ ಕೃತಿಯನ್ನು ಪತ್ರಿಕೆಯೊಂದರಲ್ಲಿ ವಿಮರ್ಶಿಸಿದ ಎಲ್. ಎಸ್. ಶೇಷಗಿರಿರಾಯರು ಹೇಳುವ ಹಾಗೆ. "ನಿತ್ಯಜೀವನದಲ್ಲಿ ಇಂತಹ ಸನ್ನಿವೇಶಗಳು ನಡೆಯುವುದಾದರೆ. ಪ್ರತಿ ಮನೆಗೂ ಸಿ. ಐ. ಡಿ. ಗಳನ್ನು ನೇಮಿಸಬೇಕಾಗುತ್ತದೆ". **ದೂರದ ಆಸೆ** ಎಂಬ ಕೃತಿಯಲ್ಲಿ ಕಾಲೇಜು ನಾಟಕದಲ್ಲಿ ಶಕುಂತಲೆಯ ಪಾತ್ರ ವಹಿಸಬೇಕಾಗಿದ್ದ ಕಾವೇರಿ ಎಂಬ ವಿದ್ಯಾರ್ಥಿನಿಗೆ. ಪ್ರೊಫೆಸರ್ ಆನಂದ ತನ್ನ ಮನೆಯಲ್ಲಿ ರಿಹರ್ಸಲ್ ಮಾಡಿಸುತ್ತಾನೆ, ತಾನು ದುಷ್ಯಂತನಾಗಿ. ಕಡೆಗೆ ಅವಳನ್ನು ಮದುವೆಮಾಡಿಕೊಳ್ಳಬೇಕೆಂದು ನಿರ್ಣಯಿಸಿಕೊಂಡಾಗ, ಆಕೆ ತಾನೆಂದೋ ಪ್ರೀತಿಸಿದ ಹೆಣ್ಣೊಬ್ಬಳಲ್ಲಿ ಹುಟ್ಟಿದ ತನ್ನ ಸ್ವಂತ ಮಗಳು ಎಂದು ತಿಳಿಯುತ್ತದೆ. **ನೆರಳು** ಎಂಬ ಇನ್ನೊಂದು ಕೃತಿಯಲ್ಲಿ. ಕಾಲೇಜು ಅಧ್ಯಾಪಕನ ಪತ್ನಿ ಅಮೃತ. ಅತ್ತೆ ನಾದಿನಿಯರ ಕಾಟಕ್ಕೆ ಸಿಕ್ಕು ಬೇಸತ್ತರೂ ನಾದಿನಿಯ ಮದುವೆಗೆ ತನ್ನೆಲ್ಲ ಒಡವೆ ವಸ್ತ್ರಗಳನ್ನು ದಾನಮಾಡಿ ತ್ಯಾಗಮಯಿಯಾಗುತ್ತಾಳೆ. **ಮಂಗಳೋದಯ** ಎಂಬ ಕೃತಿಯಲ್ಲಿ. ವೆಂಕಟರಾಯರ ಮನೆಯ ಮಗನಂತೆಯೆ ಬೆಳೆದ ರಂಗಣ್ಣ, ಅವರ ಮಗಳು ಭಾರತಿಯನ್ನು ಮದುವೆಯಾಗಬೇಕಾದರೆ. ರಾಯರು ಸತ್ತು ಎಷ್ಟೋ ವರ್ಷಗಳ ನಂತರ. ಆಕಸ್ಮಾತ್ತಾಗಿ ದೊರೆತ ಡೈರಿಯಲ್ಲಿ 'ರಂಗಣ್ಣ–ಭಾರತಿಯನ್ನು ಮದುವೆಯಾಗುವುದು ತಮ್ಮ ಅಪೇಕ್ಷೆ' – ಎಂಬ ವಾಕ್ಯ ಕಾಣಬೇಕಾಗುತ್ತದೆ. ಒಂದೇ ಮನೆಯಲ್ಲಿ ಬೆಳೆದ ಗಂಡು–ಹೆಣ್ಣು, ಪ್ರೇಮಿಸಲು ಅಪ್ಪನ ಡೈರಿಯ ಪ್ರೇರಣೆ ಬೇಕಾಗುತ್ತದೆ. **ಮಾತು ಕೊಟ್ಟವಳು** ಎಂಬ ಕಾದಂಬರಿಯಂತೂ. ನಗರ ಜೀವನ ಒಳ್ಳೆಯದೋ ಹಳ್ಳಿಯ ಜೀವನ ಒಳ್ಳೆಯದೋ ಎಂಬ ವಿಷಯದ ಮೇಲೆ ಶಾಲೆಗಳಲ್ಲಿ ಇರಿಸುವ ಚರ್ಚಾ ಸ್ಪರ್ಧೆಯನ್ನು ಹೋಲುತ್ತದೆ. ಕಡೆಗೆ ಹಳ್ಳಿಯ ಜೀವನವೇ ಶ್ರೇಷ್ಠ ಎಂಬ ತೀರ್ಮಾನವನ್ನು ಸಾರಲಾಗಿದೆ. ಹೀಗೆ ಸರೋಜಾರಾವ್ ಅವರ ಯಾವ ಒಂದು ಕೃತಿಯನ್ನು ತೆಗೆದುಕೊಂಡರೂ ಅವುಗಳ ವಸ್ತು ಬಹುಮಟ್ಟಿಗೆ ಅಸಂಭಾವ್ಯತೆಯ ಅಂಚನ್ನು ಮುಟ್ಟುತ್ತದೆ. ದುರ್ಬಲವಾದ ಅಥವಾ ಭಾವಾತಿರೇಕದ ಮುದ್ದೆಗಳಂಥ ಪಾತ್ರಗಳು; ಅಘಟಿತ ಘಟನೆಗಳು; ಗಟ್ಟಿಯಾದ ಯಾವ ಸಮಸ್ಯೆಯನ್ನೂ ಹಿಡಿಯದ, ವಿಚಾರ ಮಾಡಲು ತಲೆಕೆಡಿಸಿಕೊಳ್ಳದ ಮನೋಧರ್ಮ. ಇವುಗಳನ್ನು ಓದಿದರೆ ನಮ್ಮ ಸುತ್ತಣ ಬದುಕು ಹೀಗಿದೆ ಎಂದಾಗಲಿ. ಹೀಗಿರಬೇಕು ಎಂದಾಗಲಿ ಅನ್ನಿಸುವುದೇ ಇಲ್ಲ.

ಆರ್ಯಾಂಬ ಪಟ್ಟಾಭಿಯವರ **ಬೇವು-ಬೆಲ್ಲ** ಅಂತಹ ನಿರಾಸೆ ಹುಟ್ಟಿಸುವ ಕೃತಿಯೇನೂ ಅಲ್ಲ. ರಾಧಾ ಎಂಬ ಹುಡುಗಿ ಪ್ರಭಾಕರನನ್ನು ಒಲಿದಳು; ಆದರೆ ಹಣವಂತ ಹೆಣ್ಣಿನ ಕೈಹಿಡಿದು ಪ್ರಭಾಕರ, ರಾಧಾಳ ಬಾಳಲ್ಲಿ ನಿರಾಸೆಯನ್ನು ತುಂಬುತ್ತಾನೆ. ಆದರೂ ರಾಧಾ, ತಂದೆ–ತಾಯಂದಿರಿಲ್ಲದ ಮನೆಯ ಹೊಣೆಹೊತ್ತು, ತಮ್ಮ–ತಂಗಿಯರನ್ನು ದಾರಿಗೆ ತಂದು, ಏಕಾಂಗಿಯಾಗಿ ಧೈರ್ಯದಿಂದ ಬದುಕುತ್ತಾಳೆ. ನಂಜನಗೂಡಿನ ಲಾಯರ್ ರಾಜಣ್ಣ ಮತ್ತು ಅವನ ಮಡದಿ ಪಲ್ಲವಿ ಅವರು ಈಕೆಗೆ ನಂಜನಗೂಡಿನಲ್ಲೇ ಕೆಲಸ ಕೊಡಿಸಿ, ತಮ್ಮ ಮನೆಯ ಒಂದು ಭಾಗದಲ್ಲಿ ವಾಸಕ್ಕೆ ಅನುಕೂಲ ಮಾಡಿಕೊಡುತ್ತಾರೆ. ರಾಜಣ್ಣನ ಹೆಂಡತಿ ಪಲ್ಲವಿ ಇದ್ದಕ್ಕಿದ್ದ ಹಾಗೆ ತೀರಿಕೊಂಡಾಗ, ಮುಂದಿನ ಕತೆ ಏನಾಗುವುದೆಂಬುದನ್ನು ಓದುಗರು ಊಹಿಸಲು ಕಷ್ಟಪಡಬೇಕಾಗಿಲ್ಲ. ಆದರೆ ಈ ನಡುವೆ ಪತ್ತೆ 'ಸಿನಿಮೀಯತೆ' ತಲೆ ಹಾಕಿದ ಪರಿಣಾಮವಾಗಿ, 'ಜಲಜ'ಳೆಂಬ 'ಖಳನಾಯಕಿ'ಯ ಕಿತಾಪತಿ ಮತ್ತು ತನ್ನ ರೋಗಗ್ರಸ್ತ ಹೆಂಡತಿಯಿಂದ ಬೇಸತ್ತ ರಾಧಾಳ ಹಿಂದಿನ ಪ್ರೇಮಿ ಪ್ರಭಾಕರನ ಪ್ರಲೋಭನಗಳು ಒಂದಷ್ಟು ಪುಟಗಳನ್ನು ತುಂಬುತ್ತವೆ. ಕಡೆಗೆ ರಾಜಣ್ಣ–ರಾಧೆಯರು ಸತಿಪತಿಗಳಾಗುತ್ತಾರೆ. ಆದರೆ ಈ ಇಬ್ಬರು ಪಲ್ಲವಿ ತೀರಿಕೊಂಡ ಮೇಲೆ, ಅನುರಾಗವಿದ್ದೂ ಅವಕಾಶವಿದ್ದೂ, ಮದುವೆಯಾಗಲು ಇದ್ದ ಆತಂಕವೇನು ಎಂಬುದೆ ನಮಗೆ ಅರ್ಥವಾಗದು. ಆದರ್ಶಮಯತೆ; ಪ್ರಣಯ; ತಾಕಲಾಟ: ಮಿಲನ – ಇಂಥ ಮಾಮೂಲು ಕತೆಯ ಮೇಲೆ ಸಾಗುವ ಈ ಕಾದಂಬರಿಯ ಬರವಣಿಗೆ ಆಕರ್ಷಕವಾಗಿದೆ.

ಕುಮಾರಿ ಪದ್ಮಾವತಿಯವರ **ಹೃದಯದ ಕರೆ** ಸಿನಿಮಾವನ್ನು ಹುಡುಕಿಕೊಂಡು ಹೊರಟ ಕಾದಂಬರಿ. ರಾಧಾ ಎಂಬ ಶ್ರೀಮಂತ ಹುಡುಗಿಯ ಸ್ವೇಚ್ಛಾಚಾರದ ಬದುಕನ್ನು ರವಿ ಎಂಬ ಯುವಕ ಅಣ್ಣನಂತೆ ನಿಂತು ಮಾರ್ಗದರ್ಶಕನಾಗಿ. ಸನ್ಮಾರ್ಗಕ್ಕೆ ತಂದನೆಂಬುದೆ ವಸ್ತು. ಕಡೆಗೆ ರಾಧಾ ಎಂ.ಬಿ.ಬಿ.ಎಸ್. ಕಲಿತು ಜನತಾ ಜನಾರ್ದನನ ಸೇವೆಗೆ ನಿಲ್ಲುವ ಆದರ್ಶದಲ್ಲಿ ಕಾದಂಬರಿ ಮುಗಿದಿದೆ. ರೋಮಾಂಚಕಾರಿಯಾದ ಪ್ರಣಯ ಪ್ರಸಂಗಗಳು: ಅಸಂಬದ್ಧ ಸಂದರ್ಭಗಳಿಂದ, ಸಾಹಿತ್ಯಿಕ ಮೌಲ್ಯ ಸೊನ್ನೆಯಾದ ಕೃತಿಗಳಲ್ಲಿ ಇದೂ ಒಂದು.

ಆಶಾ ಶೇಖರ ಅವರ **ನವವಿವಾಹ** ಲೆಕ್ಕಾಚಾರವಾಗಿ ಎರಡು ಮದುವೆಗಳ ವಿಷಯವನ್ನು ಚಿತ್ರಿಸಿದೆ. ಒಂದು. ಲೀಲಳನ್ನು ತುಂಬುವಯಸ್ಸಾದವನಿಗೆ ತಂದೆ–ತಾಯಿಗಳು ಬಲವಂತವಾಗಿ ಮದುವೆಮಾಡಿದಾಗ, ಆ ಗಂಟನ್ನು ಕಿತ್ತೊಗೆದು ಮುರಳಿ ಎಂಬ ಯುವಕನನ್ನು ಮದುವೆಯಾಗುತ್ತಾಳೆ. ಲೀಲಳ ಮಗಳು ಲತಾ. ಪರಿಜನ ಯುವಕನನ್ನು ಒಲಿದು ಮದುವೆಯಾಗುತ್ತಾಳೆ. ಉದ್ದೇಶಪೂರ್ವಕವಾದ. ಮತ್ತು ಉಪನ್ಯಾಸ ಶೈಲಿಯಲ್ಲಿ ಸಾಗುವ ಈ ಕೃತಿ ಸಾಧಾರಣ ಮಟ್ಟದ್ದಾಗಿದೆ.

ಜೆ. ಶಾರದಾ ರಾಜಶೇಖರ್ ಅವರ **ಶುಕ್ರತಾರೆ** ಚಲನಚಿತ್ರ ತೆಗೆಯಲು ಹೇಳಿ ಮಾಡಿಸಿದ ಕಾದಂಬರಿ. ರತ್ನಾ ಕೃಷ್ಣನ್ ಅವರ **ಜ್ಯೋತಿ ಆರಿದಾಗ** ಎಂಬುದೂ ಅದೇ ಜಾತಿಯದು. ಪ್ರಭಾಕರನ ಹೆಂಡತಿ ನಳಿನಿ ಮಕ್ಕಳಿಲ್ಲದ ಕೊರಗಿನಿಂದ ಆತ್ಮಹತ್ಯೆಮಾಡಿ

ಕೊಂಡಾಗ, ಅವಳ ಗೀಳಿನಲ್ಲಿ ಉನ್ಮತ್ತನಾದ ಪ್ರಭಾಕರನನ್ನು ಕೈಹಿಡಿದ ಸಾವಿತ್ರಿ, ತೀರಿ ಹೋದ ಹೆಂಡತಿ ನಳಿನಳಂತೆಯೇ ವೇಷಭೂಷಣಗಳಿಂದ ನಟಿಸಿ ಗಂಡನನ್ನು ದಾರಿಗೆ ತರುತ್ತಾಳೆ; ಇದನ್ನು ಓದಿದಾಗ ಇಂಥ ಘಟನೆಗಳು ನಿಜಜೀವನದಲ್ಲಿ ಉಂಟೆ? – ಅನ್ನಿಸು ತ್ತದೆ. ಬದುಕು ಎಷ್ಟೊಂದು ಲೆಕ್ಕಾಚಾರದ್ದು, ಎಷ್ಟೊಂದು ಸರಳವಾದದ್ದು ಈ ಲೇಖಕಿ ಯರ ಪಾಲಿಗೆ ಅನ್ನಿಸುತ್ತದೆ. ವೇದವತಿಯವರ **ಬಲತಾಯಿ**. ವಿ. ಸಿ. ಲಕ್ಷ್ಮಿಯವರ **ಮಾಲಿನಿ** – ಈ ಎರಡೂ ಅತ್ಯಂತ ಅಪ್ರಬುದ್ಧ ಕೃತಿಗಳು. ಬರೆಯಲು ಎತ್ತಿಕೊಂಡ ವಿಷಯಕ್ಕೆ ಬೆನ್ನುಲುಬಿಲ್ಲ: ತಲೆಯಿಲ್ಲ: ಕಾಲಿಲ್ಲ. ಭಾಷಾಶುದ್ಧಿಯಂತೂ ಕೇಳಲೇಬೇಕಾ ಗಿಲ್ಲ. ಲಲಿತಾಂಬಾ ಚಂದ್ರಶೇಖರ್ ಅವರ **ಪುನರ್ದತ್ತಾ** ಸುಮಾರು ನಲವತ್ತು ವರ್ಷ ಗಳ ಹಿಂದೆ ಪ್ರಕಟವಾಗಿದ್ದ ಪಕ್ಷದಲ್ಲಿ ಒಳ್ಳೆಯ ಕೃತಿ ಎನ್ನಿಸಿಕೊಳ್ಳಬಹುದಾಗಿತ್ತು. ವಸ್ತು, ಪಾತ್ರ, ಘಟನೆಗಳೆಲ್ಲ ಬಂಕಿಂಚಂದ್ರರ ಕಾದಂಬರಿಯ ಮಾದರಿಯಲ್ಲಿವೆ. ಯುದ್ಧರಂಗಕ್ಕೆ ಹೋದ ಗಂಡನ ಅಗಲಿಕೆಯಿಂದ ರೋಗಗ್ರಸ್ತಳಾದ ಪದ್ಮಿನಿಯ ಮೈದುನ ಲಕ್ಷ್ಮಣ ತಾನೇ ಅವಳ ಗಂಡನೆಂಬ ಭ್ರಮೆ ಹುಟ್ಟಿಸಿ ಅವಳ ಪ್ರಾಣವನ್ನು ಉಳಿಸುತ್ತಾನೆ–ಎಂಬುದೆ ಇದರ ವಸ್ತು. ಅಲ್ಲಲ್ಲಿ ಬರವಣಿಗೆಯ ಕ್ರಮ ತಟಕ್ಕನೆ ಹಳೆಯ ನಾಟಕಗಳ ಮಾದರಿಗೆ ತಿರುಗಿಬಿಡುತ್ತದೆ. ಯಾವ ರೀತಿಯಲ್ಲೂ ಸಮಕಾಲೀನತೆಗೆ ಸಲ್ಲಲಾಗದ ಈ ಅಪಕ್ವ ಕೃತಿಯನ್ನು ಹೇಗೆ ಮೆಚ್ಚಬೇಕೋ ತಿಳಿಯದು. ಎ. ವಿ. ಪಂಕಜ ಅವರ **ರಾಗ-ಸುಧಾ** ಎಂಬ ಕಾದಂಬರಿ, ನರ್ತಕಿಯಾಗಲು ಹೊರಟು ಅನಂತರ ಗಾಯಕಿಯಾಗಿ. ಹಾಡು ತ್ತಲೇ ಹುತಾತ್ಮಳಾದ ಕಲಾವಿದೆಯ ಬದುಕನ್ನು ಕುರಿತದ್ದು. ಕಲಾವಿದೆಯ ಬದುಕು, ಅವಳ ಆಂತರಿಕವಾದ ಘರ್ಷಣೆಗಳು. ಕಲಾವಿದೆಯ ಬದುಕಿನ ಸಾಧನೆ–ಸಿದ್ಧಿ ಯಾವುದೂ ಇಲ್ಲ; ಅಲ್ಲಲ್ಲಿ ಸಂಗೀತದ ಮೇಲೆ, ನರ್ತನದ ಮೇಲೆ ಒಂದಿಷ್ಟು ಉಪನ್ಯಾಸ ಕೊರೆಯ ಲಾಗಿದೆ.

ದಿವಂಗತೆ ಹೆಚ್. ಆರ್. ಇಂದಿರಾ ಅವರ ಎರಡು ಕಾದಂಬರಿಗಳು **ಅಮಿತಕಿರಣ** ಮತ್ತು **ದಾದಿ**. ಮೊದಲ ಕೃತಿ 'ಅಮಿತಕಿರಣ'ದಲ್ಲಿ ಹೆಸರಿಗೂ ಕಾದಂಬರಿಗೂ ಸಂಬಂಧ ವಿಲ್ಲ. ತಾನು ಮದುವೆಯಾದರೆ. ಒಂಟಿಯಾಗಿರುವ ತಂದೆಯನ್ನು ನೋಡಿಕೊಳ್ಳುವ ವರು ಯಾರು ಎಂದು ಮದುವೆಗೆ ಒಪ್ಪದ ಸುಧಾ, ಒಂದು ವಯಸ್ಸಿನ ಮನೋಧರ್ಮಕ್ಕೆ ಸಾಕ್ಷಿಯಾದರೂ, ಬರುಬರುತ್ತಾ ತನ್ನ ತಂದೆಗೇ ವಿಧವೆಯೊಬ್ಬಳನ್ನು ಮದುವೆ ಮಾಡಿಸ ಬೇಕೆಂದು ಹೊರಡುವ ಸುಧಾಳ ಪಾತ್ರ ಅನಗತ್ಯವಾದ. ಅವ್ಯವಹಾರಿಕವಾದ, ಕ್ರಾಂತಿ ಕಾರಕವಾದ ನಿಲುವಿನ ಮೂಲಕ. ಲೇಖಕಿಯರು ತಮಗೂ ವೈಚಾರಿಕತೆಯಿದೆ ಎಂಬು ದನ್ನು ನಂಬಿಸಲು ಹೊರಟ ತಂತ್ರವಾಗುತ್ತದೆ. ಇದೇ ಲೇಖಕಿಯರ ಇನ್ನೊಂದು ಕೃತಿ 'ದಾದಿ'. ತನ್ನದೇ ಆದೊಂದು ಮಗುವನ್ನು ಕಾಣಬೇಕೆಂಬ ಹೆಣ್ಣಿನ ಹಂಬಲ ಕನಸಾಗಿ, ತನ್ನದು. ಪರರದು ಎಂಬ ಭೇದವಿಲ್ಲದೆ ವಿಶಾಲಹೃದಯವನ್ನು ಗಳಿಸಿಕೊಂಡು ದಾದಿ ಯಾಗಿ ಪರರ ಮಕ್ಕಳನ್ನು ಸಾಕಿ ಸಲಹುತ್ತಾಳೆ. ಈ ಜಗತ್ತಿನ ದ್ವೇಷಾಸೂಯೆಯ ದಾಳಿಗೆ ತುತ್ತಾಗಿ ಕಡೆಗೆ ನರ್ಸಿಂಗ್ ಹೋಂ ಒಂದನ್ನು ತೆರೆದಾಗ. ತಾನು ಸಾಕಿದ ಮಕ್ಕಳೇ ಡಾಕ್ಟ ರಾಗಿ ಇವಳ ಚಿಕಿತ್ಸೆಗೆ ಬರುತ್ತಾರೆ. ಕಡೆಯ ದೃಶ್ಯದಲ್ಲಿ 'ದಾದಿ'ಯ ಮೃತ್ಯುಶಯ್ಯೆಯ

ಬಳಿಗೆ ಎಲ್ಲೆಲ್ಲೋ ಚದುರಿದ್ದ ಪಾತ್ರಗಳೆಲ್ಲ ಬಂದು ಸೇರುತ್ತವೆ. ಈ ಕೃತಿಯು ಹಿಂದಿರುವ ಪಾತ್ರದ ತಾತ್ವಿಕ ಸಮಾಧಾನವನ್ನು ಮೆಚ್ಚಬಹುದಾದರೂ, ಈ ಕಾದಂಬರಿ ಮಾಮೂಲು ಸಿನಿಮಾ ಕತೆಯಂತೆ ಭಾಸವಾಗುತ್ತದೆ.

ಪ್ರೇಮಾಭಟ್ ಅವರ **ಇದ್ದು ಹೋದ ಜೀವ**, ಕಂಡಕಂಡವರಿಗೆ ಮದ್ದು ಹಾಕುವ ಚಟವುಳ್ಳ ಹೆಣ್ಣು, ಹೇಗೆ ಇಡೀ ಕುಟುಂಬನಾಶಕ್ಕೆ ಕಾರಣಳಾದಳೆಂಬುದನ್ನು ವಸ್ತುವನ್ನಾಗಿ ಉಳ್ಳದ್ದು. ದಕ್ಷಿಣ ಕನ್ನಡ ಜಿಲ್ಲೆಯ ನಡೆ–ನುಡಿಗಳ ಪ್ರಾದೇಶಿಕ ಸೊಗಡನ್ನುಳ್ಳ ಈ ಕೃತಿ ತೀರಾ ಮಂದಗತಿಯಿಂದ ತೆವಳುತ್ತದೆ. ಸಾವಿತ್ರಿದೇವಿ ಅವರ **ಜವನಿಕೆ** ಆದರ್ಶಮಯವಾದ ಬದುಕಿಗೆ ಪಣತೊಟ್ಟು ನಿಂತು, ಅದನ್ನು ಬದುಕಿಗೆ ಇಳಿಸಲಾರದೆ ತೊಳಲಾಡಿದ ವ್ಯಕ್ತಿಗಳ ಕಥನವಾಗಿದೆ. ಸುಮಾರು ಐವತ್ತು ವರ್ಷಗಳ ಹಿಂದಿನ ಜೀವನ ವಿಧಾನವನ್ನು ಚಿತ್ರಿಸುವ ಈ ಕೃತಿ, ಬದಲಾದ ಇಂದಿನ ಸಾಮಾಜಿಕ ಪರಿಸರಕ್ಕೆ ಏನನ್ನು ಹೇಳುತ್ತದೆಂಬುದು ತಿಳಿಯುವುದಿಲ್ಲ. **ಒಂದೂರಲ್ಲಿ ಒಬ್ಬ ನಿರ್ಮಲ** ಎಂಬುದು ಸರಿತಾ ಜ್ಞಾನಾನಂದ ಅವರ ಕಾದಂಬರಿ. ಕಾದಂಬರಿಯಾಗಲು ಹೊರಟು, ಮೊದಲ ಅಧ್ಯಾಯವನ್ನು ಮಾತ್ರ ಸೊಗಸಾದ ಸಣ್ಣ ಕತೆಯನ್ನಾಗಿಸಿದ್ದಷ್ಟೆ ಇದರ ಸಾಧನೆಯಾಗಿದೆ. ಮದುವೆಗೆ ನಿಂತ ಹೆಣ್ಣು ಮಗಳು, ತಾನು ಎಂ.ಎ. ಪರೀಕ್ಷೆಗೆ ಓದುತ್ತಿರುವ ಇಂಗ್ಲೆಂಡಿನ ಚರಿತ್ರೆಯ ಪುಟಗಳ ರಾಜರುಗಳಂತೆ, ಗಂಡಿನ ಮೇಲೆ ಗಂಡು ಬಂದು ಚೆಲ್ಲುವ ನೆರಳು–ಬೆಳಕುಗಳ ಚಿತ್ರ ಪರಿಣಾಮಕಾರಿಯಾಗಿದೆ. ಆದರೆ ಮುಂದಿನ ಕತೆಯೆಲ್ಲ ಅಸಂಬದ್ಧಗಳ ಕಂತೆ. ಈಕೆ, ಎಸ್.ಎಸ್.ಎಲ್.ಸಿ. ಪಾಸಾದ ಗಂಡನನ್ನು ಮದುವೆಯಾದ ಮೇಲೆ, ತಾನು ಎಂ.ಎ. ಪಾಸ್ ಮಾಡಿದ್ದನ್ನು ಬಚ್ಚಿಡುವುದು; ಆಕೆ ಇದ್ದಕ್ಕಿದ್ದ ಹಾಗೆ 'ಪ್ಯಾನ್ಸರ್' ಆಗುವುದು; ಎಂ.ಎ. ಪ್ಯಾಸು ಮಾಡಿದ್ದರೂ ರಾಮಾಯಣ ಮಹಾಭಾರತಗಳನ್ನು ಓದಿ ನೀತಿಪಾಠ ಕಲಿತು ಆದರ್ಶ ಗೃಹಿಣಿಯಾಗಲು ಸಂಕಲ್ಪಿಸುವುದು: ಅತ್ತೆಯ ಕಾಟ; ಆತ್ಮಹತ್ಯೆಯ ಪ್ರಯತ್ನ – ಇತ್ಯಾದಿಗಳು ಅಕಾರಣವಾಗಿ ಪುಟ ತುಂಬುವುದರಲ್ಲಿ ಸಫಲವಾಗಿವೆ. ಎಲ್. ಎಸ್. ಶೇಷಗಿರಿರಾಯರು ಇಂಥ ದುರ್ಬಲವಾದ ಕಾದಂಬರಿಗೆ ಒಳ್ಳೆಯ ಮುನ್ನುಡಿ ಬರೆದು, ಸಲ್ಲಬೇಕಾದ್ದಕ್ಕಿಂತ ಹೆಚ್ಚಿನ ಪ್ರಶಂಸೆಯನ್ನು ಪ್ರಕಟಿಸಿದ್ದಾರೆ.

ಅನುಪಮಾ ನಿರಂಜನ ಅವರು ಈ ವರ್ಷ ಬರೆದ ಕಾದಂಬರಿಗಳು ಎರಡು: **ಋಣ** ಮತ್ತು **ಮೂಡಣ-ಪಡುವಣ.** ತನ್ನ ಸ್ವಂತ ಮಕ್ಕಳೇ ದೂರವಾಗಿ ಕಡೆಗಣಿಸಿದಾಗ ಗೋದಾವರಿಯನ್ನು ಅವಳ ಅಂತ್ಯಕಾಲದಲ್ಲಿ ಅವಳ ಒಕ್ಕಲುಮಗ ಶ್ಯಾಮ ಸ್ವಂತ ಮಗನಂತೆ ಸೇವೆ ಮಾಡಿ ಋಣ ತೀರಿಸುತ್ತಾನೆ. ಕಡೆಗೆ, ವಾಸ್ತವವಾಗಿಯೂ ಆತ ತನ್ನ ಮಗನೇ ಎಂಬ ರಹಸ್ಯ ಆಕೆಗೆ ತಿಳಿದು ತನ್ನ ಮನೆತನದ ಹೊಲವನ್ನು ಅವನಿಗೇ ಬರೆಯುತ್ತಾಳೆ. ಪರಸ್ಪರ ಋಣ ತೀರುವ ರೀತಿ, ತೀರಾ ಲೆಕ್ಕಾಚಾರವಾಗಿ ಬಂದಂತೆ ಭಾಸವಾಗುತ್ತದೆ ಈ ಕಾದಂಬರಿಯಲ್ಲಿ. 'ಮೂಡಣ–ಪಡುವಣ'ದಲ್ಲಿ ಭಾರತದ ಶ್ರೀನಿವಾಸ, ಪಶ್ಚಿಮದ ಇವಾ – ಇವರಿಬ್ಬರ ಮದುವೆಯನ್ನು, ಶ್ರೀನಿವಾಸನ ತಂದೆ ನಿರಾಕರಿಸಿದರೂ, ಮೂಡಣ – ಪಡುವಣಗಳನ್ನು ನಿಜವಾಗಿಯೂ ಒಂದುಗೂಡಿಸುತ್ತದೆ, ಶ್ರೀನಿವಾಸ ಹಾಗೂ ಇವಾ ಅವರಿಗೆ ಹುಟ್ಟಿದ ಮಗು. ಇದನ್ನು ಕಾದಂಬರಿ ಎನ್ನುವುದಕ್ಕಿಂತ ನೀಳ್ಗತೆ

ಎನ್ನಬಹುದು. ಅನುಪಮಾ ಅವರ ಬರವಣಿಗೆಯಲ್ಲಿ ಪಳಗಿದ ಕೈಯನ್ನು ಕಾಣಬಹುದು.

ವಾಣಿಯವರ **ಅನಿರೀಕ್ಷಿತ** ಒಳ್ಳೆಯ ಕಥಾವಸ್ತುವಿನಿಂದ, ಅಸಹಜವಲ್ಲದ ಸನ್ನಿವೇಶಗಳಿಂದ – ಮಹಿಳೆಯರ ಇತರ ಕಾದಂಬರಿಗಳಿಗೆ ಹೋಲಿಸಿ ನೋಡಿದಾಗ ಉತ್ತಮ ಮಟ್ಟದ್ದು ಅನ್ನಿಸುತ್ತದೆ. ಎಂಟು ಮಕ್ಕಳ ತಂದೆಯಾದ ರಾಯರ ಮೂರನೆ ಹೆಂಡತಿಯಾಗಿ ಬಂದ ಭವಾನಿ, ಕ್ರಮೇಣ ಮನೆಯ ಆವರಣಕ್ಕೆ ಹೊಂದಿಕೊಂಡು, ಮಕ್ಕಳ ಯೋಗಕ್ಷೇಮವನ್ನು ನೋಡಿಕೊಂಡು. ಮನೆಯನ್ನು ವ್ಯವಸ್ಥೆಗೆ ತಂದು ಎಲ್ಲರ ಮೆಚ್ಚುಗೆಗೆ ಪಾತ್ರಳಾದದ್ದೆ ಇದರ ವಸ್ತು. ಆದರೆ, ಎಂಟುಮಕ್ಕಳ ಗಂಡನೊಂದಿಗೆ ಬದುಕಬೇಕಾಗಿ ಬಂದ ಹರೆಯದ ಹುಡುಗಿಯ ಆಂತರಿಕ ಸಂಘರ್ಷಗಳ ಕಡೆಗಾಗಲಿ ಅವಳ ದಾಂಪತ್ಯಜೀವನದ ಕಡೆಗಾಗಲಿ ಲೇಖಕಿಯರು ತಟಸ್ಥರಾಗಿದ್ದುಬಿಡುತ್ತಾರೆ. ಭವಾನಿ ಸಲೀಸಾಗಿ ಚಲನಚಿತ್ರಗಳಲ್ಲಿ ನಾವು ಕಾಣುವ ಗರತಿಯ ಹಾಗೆ, ಸಾಧ್ವೀಮಣಿಯಾಗಲು ಪ್ರಯತ್ನಿಸುತ್ತಾಳೆ. ಅಂತೂ ನಿಜವಾದ ಸಮಸ್ಯೆಗಳು ಇರುವಂಥ ವಸ್ತುವನ್ನು ತೆಗೆದು ಕೊಂಡೂ ಕೂಡಾ ಅದರತ್ತ ಗಮನ ಕೊಡದಿರುವುದು ಬಹುತೇಕ ಮಹಿಳಾ ಲೇಖಕಿಯರ ಹವ್ಯಾಸವಾಗಿದೆ. ಈ ಕಾದಂಬರಿಯೆ ಈ ಮಾತಿಗೆ ಸಾಕ್ಷಿ. ಆದರೂ ವಾಣಿ ಅವರ 'ಅನಿರೀಕ್ಷಿತ'ದಲ್ಲಿ ನಿಶ್ಚಿತವಾದ ಕತೆಯ ಬೆಳವಣಿಗೆ ಇದೆ: ಏಕಮುಖತೆ ಇದೆ; ಬರವಣಿಗೆ ಅತ್ಯಂತ ಸಹಜವಾಗಿದೆ.

ಎಂ. ಕೆ. ಇಂದಿರಾ ಅವರ **ಚಿದ್ವಿಲಾಸ** ಮೊದಲು ಧಾರಾವಾಹಿಯಾಗಿ ವಾರ ಪತ್ರಿಕೆಯಲ್ಲಿ ಬಂದು ಜನಕ್ಕೆ ಪರಿಚಿತವಾದದ್ದು. ಆರಂಭದಲ್ಲಿ ಕಾಲೇಜು ಹುಡುಗ–ಹುಡುಗಿಯರು ನಂದಿಬೆಟ್ಟದಲ್ಲಿ ಪ್ರವಾಸ ಬಂದ ಸಂದರ್ಭ, ಅನಂತರ ಕಾಲೇಜು ತರಗತಿ, ಪ್ರೊಫೆಸರ್‌ಗಳು ತರಗತಿಯಲ್ಲಿ ಪಾಠಮಾಡುವ ವಿಧಾನ– ಇತ್ಯಾದಿಗಳನ್ನು ಓದುತ್ತಿದ್ದಂತೆ, ಲೇಖಕಿಯರು ತಮಗೆ ಬಹುಶಃ ಪರಿಚಿತವಲ್ಲದ ಹಾಗೂ ಅನುಭವಕ್ಕೆ ದೂರವಾದ ಇಂಥ ವಸ್ತುವನ್ನು ಯಾಕೆ ಎತ್ತಿಕೊಂಡರೋ, ಅದರಿಂದಲೆ ಇಷ್ಟೊಂದು ಕೃತಕವಾಗಿ ಬರೆಯುತ್ತಿದ್ದಾರೋ– ಎಂದು ಅನ್ನಿಸಿದರೂ, ಕೆಲವು ಪುಟಗಳ ನಂತರ, ಅವರ ಬರವಣಿಗೆ 'ತಮ್ಮತನ'ಕ್ಕೆ ಬಂದು ನಿಲ್ಲುತ್ತದೆ. ಎಂಟು ವರ್ಷಗಳಲ್ಲಿ, 'ಕ್ಲಾಸ್‌ಮೇಟ್' ಗಳಾಗಿದ್ದ ಒಬ್ಬೊಬ್ಬರ ಬದುಕೂ, ಗಾಳಿಗೆ ಒಡ್ಡಿದ ಕಾಗದದ ಚೂರುಗಳಂತೆ ಚದರಿಹೋಗುತ್ತದೆ. ಅದರಲ್ಲಿ ಭಾವನಾ ಎಂಬ ಹುಡುಗಿಯು, ತಾನು ತಂದೆ–ತಾಯಂದಿರಿಲ್ಲದ ಮನೆಯಲ್ಲಿ, ಜವಾಬ್ದಾರಿ ಹೊತ್ತು ಸಂಸಾರ ನಡೆಸುತ್ತಾಳೆ. ತನ್ನ ತಂಗಿಯರಲ್ಲಿ ಒಬ್ಬಳು ಅಂತರ್‌ಜಾತೀಯ ವಿವಾಹ ಮಾಡಿಕೊಳ್ಳುತ್ತಾಳೆ. ಇನ್ನೊಬ್ಬಳನ್ನು ಮಲೆನಾಡಿನ ವರನಿಗೆ ಕೊಟ್ಟು ಮದುವೆಮಾಡುತ್ತಾಳೆ. ಮಲೆನಾಡಿನ ಪರಿಸರದ ಚಿತ್ರಣ ಬಂದಾಗ, ನಮಗೆ ಇಂದಿರಾ ಅವರ ಹಿಂದಿನ ಕಾದಂಬರಿಗಳ ವಾತಾವರಣ ಹಿಂದಕ್ಕೆ ಬಂದಂತಾಗುತ್ತದೆ. ಎಲ್ಲರಿಗೂ ಮದುವೆಮಾಡಿ ತಾನೊಬ್ಬಳು ಒಂಟಿಯಾಗಿ ನಿಲ್ಲುವ ಭಾವನಾಳ ಏಕಾಕಿತನದೊಂದಿಗೆ ಕಾದಂಬರಿ ಮುಗಿಯುತ್ತದೆ. ಮನುಷ್ಯನ ಬದುಕಿನ ಸ್ಥಿತ್ಯಂತರ, ಅದರ ನಡುವೆ ಅಸಹಾಯಕವಾಗಿ ನಿಂತ ವ್ಯಕ್ತಿಗಳ ಬದುಕು, ಆದರ ಹಿಂದೆ ಇರುವ ಕಾಣದ ಕೈಯೊಂದರ ಕೈವಾಡ–ಇವುಗಳ ತಾತ್ವಿಕ ಪರಿಭಾವನೆಯ ಉದ್ದೇಶ ಸಾರ್ಥಕವಾಗಿದೆ. ಕಾದಂಬರಿಗೆ ಇಟ್ಟ ಹೆಸರು ಮಾತ್ರ ಸಂಸ್ಕೃತಭೂಯಿಷ್ಠವಾಗಿ, ಕೃತಕವೆಂಬಂತೆ ಭಾಸವಾಗುತ್ತದೆ.

ಮಹಿಳೆಯರು ಬರೆದ ಈ ಕೆಲವು ಕಾದಂಬರಿಗಳನ್ನು ಓದಿದರೆ ಕೆಲವು ಸಂಗತಿಗಳು ಸ್ಪಷ್ಟವಾಗುತ್ತವೆ: ಇವರಲ್ಲಿ ಅನೇಕರು ತಮ್ಮ ಸುತ್ತ ಇರುವ, ಹಾಗೂ ತಮಗೆ ಪರಿಚಿತ ವಾದ ವಸ್ತುವನ್ನು–ಕೌಟುಂಬಿಕ, ಸಾಮಾಜಿಕ – ಆರಿಸಿಕೊಂಡರೂ ಅದನ್ನು ಆಳವಾಗಿ ಪರಿಭಾವಿಸುವುದಿಲ್ಲ. ಸಿಕ್ಕ ವಸ್ತುವನ್ನು ರೋಚಕವಾಗಿ ಹಿಗ್ಗಲಿಸಿ ಪುಟ ತುಂಬಿಸುವ ಕಡೆಗೆ ವಿಶೇಷ ಗಮನ ಕೊಡುತ್ತಾರೆ. ಜೊತೆಗೆ ಹೆಣ್ಣು ತಳೆಯಬೇಕಾದ ಕೆಲವು ಆದರ್ಶ ಗಳನ್ನು ಚಿತ್ರಿಸುವುದರಲ್ಲಿ ಬಹುಜನಕ್ಕೆ ಆಸಕ್ತಿ. ತಂದೆ–ತಾಯಿಯರಿಲ್ಲದ ಮನೆಯ ಸಮಸ್ತ ಜವಾಬ್ದಾರಿಯನ್ನು ಒಬ್ಬಳು ಹೊತ್ತು ತಮ್ಮ–ತಂಗಿಯರನ್ನು ಸಾಕಿ ಸಲಹಿ ಮುಂದಕ್ಕೆ ತಂದು ತಾನು ಮಾತ್ರ ಏಕಾಕಿಯಾಗಿ ನಿಲ್ಲುವುದು; ತೀರಿಹೋದ ಹೆಂಡತಿ ಯಿಂದ ಕೊರಗುವ ಗಂಡನನ್ನು ಒಲಿಸಿಕೊಳ್ಳಲು, ಎರಡನೆಯ ಹೆಂಡತಿ, ಆ ಮೊದಲ ಹೆಂಡತಿಯಂತೆ ವೇಷಭೂಷಣ ಧರಿಸಿಕೊಂಡು ನಟಿಸುವುದು, ಅಥವಾ ಬಾರದ ಗಂಡನ ಕೊರಗಿನಿಂದ ರೋಗಗ್ರಸ್ತಳಾದ ಹೆಂಡತಿಗೆ ಮೈದುನ ತಾನೇ ಗಂಡನೆಂಬಂತೆ ನಟಿಸಿ ಅವ ಳನ್ನು ಕಾಪಾಡುವುದು; ಒಲಿದ ಗಂಡು ಹೆಣ್ಣುಗಳು ಮದುವೆ ಮಾಡಿಕೊಳ್ಳಲು ಯಾವ ಆತಂಕಗಳಿಲ್ಲದಿದ್ದರೂ ವಿನಾಕಾರಣ ವಿರಹದಿಂದ ಪರಿತಪಿಸಿ ಕನಿಕರವನ್ನು ಹುಟ್ಟಿಸು ವುದು; ವಿರುದ್ಧ ಪರಿಸರದಲ್ಲಿ ಬದುಕುವ ಹೆಣ್ಣು, ಗೃಹಿಣಿಯಾಗುವ ಒಂದೇ ಒಂದು ಘನವಾದ ಉದ್ದೇಶದಿಂದ–ಉಳಿದಾವ ಸಮಸ್ಯೆಯೂ ಇಲ್ಲದಂತೆ ಸಲೀಸಾಗಿ ಹೊಂದಿ ಕೊಳ್ಳುವುದು; ಅತ್ತೆ–ನಾದಿನಿಯರ ಕಾಟದಲ್ಲಿ ಬೆಂದರೂ, ನಾದಿನಿಯ ಮದುವೆಗೆ ತನ್ನೆಲ್ಲ ಒಡವೆ ವಸ್ತ್ರಗಳನ್ನು ದಿಢೀರನೆ ತ್ಯಾಗಮಾಡುವುದು; ತಂದೆಗಾಗಿ ಅಥವಾ ತಾಯಿ ಗಾಗಿ, ಮದುವೆಗೆ ಬಂದ ಹುಡುಗಿಯರು ಜೀವನವನ್ನು ಮುಡುಪಾಗಿಡಲು ಸಂಕಲ್ಪಿಸು ವುದು; ತನಗೆ ಮಕ್ಕಳಿಲ್ಲದಿದ್ದರೂ ಪರರ ಮಕ್ಕಳನ್ನು ತನ್ನವರೆಂದು ಭಾವಿಸಿ ಲೋಕ ಸೇವೆಗೆ ನಿಲ್ಲುವುದು–ಹೀಗೆ ಈ ಕಾದಂಬರಿಗಳಲ್ಲಿ ಆದರ್ಶಮಯತೆ, ಅಸಹಜತೆ ಮತ್ತು ಭಾವಾತಿರೇಕತೆಗಳೆ ಪ್ರಧಾನವಾಗುತ್ತವೆ. ಓದಿದವರ ಮನಸ್ಸನ್ನು ವೈಚಾರಿಕತೆಯಲ್ಲಿ ನಿಲ್ಲಿಸಿಕೊಳ್ಳುವ, ಅಥವಾ ಜೀವನಾನುಭವದಿಂದ ತುಂಬುವ, ಸಾಹಿತ್ಯಿಕ ಮೌಲ್ಯ ಗಳಿಂದ ತೃಪ್ತಿನೀಡುವ ಕಾದಂಬರಿಗಳೆ ಈ ವರ್ಷ–ಮಹಿಳೆಯರು ಬರೆದ ಕಾದಂಬರಿಗಳಲ್ಲಿ –ಇಲ್ಲ ಎಂಬುದು ವಿಷಾದನೀಯವಾದ ಸಂಗತಿಯಾಗಿದೆ.

–4–

ಸಂಖ್ಯೆಯ ದೃಷ್ಟಿಯಿಂದ ಹೇಳುವುದಾದರೆ ಈ ವರ್ಷ ಸರೋಜಾರಾವ್ ಅವ ರನ್ನು ಬಿಟ್ಟರೆ, ಮ. ನ. ಮೂರ್ತಿಯವರು ಹೆಚ್ಚು ಸಂಖ್ಯೆಯ ಕಾದಂಬರಿಗಳನ್ನು ರಚಿ ಸಿದವರಾಗಿದ್ದಾರೆ. ಮೂರ್ತಿಯವರು ಬರೆದ ಕಾದಂಬರಿಗಳು ಆರು. ಅವುಗಳಲ್ಲಿ ಒಂದು ಐತಿಹಾಸಿಕ ವಸ್ತುವನ್ನು ಕುರಿತದ್ದು. ಇನ್ನುಳಿದ ಐದು ಕಾದಂಬರಿಗಳಲ್ಲಿ **ನಾನು ಭಾರ ತೀಯ** ಎಂಬ ಕಾದಂಬರಿಯೊಂದನ್ನು ಬಿಟ್ಟರೆ ಉಳಿದವೆಲ್ಲಾ ಚಮತ್ಕಾರಜನಕವಾದ ತಂತ್ರದಿಂದ, ಅಘಟಿತ ಘಟನೆಗಳಿಂದ ತುಂಬಿದ ಕೇವಲ ರೋಚಕವಾದ ಬರವಣಿಗೆಗಳಾ ಗಿವೆ. ವೇಣು ಎಂಬ ಯುವಕ ತಾನೊಂದು ಗಿರಣಿ ಕಂಪನಿಯ ಮಾಲೀಕನೆಂದು ತನ್ನ ಹೆಂಡತಿಗೆ ಸುಳ್ಳು ಸುಳ್ಳೇ ಪತ್ರ ಬರೆದದ್ದನ್ನು ಪತ್ತೆಹಚ್ಚಿದ ಗಿರಣಿಯ ನಿಜವಾದ ಮಾಲೀ

ಕರಾದ ಗೋವರ್ಧನರಾಯರು, ವೇಣುವಿನ ಹೆಂಡತಿ ಶಕುಂತಲೆಗೆ ಅದನ್ನೆ ನಂಬಿಸು ವಂತೆ ನಾಟಕ ಕಟ್ಟಿದ್ದು–**ಜಂಬದ ಕೋಳಿ** ಎಂಬ ಕಾದಂಬರಿಯ ವಸ್ತು. ಈ ಕಾದಂಬರಿ ಯಂತೆ ಜೀವನದ ಘಟನೆಗಳು ನಡೆದರೆ, ಜೀವನ ಎನ್ನುವುದೊಂದು ತಮಾಷೆನಾಟಕ ಎನ್ನಬೇಕಾದೀತು. ಒಂದು ವಸ್ತು ಕಾದಂಬರಿಯಾಗಬೇಕಾದರೆ, ಮೊದಲು ಅದರ ಸಂಭಾವ್ಯತೆಯ ಬಗ್ಗೆ ಓದುಗರು ಶಂಕೆಪಡದಷ್ಟು ಕಲಾತ್ಮಕವಾಗಿರಬೇಕು. ಕೇವಲ ಪುಟ ತುಂಬಿಸುವ ಕಲೆ ಗೊತ್ತಿದ್ದರೆ ಸಾಲದು. ಈ ಕಾದಂಬರಿಯಲ್ಲಿ ಲೇಖಕರು ಅಲ್ಲಲ್ಲಿ ಹೊರಳುದಾರಿಯಲ್ಲಿ ನಿಂತು ಉಪನ್ಯಾಸ ಬೇರೆ ಕೊಡುತ್ತಾರೆ. ಈ ಕೃತಿಯ ಕಥಾನಾಯಕ ನಾಯಿಕೆಯರು ಲಾಲ್‌ಬಾಗಿಗೆ ಬಂದ ಕೂಡಲೆ, ಲಾಲ್‌ಬಾಗಿನ ಇತಿಹಾಸವನ್ನು ಕುರಿತು, ಕಮರ್ಷಿಯಲ್ ಸ್ಟ್ರೀಟ್ ಬಂದಾಗ ಅದನ್ನು ಕುರಿತು, ನಾಯಕ ಉಪನ್ಯಾಸ ಕೊಡುತ್ತಾನೆ. ಅಂತೂ ಅಪ್ರಸ್ತುತಮತಿಗಳಾಗಿ ಲೇಖಕರು, ನಾಟಕೀಯವಾದ ಘಟನೆ ಗಳನ್ನು ಹೆಣೆಯುತ್ತಾರೆ. ಕಾದಂಬರಿ ಓದಿದ ಮೇಲೆ ಇದು ಸಾಧಿಸುವುದೇನನ್ನು ಎಂಬ ಪ್ರಶ್ನೆಗೆ ಉತ್ತರವಿಲ್ಲ. **ಒಲಿದರೆ ನಾರಿ** ಎಂಬ ಇದೇ ಲೇಖಕರ ಇನ್ನೊಂದು ಕಾದಂಬರಿ ಇನ್ನೂ ತಮಾಷೆಯಾಗಿದೆ. ಶ್ರೀನಿವಾಸ ಬಡಹುಡುಗ. ಕಾಲೇಜಿನಲ್ಲಿ ಓದುತ್ತಿರುವನೆಂಬ ಕಾರಣದಿಂದ ತನ್ನ ವಠಾರದ ಜನರಿಗೆ ಈತ ಅಸಾಧಾರಣ ಪುರುಷನಾಗುತ್ತಾನೆ. ಶ್ರೀಮಂ ತರ ಮನೆಯ ತರುಣಿಗೆ ಟ್ಯೂಟರ್ ಆಗಲು ಒಪ್ಪಿಕೊಂಡಾಗ, ಆ ತರುಣಿಯ ಹಾಗೂ ಆಕೆಯ ಅಕ್ಕನ ಕಣ್ಣು ಇವನ ಮೇಲೆ ಬೀಳುತ್ತದೆ. ಈತ ಟ್ಯೂಟರ್ ಆದ ಮೊದಲಿಗೆ ಕಾಣಿಸಿಕೊಂಡ ತಂದೆ, ಮುಂದೆ ಇಡೀ ಕಾದಂಬರಿಯುದ್ದಕ್ಕೂ ಪತ್ತೆಯಿಲ್ಲ. ಈ ತರುಣಿ ಯರಿಗೆ ಹೇಗೂ ತಾಯಿಯಿಲ್ಲ. ಶ್ರೀನಿವಾಸ, ರತ್ನಾಕರನ ಭರತೇಶನ ಹಾಗೆ, ಈ ಇಬ್ಬರು ಶ್ರೀಮಂತ ತರುಣಿಯರ ಕಟಾಕ್ಷಗಳ ನಡುವೆ ಇದ್ದೂ ಇಲ್ಲದ ಹಾಗೆ ಬದುಕುತ್ತಾನೆ. ಅವರಿಬ್ಬರೂ ಸೂಟು ಹೊಲಿಸಿಕೊಟ್ಟರೆ ತೊಡುತ್ತಾನೆ, ಹೋಟಲುಗಳಿಗೆ ಕರೆದು ಕೊಂಡು ಹೋದರೆ ಜತೆಗೆ ಹೋಗಿ ಅವರ ಖರ್ಚಿನಲ್ಲಿ ಉಂಡು–ತಿಂದು ಅವರ ಗಾಳಕ್ಕೆ ಸಿಕ್ಕದೆ ತಪ್ಪಿಸಿಕೊಂಡು ಬರುತ್ತಾನೆ. ಆ ಹುಡುಗಿಯರಲ್ಲಿ ಹಿರಿಯವಳು, ತನ್ನ ತಂಗಿ ಯನ್ನು ಈತ ಪ್ರೇಮಿಸಿ ತನ್ನನ್ನು ಕಡೆಗಣಿಸುತ್ತಾನೆಂಬ ಅಸೂಯೆಯಿಂದ ತನ್ನ ತಮ್ಮ ನಿಗೆ ಹೇಳಿ, ರಾತ್ರಿ ಕಾರನ್ನು ಡಿಕ್ಕಿ ಹೊಡೆಸುತ್ತಾಳೆ; ನಾಯಕ ತಪ್ಪಿಸಿಕೊಳ್ಳುತ್ತಾನೆ. ಅಡಿಗೆಯವನ ಮೂಲಕ ಕಾಫಿಯಲ್ಲಿ ವಿಷ ಹಾಕಿಸಿಕೊಡುತ್ತಾಳೆ. ಆತ ಅದನ್ನು ಕುಡಿ ಯುವ ಮುನ್ನ ಅಕಸ್ಮಾತ್ ಚೆಲ್ಲಿಹೋಗಿ, ಅದನ್ನು ನೆಕ್ಕಿದ ನಾಯಿ ಕೂಡಲೆ ಸತ್ತುಬೀಳು ತ್ತದೆ. ಇದನ್ನು ನೋಡಿದ ತಂಗಿ, ನಾಯಕನ ಪ್ರಾಣರಕ್ಷಣಾರ್ಥವಾಗಿ, ಆತನ ಬಗ್ಗೆ ಇದ್ದ ತನ್ನ ಪ್ರೀತಿಯನ್ನು ತ್ಯಾಗಮಾಡುತ್ತಾಳೆ. ಆಗ ವಠಾರದಲ್ಲಿದ್ದ ಬಡ ಹುಡುಗಿ ಯನ್ನು ಶ್ರೀನಿವಾಸ ಮದುವೆಮಾಡಿಕೊಂಡು ಉದ್ಧಾರ ಮಾಡುತ್ತಾನೆ. ಈ ಕತೆಯನ್ನು ಓದುತ್ತಿದ್ದರೆ ನಗುಬರುತ್ತದೆ – ಅದರ ಅಸಂಭಾವ್ಯತೆಗೆ. ಇಂಥದನ್ನು ಬರೆಯುವುದರ ಮೂಲಕ ಮೂರ್ತಿಯವರು ಯಾವ ಗಂಭೀರವಾದ ಜೀವನಾನುಭವವನ್ನು ಕೊಟ್ಟಿ ದ್ದಾರೆ? ಕನ್ನಡದ ಓದುಗರು ಇನ್ನೂ ಇಂಥ 'ಸರ್ಕಸ್ಸು'ಗಳನ್ನು ಸಾಹಿತ್ಯವೆಂದು ಒಪ್ಪಿ ಕೊಳ್ಳುವ 'ಸತ್ಯಣಾಭ್ಯವ್ಯವಹಾರಿ'ಗಳಾಗಿದ್ದಾರೆಂದು ಲೇಖಕರು ನಂಬಿರುವುದೇ, ಇಂಥ ನಿರ್ಮಿತಿಗೆ ಮೂಲ ಪ್ರೇರಣೆ ಇರಬಹುದು. ಅವರ ಇನ್ನೆರಡು ಕಾದಂಬರಿಗಳಾದ

**ಹೊನ್ನಿನ ಹೊಳೆ** ಮತ್ತು **ಅಲಕನಂದಾ**ಗಳು ಇದೇ ಮಾದರಿಯವಾದರೂ, 'ಹೊನ್ನಿನ ಹೊಳೆ'ಗಿಂತ 'ಅಲಕನಂದ' ಒಳ್ಳೆಯ, ಸಂಭಾವ್ಯವೆನ್ನಿಸುವಂಥ ಕಥಾವಸ್ತುವನ್ನು ಒಳಗೊಂಡಿದೆ. ಆದರೆ **ನಾನು ಭಾರತೀಯ** ಎಂಬ ಕಾದಂಬರಿ, ಅವರ ಇನ್ನುಳಿದ ಐದು ಕಾದಂಬರಿಗಳಿಗಿಂತ, ಉತ್ತಮವಾದ ಕೃತಿಯಾಗಿದೆ. ಪ್ರಸನ್ನ ಎಂಬ ಪೈಲೆಟ್ ಸರ್ಗೋದಾ ವಿಮಾನ ನಿಲ್ದಾಣದ ಮೇಲೆ ದಾಳಿಮಾಡಿ, ಆತ್ಮಾರ್ಪಣೆ ಮಾಡಿಕೊಂಡು ಮರಣೋತ್ತರ ಪರಮವೀರಚಕ್ರ ಪ್ರಶಸ್ತಿಗೆ ಪಾತ್ರನಾದದ್ದು ಈ ಕಾದಂಬರಿಯ ವಸ್ತು. ಕಳೆದ ಭಾರತ–ಪಾಕ್ ಕದನದ ಹಿನ್ನಲೆಯಲ್ಲಿ ಚಿತ್ರಿತವಾದ, ನೂರಾ ಮೂವತ್ತು ಪುಟಗಳ ಈ ಕಿರುಕಾದಂಬರಿ, ಘಟನೆಗಳ ಶೀಘ್ರಗಾಮಿತ್ವದಿಂದ, ಹೆಚ್ಚು ಕವಲುಗಳಿಲ್ಲದ ಏಕಮುಖತೆಯಿಂದ, ಸಣ್ಣ ಕತೆಯ ಸತ್ವ ಹಾಗೂ ಪರಿಣಾಮಗಳಿಂದ ಯಶಸ್ವಿಯಾದ ಬರೆಹವಾಗಿದೆ. ಇಲ್ಲಿಯೂ ಕೊಂಚ ಮಿತಿಮೀರಿದ ಸಾಹಸವಿದ್ದರೂ, ಅದು ಅಸಂಭಾವ್ಯತೆಯ ದೋಷಕ್ಕೆ ಪಕ್ಕಾಗದೆ, ಭಾರತ–ಪಾಕ್ ಸಮರದ ಹಿನ್ನಲೆಯಲ್ಲಿ ಇಂಥ ಸಂದರ್ಭಗಳು ಸಾಧ್ಯ ಎಂಬ ನಂಬಿಕೆಯನ್ನು ಹುಟ್ಟಿಸುವಂತಿದೆ. ಈ ಬಗೆಯ ವಸ್ತುವನ್ನು ಕುರಿತ ಕಾದಂಬರಿಗಳು ಕನ್ನಡದಲ್ಲಿ ತೀರ ವಿರಳವಾಗಿರುವಾಗ, ಇದು ತನ್ನ ವಸ್ತು ವೈವಿಧ್ಯತೆಯಿಂದ ಓದುಗರ ಮೆಚ್ಚುಗೆಗೆ ಪಾತ್ರವಾಗುತ್ತದೆ.

ಟಿ. ಕೆ. ರಾಮರಾಯರ **ಕೋವಿ-ಕುಂಚ** ಮೇಕೆದಾಟಿನ ನಿಸರ್ಗರಮ್ಯತೆಯನ್ನು ಸೊಗಸಾಗಿ ಸೆರೆಹಿಡಿದ ಕಾದಂಬರಿ. ಆದರೆ, ಇದರಲ್ಲಿನ ವಸ್ತು–ಪಾತ್ರ–ಘಟನೆಗಳು ತೀರಾ 'ಸಿನಿಮೀಯ'ವಾಗಿವೆ. ಅರ್ಕಾವತಿ ನದಿಯ ಅರಣ್ಯದಲ್ಲಿ ಅಪ್ಪಣ್ಣ ಬೇಟೆಗೆ ಹೋದಾಗ, ಸಂಜೆಗತ್ತಲಲ್ಲಿ ಸಲಗ ಅಟ್ಟಿಸಿಕೊಂಡು ಬರುತ್ತದೆ; ಆಗ ಅದೇ ಪರಿಸ್ಥಿತಿಗೆ ಸಿಕ್ಕ ಲಂಬಾಣಿ ಹುಡುಗಿ ರೂಪ್ಲಾಳನ್ನು ಈತ ರಕ್ಷಿಸಿ ಬಂಗಲೆಗೆ ಕರೆತರುತ್ತಾನೆ. ಅನಂತರ ಆಕೆಯ ಕೃತಜ್ಞತೆಗೆ ಪಾತ್ರನಾದರೂ, ಅವಳ ಬಗೆಗೆ ಸಂಯಮದಿಂದಲೇ ಅಪ್ಪಣ್ಣ ವರ್ತಿಸುತ್ತಾನೆ. ಈ ನಡುವೆ ಬೊಂಬಾಯಿನಿಂದ ಕಲಾವಿದ ಪೂರ್ಣಚಂದ್ರ ಬರುತ್ತಾನೆ. ಆತ ಈ ನಿಸರ್ಗದಲ್ಲಿ ಯಾವ ಚಿತ್ರ ಬರೆದನೋ ಬಿಟ್ಟನೋ, ರೂಪ್ಲಾಳ ಚಿತ್ರ ತೆಗೆದದ್ದು, ಅವಳ ಮನಸ್ಸನ್ನು ಸೆಳೆದುಕೊಂಡದ್ದು, ನಿಜ. ಕಡೆಗೆ ಸಂಘರ್ಷಣೆ, ಅಪ್ಪಣ್ಣನ ಆತ್ಮಾರ್ಪಣೆಯಿಂದ ಕಾದಂಬರಿ ಮುಗಿಯುತ್ತದೆ. ರಾಮರಾಯರು ತುಂಬ ಸೊಗಸಾಗಿ ಬರೆಯಬಲ್ಲರು. ಅರಣ್ಯಪರಿಸರದ ನಿಸರ್ಗರಮ್ಯತೆಯನ್ನು ಸೆರೆಹಿಡಿಯುವುದರಲ್ಲಿ ಅವರ ಶೈಲಿ ಯಶಸ್ವಿಯಾಗಿದೆ, ಕಾವ್ಯಮಯವಾಗಿದೆ. ಇವರಿಗೆ ಪರಿಸರನಿರ್ಮಾಣ ಸಾಮರ್ಥ್ಯವಿದೆಯೇ ಹೊರತು, ಕೊರೆದು ನಿಲ್ಲಿಸುವಂಥ ಪಾತ್ರನಿರ್ಮಾಣ ಕೌಶಲ ಸಾಲದು. ಅಪ್ಪಣ್ಣನೇನೋ ನಿಸರ್ಗವನ್ನು ಒಂದು ಕ್ರೀಡಾಂಗಣವೆಂದು ಭಾವಿಸಿದ ಸಾಹಸಿ: ಆದರೆ 'ಕುಂಚ'ದ ಪ್ರತೀಕವಾಗಿ ಬಂದ ಚಂದ್ರಕಾಂತ ಇಲ್ಲಿ ಸಾಧಿಸಿದ್ದೇನು? 'ಕೋವಿ'–'ಕುಂಚ'ಗಳ ಘರ್ಷಣೆಯ ಹಿನ್ನೆಲೆಗಿರುವ ವೈಚಾರಿಕವೋ, ತಾತ್ವಿಕವೋ ಆದ ಮಹತ್ವವೇನು? ಕಾದಂಬರಿಯ ಒಂದೊಂದು ಅಧ್ಯಾಯವೂ ತನಗೆ ತಾನೇ ಒಂದು ಕತೆಯೆಂಬಂತಹ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಹೊರಟು, ಎಲ್ಲವನ್ನೂ ಕೂಡಿಸಿ ನೋಡಿದಾಗ ಅಂತಹ ಸಾವಯವ ಐಕ್ಯತೆಯನ್ನು ಸಾಧಿಸಿಕೊಂಡ ಹಾಗೆ ತೋರುವುದಿಲ್ಲ.

ತ್ರಿವಿಕ್ರಮರ **ಕಿಟಕಿಯ ಕಿಂಡಿ** ಇನ್ನೂ ಅಸಂಬದ್ಧವಾದ, ಅ. ನ. ಕೃ. ಅನುಕರಣೆಯ ಕೃತಿ. ಇದೊಂದು ಪತ್ರಿಕೋದ್ಯಮಿ ಸಾಹಿತಿಯ ರೋಮಾಂಚಕಾರಿ ಕತೆ. ಈ ಕಾದಂಬರಿಯ 'ಹೀರೋ' ವೇಣು; ಇವನೇನು ಬರೆದನೋ ಬಿಟ್ಟನೋ. ಆದರೆ ತಟಕ್ಕನೆ 'ಕವಿ ಸಾರ್ವಭೌಮ'ನಾಗುತ್ತಾನೆ. ಎಲ್ಲೆಲ್ಲಿಂದಲೋ ಈ ಮಹಾಸಾಹಿತಿಯ ಸುತ್ತ ಹೆಣ್ಣುಗಳ ಸಂತೆ ಸೇರುತ್ತದೆ. ಗಂಡಂದಿರು ಮನೆಯಲ್ಲಿಲ್ಲದ ವೇಳೆ ಈತನನ್ನು ಮನೆಗೆ ಆಹ್ವಾನಿಸಿ, ಪಾರ್ಟಿ ಕೊಡುತ್ತಾರೆ. ಈತನ ಕೊಠಡಿಯ ಕಿಟಕಿಯ ಕಿಂಡಿಯಿಂದ, ಈತನ ಕೃತಿಗಳನ್ನೋದಿ ಮರುಳಾದ ಹೆಣ್ಣು ಆಹ್ವಾನಿಸುತ್ತಾಳೆ. ಈತ ಗೊಂಬೆಯ ಹಾಗೆ ಆಕೆಯ ಬಳಿಗೆ ಹೋಗಿ, ಅವಳ ಪ್ರಣಯಭಿಕ್ಷೆಯನ್ನು ತಿರಸ್ಕರಿಸಿ ಧೀರೋದಾತ್ತನಾಗುತ್ತಾನೆ. ಹೀಗಾಗಿ ಈ ಸಾಹಿತಿ ಇದ್ದ ಕೆಲಸ ಕಳೆದುಕೊಂಡು, ಸಾಹಿತಿಗೆ ಅಗತ್ಯವಾದ ಸಂಘರ್ಷಣೆಗೆ ಒಳಗಾಗುತ್ತಾನೆ. ಆದರೆ ಇದ್ದಕ್ಕಿದ್ದ ಹಾಗೇ ರಾಜ್ಯಸರಕಾರದ ಬಹುಮಾನ, ಖಾಯಂ ಕೆಲಸ ದೊರೆತು, ಒಲಿದವಳೊಡನೆ ಸುಖವಾಗಿ ಬದುಕುತ್ತಾನೆ. ಇಂಥ ಅಪ್ರಬುದ್ಧ ಬರೆವಣಿಗೆಯನ್ನು ಕಾದಂಬರಿ ಎಂದು ಕರೆಯಬೇಕೆ ಎಂಬುದು ಪ್ರಶ್ನೆ.

'ಕಾಲಾನುಕಾಲಕ್ಕೆ ಬಡವಂ ಬಲ್ಲಿದನಾಗನೆ' –ಎಂಬುದು ಸೋಮೇಶ್ವರ ಶತಕದ ಒಂದು ಸೂಕ್ತಿ. ಆದರೆ ಕೃಷ್ಣಮೂರ್ತಿ ಪುರಾಣಿಕರು ಲೇಖನಿ ಇಟ್ಟು ಎತ್ತಿದರೆ ಬಡವ ಬಲ್ಲಿದನಾಗುತ್ತಾನೆ; ಬಲ್ಲಿದ ಬಡವನಾಗುತ್ತಾನೆ. **ಹಾಲುಂಡ ತವರು** ಎಂಬ ಅವರ ಕೃತಿಯ ನಾಯಕ ಶಾಂತವೀರ, ಅರವತ್ತು ಸಾವಿರ ರೂಪಾಯಿನ ಸಾಲವನ್ನು, ಸ್ನೇಹಕ್ಕಾಗಿ ಸಾಲಗಾರರಿಗೆ ಬಿಟ್ಟುಕೊಡುತ್ತಾನೆ; ಮೂರು ಲಕ್ಷ ರೂಪಾಯಿನ ಆಸ್ತಿ ಶಾಂತವೀರನ ಧಾರಾಳತನದಿಂದ ಕಳೆದುಹೋಗಿ ಬಲ್ಲಿದನಾದವನು ಭಿಕಾರಿಯಾಗುತ್ತಾನೆ. ಅವನ ಹೆಂಡತಿ ಮಹಾದೇವಿ ಪರಮಸಾಧ್ವಿ; ಹಾಳುತೋಟದ ಗುಡಿಸಲಲ್ಲಿ ಗಂಡನೊಂದಿಗೆ ಬದುಕಿ ಕಾಯಕದಲ್ಲಿ ತೊಡಗುತ್ತಾಳೆ. ಆದರೂ ಹಾಲುಂಡ ತವರಿನ ಮೇಲೆ ಇವಳಿಗೆ ಅಭಿಮಾನ. ಹಿಂದೆ ಇವರ ಮನೆಯಲ್ಲಿ ಕೆಲಸಕ್ಕಿದ್ದ ಗುಮಾಸ್ತ ಹರಿಹರಸ್ವಾಮಿ, ಮನೆಗೆಲಸದಾಕೆ ಕೆಂಚಿ ತಿಜೋರಿ ಒಡೆದು ದೋಚಿಕೊಂಡು ಹೋದ ಹಣದಿಂದ ಶ್ರೀಮಂತರಾಗಿ, ದುಃಸ್ಥಿತಿಗೆ ಬಂದ ತಮ್ಮ ಒಡೆಯರಿಗೆ ಸಹಾಯಮಾಡಲು ಮುಂದೆ ಬರುತ್ತಾರೆ. ಆದರೆ ಯಜಮಾನ ಶಾಂತವೀರ ಸತ್ತುಹೋಗುತ್ತಾನೆ. ಸಾಧ್ವಿಯಾದ ಮಹಾದೇವಿ ಸರ್ವಸಂಗ ಪರಿತ್ಯಾಗ ಮಾಡಿ ಸನ್ಯಾಸಿನಿಯಾಗಿ (?) ಹೊರಟುಹೋಗುತ್ತಾಳೆ. ಇದು ಕತೆ. ಸರಸ–ಸಲ್ಲಾಪ; ದುಃಖ; ತ್ಯಾಗ; ಪ್ರೇಮ; ಕೃತಜ್ಞತೆ; ದೈವಭಕ್ತಿ; ಪಾತಿವ್ರತ್ಯ: ಸಹನಶೀಲತೆ – ಹೀಗೆ ಸಮಸ್ತ ಸದ್ಗುಣಗಳನ್ನೂ ಪುರಾಣಿಕರು ಓದುಗರಿಗೆ ಅರೆದು ಕುಡಿಸಲು ಪ್ರತಿಜ್ಞೆ ಮಾಡಿಯೇ ಈ ಕಾದಂಬರಿಯನ್ನು ಬರೆದ ಹಾಗಿದೆ. ವಾಕರಿಕೆ ಬರುವಷ್ಟು ಭಾವಾತಿರೇಕದಿಂದ ತುಂಬಿದ, ಇಂಥ ಅಸಂಬದ್ಧವಾದ ಬರವಣಿಗೆಯನ್ನು ಓದಿದ ಮೇಲೆ, ಬಹುಸಂಖ್ಯೆಯ ಕಾದಂಬರಿಗಳನ್ನು ಬರೆದ ಪುರಾಣಿಕರ ಕಲೆ ಪರಿಣತವಾಗುವುದು ಯಾವ ಕಾಲಕ್ಕೆ ಎಂದೆನಿಸಿದರೆ ಆಶ್ಚರ್ಯವೇನಲ್ಲ.

ವಿದ್ವಾಂಸರಾದ ಎಸ್. ಕೆ. ರಾಮಚಂದ್ರರಾಯರು **ಸುಖ ಪ್ರಾರಬ್ಧ** ಕೃತಿಯ

ಮೂಲಕ ಕಾದಂಬರಿಕಾರರಾಗಲು ಹೊರಟಿದ್ದಾರೆ. ಆದರೆ ಅವರ ಉಪನ್ಯಾಸದ ಹವ್ಯಾಸ ಕಾದಂಬರಿಯನ್ನೇ ಕಬಳಿಸಿಬಿಟ್ಟಿದೆ. ಮುನ್ನುಡಿಯೆ ಒಂದು ಪುಟ್ಟ ಉಪನ್ಯಾಸದಂತಿದೆ; ಇಡೀ ಪುಸ್ತಕ ಕಾದಂಬರಿ ಅನ್ನುವುದಕ್ಕಿಂತ ಉಪನ್ಯಾಸ ಎಂದರೆ ಸಮಂಜಸವಾಗುತ್ತದೆ.

ಡಾ॥ ಕೃಷ್ಣಾನಂದ ಕಾಮತರ **ಭಗ್ನ ಸ್ವಪ್ನ**ದ ಉದ್ದೇಶ, ತರುಣರಾದ ಮೇಧಾವಿಗಳಾದ ವಿಜ್ಞಾನಿಗಳಿಗೆ ಈ ದೇಶದಲ್ಲಿ ಒದಗುವ ದುರ್ಗತಿಯನ್ನು ಕುರಿತದ್ದು; ಆದರೆ ಉದ್ದೇಶ ಹಿಂದಕ್ಕೆ ಬಿದ್ದುಹೋಗಿ ತರುಣ ವಿಜ್ಞಾನಿಯಾದ ಅರುಣ, ಆಶಾ ಎಂಬ ಸಹಪಾಠಿಯೊಂದಿಗೆ ನಡೆಯಿಸಿದ ಪ್ರಣಯ ಪ್ರಕರಣವೇ ಮುಂದಾಗಿದೆ. ಮುಂಬೈಯಂಥ ನಗರ ಪರಿಸರದಲ್ಲೂ. ಆಶಾಳ ತಂದೆ ತಾಯಂದಿರ ಸಾಂಪ್ರದಾಯಿಕ ಭಾವನೆಗಳ ಪರಿಣಾಮವಾಗಿ, ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈ ಸಂಗತಿಯನ್ನು ಕೇಳಿ ಅರುಣ ಆತ್ಮಹತ್ಯೆಗೆ ಮನಸ್ಸು ಮಾಡುತ್ತಾನೆ; ಆತ ಲಂಡನ್ನಿನಿಂದ ನ್ಯೂಯಾರ್ಕಿಗೆ ಅಟ್ಲಾಂಟಿಕ್ ಸಾಗರದ ಮೇಲೆ ಹೋಗುತ್ತಿದ್ದ ವಿಮಾನ ಅಪಘಾತಕ್ಕೀಡಾದಾಗ, ಆತನ ಆತ್ಮಹತ್ಯೆಯ ಉದ್ದೇಶ ತಾನಾಗಿಯೇ ನೆರವೇರುತ್ತದೆ. ಈ ಆಕಸ್ಮಿಕ ಮರಣದಿಂದ ಆತ ಹುತಾತ್ಮನಾದ ಮಹಾವಿಜ್ಞಾನಿಯೆಂದು ಆತನ ಮಿತ್ರರಿಂದ ಪ್ರಶಂಸಿಸಲ್ಪಡುತ್ತಾನೆ. ಆದರೆ ಆತ ವಿಜ್ಞಾನಿಯಾದದ್ದು ಹೇಗೆ, ಆತನ ಅಭ್ಯಾಸ–ಸಂಶೋಧನೆಗಳೇನು, ಈತ ಹೇಗೆ ಅತ್ಯಂತ ಪ್ರತಿಭಾವಂತನಾದ – ಎಂಬುದರ ವಿವರವೇನನ್ನೂ ಕೊಡದೆ, ಆತ ಸತ್ತಕೂಡಲೆ ಲೇಖಕರು ಆತ ಮಹಾವಿಜ್ಞಾನಿಯಾಗಿದ್ದ, ಅಂಥವನಿಗೆ ಈ ದೇಶದಲ್ಲಿ ಪುರಸ್ಕಾರ ದೊರೆಯಲಿಲ್ಲ ಎಂಬರ್ಥದ ಮಾತುಗಳನ್ನು ತಂದಿದ್ದಾರೆ. ವಿಮಾನಾಪಘಾತವಾದ ನಂತರ ಆತನ ದೇಹವನ್ನು ಮುಂಬೈಗೆ ತಂದು. ಆತ ಓದಿದ ಕಾಲೇಜಿನಲ್ಲಿ ಸಂದರ್ಶನಕ್ಕಿರಿಸಿ. ಗುಣಗಾನ ಮಾಡಿದ ನಂತರ. ನೂರಾರು ಜನ ಹಣವನ್ನು ಅವನ ಹೆಸರಿನಲ್ಲಿ ಕೂಡಿಸಿ ಒಂದು ಸಂಶೋಧನಾ ವ್ಯಾಸಂಗವೇತನಕ್ಕೆ ಏರ್ಪಾಡು ಮಾಡಿದರೆಂದು ಬರೆದ ಲೇಖಕರು ಅರುಣನನ್ನು 'ದಿಢೀರ್ ಹೀರೋ'ವನ್ನಾಗಿ ಮಾಡಿದ್ದಾರೆ. ಆದರೆ ಅಟ್ಲಾಂಟಿಕ್ ಮಹಾಸಾಗರದ ಮೇಲೆ ಹಾರುತಿದ್ದ ವಿಮಾನ ಸಿಡಿದು ಚೂರಾದ ಮೇಲೆ, ಅರುಣನ ಪಾರ್ಥಿವ ಶರೀರವನ್ನು ಮುಂಬೈಗೆ ಹೇಗೆ ತಂದು ಇರಿಸಲಾಯಿತು – ಎಂಬ ಸಂಗತಿ ಮಾತ್ರ ಅರ್ಥವಾಗುವುದಿಲ್ಲ. ಒಟ್ಟಿನಲ್ಲಿ ಈ ಕಾದಂಬರಿಯಲ್ಲಿ ಸ್ಪಷ್ಟವಾದ ಬೆಳವಣಿಗೆಯಿಲ್ಲ. ಲೇಖಕರ ಉದ್ದೇಶಕ್ಕೂ. ಕಾದಂಬರಿಯ ವಸ್ತುವಿನ್ಯಾಸಕ್ಕೂ ಸಂಬಂಧವಿಲ್ಲ.

**ಧರ್ಮಂ ಚರ** ಎಂಬುದು ಎನ್. ಪ್ರಭಾಕರ್ ಅವರು ಬರೆದ ಕಾದಂಬರಿ ಲೇಖಕರು ಇದು ಮೂವತ್ತೈದು ವರ್ಷಗಳ ಹಿಂದಿನ ಕಥಾವಸ್ತು ಎಂದು ತಮ್ಮ ಕೃತಿಯನ್ನು ಸಮರ್ಥಿಸಿಕೊಂಡರೂ, ಹಾಗಾದರೆ ಇಂದು ಈ ಸಮಸ್ಯೆಯನ್ನು ಕುರಿತು ಬರೆಯುವ ಅಗತ್ಯವೇನಿತ್ತು ಎಂಬ ಪ್ರಶ್ನೆಗೆ ಉತ್ತರವಿಲ್ಲ. ಸ್ಮಾರ್ತ ಬ್ರಾಹ್ಮಣ ಹುಡುಗ ಮಾಧ್ವ ಬ್ರಾಹ್ಮಣ ಹುಡುಗಿಯನ್ನು ಮದುವೆಯಾಗಲು ಒದಗಿದ ಸಾಂಪ್ರದಾಯಿಕವಾದ ನಿರ್ಬಂಧವೆ ಈ ಕಾದಂಬರಿಯ ವಸ್ತು. ಆದರೆ ಈ ಕೃತಿಯಲ್ಲಿ ಅವರಿಬ್ಬರ ಮದುವೆ ಅಂದಿನ ಸಂಪ್ರದಾಯವನ್ನೆದುರಿಸುವ ವೈಚಾರಿಕತೆಯಿಂದ ಸಾಧ್ಯವಾಯಿತೆಂಬ ಭಾವ

ನೆಗೆ ಅವಕಾಶವೇ ಇಲ್ಲ; ಆ ಸಮಾಜವನ್ನೆದುರಿಸಲಾರದೆ ಮಾಧ್ವ ಬ್ರಾಹ್ಮಣ ಹುಡುಗಿ ಸ್ಮಾರ್ತ ಬ್ರಾಹ್ಮಣ ಹುಡುಗನೊಂದಿಗೆ ಸಿಕಂದ್ರಾಬಾದಿಗೆ ಓಡಿಹೋದಳೆಂಬುದೆ ಈ ಕತೆಯ ದೌರ್ಬಲ್ಯವಾಗಿದೆ. ಆತನ ಪರಿಸರದಲ್ಲಿ ಈ ಮದುವೆಗೆ ಪರವಾದ ಅಭಿಪ್ರಾಯ ಮೂಡಲು ಕಾರಣ, ಸಾಹಿತಿಯಾದ ಈ ಹುಡುಗನಿಗೆ, ಈ ಹುಡುಗಿ ಸ್ಫೂರ್ತಿಯಾಗಿದ್ದಾಳೆ, ಅವಳಿಲ್ಲದೆ ಆತನ ಸಾಹಿತ್ಯಜೀವನವೇ ಬರಡಾದೀತು – ಎಂಬ ತಿಳಿವಳಿಕೆ. ಹೀಗಾಗಿ ಒಂದರಲ್ಲಿ ಇನ್ನೇನೋ ಒಂದನ್ನು ಬೆರೆಸಲು ಹೊರಟು, ಲೇಖಕರು ಏನನ್ನು ನಿಜವಾಗಿಯೂ ಸಮಸ್ಯೆ ಎಂದು ಹೇಳುತ್ತಿದ್ದಾರೆಂಬುದು ತಿಳಿಯುವುದಿಲ್ಲ. ಹಾಗೆ ನೋಡಿದರೆ ಇವರು ಎತ್ತಿಕೊಂಡ ಒಂದೇ ಜಾತಿಯೊಳಗಣ ಭಿನ್ನ ಒಳಪಂಗಡದ ಮದುವೆಯ ವಿಷಯ ಒಂದು ಸಮಸ್ಯೆಯೇ ಅಲ್ಲ, ಅದೂ ಇಂದಿನ ದಿನ – ಅನ್ನಿಸುತ್ತದೆ ಎಸ್. ಎಲ್. ಭೈರಪ್ಪನವರನ್ನು ಅನುಕರಿಸುವ ಪ್ರಯತ್ನ ಅಲ್ಲಲ್ಲಿ ಕಾಣುತ್ತದೆ. ದುರ್ಬಲವಾದ ಪಾತ್ರಗಳು; ಅಪಕ್ವವಾದ ವೈಚಾರಿಕತೆ; ಮತ್ತು ಅರ್ಥವನ್ನು ಕಳೆದುಕೊಂಡ ಸಮಸ್ಯೆ – ಇವುಗಳಿಂದ ಇದು ಕಾದಂಬರಿಯಾಗುವ ಪ್ರಯತ್ನದಲ್ಲಿ ಮುಗ್ಗರಿಸಿದೆ.

ದಿವಂಗತೆ ತ್ರಿವೇಣಿಯವರ 'ಬೆಕ್ಕಿನ ಕಣ್ಣು' ಕಾದಂಬರಿ ಬಂದ ಮೇಲೆ, ಅನೇಕರಿಗೆ ಮನೋವೈಜ್ಞಾನಿಕ ಕಾಬಂದರಿಗಳನ್ನು ಬರೆಯುವ ಹುಚ್ಚು ಹಿಡಿಯಿತು. ಅಂಥವರಲ್ಲಿ 'ಉಮಾಪ್ರಿಯ' ಅವರೂ ಒಬ್ಬರು. ಇವರು ತಮ್ಮ ಕಾದಂಬರಿ **ಕಾರ್ನೋಡ** ವನ್ನು 'ಸಾಮಾಜಿಕ ಮನೋವೈಜ್ಞಾನಿಕ ಕಾದಂಬರಿ' ಎಂದು ಕರೆದುಕೊಂಡಿದ್ದಾರೆ. ಹಿನ್ನುಡಿ ಬರೆದ ಸೂರ್ಯನಾರಾಯಣ ಚಡಗರು ಇದು ಓದಲೇಬೇಕಾದ ಕಾದಂಬರಿ ಎಂದು ಶಿಫಾರಸು ಮಾಡಿದ್ದಾರೆ. ಚಡಗರ ಮಾತನ್ನು ನಂಬಿ ಉಮಾಪ್ರಿಯರ 'ಕಾರ್ನೋಡ' ವನ್ನು ಹೊಕ್ಕರೆ ಓದುಗ ಕಕ್ಕಾಬಿಕ್ಕಿಯಾಗುವುದು ಖಂಡಿತ. ಮದುವೆಯಾದ ಗಂಡನೊಂದಿಗೆ ಹೊಂದಿಕೊಳ್ಳಲಾರದ ಹೆಣ್ಣಿನ ಮನಸ್ಸಿನ ವಿಶ್ಲೇಷಣೆಯೇ ಈ ಕಾದಂಬರಿಯ ವಸ್ತು. ಹಾಗೆ ಆಕೆ ಹೊಂದಿಕೊಳ್ಳದಿದ್ದುದಕ್ಕೆ ಕಾರಣ, ತಾನು ಮದುವೆಯಾದ ಗಂಡ ಸ್ವಜಾತಿಯವನಲ್ಲವೆಂಬ ಒಂದು ಕೊರಗು – ಎಂದು ಲೇಖಕರು ಕಲ್ಪಿಸಿರುವುದು ಹಾಸ್ಯಾಸ್ಪದವಾಗಿದೆ. ಈ ಕಾದಂಬರಿಯ ನಾಯಿಕೆಯನ್ನು ಡಾಕ್ಟರು ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಿದ ವಿಧಾನವನ್ನೋದಿದರೆ 'ಸ್ಟಂಟ್ ಪಿಕ್ಚರ್'ಗಳ ನೆನಪಾಗುತ್ತದೆ.

ಮೃಗ, ಪಕ್ಷಿ, ಪ್ರಾಣಿಗಳನ್ನು ಪಾತ್ರಗಳನ್ನಾಗಿ ಮಾಡಿ ಕತೆಹೇಳುವ ವಿಧಾನ ನಮ್ಮ ಪರಂಪರೆಗೆ ಹೊಸತಲ್ಲ. ಶೇಷನಾರಾಯಣರು ಇಂದು ಆ ಬಗೆಯ ಕೆಲವು ಪ್ರಯೋಗಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಈ ವರ್ಷ ಪ್ರಕಟವಾದ **ಮಹಾಮಲ್ಲರು** ಒಂದು: ಇದರ ವಸ್ತು ತಿಗಣೆಗಳ ಬದುಕನ್ನು ಕುರಿತದ್ದು. ತಿಗಣೆಗಳ ಮನಸ್ಸಿನ ಮೂಲಕ ಮಾನವರನ್ನು ವಿಡಂಬಿಸಲು ಹೊರಟಿದ್ದರೆ ಅಂಥ ಪ್ರಯತ್ನ ಒಳ್ಳೆಯ 'ವಿಡಂಬನ ಕೃತಿ' ಯನ್ನು ನಿರ್ಮಿಸುತ್ತಿತ್ತು. ಆದರೆ, ಈ ಒಂದು ಅಂಶದ ಮೇಲೆ ಲೇಖಕರು ಒತ್ತನ್ನು ಅಷ್ಟಾಗಿ ಕೊಡದೆ, ತಿಗಣೆಗಳು ಮನುಷ್ಯರಂತೆ, ಕೋಮಲೆ, ಕಲ್ಯಾಣಿ, ಸಿದ್ಧಲಿಂಗಯ್ಯ, ಮರಿಗೌಡ, ವಸಂತರಾಯ, ಮನೋನ್ಮಣಿ ಹೀಗೆ ಹೆಸರನ್ನಿರಿಸಿಕೊಂಡು ವ್ಯವಹರಿಸುತ್ತವೆನ್ನುವಂತೆ ಚಿತ್ರಿಸುವುದು; ತಿಗಣೆಗಳು ತಮ್ಮದೇ ಆದ ಕಾಲೇಜಿಗೆ ಹೋಗುತ್ತಿದ್ದ

ವೆಂಬುದು; ತಮ್ಮವರು ಮನುಷ್ಯರಿಂದ ಕೊಲೆಮಾಡಲ್ಪಟ್ಟಿದ್ದಾಗಿ ಸತ್ತಪರಿಗಾಗಿ ಸಂತಾಪ ಸಭೆ ಸೇರುತ್ತಿದ್ದರೆಂದು ಚಿತ್ರಿಸುವುದು, ಕೇವಲ ತಮಾಷೆಯಾಗುತ್ತದೆಯೇ ಹೊರತು ಆಳವಾದ ಯಾವ ಸ್ತರವೊಂದರ ಪರಿಚಯವನ್ನಾಗಲಿ. ಗಂಭೀರವಾದ ವಿಡಂಬನೆಯ ನ್ನಾಗಲಿ ಕೊಡುವುದಿಲ್ಲ. ಮಾನವಲೋಕದ ಸಮಸ್ತ ಭಾವನೆಗಳನ್ನು ಪ್ರಾಣಿಪಾತ್ರ ಗಳಿಗೆ ಆರೋಪಿಸಿದರೆ ಸಾಲದು; ಆಯಾ ಪಾತ್ರಗಳು ಯಾವ ಸ್ತರದ ಭಾವನೆಗಳನ್ನು ಹೊರಬಲ್ಲವೆಂಬುದನ್ನು ಲೇಖಕರು ಪರಿಭಾವಿಸಬೇಕು. ಅಂತೂ ಈ ಕೃತಿ ಕೇವಲ ಕುತೂಹಲಕರವಾದ ಪ್ರಯೋಗವಷ್ಟೆ ಆಗಿದೆ: ಮಹಾಮಲ್ಲರು ಎಂಬ ಹೆಸರಿನ ಔಚಿತ್ಯ ವೇನೋ ತಿಳಿಯದು.

**ತಾಯಿಯಿಲ್ಲದ ತವರು** ಮತ್ತು **ಬಾಡಿದ ಹೂ** – ಇವೆರಡೂ ಜಿ. ಬಿ. ಜಗ ದೀಶ್ ಅವರ ಕಾದಂಬರಿಗಳು. 'ಚಲನಚಿತ್ರವಾಗಿ ಬರಲಿರುವ ಕಾದಂಬರಿ' – ಎಂದೇ ಲೇಖಕರು ತಮ್ಮ ಕಾದಂಬರಿಯ ಮೇಲೆ ತಮ್ಮ ಹಂಬಲವನ್ನು ಲೇಖಿಸಿಕೊಂಡಿದ್ದಾರೆ. ಯಾವ ಆಳವಾದ ಅನುಭವವೂ ಇಲ್ಲದ ಅಪ್ರಬುದ್ಧ ಕೃತಿಗಳಿವು. ತ. ಪು. ವೆಂಕಟರಾವ್ ಅವರ **ಎಲ್ಲಾ ಸಾಹಿಗಳೇ** ಮತ್ತು **ರಾಧಾರಮಣ,** ಈ ಎರಡೂ ಲೇಖಕರಿಗೆ ಪುಟ ಗಳನ್ನು ಬೆಳೆಸುವ ತಂತ್ರ ಗೊತ್ತಿದೆ ಎಂಬುದಕ್ಕೆ ಮಾತ್ರ ಸಾಕ್ಷಿಯಾಗಿವೆ. ಮೊದಲನೆಯದು ಒಬ್ಬ ಅನಾಥ ಬಾಲಕ ಪಡಬಾರದ ಕಷ್ಟಗಳನ್ನು ಪಟ್ಟು, ಬೆಳೆದು ದೊಡ್ಡವನಾಗಿ, ಸಮಾಜದ ಅನ್ಯಾಯದ ವಿರುದ್ಧ ಬಂಡೆದ್ದು, ಮುಖಂಡರೊಬ್ಬರನ್ನು ಕೊಲೆಮಾಡಿ ಜೈಲುಸೇರಿದನೆಂಬ ಕಥಾವಸ್ತುವನ್ನುಳ್ಳದ್ದು; ಎರಡನೆಯದು, ರಾಧಾ ಮತ್ತು ರಮಣಿ ಎಂಬ ಹುಡುಗಿಯರ ಬದುಕನ್ನು ಕುರಿತದ್ದು. ರಮಣಿ ಕುರುಡಿ; ಆದರೆ ಬಹು ಒಳ್ಳೆ ಯವಳು ; ರಾಧಾ. ಶೃಂಗಾರವಿಲಾಸಗಳಿಗೆ ಬಲಿಬಿದ್ದು ಹಾಳಾಗುತ್ತಾಳೆ. ಕುರುಡಿ ಯಾದ ರಮಣಿ ಮಾತ್ರ ಸುಪ್ರಸಿದ್ಧ ಸಂಗೀತವಿದ್ವಾಂಸಳಾಗುತ್ತಾಳೆ. ಇಂಥ ಕತೆಯ ತೀರ್ಮಾನವೇನು? ಕಣ್ಣಿದ್ದವರಿಗಿಂತ. ಕಣ್ಣಿಲ್ಲದವರೇ ವಾಸಿ– ಎಂದೇನು? ಈ ಎರಡೂ ಕಾದಂಬರಿಗಳ ಘಟನೆ ಹಾಗೂ ಭಾಷೆ ವಿಲಕ್ಷಣವಾಗಿವೆ. ಶಿಷ್ಟಪಾತ್ರಗಳು ತಟಕ್ಕನೆ ಗ್ರಾಮ್ಯ ಭಾಷೆಯನ್ನಾಡುತ್ತವೆ. ಗ್ರಾಮ್ಯ ಪಾತ್ರಗಳು ಶಿಷ್ಟ ಭಾಷೆಯಲ್ಲಿ ಉಪನ್ಯಾಸ ಕೊಡುತ್ತವೆ. ವ್ಯಾಕರಣದ ದೋಷಗಳಂತೂ ಧಾರಾಳವಾಗಿವೆ.

ಎಸ್. ವಿ. ಶ್ರೀನಿವಾಸರಾಯರ **ಸುಣ್ಣವಿಲ್ಲದ ವೀಳ್ಯ** ಮತ್ತು **ಮಬ್ಬು ಮುಂಜಾವು** ಕಾದಂಬರಿಗಳು ಸವೆದ ಜಾಡಿನಲ್ಲಿ ಸಾಗಿದ ವ್ಯರ್ಥಪ್ರಯತ್ನಗಳು. ಮುಂಬೈ ನಗರ ದಲ್ಲಿ ಅನಾಥಬಾಲಕನ ಬದುಕಿನ ಹೋರಾಟವನ್ನು ಚಿತ್ರಿಸುವ 'ಸುಣ್ಣವಿಲ್ಲದ ವೀಳ್ಯ' ಮತ್ತು 'ಪ್ರವಾಸೋದ್ಯಮಕ್ಕೆ ಸಂಬಂಧಿಸಿದ ವ್ಯಕ್ತಿಯೊಬ್ಬನ ಅವಸರದ ಬದುಕನ್ನು ಚಿತ್ರಿಸುವ' 'ಮಬ್ಬು ಮುಂಜಾವು' – ಈ ಎರಡೂ ತರಾತುರಿಯಾಗಿ ಅನೇಕ ಅಸಹಜ ಘಟನೆಗಳನ್ನು ಹೆಣೆದುಕೊಂಡು ಹೋಗುತ್ತವೆ. ಬಿಡಿಬಿಡಿ ಸಂಗತಿಗಳನ್ನು ಒಂದುಗೂಡಿಸುವ ಸಂಘಟನಾ ಶಕ್ತಿಯ ಅಭಾವ, ತೀರ ಅತೃಪ್ತಿಕರವಾದ ಭಾಷೆ – ಇವು ಈ ಕೃತಿಗಳ ಸೋಲಿಗೆ ಕಾರಣ ವಾಗಿವೆ. 'ಇಂದಿರಾತನಯ' ಅವರ **ಚಿನ್ನದ ನವಿಲು** ದೊಂಬರ ಹುಡುಗಿ ಮತ್ತು ಹಾವಾ ಡಿಗರ ಹುಡುಗ – ಇವರ ಪ್ರಣಯಜೀವನವನ್ನು ಕುರಿತ ಕತೆ. ಅಪ್ಪ ಗಣೆ ಏರುವಾಗ

ಕಾಲುಜಾರಿ ಬಿದ್ದು ಸತ್ತನಂತರ ಮಗಳು ಚಿನ್ನಿ ಸರ್ಕಸ್ ಕಂಪನಿ ಮಾಲೀಕರ ಮನೆಸೇರು ತ್ತಾಳೆ. ಸರ್ಕಸ್ ಕಂಪನಿಯ ಸಂಗತಿ ಬಂದ ಕೂಡಲೆ ಕತೆ ಅಡ್ಡದಾರಿ ಹಿಡಿಯುತ್ತದೆ. ಕತೆ ಒಂದು ಬಗೆಯ 'ಅಪರಿಚಿತ' ವಸ್ತುವನ್ನು. ಅಘಟಿತ ಘಟನೆಗಳನ್ನು ಅವಲಂಬಿಸಿದೆ. ಆದರೆ ಕಾದಂಬರಿಯಾಗಿ ಏನನ್ನೂ ಸಾಧಿಸುವುದಿಲ್ಲ. ಪಾ. ಸಂಜೀವ ಅವರ **ತೊರೆ ಬತ್ತಲಿಲ್ಲ** ಬಡ ಉಪಾಧ್ಯಾಯರೊಬ್ಬರ ಕರುಣಕಥೆ. ಕಥೆಯಲ್ಲಿ ಏಕಸೂತ್ರತೆಯಿದೆ; ಪಾತ್ರ ಕಲ್ಪನೆ ಸ್ಫುಟವಾಗಿದೆ. ಒಂದು ಬಗೆಯ ಆದರ್ಶವನ್ನು ಎತ್ತಿ ಹಿಡಿಯುವ ಈ ಕೃತಿ ಮಹತ್ವದ್ದಲ್ಲವಾದರೂ ತಳ್ಳಿಹಾಕುವಂಥದ್ದಲ್ಲ.

'ರಘುಸುತ' ಅವರ **ಅವನ ಕನಸು** ಎಂಬ ಕಾದಂಬರಿ ಈ ವರ್ಷದ ಹಲವು ಅಪ್ರಬುದ್ಧ ಕೃತಿಗಳಲ್ಲಿ ಒಂದು. ಬೆಂಗಳೂರಲ್ಲೆ ಇದ್ದು, ಬಿ. ಎಸ್.ಸಿ. ವರೆಗೆ ಓದಿದ ರಮೇಶನಿಗೆ, ಲೌಕಿಕ ವ್ಯವಹಾರಕ್ಕೆ ಸಂಬಂಧಪಟ್ಟ ವಿಷಯ ಏನೇನೂ ತಿಳಿಯದು. ಒಮ್ಮೆ ಇಂಟರ್‌ವ್ಯೂಗೆ ಬಂದಾಗ ಬಸ್ಸು ಸಿಕ್ಕದೆ, ನಡೆದೇ ಹೋಗಿ ತಡಮಾಡಿ ಕೆಲಸ ದೊರೆಯುವ ಅವಕಾಶ ಕಳೆದುಕೊಂಡು, ಕಡೆಗೆ ಹೋಟಲ್ ಒಂದರಲ್ಲಿ ಮಾಣಿಯಾಗಿ ಸೇರಿದಾಗ. ಒಂದೆರಡು ವಾರಗಳಲ್ಲೆ ಹೋಟಲು ಮಾಲೀಕ ರಾತ್ರೋರಾತ್ರಿ ನಾಪತ್ತೆಯಾದ ಎಂಬಲ್ಲಿಗೆ ಕಾದಂಬರಿ ಮುಗಿಯುತ್ತದೆ. ಈ ನಡುವೆ ಅವನು ಧನಿಕರ ಮನೆಯ ಹುಡುಗಿಯರಿಗೆ ಟ್ಯೂಟರ್ ಆಗುವುದು; ತತ್ಪರಿಣಾಮವಾಗಿ ಇಂಥ ಕಾದಂಬರಿಗಳಲ್ಲಿ ಇಂಥ ನಾಯಕನಿಗೆ ಒದಗುವ ಸೆಳೆತ ಇತ್ಯಾದಿಗಳು – ಯಥಾಪ್ರಕಾರ. ಈ ಕಾದಂಬರಿಯನ್ನು ಲೇಖಕರು 'ಸಮಕಾಲೀನ ಯುವಜನಾಂಗದ ಆಸೆ, ಆಶೋತ್ತರ, ಅವರು ಎದುರಿಸಬೇಕಾದ ಕಷ್ಟಗಳನ್ನು ರಮೇಶನ ಪಾತ್ರದ ಮೂಲಕ ಚಿತ್ರಿಸಿದ್ದೇನೆ' -- ಎನ್ನುತ್ತಾರೆ. ಆದರೆ ಇವು ಯುವಜನಾಂಗದ ಸಮಸ್ಯೆಗಳೆಂದು ಕರೆಯುವುದಾದರೂ ಹೇಗೆ?

ಸ. ನಾರಾಯಣ ಅವರ **ಸ್ನೇಹಲತೆ** ಒಂದು ನೀರಸ ಕಾದಂಬರಿ. "ಒಳಜೀವನವೆನ್ನುವುದೇ ಇಲ್ಲದೆ. ಯೋಚನಾ ಶಕ್ತಿ ಸೊನ್ನೆಯಾಗಿರುವ ನಿರ್ಜೀವ ಪಾತ್ರಗಳಿಂದ ತುಂಬಿರುವ ಕಾದಂಬರಿ. ಇಪ್ಪತ್ತು ಇಪ್ಪತ್ತೈದು ಪಾತ್ರಗಳಿರುವ 168 ಪುಟದ ಈ ಕಾದಂಬರಿಯಲ್ಲಿ ಒಂದೇ ಒಂದು ಬಾರಿಯಾದರೂ. ಯಾವ ಪಾತ್ರವೂ ಯೋಚನೆ ಮಾಡಿತು ಎಂದು ಹೇಳುವ ಅಗತ್ಯವೇ ಕಾಣುವುದಿಲ್ಲ. ...ಮಾನಸಿಕ ಜೀವನವೇ ಇಲ್ಲದ ರಟ್ಟಿನ ಗೊಂಬೆಗಳು – ಪಾತ್ರಗಳು. ಘಟನೆಗಳು, [ಇದು] ಓದುಗರ ಬುದ್ಧಿಗಾಗಲಿ, ಅಂತಃಕರಣಕ್ಕಾಗಲಿ ತೊಂದರೆ ಕೊಡದ ಕೃತಿ" – ಎಂದು ಎಲ್. ಎಸ್. ಶೇಷಗಿರಿರಾಯರು ಪತ್ರಿಕೆಯೊಂದರಲ್ಲಿ ಈ ಕೃತಿಯನ್ನು ವಿಮರ್ಶಿಸಿರುವುದು ಸಮಂಜಸವಾಗಿದೆ.

ಚಂದ್ರಕಾಂತ ಮಲ್ಯರ **ತಂದಕ್ಕಿ ತೀರಿತು** ತೀರ ಸಾಧಾರಣವಾದ ಒಂದು ಕಾದಂಬರಿ. ಮುಂಬೈ ಕಛೇರಿಯಲ್ಲಿ ಗುಮಾಸ್ತನಾದ ಸುಧಾಕರ, ತೀರಾ ನಿರ್ಬಲವಾದ ಮುದುಕಿಯೊಬ್ಬಳ ಬಗ್ಗೆ ಅನುಕಂಪ ತೋರಿ ಅವಳ ಕಷ್ಟನಷ್ಟಗಳನ್ನು ನಿವಾರಿಸಲು ಮಾಡಿದ ಪ್ರಯತ್ನವೆ ಇದರ ವಸ್ತು. ಇದೊಂದು ಬಹಳ ಅಗ್ಗವಾಗಿ ದೊರೆಯುವ, ಭಾವಾತಿರೇಕಕ್ಕೆ ಸಮೃದ್ಧವಾದ ಅವಕಾಶ ನೀಡುವ ವಸ್ತು. ಕಾದಂಬರಿಯ ಮೊದಲ ಪುಟದಲ್ಲಿ. ಕಥಾನಾಯಕನ ಹೆಸರು 'ಸುಧಾಕರ'ನೆಂದಿದ್ದದ್ದು. 'ಸುಧಾರಕ' ಎಂದು ತಪ್ಪಾಗಿ ಅಚ್ಚಾಗಿದೆ. ಆದರೆ. ಈ ನಾಯಕ 'ಸುಧಾರಕ'ನ ಎಲ್ಲ ಲಕ್ಷಣಗಳನ್ನು ಕಟ್ಟಿ

ಕೊಂಡಿದ್ದಾನೆ. ಸುಧಾರಕತನದ ಎಲ್ಲ ಆದರ್ಶಮಯತೆ. ಭಾವಾತಿರೇಕಗಳೂ ಈ ಕೃತಿಯಲ್ಲಿ ತುಂಬಿಕೊಂಡಿವೆ.

'ಭಾರತೀಸುತ' ಅವರ **ಇಳಿದು ಬಾ ತಾಯಿ**: ಹಲವು ವರ್ಷಗಳು ವಿದೇಶದಲ್ಲಿದ್ದು ತನ್ನ ಊರಿಗೆ ಹೊರತಾಗಿದ್ದ ಕಾದಂಬರಿಯ ನಾಯಕ ರಾಜೀವ, ತನ್ನ ಊರಿಗೆ ಹಿಂದಿರುಗಿದಾಗ. ತನ್ನ ಪರಿಸರದ ಸಾಮಾಜಿಕ, ರಾಜಕೀಯ ಜೀವನದ ಹೊಲಸನ್ನು ಕಂಡು ತೋರುವ ಪ್ರತಿಕ್ರಿಯಾತ್ಮಕವಾದ ವೈಚಾರಿಕತೆಯೆ ಈ ಕಾದಂಬರಿಯ ವಸ್ತು. ಈ ಕೃತಿಯಲ್ಲಿ ಸಮಕಾಲೀನ ಸಮಾಜದ ಕೇಂದ್ರಪಾತ್ರವಾಗಿ, ಅಲ್ಲಿ ಕಾಣುವ ಹಲವು ಶಕ್ತಿಗಳ ಪ್ರಭಾವದಿಂದ, ಜೀವನವಿಧಾನದಲ್ಲಿ, ವ್ಯಕ್ತಿಜೀವನದಲ್ಲಿ ಉಂಟಾದ ಘರ್ಷಣೆಗಳನ್ನು, ತುಮುಲಗಳನ್ನು ಲೇಖಕರು ಸ್ಫುಟವಾಗಿ ಚಿತ್ರಿಸಿದಾರೆ. ಆದರೆ ಪ್ರಚಲಿತ ಸಮಸ್ಯೆಗಳನ್ನು, ತತ್ವಗಳನ್ನು ಕುರಿತ ಎಲ್ಲ ವಿಷಯುಗಳ ಚರ್ಚೆಯನ್ನು ಕಾದಂಬರಿಯಲ್ಲಿ ತುಂಬಬೇಕು ಎನ್ನುವ ವೈಚಾರಿಕ ಹಂಬಲದಿಂದಾಗಿ, ಕಾದಂಬರಿ ಅಲ್ಲಲ್ಲಿ ಜೋಲಿ ಹೊಡೆಯುತ್ತದೆ. ಆದರೂ ಈ ವರ್ಷದ ಕೃತಿಗಳಲ್ಲಿ, ಓದಿದರೆ ಒಂದಷ್ಟು ತೃಪ್ತಿನೀಡುವ ಕೆಲವೆ ಕಾದಂಬರಿಗಳಲ್ಲಿ ಇದು ಒಂದು ಎಂದು ಧಾರಾಳವಾಗಿ ಹೇಳಬಹುದು. 'ಭಾರತೀಸುತ' ಅವರ ಇನ್ನೊಂದು ಕಾದಂಬರಿ **ವಕ್ರರೇಖೆ.** ಇದರಲ್ಲಿ ಲೇಖಕರು ಹವ್ಯಕ ಜನಾಂಗದ ಜೀವನದ ಯಥಾವತ್ತಾದ ಚಿತ್ರವನ್ನು ಕೊಡಲು ಪ್ರಯತ್ನಿಸಿದ್ದಾರೆ. ಬಾಲ್ಯವಿವಾಹ ಪದ್ಧತಿಯ ಓರೆ–ಕೋರೆ, ಕಷ್ಟನಷ್ಟಗಳನ್ನು ಕುರಿತದ್ದು ಇದರ ವಸ್ತು. ಕಾಲದ ಹಾಗೂ ಸಮಸ್ಯೆಯ ದೃಷ್ಟಿಯಿಂದ ಈ ವಸ್ತು ಒಂದು ಶತಮಾನದಷ್ಟು ಹಳೆಯದು. ಹೀಗಾಗಿ ಸಮಕಾಲೀನವಾದ ಸಂವಾದಿತ್ವವನ್ನು ಇದು ಗಳಿಸಿಕೊಳ್ಳುವುದು ಕಷ್ಟ. ಹವ್ಯಕರ ಆಡುನುಡಿಯನ್ನು ಬಳಸಿಕೊಳ್ಳುವುದರಲ್ಲಿ ಲೇಖಕರು ತಮ್ಮ ಪರಿಣತಿಯನ್ನು ಪ್ರಕಟಿಸಿದರೂ. ಅನವಶ್ಯಕವಾದ ಕಾವ್ಯಮಯ ಶೈಲಿಯಿಂದಾಗಿ, ವಾಸ್ತವ ಜೀವನವನ್ನು ಚಿತ್ರಿಸುವ ಕೃತಿಯ ಮೂಲೋದ್ದೇಶಕ್ಕೇ ಧಕ್ಕೆಯೊದಗಿದೆ.

'ಚಿರಂತನ' ಅವರ **ಏಳನೆಯ ಹೆಡೆ** ಇನ್ನೊಂದು ಪ್ರಾದೇಶಿಕ ಕಾದಂಬರಿ. ಲೇಖಕರು ಮುನ್ನುಡಿಯಲ್ಲಿ ತಮ್ಮ ಕಾದಂಬರಿಯಲ್ಲಿ ಕಾವ್ಯತೀಕ್ಷ್ಣತೆಯಿಲ್ಲದಿರಬಹುದು ಎಂದು ಅಳುಕಿನಿಂದಲೇ ಹೇಳಿಕೊಂಡಿದ್ದಾರೆ. ಆದರೆ ಅವರ ಅಳುಕು ನಿರಾಧಾರವಾದದ್ದು; ಕಾದಂಬರಿಕಾರರು ಒಳ್ಳೆಯ ಕಾದಂಬರಿಯನ್ನು ಬರೆಯುುವ ಭರವಸೆಯನ್ನು ಹುಟ್ಟಿಸುವವರು ಅನ್ನಿಸುತ್ತದೆ, 'ಏಳನೆಯ ಹೆಡೆ'ಯನ್ನು ಓದಿದ ಮೇಲೆ. ಬರೆವಣಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾದೇಶಿಕ ಸತ್ವವನ್ನು ತಕ್ಕಮಟ್ಟಿಗೆ ಚೆನ್ನಾಗಿಯೇ ಕೊಡುತ್ತದೆ. ಮದುವೆ; ಜಾತ್ರೆ; ಹಬ್ಬ; ನಂಬಿಕೆಗಳು; ಜೀವನಕ್ರಮ; ನಿಸರ್ಗ – ಈ ಎಲ್ಲವನ್ನು ಸಶಕ್ತವಾಗಿ 'ಚಿರಂತನ' ಅವರ ಲೇಖನಿ ಸೆರೆಹಿಡಿಯಬಲ್ಲದು. ಆದರೆ ಈ ಒಂದೊಂದು ಸಂಗತಿಯು ಸಚಿತ್ರವಾದ ವಿವರಣೆ. ಕಾದಂಬರಿಯ ಒಟ್ಟು ವಿನ್ಯಾಸದ ಮೇಲೆ ವಿಶೇಷ ಪರಿಣಾಮ ಬೀರಬಹುದೆಂಬ ನಿರೀಕ್ಷೆಯನ್ನು ಹುಟ್ಟಿಸುತ್ತಹೋದರೂ. ಮರುಕ್ಷಣವೆ ಅದು ಒಟ್ಟು ಕಟ್ಟಡದೊಂದಿಗೆ ಸಾವಯುವ ಸಂಬಂಧವನ್ನು ಪಡೆಯದೆ ಅಷ್ಟಷ್ಟಕ್ಕೆ ನಿಂತುಹೋಗುತ್ತದೆ. 'ಏಳುಹೆಡೆಯ' ಸರ್ಪದ ಸಂಕೇತ ಮಾತ್ರ ಸಫಲವಾಗಿಲ್ಲ. ಬಿಡಿಬಿಡಿಯಾದ ಸಂಗತಿಗಳಿಗೆ. ಒಂದು ಸಾಂಗತ್ಯವನ್ನು ಲೇಖಕರು ಸಾಧಿಸಿದ್ದ ಪಕ್ಷದಲ್ಲಿ, ಇದೊಂದು

ಉತ್ತಮ ಕಾದಂಬರಿಯಾಗಬಹುದಾಗಿತ್ತು. ಆದರೂ ಬರವಣಿಗೆ ಆಕರ್ಷಕವಾಗಿದೆ; ಭರವಸೆ ಹುಟ್ಟಿಸುತ್ತದೆ – ಲೇಖಕರ ಮುಂದಿನ ಪ್ರಯತ್ನಗಳ ಬಗ್ಗೆ.

ಸೂರ್ಯನಾರಾಯಣ ಚಡಗ ಅವರ **ಮನೆತನ** ಈ ವರ್ಷ ಪ್ರಕಟವಾದ ಒಳ್ಳೆಯ ಕಾದಂಬರಿಗಳಲ್ಲಿ ಒಂದು. ಈ ಕಾದಂಬರಿಗೆ ಚಡಗರು ಕೊಟ್ಟ ಹೆಸರು ಮತ್ತು ಹೊರ ಹೊದಿಕೆಯ ಚಿತ್ರ – ಎರಡೂ ಒಳತಿರುಳಿಗೆ ಹೊಂದಿಕೊಳ್ಳುವುದಿಲ್ಲ. ದಕ್ಷಿಣಕನ್ನಡ ಜಿಲ್ಲೆಯ, ಸುಮಾರು ನಾಲ್ವತ್ತು ವರ್ಷಗಳ ಹಿಂದಿನ ಜೀವನದ ಯಥಾವತ್ತಾದ ಚಿತ್ರಣ ಇಲ್ಲಿದೆ. ಕುಂಬಾರಗುಂಡಿ ಎಂಬ ಗ್ರಾಮ ತನ್ನೆಲ್ಲ ವ್ಯಕ್ತಿಗಳ ನಡವಳಿಕೆಗಳಿಂದ, ಗತಜೀವನ ಮೌಲ್ಯಗಳ ಒಂದು ಸಂಕೇತವಾಗುತ್ತದೆ. ಒಂದೇ ಮನೆತನದ ಇಬ್ಬರು ಅಣ್ಣ–ತಮ್ಮಂದಿರ ವಿಭಿನ್ನ ಸ್ವಭಾವಗಳು ವಿಶಿಷ್ಟವಾಗಿ ಈ ಕಾದಂಬರಿಯಲ್ಲಿ ಒಡಮೂಡಿವೆ. ಈ ಕಾದಂಬರಿಯ ಮುಖ್ಯ ಪಾತ್ರವಾದ ಜನ್ನಯ್ಯ, ಪೌರಾಣಿಕ ಯುಗದವನೇನೋ ಎಂಬಂತೆ, ಆತ ಎತ್ತಿಹಿಡಿಯುವ ಮೌಲ್ಯಗಳಿಂದಾಗಿ ತೋರಿದರೂ, ಅವನು ಅಥವಾ ಅಂಥವರು ಇದ್ದದ್ದು ಅಥವಾ ಇರುವುದು ಅಸಂಭಾವ್ಯವೆಂದೇನೂ ಅನ್ನಿಸುವುದಿಲ್ಲ. ನಾಗರಿಕತೆಯ ದಾಳಿಗೆ ಸಿಕ್ಕ ಹಳೆಯ ಕಾಲದ ಗ್ರಾಮವೊಂದು, ಅನೇಕ ವ್ಯಕ್ತಿಗಳು ಬದಲಾಗುವ ಪರಿಸರದಲ್ಲಿ ಬದುಕಿದ ಪರಿಯನ್ನು ಜೀವಂತವಾಗಿ ನಮ್ಮೆದುರಿಗೆ ನಿಲ್ಲುವಂತೆ ಮಾಡುವ ಕಲೆಗಾರಿಕೆ ಚಡಗರಲ್ಲಿದೆ. ನಾಲ್ಕುನೂರು ಪುಟಕ್ಕೂ ಮೀರಿದ ಈ ಕಾದಂಬರಿ, ಸುಸಂಬದ್ಧವಾದ ಘಟನೆಗಳಿಂದ, ಗಟ್ಟಿಯಾದ ಕಥಾವಸ್ತುವಿನಿಂದ, ಎದ್ದುನಿಲ್ಲುವ ಹಲವು ಪಾತ್ರಗಳಿಂದ, ಸಲೀಸಾಗಿ ಓದಿಸಿಕೊಂಡು ಹೋಗುತ್ತದೆ.

ರಂ. ಶಾ. ಅವರ **ಸಾವಿತ್ರಿ** ಕೇವಲ 195 ಪುಟಗಳ ಕಿರು ಕಾದಂಬರಿಯಾದರೂ, ಈ ವರ್ಷದ ಸತ್ವಶಾಲಿ ಬರೆವಣಿಗೆಗಳಲ್ಲಿ ಒಂದು ಅನ್ನಿಸುತ್ತದೆ. ಉತ್ತರ ಕರ್ನಾಟಕದ ಒಂದು ಗ್ರಾಮದ ಪರಿಸರದಲ್ಲಿ ನಡೆದ ವ್ಯಕ್ತಿ ವ್ಯಕ್ತಿಗಳ ಅಥವಾ ಇಬ್ಬಣಗಳ ಘರ್ಷಣೆಯೆ ಇದರ ವಸ್ತು. ಊರ ಗೌಡ ಬಾಳಣ್ಣನಿಗೂ, ಜೈನರ ಬಾಳಗೋಂಡ ಚೌಗುಲೆಯವರಿಗೂ ಅಷ್ಟಕ್ಕಷ್ಟೆ. ಗೌಡರು ಆ ಊರಿನ ಮಾಸ್ತರಾಗಿ ಬಂದ ಜೈನರ ಹುಡುಗ ಆದಿನಾಥನಿಗೆ ತನ್ನ ಮನೆಯಲ್ಲಿ ಆಶ್ರಯ ಕೊಟ್ಟು, ಒಂದು ದಿನ ಚೌಗುಲೆಯವರು ಊರಲ್ಲಿಲ್ಲದಾಗ, ಸುಳ್ಳು ನಾಟಕ ಆಡಿ, ಚೌಗುಲೆಯವರ ಮಗಳು ಸಾವಿತ್ರಿಯನ್ನು ದೂರದೂರಿಗೆ ಒಯ್ದು ಆದಿನಾಥನಿಗೆ ಮದುವೆ ಮಾಡಿಸಿ, ಚೌಗುಲೆಯವರ ಮೂಗುಮುರಿಯುವ ಪ್ರಯತ್ನ ಮಾಡುತ್ತಾರೆ. ಇಬ್ಬರು ಹಳ್ಳಿಯ ಮುಖಂಡರ ಜಟಾಪಟಿಯ ನಡುವೆ, ಆಕಸ್ಮಿಕವಾಗಿ ನಡೆದ ಈ ಮದುವೆಯಿಂದ, ಆದಿನಾಥ ಹಾಗೂ ಸಾವಿತ್ರಿಯರ ಪ್ರೀತಿ ಪಕ್ವವಾಗುತ್ತ ಆಶ್ಚರ್ಯಕರವಾದ ನಿಲುವಿಗೇರುತ್ತದೆ. ಈ ನಡುವೆ ಚೌಗುಲೆಯವರ ಹಟದಿಂದಾಗಿ, ಅಪ್ರಾಪ್ತವಯಸ್ಕಳಾದ ತಮ್ಮ ಮಗಳನ್ನು ಕದ್ದು ಮದುವೆಯಾದನೆಂಬ ಆಪಾದನೆಗೆ ಗುರಿಯಾಗಿ ಆದಿನಾಥ ಜೈಲು ಸೇರುತ್ತಾನೆ. ಸಾವಿತ್ರಿ–ಆದಿನಾಥರ ಮದುವೆ ನ್ಯಾಯಸಮ್ಮತವಲ್ಲವೆಂದು ಕೋರ್ಟು ತೀರ್ಪು ಕೊಡುತ್ತದೆ. ಈ ಪರಿಸ್ಥಿತಿಯಲ್ಲಿ ಒಂದು ಮಗುವಿನ ತಾಯಿಯಾದ ಸಾವಿತ್ರಿ, ತಾನು ಇತ್ತ ಕುಮಾರಿಯೂ ಅಲ್ಲ, ಅತ್ತ ವಿವಾಹಿತೆಯೂ ಅಲ್ಲ – ಎಂಬ ಸಂದಿಗ್ಧಕ್ಕೆ ಸಿಗುತ್ತಾಳೆ. ಪ್ರೀತಿಯೆಂದರೇನೆಂದು ಅರಿಯದ ಕಾಲದಲ್ಲಿ, ಗೌಡನ ತಂತ್ರದಿಂದ, ಆದಿನಾಥ

ನನ್ನು ಮದುವೆಯಾದ ಸಾವಿತ್ರಿಯ ಪ್ರೇಮ. ದಿನದಿಂದ ದಿನಕ್ಕೆ ಈ ಗೊಂದಲಗಳ ನಡುವೆಯೂ ನಿಶ್ಚಲವಾಗಿ ನಿಂತು ಹರಳುಗೊಂಡು ಮತ್ತೆ ತನ್ನ ಪ್ರೀತಿಯ ಗಂಡನನ್ನು ಸೇರುತ್ತಾಳೆ. ಕೇವಲ 195 ಪುಟಗಳ ಈ ಕಾದಂಬರಿ ಘಟನಾಪರಂಪರೆಗಳ ಪ್ರವಾಹದಿಂದ, ತುಂಬ ಕ್ರಿಯಾತ್ಮಕವಾಗಿದೆ. ಇಡೀ ಒಂದು ಗ್ರಾಮದ ಬದುಕು ತನ್ನ ನೆಳಲು–ಬೆಳಕುಗಳೊಂದಿಗೆ ಯಥಾವತ್ತಾಗಿ, ಸಶಕ್ತವಾಗಿ ಚಿತ್ರಿತವಾಗಿದೆ. ಬನಿಯಾದ ಬರವಣಿಗೆ; ಸ್ಫುಟವಾದ ಪಾತ್ರಕಲ್ಪನೆ: ಜೀವಂತವಾದ. ಪ್ರಾದೇಶಿಕತೆಯ ಸೊಗಡಿನಿಂದ ತುಳುಕುವ ಭಾಷೆ: ಒಂದರ ಹಿಂದೊಂದು ನೂಕಿಕೊಂಡು ಮೂಡುವ ಘಟನೆಗಳು: ಒಟ್ಟಂದದ ಪರಿಣಾಮ – ಇವುಗಳಿಂದಾಗಿ ಇದು ತುಂಬ ಒಳ್ಳೆಯ ಕಾದಂಬರಿಯಾಗಿದೆ. ಇಲ್ಲಿನ ಪಾತ್ರಗಳ ನಡವಳಿಕೆಯನ್ನು ನೋಡಿದರೆ. ಲೇಖಕರು ಯಾರನ್ನೂ ಉದ್ದೇಶಪೂರ್ವಕವಾಗಿ ಬೆಳ್ಳಗೊ ಕಪ್ಪಗೊ ಚಿತ್ರಿಸಬೇಕೆಂದು ಹೊರಟಿಲ್ಲ. ಬದುಕಿನಲ್ಲಿ ಜನ ಇರುವುದೇ ಹಾಗೆ: ಅಥವಾ ಬದುಕು ಇರುವುದೆ ಹಾಗೆ. ಈ ಬರೆವಣಿಗೆಯ ವಸ್ತುನಿಷ್ಠತೆ ಆಶ್ಚರ್ಯಕರವಾಗಿದೆ.

ನಿರಂಜನ ಅವರ **ಸ್ಮರಣೆಯೊಂದೆ ಸಾಲದೆ** ಕಲಾವಿದನೊಬ್ಬನ ಕಳೆದ ಬದುಕನ್ನು ಅವನ ಹೆಂಡತಿ ಮೀನಾಕ್ಷಿ, ಮಕ್ಕಳಿಗೆ ದಿನವೂ ಸ್ವಲ್ಪ ಸ್ವಲ್ಪವಾಗಿ ಕತೆಮಾಡಿ ಹೇಳುವ ಮತ್ತು ನೆನಪುಗಳ ಮೂಲಕ ತುಂಬಿಕೊಡುವ ಹೊಸ ತಂತ್ರದಲ್ಲಿ ನಿರೂಪಿತವಾಗಿದೆ. ಮಕ್ಕಳಿಗೆ ತಮ್ಮ ತಂದೆ ಹೇಗಿದ್ದರೆಂಬುದನ್ನು ಕೇಳುವ ಕುತೂಹಲ ಸಹಜವಾದದ್ದು; ಮೀನಾಕ್ಷಿ ತನ್ನ ಗಂಡ ಶಂಕರನ ಬದುಕನ್ನು ಕತೆಯೆಂಬಂತೆ ಮಕ್ಕಳಿಗೆ ಹೇಳುವುದೂ ಸರಿಯೆ. ಆದರೆ ಕತೆ ಕೇಳುವ ಮಕ್ಕಳಿಗೆ, ಕೇವಲ ಒಂದು ನಿಮಿಷದಷ್ಟು, ಕೆಲವು ಸಲ ಅರ್ಧ ನಿಮಿಷದಷ್ಟು ದಿನಾ ರಾತ್ರಿ ಹೇಳುವುದಾಗಲಿ, ಕತೆಯಲ್ಲಿ ತುಂಬ ಕುತೂಹಲದ ಮೊನೆಗೆ ತಂದು ತಟಕ್ಕನೆ ನಿಲ್ಲಿಸುವುದಾಗಲಿ ತಂತ್ರದ ದೃಷ್ಟಿಯಿಂದ ಅಗತ್ಯವಾದರೂ. ಓದುಗರಿಗೆ ಆ ಮಕ್ಕಳ ತಾಳ್ಮೆ ನಿಜಕ್ಕೂ ದೊಡ್ಡದು ಅನ್ನಿಸುತ್ತದೆ. ಖಂಡಿತವಾಗಿ ಯಾವ ಮಕ್ಕಳೂ ಹೀಗೆ ಕತೆ ಕೇಳಲಾರರು. ಕತೆ ಹೇಳುವ ತಂತ್ರಕ್ಕಾಗಿ ಮಕ್ಕಳು ಕೇಳಿದರೆಂಬಂತೆ ಕತೆ ಹೇಳಲಾಗಿದೆಯೆ ಹೊರತು. ಮಕ್ಕಳಿಗಾಗಿ ತಾಯಿ ಹೇಳಿದಂತೆ ತೋರುವುದಿಲ್ಲ. ಇದೊಂದು ತಾಂತ್ರಿಕ ದೋಷವನ್ನು ಬಿಟ್ಟರೆ ಈ ಕಾದಂಬರಿ. ಕಲಾವಿದನ ಕಳೆದ ಬದುಕನ್ನು ಒಂದು ಬಗೆಯ ಅಸಹಾಯಕ–ವಿಷಾದ ಹಿನ್ನೆಲೆಯಲ್ಲಿ. ಹಳೆ ನೆನಪುಗಳ ಎಳೆಗಳನ್ನು. ಕಲಾವಿದನ ಹೆಂಡತಿ ಮಕ್ಕಳ ವರ್ತಮಾನದ ಬದುಕಿನೊಂದಿಗೆ ಹಾಸುಹೊಕ್ಕಾಗಿ ನೆಯ್ಯುವುದರಲ್ಲಿ ಸಫಲವಾಗಿದೆ. ಒಳ್ಳೆಯ ಕಥಾವಸ್ತು: ಕರುಣಾಪೂರ್ಣವಾದ ಸನ್ನಿವೇಶಗಳು: ಸೊಗಸಾದ ಶೈಲಿ. ಈ ವರ್ಷದ ಕಾದಂಬರಿಗಳಲ್ಲಿ ಓದಿದರೆ ಒಂದು ಬಗೆಯ ನೆಮ್ಮದಿಯನ್ನು ಕೊಡುವ ಕೃತಿ ಇದು.

ವಿಶುಕುಮಾರ್ ಅವರ **ಕರಾವಳಿ** ಮತ್ತು **ಮದರ್** ಎರಡೂ ಈ ವರ್ಷದ ಗಮನಾರ್ಹ ಕೃತಿಗಳು. 'ಕರಾವಳಿ'ಯನ್ನು ಬರೆದದ್ದಕ್ಕಾಗಿ ವಿಶುಕುಮಾರ್ ಅವರು ಅಭಿನಂದನೀಯರು. ಈ ಮೆಚ್ಚುಗೆಗೆ ಕಾರಣ 'ಕರಾವಳಿ' ಈ ವರ್ಷದ ಅತ್ಯುತ್ತಮ ಕಾದಂಬರಿ ಎಂಬುದರಿಂದಲ್ಲ. ಹಾಗೆ ನೋಡಿದರೆ ಇದು ಅತ್ಯುತ್ತಮ ಕಾದಂಬರಿಯೂ ಅಲ್ಲ.

ಮೊಟ್ಟಮೊದಲ ಬಾರಿಗೆ ಕಡಲತೀರದ ಮೊಗೇರರ ಬದುಕನ್ನು ವಸ್ತುವನ್ನಾಗಿ ತೆಗೆದು ಕೊಂಡು. ಅದನ್ನು ತಕ್ಕಮಟ್ಟಿಗೆ ಯಶಸ್ವಿಯಾಗಿ ಚಿತ್ರಿಸಿದ್ದಾರೆಂಬುದೆ ಈ ಕಾದಂಬರಿಯ ವಿಶೇಷತೆ. ಇದು ಮಲೆಯಾಳಿ ಕಾದಂಬರಿಯಾದ 'ಚೆಮ್ಮೀನ್'ನಂತೆ ಕಡಲನ್ನು ಒಂದು ಪಾತ್ರ ಅಥವಾ ಸಂಕೇತವನ್ನಾಗಿಸುವ ಗೊಡವೆಗೆ ಹೋಗಿಲ್ಲ: ಕಡಲು ಇಲ್ಲಿ ಇದೆ–ಕೇವಲ ಹಿನ್ನೆಲೆಯಾಗಿ. ಕಡಲು ಹಾಗೂ ಈ ತೀರದ ವ್ಯಕ್ತಿಗಳ ಸಂಬಂಧದಲ್ಲಿರಬಹುದಾದ ಭಾವುಕತೆ, ನಂಬಿಕೆ, ಕಡಲಿನೊಂದಿಗೆ ಅವರು ನಡೆಸಬೇಕಾದ ಹೋರಾಟ ಇತ್ಯಾದಿಗಳನ್ನು ಒಳಗೊಂಡಿದ್ದರೆ ಈ ಕಾದಂಬರಿಯ ವಸ್ತುವಿಗೆ ಸಮಗ್ರತೆ ಬರಬಹುದಾಗಿತ್ತು. ಆದರೆ ಇವರು ಎತ್ತಿಕೊಂಡಿರುವುದು ಮೊಗೇರರ ಸಾಮಾಜಿಕ ಜೀವನವನ್ನು: ಅದರಲ್ಲೂ ನಾಗರಿಕತೆಯ ಗಾಳಿಬೀಸಿ ಬದಲಾಗುತ್ತಿರುವ ಮೊಗೇರರ ಸಮಕಾಲೀನ ಸಾಮಾಜಿಕ ಪರಿಸರವನ್ನು. ಪದ್ಮಳಂಥ ಮೊಗೇರರ ಹೆಣ್ಣು ಹಸನಬ್ಬನಂಥ ಮುಸ್ಲಿಮನನ್ನು ಮದುವೆಮಾಡಿ ಕೊಳ್ಳುವ ಅನಿವಾರ್ಯತೆಗೆ ಕಾರಣವಾದ ಸಾಮಾಜಿಕ ಪರಿಸ್ಥಿತಿಯೆ, ಮದುವೆಯಾದ ಹೆಂಡತಿ ಹಂಸಳನ್ನೂ ಗಂಡನಾದ ಸಂಜೀವನನ್ನೂ ಬೇರ್ಪಡಿಸಲು ಕಾರಣವಾಗಿದೆ. ಕೇವಲ ನಂಬಿಕೆಗಳನ್ನು ಕಟ್ಟಿಕೊಂಡು ಬದುಕನ್ನು ಸಾಗಿಸುವ ವ್ಯಕ್ತಿಗಳಿಗಿಂತ. 'ವಿಚಾರಮಾಡುವ' ಹಾಗೂ ಸಮಕಾಲೀನ ರಾಜಕೀಯ ಪರಿಸರದಲ್ಲಿ ಮೌಲ್ಯಗಳನ್ನು ಗಾಳಿಗೆ ತೂರುವ ಪ್ರವೃತ್ತಿಯನ್ನುಳ್ಳ ವ್ಯಕ್ತಿಗಳಿಂದ ಕೂಡಿದ ಸಾಮಾಜಿಕ ಪರಿಸರ ಇಲ್ಲಿಯದು. ಸಂಜೀವ. ಪದ್ಮ. ಭೈರ ಗುರಿಕಾರ ಇವರ ಪಾತ್ರಗಳೆ ಇದಕ್ಕೆ ನಿದರ್ಶನ. ಈ ಕಾದಂಬರಿ ಮೊಗವೀರ ಸಮಾಜದ ಸಾಮಾಜಿಕ. ಧಾರ್ಮಿಕ. ಸಾಂಘಿಕ ಜೀವನವನ್ನೂ. ಬಡತನದ ವಿರುದ್ಧ ಅವರು ನಡೆಸಿದ ನಿರಂತರ ಹೋರಾಟವನ್ನೂ. ಮಾಪಿಳ್ಳೆಗಳೊಡನೆ ಸೆಣಸಾಟ. ಮೀನು ಹಿಡಿಯುವುದು. ಮೀನುಪೇಟೆಯ ಗದ್ದಲ. ಕಳ್ಳ ಸಾಗಾಣಿಕೆಯ ವ್ಯಾಪಾರ–ಇತ್ಯಾದಿ ಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಲೇಖಕರಿಗೆ ಈ ಸಮಾಜದ ಜೀವನದ ಅನು ಭವ ಮತ್ತು ಅದನ್ನು ಸೆರೆಹಿಡಿದು ನಿಲ್ಲಿಸುವ ಕೌಶಲ ಎರಡೂ ಇದೆ. ಆದರೆ ವಿಶು ಕುಮಾರ್ ಅವರು ಪಾತ್ರಗಳ ಸಂಭಾಷಣೆಗೆ ಬಳಸುವ ಭಾಷೆ. ಮತ್ತು ವೈಚಾರಿಕತೆ ಆಯಾ ಪಾತ್ರಗಳ ಮಟ್ಟಕ್ಕೆ ಹಲವು ವೇಳೆ ಮೀರಿದ್ದಾಗುತ್ತದೆ. ನಿದರ್ಶನಕ್ಕೆ ಐದ್ರೋಸು ಬ್ಯಾರಿ "ಹರಿಕಥೆಗಿಂತಲೂ ನಿಮ್ಮಿಬ್ಬರ ಕಥೆ ಶ್ರೇಷ್ಠವಾದದ್ದು ತಾಯಿ. ನನಗೆ ನಿಮ್ಮಿಬ್ಬರ ಸ್ನೇಹ ನೋಡಿ ಬಹಳ ಸಂತೋಷ ಆಗಿದೆ… ಭೇದಭಾವ. ಹೀನಭಾವವಿಲ್ಲದೆ ಬದುಕಿ ಗಾಗಿ. ಜೀವನಕ್ಕಾಗಿ ನೀವು ಒಬ್ಬರಿಗೊಬ್ಬರು ಸಹಾಯ ಮಾಡುತ್ತಾ ಇರುವುದನ್ನು ನೋಡಿದರೆ ಇದಕ್ಕಿಂತ ಹಿರಿದಾದ ಭಾವೈಕ್ಯ ಇದೆಯಾ' (ಪು. 146) ಎಂದು ಮಾತಾಡು ವುದು ಪರಿಸರಕ್ಕಾಗಲಿ. ಪಾತ್ರಕ್ಕಾಗಲಿ ಮೀರಿದ ಭಾಷೆ. ಪತ್ರಿಕೆಗಳಲ್ಲಿ ಈ ಕೃತಿಯನ್ನು ವಿಮರ್ಶಿಸಿದ ಕೆಲವು ವಿಮರ್ಶಕರು. ಈ ಕೃತಿಯಲ್ಲಿ ವೈಚಾರಿಕ ಕೇಂದ್ರವಿಲ್ಲ, ಬಿಡಿ ಬಿಡಿಯಾದ ಘಟನೆಯ ಎಳೆಗಳಿಗೆ ತಕ್ಕ. ಸಮರ್ಥವಾದ ಕೊಂಡಿಯಿಲ್ಲ – ಇದೇ ಅದರ ದೋಷ ಎಂದಿದ್ದಾರೆ. ಆದರೆ ನಮಗೆ ಹಾಗೆ ತೋರುವುದಿಲ್ಲ. ಮೀನುಪೇಟೆಯ ವ್ಯವ ಹಾರವಾಗಲಿ; ಪುರಂದರನ ಕುಸ್ತಿಯ ಪೈಪೋಟಿಯಾಗಲಿ: ಹಸನಬ್ಬನ ಕಳ್ಳವ್ಯಾಪಾರ ವಾಗಲಿ ಪದ್ಮಳ ಪಾತ್ರದ ಸುತ್ತ ಹೆಣೆದುಕೊಂಡಿವೆ. ಆದರೆ ಸಂಜೀವ–ಹಂಸ ಇವರ ಕತೆ. ಪದ್ಮ–ಹಸನಬ್ಬರ ಕತೆ. ಒಂದೇ ಸಾಮಾಜಿಕ ಪರಿಸರದ್ದೆಂಬ ದೃಷ್ಟಿಯಿಂದ. 'ಐಕ್ಯತೆ'

ಇದೆ ಎಂದು ನಾವಂದುಕೊಂಡರೂ, ಆ ಎರಡು ಜೋಡಿಗಳು ಎಂದೂ ಈ ಕಥೆಯಲ್ಲಿ ಸಂಧಿಸುವುದಿಲ್ಲವೆಂಬುದು ನಿಜ. ಆ ಎರಡೂ ಎರಡು ಬೇರೆಬೇರೆಯ ಸ್ವತಂತ್ರ ಘಟಕಗಳಂತಿವೆ ಎಂಬುದೂ ನಿಜ. ಆದರೆ ಆ ಎರಡೂ. ಎರಡು ಬಗೆಯ ಸಂಬಂಧಗಳಿಗೆ ಸಾಕ್ಷಿಯಾಗಿ ನಿಲ್ಲುತ್ತವೆ – ಎಂಬುದನ್ನು ಮರೆಯಬಾರದು.

ತುಂಬ ಆಕರ್ಷಕವಾದ, ಸತ್ವಶಾಲಿಯಾದ ಈ ಕಾದಂಬರಿಯ ಬಗೆಗೆ, ಇದು ದಿನಪತ್ರಿಕೆಯೊಂದರಲ್ಲಿ ಪ್ರಕಟವಾಗುತ್ತಿದ್ದ ಕಾಲಕ್ಕೆ ಮೊಗವೀರ ಸಮಾಜ ಪ್ರತಿಭಟಿಸಿದ್ದು ತೀರಾ ವಿಲಕ್ಷಣವಾಗಿದೆ. ಕಾದಂಬರಿಯ ಕೊನೆಗೆ 66 ಪುಟಗಳಷ್ಟು ಈ ಸಂಬಂಧವಾಗಿ ನಡೆದ ಪತ್ರವ್ಯವಹಾರಗಳ, ಪ್ರತಿಕ್ರಿಯೆಗಳ ಸಂಗತಿಯನ್ನು ಅನುಬಂಧವೆಂಬಂತೆ ಕೊಡಲಾಗಿದೆ. ಇಷ್ಟೊಂದು ಪುಟಗಳನ್ನು ಇಲ್ಲಿ ಈ ಸಂಗತಿ ತುಂಬ ಬೇಕಾಗಿತ್ತೆ ಎಂಬುದು ಪ್ರಶ್ನೆ.

ವಿಶುಕುಮಾರರ ಇನ್ನೊಂದು ಕಾದಂಬರಿ, **ಮದರ್**. ಇದಂತೂ 'ಕರಾವಳಿ'ಯ ಮಟ್ಟಕ್ಕೆ ಬಾರದ ಬೇರೆ ಸ್ತರದಲ್ಲಿ ನಿಲ್ಲುವ. ವೈಚಾರಿಕತೆಯನ್ನು ತಾರ್ಕಿಕವಾಗಿ ಪ್ರತಿಪಾದಿಸುವ ಉದ್ದೇಶಕ್ಕೆಂದೇ ರಚಿತವಾಯಿತೇನೋ ಎಂಬ ಗುಮಾನಿ ಹುಟ್ಟಿಸುವ ಕೃತಿ. ಇದು ಧಾರ್ಮಿಕ ಸಮಸ್ಯೆಯೊಂದನ್ನು ಮುಂದಿಡುತ್ತದೆ. ಸಾವಿತ್ರಿ ಎಂಬ ವೈದಿಕ ಮನೆತನದ. ಬಿ.ಎ. ಓದಿದ ಹುಡುಗಿ. ತಾನೊಲಿದ ಶೂದ್ರ ಪ್ರಿಯತಮನನ್ನು ಮದುವೆಯಾದ ಕಾರಣದಿಂದ ಸಾಮಾಜಿಕವಾಗಿ ಬಹಿಷ್ಕೃತಳಾಗುತ್ತಾಳೆ; ಈ ನಡುವೆ ತನಗೊಂದು ಮಗುವಾದ ವೇಳೆಗೆ. ಗಂಡ ಸತ್ತು ಈಕೆ ದಿಕ್ಕಿಲ್ಲದವಳಾಗಿ. ಸಮಾಜವನ್ನು ಎದುರಿಸಲಾಗದೆ. ಮಗುವನ್ನು ದೇವಸ್ಥಾನವೊಂದರಲ್ಲಿ ಬಿಟ್ಟು ತಾನು ಆತ್ಮಹತ್ಯೆಗೆ ಪ್ರಯತ್ನಿಸುತ್ತಿರುವಾಗ. ಕ್ರೈಸ್ತ ಪಾದ್ರಿಗಳಿಂದ ಸಂರಕ್ಷಿತಳಾಗಿ, ಕ್ರೈಸ್ತ ಧರ್ಮಕ್ಕೆ ಸೇರಿ 'ಮದರ್ ಸುಪೀರಿಯರ್' ಆಗುತ್ತಾಳೆ. ಮೊದಮೊದಲು ಕ್ರೈಸ್ತಧರ್ಮದ ಮಾನವೀಯ ಗುಣಗಳಿಗೆ ಆಕೆ ಮಾರುಹೋದರೂ, ಕ್ರೈಸ್ತ ಮಿಷನರಿಗಳ ಮುಖ್ಯ ಉದ್ದೇಶ. ನಾನಾ ವಿಧವಾದ ಉಪಾಯಗಳಿಂದ ಹಿಂದೂಗಳನ್ನು ಮತಾಂತರಗೊಳಿಸುವುದೇ ಆಗಿದೆ ಎಂಬ ಕಹಿ ಸತ್ಯವನ್ನು ಕಂಡು ಬೇಸರಗೊಳ್ಳುತ್ತಾಳೆ.. ಈ ನಡುವೆ ಕೃಷ್ಣರಾಜು ಎಂಬ ಶ್ರೀಮಂತ ಯುವಕ, ಕ್ರೈಸ್ತಮತದ ಸಿಸಿಲಿಯಲ್ಲಿ ಮೋಹಗೊಂಡು ಕ್ರೈಸ್ತಮತಕ್ಕೆ ಮತಾಂತರಗೊಳ್ಳಲಿದ್ದಾಗ. 'ಮದರ್ ಸುಪೀರಿಯರ್' ಆದ ಸಾವಿತ್ರಿ ಆತನನ್ನು ಎಚ್ಚರಿಸಿ. ತನ್ನ ಸ್ವಧರ್ಮ ಶ್ರದ್ಧೆಯನ್ನು ಬೋಧಿಸುತ್ತಾಳೆ. ಈ ತಪ್ಪಿಗೆ ಆಕೆಯನ್ನು ವಿಚಾರಣೆಗೆ ಗುರಿಪಡಿಸಿದಾಗ. ಆಕೆ ರಾತ್ರೋರಾತ್ರಿ ಮಠದಿಂದ ತಪ್ಪಿಸಿಕೊಂಡು ಮಾಯವಾಗುತ್ತಾಳೆ. ಓದುಗರಿಗೆ ಗೊತ್ತಾಗುತ್ತದೆ. ಈಕೆಯಿಂದ ಎಚ್ಚರಿಸಲ್ಪಟ್ಟ ತರುಣ ಕೃಷ್ಣರಾಜನೇ ಈಕೆಯ ಮಗನೆಂಬ ಸತ್ಯ.

ಕತೆಯೇನೋ ಸ್ವಾರಸ್ಯವಾಗಿದೆ. ಕತೆಯಲ್ಲಿ ಏಕಮುಖತೆ ಇದೆ. ಕಾದಂಬರಿ ಮುಖ್ಯ ಸಮಸ್ಯೆಯನ್ನು ಮಂಡಿಸುವುದರಲ್ಲಿ ಸಫಲವಾಗಿದೆ. ಹಿಂದೂಧರ್ಮದ ಪಾರಂಪಾರಿಕವಾದ ಅನುದಾರ ಪ್ರವೃತ್ತಿಯೆ ಈ ಧರ್ಮದ ದೌರ್ಬಲ್ಯವಾಗಿದೆ. ಇದನ್ನು ಕ್ರೈಸ್ತ ಧರ್ಮ ಸದುಪಯೋಗ ಮಾಡಿಕೊಳ್ಳುತ್ತಿದೆ. ಆದರೆ. ಕ್ರೈಸ್ತ ಪಾದ್ರಿಗಳಿಗಿರುವ ಧರ್ಮ

ಶ್ರದ್ಧೆ. ಹಿಂದೂಗಳಿಗಿಲ್ಲ. ಕ್ರೈಸ್ತರ ಧರ್ಮಶ್ರದ್ಧೆಯಲ್ಲಿ, ಮತಾಂತರದ ಹಂಬಲ, ಅದ ಕ್ಕಾಗಿ ಅವರು ಕೈಕೊಳ್ಳುವ ತಂತ್ರಗಳು. ಮಹಾತ್ಮನಾದ ಏಸುಕ್ರಿಸ್ತನ ಅಧ್ಯಾತ್ಮ ತತ್ವಕ್ಕೆ ವಿರೋಧವಾಗಿದೆ – ಈ ಕೆಲವು ಅಂಶಗಳನ್ನು ಈ ಕಾದಂಬರಿಯಲ್ಲಿ ಲೇಖಕರು ತಂದಿ ದ್ದಾರೆ. ವೈಚಾರಿಕತೆಯೆಂದರೆ ಉಪನ್ಯಾಸಗಳ ಮಾಲೆಯನ್ನು ನೆಯ್ಯುವುದು ಎಂಬ ತಪ್ಪು ಕಲ್ಪನೆಗೆ ಲೇಖಕರು ಒಳಗಾಗಿರುವುದರಿಂದಲೊ ಏನೊ. ಅಲ್ಲಲ್ಲಿ ಧರ್ಮದ ಬಗ್ಗೆ, ನಾಸ್ತಿಕತೆ–ಆಸ್ತಿಕತೆಗಳ ಬಗ್ಗೆ ತಲೆಬೇಸರ ತರಿಸುವ ಉಪನ್ಯಾಸಗಳಿವೆ. ಇಷ್ಟಾದರೂ ಕುತೂಹಲದಿಂದ ಓದಿಸಿಕೊಳ್ಳುವ ಕತೆಗಾರಿಕೆ ಇದರ ಸತ್ವವಾಗಿದೆ.

**ಮೋಹಿತರು** ಅರವಿಂದ ನಾಡಕರ್ಣಿಯವರ ಮೊದಲ ಕಾದಂಬರಿಯಾ ದರೂ. ತುಂಬ ಗಮನಾರ್ಹವಾದ ಕೃತಿಯಾಗಿದೆ. ಉತ್ತರಕನ್ನಡ ಜಿಲ್ಲೆಯ ಗ್ರಾಮ ವೊಂದರ ಮೇಲೆ ಇರುಳು ಕವಿಯುವಾಗ. ಇರುಳ ಕತ್ತಲು ಮೂಡಿಸುವ ಊಹೆಗಳಿಗೆ ಕೈಕಾಲು ಬಂದು. ಅವು ನಡೆದಾಡಿದ ಕಾಣದ ಹೆಜ್ಜೆಯ ಸಪ್ಪುಳವೇ ಈ ಕಾದಂಬರಿಯ ತುಂಬ. ಊರ ಮುಖಂಡ ಶ್ರೀಪಾದರಾಯರ ಮನೆಯ ಚಿಮಣಿ ಬೆಳಕಿನಲ್ಲಿ ಸೇರಿದ ಹಲವು ಮಂದಿಯ ನೆರವಿಯಲ್ಲಿ 'ಮೋಹಿನಿ'ಯ ಬಗ್ಗೆ ನಡೆಯುವ ಚರ್ಚೆಯಿಂದ ಆರಂ ಭವಾದ ಕೃತಿ. ಇದೊಂದು ದೆವ್ವದ ಕತೆಯಿರಬಹುದೇನೊ ಎಂಬ ಕುತೂಹಲವನ್ನು ಹುಟ್ಟಿಸುತ್ತದೆ. ಆದರೆ ವಾಸ್ತವವಾಗಿ ಅಲ್ಲಿ ಯಾವ 'ಮೋಹಿನಿ'ಯೂ ಇಲ್ಲದಿರುವುದೇ ಇದರ ಸ್ವಾರಸ್ಯ. ಆ ಊರಿನ ಗುಲಾಬಿ ಎಂಬ ಚೆಲುವೆಯೊಂದಿಗೆ ಚೆಲ್ಲಾಟಕ್ಕೆ ನಿರಾ ತಂಕ ಪರಿಸರವನ್ನು ಕಲ್ಪಿಸಿಕೊಳ್ಳಲು ಆ ಊರಿನ ಪ್ರತಿಷ್ಠಿತರೊಬ್ಬರು ಕಟ್ಟಿದ ಆಟ ಇದು ಎಂಬುದು ಕ್ರಮೇಣ ಅರಿವಿಗೆ ಬರುತ್ತದೆ. ಆದರೆ ಆ 'ಪ್ರತಿಷ್ಠಿತರು' ಯಾರಿರಬಹುದು ಎಂಬ ಸಂಶಯಮಾತ್ರ ವ್ಯಕ್ತಿಯಿಂದ ವ್ಯಕ್ತಿಗೆ ಸ್ಥಳಾಂತರಿತವಾಗುವುದು ತುಂಬ ಕುತೂ ಹಲದ ಅಂಶವಾಗಿದೆ. ವಾಸ್ತವವಾಗಿ ಎಲ್ಲರೂ ಮೋಹಿತರೇ ಇಲ್ಲಿ. ಕೆಲವರಿಗೆ ಕಾಮ. ಕೆಲವರಿಗೆ ಜೂಜು. ಕೆಲವರಿಗೆ ದಳ್ಳಾಳಿ ವ್ಯವಹಾರ. ಮತ್ತೆ ಕೆಲವರಿಗೆ ಗುಲಾಬಿಯ ಬಗ್ಗೆ ಮೋಹ – ಹೀಗೆ ಎಲ್ಲರೂ ಒಂದಲ್ಲ ಒಂದು ವ್ಯಸನಕ್ಕೆ ಮೋಹಿತರೇ. ಆದರೆ. ಕಾದಂಬರಿಯ ಆರಂಭದಲ್ಲಿ ಪ್ರಸ್ತಾಪಿತವಾಗುವ 'ಮೋಹಿನಿ' ಎಂಬುದೇನೂ ಇಲ್ಲ; ಇದ್ದರೆ ಅದು ಈ ಕಾದಂಬರಿಯ ಕೇಂದ್ರವಾದ ಗುಲಾಬಿಯೆ. ಅವಳ ಸುತ್ತ ಎಷ್ಟು ಸ್ತರದ ಜನದ ಆಸೆಗಳು. ಹಿರಡಿಕೆಗಳು. ಕನಸು ಕಟ್ಟಿಕೊಂಡು ಹಂಬಲಿಸುತ್ತವೆ. ಆದರೆ ಗುಲಾಬಿ ಕಟ್ಟಿಕೊಂಡು ಓಡಿಹೋಗುವ ವ್ಯಕ್ತಿಯೇ ಬೇರೆಯಾಗುವುದು. ಅತ್ಯಂತ ನಾಟಕೀಯವಾದ ಮುಕ್ತಾಯವನ್ನು ಈ ಕೃತಿಗೆ ತರುತ್ತದೆ. ವಾಸ್ತವ–ಅವಾಸ್ತವ ಗಳನ್ನು ಬೆರೆಸಿ ಲೇಖಕರು ತರುವ ಆವರಣ. ಮೊಗೇರರ ಬೀರ ಮತ್ತು ಸಣಕೂಸ ಇವ ರಿಬ್ಬರ ಮೂಲಕ ಇರುಳಿನ ರಹಸ್ಯಮಯತೆಗೆ, ವಿವರಣೆಗಳನ್ನು ಸೂಚಿಸುವ ನವೀನ ತಂತ್ರ. ಶಬ್ದಗಳನ್ನು ಎಗ್ಗಿಲ್ಲದೆ ಬಳಸುವ ಪ್ರಯತ್ನಪೂರ್ವಕವಾದ ಎದೆಗಾರಿಕೆ, ಸಂಭಾ ಷಣೆಗಳಲ್ಲಿ ಹೊಡೆಯುವ ಪ್ರಾದೇಶಿಕತೆಯ ವಾಸನೆ– ಇವುಗಳಿಂದಾಗಿ ಕೇವಲ 122 ಪುಟದ ಈ ಪುಟ್ಟ ಕಾದಂಬರಿ ಮಾಡುವ ಪರಿಣಾಮ ವಿಶೇಷ ರೀತಿಯದು. ಶ್ರೀಪಾದ ರಾಯರು: ನಾಗೇಶ ಪೈ: ಅಂಗಡಿ ರಾಮಶೆಟ್ಟರು: ಬೆತ್ತಯ್ಯ: ಗುಲಾಬಿ ಮತ್ತು ಅವಳ

ತಾಯಿ ದೇವಮ್ಮ, ಸಣಕೂಸ, ಜೀರ – ಇಷ್ಟೊಂದು ಪಾತ್ರಗಳು, ಜೀವಂತವಾಗಿ ನಡೆದಾಡುತ್ತವೆ ನಮ್ಮ ಮುಂದೆ. ಕೆಲವೇ ಗೆರೆಗಳಲ್ಲಿ ಒಳ್ಳೆಯ ಕಲಾವಿದ ವ್ಯಕ್ತಿಚಿತ್ರವನ್ನು ಕೊಡುವಂತೆ, ಕೆಲವೇ ಮಾತುಗಳಲ್ಲಿ, ಸನ್ನಿವೇಶಗಳಲ್ಲಿ ಕಾದಂಬರಿಕಾರರು ಸ್ಫುಟವಾದ ಪಾತ್ರಗಳನ್ನು ನಿಲ್ಲಿಸಬಲ್ಲರು. ಕಾದಂಬರಿಯ ನಡೆ, ಮಳೆಗಾಲದ ಹೊಳೆ.

'ಮೋಹಿತರು' ಕಾದಂಬರಿಯಲ್ಲಿ. ಇರುಳು ಕವಿದಾಗ ಹುಟ್ಟಿಕೊಳ್ಳುವ 'ಮೋಹಿನಿ'ಯು ರಹಸ್ಯಮಯತೆಯ ವಸ್ತುವಾಗಿದ್ದರೆ, ವಿ. ಎಂ. ಇನಾಂದಾರರ **ನವಿಲುನೌಕೆ**ಯಲ್ಲಿ ಬದುಕಿನ ಆಚೆಗಿರುವ ಇರುಳಿನೊಳಗಿನ ರಹಸ್ಯದ ಅನ್ವೇಷಣೆ ವಸ್ತುವಾಗಿದೆ. ನಿಸರ್ಗ ಹಾಗೂ ಮಾನವ ಈ ಎರಡರ ಹಿನ್ನಲೆಯ ನಿಗೂಢತೆಯ ಅನ್ವೇಷಣೆ ಇನಾಂದಾರರ ಹಲವು ಕಾದಂಬರಿಗಳ ವಸ್ತುವಾಗಿದ್ದು, ಪ್ರಸ್ತುತ ಕಾದಂಬರಿಯಲ್ಲಿ ಅದು ಅತ್ಯಂತ ಭಾವಗೀತಾತ್ಮಕವಾಗಿ ಹರಳುಗೊಂಡಿದೆ. ಬದುಕಿನಲ್ಲಿ ಯಾವುದೂ ನಷ್ಟವಾಗುವುದಿಲ್ಲ; ಎಲ್ಲವೂ ಸ್ಥಿತ್ಯಂತರವಾಗುತ್ತದೆ – ಎಂಬ ವೈಜ್ಞಾನಿಕ ಸತ್ಯಕ್ಕೆ ಒಂದು ಕಲಾತ್ಮಕ ರೂಪವನ್ನು ಕೊಡುತ್ತದೆ ಈ ಕೃತಿ. ನಮ್ಮ ವಾಸ್ತವಿಕ ಜಗತ್ತಿನಲ್ಲೇ. ನಮ್ಮ ಬದುಕಿನ ಪರಿಧಿಯ ಒಂದು ಗೆರೆಯಾಚೆ. ಬೇರೊಂದು ಜೀವನ – ಅದೃಶ್ಯರೂಪದಲ್ಲಿ ನಡೆದಿದೆ. ಗತಕಾಲದ ಘಟನೆಗಳಿಗೂ ಬದುಕಿಗೂ ಯಾವುದೋ ಸಂಬಂಧ ಇದೆ. ಹಿಂದಿನದು ಕ್ರಮೇಣ ದಂತಕತೆಯಾಗಿಯೋ, ಜಾನಪದ ಹಾಡಿನಲ್ಲಿ ರೂಪಗೊಂಡೋ, ಕಾವ್ಯ-ಕಲೆಗಳಲ್ಲೊ ಉಳಿದು ನಮ್ಮ ಊಹೆ, ಅನುಕಂಪ, ಆಸಕ್ತಿಗಳಿಗೆ ವಸ್ತುವಾಗಿ ನಮ್ಮ ಪ್ರಜ್ಞೆಯಲ್ಲಿ ಜಾಗಮಾಡಿಕೊಳ್ಳುತ್ತದೆ. ಸೂಕ್ಷ್ಮ ಸಂವೇದನೆ ಉಳ್ಳವರಿಗೆ, ಕಲ್ಪನಾಶಕ್ತಿ ಹೆಚ್ಚು ಜಾಗೃತವಾದವರಿಗೆ, ಹಿಂದಿನ ಈ ಸಂಗತಿಗಳು, ಯಾವುದೋ ಗಳಿಗೆಯಲ್ಲಿ ಅಸ್ಪಷ್ಟವಾಗಿ ಮೈದೋರುತ್ತ, ತಮ್ಮ ವ್ಯಕ್ತಿತ್ವಕ್ಕೂ ಆ ಹಿಂದಿನ ಘಟನೆಗಳಿಗೂ ಒಂದು ಸಂಬಂಧವಿದೆ ಎಂಬುದನ್ನು ದೃಢಪಡಿಸುತ್ತ ಹೋಗುತ್ತವೆ. ಈ ಕಾದಂಬರಿಯ ಅರವಿಂದ ಅಂಥವನು. ಅವನಿಗೆ ವರ್ತಮಾನದಾಚೆಯ ಬದುಕು ಅನೇಕ ವಿಧದಲ್ಲಿ. ಆತನ ಅಂಚಿನಲ್ಲೆ ಹಾದುಹೋದ ಅನುಭವವಾಗುತ್ತದೆ. ಬಾಗೂರಿನ ಕೆರೆ, ಅದರ ಸುತ್ತಣ ಪ್ರಾಚೀನ ಅವಶೇಷಗಳು, ಮತ್ತು ಅದಕ್ಕೆ ಸಂಬಂಧಿಸಿದ ಜಯವರ್ಧನ ಚಂಪಕಮಾಲೆಯರ 'ನವಿಲು ನೌಕೆ'ಯ ಜಾನಪದ ಕಥೆ, ಅರವಿಂದನ ಕಲ್ಪನೆ–ಕನಸುಗಳ ಮೂಲಕ, ತಾನು ಅನಂತಕಾಲದ ಒಂದು ಅಂಶವೆನ್ನುವ ಸಂಗತಿಯನ್ನು ಸ್ಫುಟಗೊಳಿಸುತ್ತಾ ಹೋಗುತ್ತದೆ. ಕಾದಂಬರಿಯ ಇತರ ಪಾತ್ರಗಳಿಗೆ. ತಮ್ಮ ಬದುಕಿನ ಅಂಚಿನಾಚೆ ಏನೋ ಇದೆ ಎಂಬುದು ಗೊತ್ತು; ಆ ಬಗ್ಗೆ ತಾವು ಅಲ್ಲಿಗೆ ಹೋಗಬಾರದು ಎಂಬ ನಿಲುವು ಅವರದು. ಆದರೆ ಅರವಿಂದನಂಥ ಅನ್ವೇಷಕನಿಗೆ ಅದರ ಸೆಳೆತ ಹೆಚ್ಚು. ಉದ್ದೇಶಪೂರ್ವಕವಾಗಿಯೆ ಆತ ಅಂಥ ಪರಿಸರಕ್ಕೆ ಹೋಗುತ್ತಾನೆ. ನಿಸರ್ಗರಮ್ಯತೆಯೊಳಗಿನ ಯಾವುದೋ ಗೂಢ ಅವನ ಅರಿವಿಗೆ ಬರುತ್ತದೆ. ಈ ಕತೆಯಲ್ಲಿ ಗತಕಾಲದ ಅಮಾಯಕತೆ, ಮತ್ತು ಈ ವರ್ತಮಾನ – ಎರಡೂ ಬೇರೆಯಾಗೇ ಪಕ್ಕಪಕ್ಕದಲ್ಲೆ ಹಾದುಹೋಗಿರುವಂತೆ ಚಿತ್ರಿಸಿರುವ ಕಲೆಗಾರಿಕೆ ಮೆಚ್ಚತಕ್ಕದ್ದಾಗಿದೆ.

ಇನಾಂದಾರರ ಕೆಲವು ಕಾದಂಬರಿಗಳಲ್ಲಿ, ಕಡೆಯ ಪುಟದ ಮೇಲೆಗೆ ಕತೆಗೆ ಬರುವ

ತಿರುವು ಈ ಕಾದಂಬರಿಯಲ್ಲೂ ಬಂದಿದೆ. ತನ್ನ ತೀರಿಹೋದ ಮಡದಿ, ಬಾಗೂರಿನ ವೆಂಕಟರಮಣಯ್ಯನವರು ಎಂದೋ ಕಳೆದುಕೊಂಡ ಮಗಳು; ಅವಳೇ ಕುಮುದಾಳ ಅಕ್ಕ – ಎಂದು ಕಾದಂಬರಿಯ ಕಡೆಯ ಪುಟಗಳಲ್ಲಿ ದಿಡೀರನೆ ತಿಳಿಯುತ್ತದೆ. ಅರವಿಂದ ಕಡೆಯಲ್ಲಿ ಕುಮುದಳನ್ನು ಕೈಹಿಡಿಯಲು ನಿರ್ಧರಿಸಿದ್ದು, ಕತೆಯನ್ನು ಸುಖಾಂತವನ್ನಾಗಿ ಮಾಡಲೆಂದೋ, ಅಥವಾ ಶಾರದೆಯಂಥ ಹೆಂಡತಿಯನ್ನು ಕಳೆದುಕೊಂಡ ಮೇಲೆ ಮತ್ತೆ ಮದುವೆಯೇ ಆಗುವುದಿಲ್ಲವೆಂದ ಅರವಿಂದ, ಕುಮುದ ಶಾರದಾಳ ತಂಗಿ ಎಂಬ ಕಾರಣದಿಂದಲೋ, ಕುಮುದಳು ಥೇಟ್ ಶಾರದೆಯಂತೆಯೇ ಇದ್ದುದರಿಂದಲೋ ಎಂಬುದು ತಿಳಿಯದು.

ಇನಾಂದಾರರ 'ಈ ಪರಿಯ ಸೊಬಗು' ಕಾದಂಬರಿಯಲ್ಲಿಯಂತೆ ಇಲ್ಲೂ ನಿಸರ್ಗ ಒಂದು ರಮ್ಯಾದ್ಭುತವಾದ ಪಾತ್ರವಾಗಿದೆ. ನಿಸರ್ಗದ ಚೆಲುವು ಈ ಕಾದಂಬರಿಯ ತುಂಬ ದಟ್ಟವಾಗಿ ಹರಹಿಕೊಂಡು ಪಾತ್ರಗಳ ಒಳಗು–ಹೊರಗುಗಳೊಂದಿಗೆ ಹೆಣೆದು ಕೊಂಡಿದೆ. ಕಾದಂಬರಿಯಲ್ಲಿ ವೈಚಾರಿಕತೆ ಹಾಗೂ ತಾತ್ವಿಕ ದೃಷ್ಟಿ, ಎಲ್ಲೂ ಭಾರವಾಗದೆ, ಇದೆಯೋ ಇಲ್ಲವೋ ಎಂಬಂತೆ ಬೆನ್ನೆಲುಬಾಗಿ ನಿಂತಿದೆ. ಕಥಾವಸ್ತು, ನಿಸರ್ಗದ ಚೆಲುವಿನ ಬಣ್ಣನೆ ಓದುಗರನ್ನು ಸೆರೆಹಿಡಿದುಬಿಡುತ್ತದೆ. ಗಂಭೀರವಾದ ಚಿಂತನೆಯ ಮಗ್ಗದಲ್ಲಿ ವಾಸ್ತವತೆ ಹಾಗೂ ಕನಸುಗಾರಿಕೆಯ ಎಳೆಗಳಿಂದ ನೆಯ್ದ ಈ ಕೃತಿ ಓದಿದ ಮೇಲೂ ಮನಸ್ಸನ್ನು ತುಂಬಿಕೊಂಡು ಬಹುಕಾಲ ಅನುರಣಿತವಾಗುತ್ತದೆ. ಈ ವರ್ಷದ ತುಂಬ ಸೊಗಸಾದ ಕಾದಂಬರಿ ಇದು.

ಎಸ್. ಎಲ್. ಭೈರಪ್ಪನವರ **ನಿರಾಕರಣ** ಈ ವರ್ಷದಲ್ಲಿ ಪ್ರಕಟವಾದ ಇನ್ನೊಂದು ವಿಶಿಷ್ಟವಾದ ಕೃತಿ. ಭಾರತೀಯ ಪರಿಸರದ ಪ್ರಜ್ಞೆಯಿಂದ ಕನ್ನಡದಲ್ಲಿ ಕಾದಂಬರಿ ಬರೆಯುವ ಲೇಖಕರಲ್ಲಿ ಭೈರಪ್ಪನವರು ಮುಖ್ಯರಾದವರು ಎಂದು ನಮ್ಮ ಭಾವನೆ. ಇವರು ತೆಗೆದುಕೊಳ್ಳುವ ಯಾವುದೇ ವಸ್ತು, ಯಾವುದೇ ಸಮಸ್ಯೆ, ಪರಕೀಯವೂ ಎರವಲು ತಂದದ್ದೂ ಅನ್ನಿಸದೆ, ಇದು ನಮ್ಮದೇ, ನಮ್ಮ ಪರಂಪರೆಯದೇ – ಅನ್ನಿಸುತ್ತದೆ. ಈ 'ನಿರಾಕರಣ' ಕಾದಂಬರಿಯ ವಸ್ತು ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ವೇದಾಂತ ಸ್ವಭಾವದ ನರಹರಿ, ಇದ್ದ ಐದು ಮಕ್ಕಳನ್ನು ದತ್ತುಕೊಟ್ಟು, ಬದುಕನ್ನು ನಿರಾಕರಿಸಿ ಹಿಮಾಲಯಕ್ಕೆ ಹೋಗುತ್ತಾನೆ. ನಿಜಕ್ಕೂ ಭೌತಿಕವಾಗಿ ಎತ್ತರಕ್ಕೆ ಹೋದಹಾಗೆ, ಆತ ಮಾನಸಿಕವಾಗಿ ಆ ನಿಲುವಿಗೆ ಏರಲಾರದವನಾಗುತ್ತಾನೆ. ಏರುವ ಹಂಬಲವಿದ್ದರೂ, ಏರುವ ಶಕ್ತಿ ಸಾಲದು. ಕಾಲವೇ ಹೆಪ್ಪುಗಟ್ಟುವಂಥ ಎತ್ತರದಲ್ಲಿ, ಬಾರಾಮಾಸಿ ಮಹಾರಾಜರಂಥ ನಿಸ್ಸಂಗಿಗಳನ್ನು ನರಹರಿ ಕಾಣುತ್ತಾನೆ. ಆದರೆ ಆ ಏಕಾಂತದಲ್ಲಿ ನಿಲ್ಲಲಾರದೆ, ಕೆಳಗಿಳಿದು, ಪ್ರವಾಹದಗುಂಟ ತೇಲುತ್ತಬಂದು, ಮತ್ತೆ ಮುಂಬೈಗೇ ಬಂದು ಅನಾಥಾಲಯದ ವಾರ್ಡನ್ ಆಗುತ್ತಾನೆ. ಹಿಂದೆ ನಿರಾಕರಿಸಿದ ಬದುಕಿನ ಎಳೆಗಳು ಬಂದು ಒಂದೊಂದಾಗಿ ಅವನ ಸುತ್ತ ಬಲೆಕಟ್ಟುತ್ತವೆ.

ಒಂಟಿತನವನ್ನು ಸಾಧಿಸುವ ಹಂಬಲದಿಂದ ಹೊರಡುವ ವ್ಯಕ್ತಿಯ ಏಳು–ಬೀಳುಗಳ ಚಿತ್ರಣ ಇದು. ಆದರೆ ನರಹರಿ ಈ ಬದುಕನ್ನು ನಿರಾಕರಿಸಿದ್ದು ತಪ್ಪೇ ಸರಿಯೆ;

ಅವನು ವಿರುಪೆಯ ದಾರಿಯಿಂದ ಜಾರಿಬಂದದ್ದು ನಿಜಕ್ಕೂ ಒಂದು ಪತನವೇ – ಈ ಪ್ರಶ್ನೆಗಳನ್ನು ಭೈರಪ್ಪನವರು ಚರ್ಚಿಸಲು ಹೋಗುವುದಿಲ್ಲ. ನರಹರಿಯ ಬದುಕು ನಮ್ಮೆಲ್ಲರ ಬದುಕಿನ ಒಂದು ಸಂಕೇತ ಮಾತ್ರ. ನಿರಾಕರಣ ಸುಲಭ ಅಲ್ಲ; ಆದ್ದರಿಂದ ಇರುವ ಬದುಕನ್ನು ಒಪ್ಪಿಕೊಂಡು ತೆಪ್ಪಗಿರುವುದೇ ಜೀವನ ಎಂಬ ಮುಕ್ತಾಯ ನರ ಹರಿಯ ಹಿಂದಿರುಗುವಿಕೆಯಿಂದ ಹೊರಡುವುದಿಲ್ಲ. ನರಹರಿಯಂಥವರು ಇರುವಂತೆಯೇ. ಕಾಲವೇ ಹೆಪ್ಪಾಗುವ ನೆಲೆಯಲ್ಲಿ ನಿಂತ ಬಾರಾಮಾಸಿ ಮಹಾರಾಜರಂಥವರೂ ಇಲ್ಲಿದ್ದಾರೆ. ಬಾರಾಮಾಸಿ ಮಹಾರಾಜರು, ಮನುಷ್ಯ ಏರಬಹುದಾದ ಎತ್ತರದ ಸಂಕೇತ. ಒಂಟಿತನದ ಹಂಬಲದಿಂದ ನರಹರಿಯಂಥವನು ಹೊರಡುವುದು ತಪ್ಪಲ್ಲ ; ಏರುವ ಸಂಕಲ್ಪ–ಶಕ್ತಿ ಬಾರಾಮಾಸಿಯಂಥವರಿಗೆ ಮಾತ್ರ ಸಾಧ್ಯ. ನರಹರಿಯ ಬದುಕು ನಮ್ಮಲ್ಲಿ ಕನಿಕರವನ್ನು ಮಾತ್ರ ಹುಟ್ಟಿಸೀತೇ ಹೊರತು, ಆತನ ತಪ್ಪು ಸರಿಗಳನ್ನು ವಿಚಾರಣೆಗೆ ಗುರಿಪಡಿಸಬೇಕೆನ್ನುವ ಕೋಪವನ್ನಲ್ಲ. ನರಹರಿ ಗುರುವಿನ ಮಾತಿನಂತೆ ಪ್ರವಾಹದ ಎದುರು ಈಜಲು ಹೊರಟದ್ದು, ಆದರೆ ಪ್ರವಾಹದ ಗುಂಟ ಆತ ತೇಲಿಕೊಂಡು ಕೆಳಕ್ಕೆ ಬಂದದ್ದು ಒಂದು ಸಂಕೇತ. ಮನುಷ್ಯ ಇರುವುದೇ ಹಾಗೆ.

ಕಾದಂಬರಿಕಾರರು ಎಲ್ಲೂ ಯಾವ ಪಾತ್ರ ಅಥವಾ ಘಟನೆಗಳ ಹಿಂದೆಯೂ ಮಾತಾಳಿಯಾಗುವ ಉದ್ದೇಶದಿಂದ ನಿಂತಂತೆ ಕಾಣುವುದೇ ಇಲ್ಲ. ನಿರ್ವಹಣೆಯಲ್ಲಿರುವ ಈ ನಿರ್ಲಿಪ್ತತೆ ಆಶ್ಚರ್ಯಕರವಾದದು. ಈ ಕಾದಂಬರಿಯ ಭಾಷೆ, ಹಿಮಾಲಯದ ಪರಿಸರದಲ್ಲಿ ನರಹರಿಯ ಏರುವೆಯನ್ನು ಚಿತ್ರಿಸುವಲ್ಲಿಯಂತೂ ಅತ್ಯಂತ ಸಾಂಕೇತಿಕವಾಗುತ್ತದೆ. ಅದು ಸಾಂಕೇತಿಕವಾಗಿದೆ ಎಂಬುದು ಕೂಡ ಸೂಕ್ಷ್ಮವಾಗಿ ಗುರುತಿಸಿದಲ್ಲದೆ ಕಾಣದು. ಹಿಮಾಲಯದ ಎತ್ತರಕ್ಕೆ ಹೋದಾಗ ಗತಜೀವನದ ಹಾಗೂ ಮುಂಬೈ ನೆನಪು; ಮುಂಬೈಗೆ ಬಂದಾಗ ಮತ್ತೆ ಹಿಮಾಲಯದ ನೆನಪು – ಇದು ನರಹರಿಯ ಅಥವಾ ಮಾನವಸ್ವಭಾವದ ದ್ವಂದ್ವಕ್ಕೆ ಪ್ರತಿಮೆಯಾಗಿದೆ.

ಆದರೆ, ನರಹರಿ ಮಕ್ಕಳನ್ನು ದತ್ತುಕೊಡುವ ಸಂದರ್ಭ ಕೇವಲ ಒಂದೆರಡು ವಾಕ್ಯಗಳಲ್ಲಿ ಯಾಂತ್ರಿಕವಾಗಿ ವರದಿಯಾಗಿದೆ. ನರಹರಿ ವೇದಾಂತದ ಸ್ವಭಾವದವನು ಎಂಬ ಒಂದು ಸಂಗತಿಯನ್ನು ಮುನ್ನೆಲೆಗಿರಿಸಿದರೆ. ಅವನು ಐದು ಮಕ್ಕಳ ತಂದೆಯೂ ಆಗಿದ್ದ ಎಂಬುದನ್ನು ಮರೆಯಲಾಗುವುದಿಲ್ಲ. ವಾಸ್ತವವಾಗಿ ಅದೊಂದು ಬಹು ಸಂದಿಗ್ಧವಾದ ಪ್ರಸಂಗ. ನರಹರಿಯನ್ನು ಹಿಮಾಲಯಕ್ಕೆ ಕಳಿಸುವ ಆತುರದಿಂದ. ಲೇಖಕರು ಈ ಪ್ರಸಂಗವನ್ನು ತೇಲಿಸಿಬಿಟ್ಟಿದ್ದಾರೆ. ಇದೊಂದು ಕೊರತೆಯನ್ನು ಮರೆತರೆ. 'ನಿರಾಕರಣ' ವಿಚಾರ ಪ್ರಚೋದಕವಾದ ಒಂದು ವಿಶಿಷ್ಟವಾದ ತೂಕವುಳ್ಳ ಬರವಣಿಗೆ.

**ಕೇವಲ ಮನುಷ್ಯರು** ಶಿವರಾಮ ಕಾರಂತರ ಈ ವರ್ಷದ ಕೊಡುಗೆ. 'ಅಳಿದ ಮೇಲೆ' ಕಾದಂಬರಿಯಿಂದ ಬೇರೊಂದು ತಿರುವಿಗೆ ಬಂದು. ಕಾರಂತರ ಬರವಣಿಗೆ ದಿನದಿಂದ ದಿನಕ್ಕೆ ವೈಚಾರಿಕವಾಗತೊಡಗಿದೆ. ಪ್ರಸ್ತುತ ಕಾದಂಬರಿ ಕೂಡ, ಅಧ್ಯಾತ್ಮದ ಬಗ್ಗೆ ಹೊಸ ವಿಚಾರವಂತಿಕೆಯನ್ನು ಪ್ರಸ್ತಾಪಿಸುತ್ತದೆ. ಸಂಸಾರ ಎನ್ನುವುದು ಅಧ್ಯಾತ್ಮಕ್ಕೆ ವಿರೋಧ ಎನ್ನುವವರು. ಉಪ್ಪು–ಹುಳಿ–ಖಾರ ತಿಂದುಂಥ ಮನುಷ್ಯರಾಗಿರ

ಲಿಲ್ಲವೆ? ಹಾಗಾದರೆ ದೈವತ್ವವನ್ನು ಈ ಮನುಷ್ಯ ಗಂಡು ಹೆಣ್ಣು ರೂಪಗಳಲ್ಲಿ ಭಾವಿಸಿ, ದೇವರನ್ನೂ ಸಂಸಾರಿ ಎಂಬಂತೆ ಭಾವಿಸಿದ್ದೇಕೆ? ರಾಧಾ–ಕೃಷ್ಣರ ಕಲ್ಪನೆಯಲ್ಲಿ ಭೋಗ ಜೀವನವನ್ನು ಒಂದೆಡೆ ದೈವತ್ವಕ್ಕೇರಿಸಿ, ಇಂಥ ದೈವದ ಸಾಕ್ಷಾತ್ಕಾರಕ್ಕೆ ಗಂಡು–ಹೆಣ್ಣಿನ ಭೋಗಜೀವನ ಒಂದು ಆತಂಕ ಎಂದು ಭಾವಿಸಿದ್ದು ವಿಲಕ್ಷಣವಾಗಿಲ್ಲವೆ? – ಇಂಥ ಕೆಲವು ದಂಗುಬಡಿಸುವ ಪ್ರಶ್ನೆಗಳನ್ನು ಕಾರಂತರು ಈ ಕಾದಂಬರಿಯಲ್ಲಿ ಎತ್ತಿದ್ದಾರೆ.

ಈ ಕಾದಂಬರಿಯ ಪಾತ್ರಗಳು, ರಿಟೈರ್ ಆದ ವ್ಯಕ್ತಿಗಳು. ಹಯವದನರಾಯರು ಎಂಜಿನಿಯರ್ ಆಗಿದ್ದು ನಿವೃತ್ತರಾದ ಗಳಿಗೆಯಿಂದಲೆ ಈ ಕಾದಂಬರಿಯ ಆರಂಭ. ಅಧಿಕಾರದಿಂದ ನಿವೃತ್ತರಾದ ಕೂಡಲೆ, ಅಂಥ ವ್ಯಕ್ತಿಗಳಿಗೆ ಕವಿಯುವ ಶೂನ್ಯ, ಅದನ್ನು ತುಂಬಿಕೊಳ್ಳಲು ಅವರು ಕೈಕೊಳ್ಳುವ ಕಾರ್ಯವಿಧಾನಗಳು. ಅವರು ಎತ್ತುವ ಚರ್ಚಿಸುವ ಪ್ರಶ್ನೆಗಳು ಇವೇ ಈ ಕಾದಂಬರಿಯ ಮುಖ್ಯ ವಸ್ತು. ನಿವೃತ್ತನಾದ ನಂತರ, ವ್ಯಕ್ತಿಗೆ ದಿನದಿಂದ ದಿನಕ್ಕೆ ಕವಿಯುವ ಸಾವಿನ ಭಯ. ಆತನಲ್ಲಿ ಎಲ್ಲಿಲ್ಲದ ಅಧ್ಯಾತ್ಮಿಕ ಹಂಬಲವನ್ನು ತುಂಬುತ್ತದೆ. ಈ ಕಾದಂಬರಿಯ ಹಯವದನರಾಯರಿಗೆ ಆದದ್ದು ಹಾಗೆಯೆ. ಆದರೆ ಮನುಷ್ಯ ಏನೇ ಅಧ್ಯಾತ್ಮಿಕ ಪ್ರಶ್ನೆಗಳನ್ನೆತ್ತಲಿ, ಆದರ್ಶಗಳನ್ನು ಮಾತನಾಡಲಿ ಆತ 'ಕೇವಲ ಮನುಷ್ಯ' ಮೂಲಭೂತವಾಗಿ, ಎಂಬುದನ್ನು ಆತನ ಬದುಕಿನ ದುರ್ಬಲ (?) ಕ್ಷಣಗಳು ಸಮರ್ಥಿಸುತ್ತಾಹೋಗುತ್ತವೆ. ವ್ಯಕ್ತಿ ತಾನು ಏನು ಎಂಬುದನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಹಯವದನರಾಯರು ತಂಗಮಣಿ ಹಾಗೂ ಕಾವೇರಿಯೊಂದಿಗೆ ಸಂಬಂಧ ಬೆಳೆಸಿದ ಸಂದರ್ಭಗಳು ಇದಕ್ಕೆ ಸಾಕ್ಷಿಯಾಗಿವೆ.

ಹಯವದನರಾಯರ ನಿವೃತ್ತಿಜೀವನದ ಕತೆಯಾಗಿ ಮೊದಲಾದ ಈ ಕಾದಂಬರಿ, ಅರ್ಧದಷ್ಟು ಭಾಗದ ನಂತರ, 'ಅಭಿನ್ನಾನಂದ'ನಾಗಿ ಆಶ್ರಮವನ್ನು ಕಟ್ಟಿಕೊಂಡ ಮುಕುಂದ ಕಮ್ತಿಯ ವೃತ್ತಾಂತಕ್ಕೆ ಬಂದು ಕೂಡುತ್ತದೆ. ಆದರೆ 'ಅಭಿನ್ನಾನಂದ', ಕಾರಂತರ ಹಿಂದಿನ ಕಾದಂಬರಿಗಳ 'ಸನ್ಯಾಸಿ'ಗಳಿಂದ ಭಿನ್ನವಾದವನು. ಕಾರಂತರ ಇತರ ಕಾದಂಬರಿಗಳ 'ಸನ್ಯಾಸಿ'ಗಳು ತಾವೇ ಸಾಕ್ಷಾತ್ ದೈವವೆಂಬ ಭ್ರಮೆಯಲ್ಲಿ ತಮ್ಮನ್ನೂ ಜನರನ್ನೂ ವಂಚಿಸಿದವರು: ಆದರೆ ಈ ಕಾದಂಬರಿಯ ಸನ್ಯಾಸಿ ತಾನು 'ಕೇವಲ ಮನುಷ್ಯ'ನೆಂಬುದನ್ನು ಅರಿತವನು. ಆದುದರಿಂದಲೇ ಶಾಂತಳೊಂದಿಗಿರುವ ಈತನ ಸಂಬಂಧ ಒಂದು ಬಗೆಯ ನಿರ್ಲಿಪ್ತತೆಯಿಂದ ಕೂಡಿದೆ. ಈತ ತಾನು 'ಕೇವಲ ಮನುಷ್ಯ'ನೆಂಬ ಮಿತಿಯನ್ನು ಅರಿತರೂ, ಅದರಿಂದಾಚೆಗೆಯ ನಿಲುವಿಗೆ ಕಾತರಿಸಿ, ತನ್ನ ಬದುಕಿಗೆ ಒಂದಿಷ್ಟು ಆಳ–ಅಗಲಗಳನ್ನು ತರಲು ಪ್ರಯತ್ನಿಸಿದವನು.

ಈ ಕಾದಂಬರಿಯಲ್ಲಿ ಕಾಣುವ ಹಯವದನರಾಯ–ಕಾವೇರಿಯರ ಸಂಬಂಧ, ಶಾಂತಾ–ಅಭಿನ್ನಾನಂದ ಇವರ ಸಂಬಂಧ ಮೇಲುನೋಟಕ್ಕೆ ಅನೈತಿಕವೆಂಬಂತೆ ಕಂಡರೂ ಆ ಸಂಬಂಧದಲ್ಲಿ ಸಿಲುಕಿಕೊಂಡ ವ್ಯಕ್ತಿಗಳೇ ಅದನ್ನು ಹಾಗೆಂದು ಭಾವಿಸಿ ತಾಕಲಾಡುವುದಿಲ್ಲ. ಅದನ್ನೊಂದು ಮಹತ್ವದ ನೈತಿಕ ಪ್ರಶ್ನೆಯನ್ನಾಗಿ ಮಾಡಿಕೊಂಡು ತೊಳಲಾಡುವುದಿಲ್ಲ. ಅದನ್ನೊಂದು ಜೀವನವಿಧಾನವೆಂದು ತಣ್ಣಗೆ ಒಪ್ಪಿಕೊಳ್ಳುತ್ತಾರೆ.

ಇದುವರೆಗಿನ ಕಾರಂತರ ಕಾದಂಬರಿಗಳಲ್ಲಿ ಇದೊಂದು ತೀರಾ ವಿಲಕ್ಷಣವಾದ

ವೈಚಾರಿಕ ಕೃತಿಯಾಗಿದೆ. ಈ ಕೃತಿಯಲ್ಲಿ ಅವರು ಚಿತ್ರಿಸುವ ಪಾತ್ರಗಳು, ಎತ್ತುವ ಪ್ರಶ್ನೆಗಳು ಸಾಂಪ್ರದಾಯಿಕ ಜೀವನದೃಷ್ಟಿಯನ್ನೂ, ವೈಚಾರಿಕತೆಯನ್ನೂ ಕೆಣಕುವಂಥವು.

ಶ್ರೀಕೃಷ್ಣ ಆಲನಹಳ್ಳಿಯವರ **ಕಾಡು** ಪ್ರಾದೇಶಿಕ ಸತ್ವವನ್ನು ಪ್ರಕಟಿಸುವ, ಪರಿಣಾಮಕಾರಿಯಾದ ಕಾದಂಬರಿ. ಮೈಸೂರು–ಕೇರಳ ಗಡಿಯ ಗ್ರಾಮವೊಂದರ ದುರಂತ ಜೀವನದ ಕತೆ ಈ 'ಕಾಡು'. ಗ್ರಾಮಪರಿಸರದ ಹಿನ್ನಲೆಯುಳ್ಳ ಇಂಥ ಕಾದಂಬರಿಗಳು ಕನ್ನಡಕ್ಕೆ ಹೊಸತೇನಲ್ಲ. ಆದರೆ ಈ ಕಾದಂಬರಿ ಮುಖ್ಯವಾಗಿ ನಿಂತಿರುವುದು ಬರವಣಿಗೆಯಲ್ಲಿರುವ ಸತ್ವದಿಂದ. ಕೆಲವೇ ಪುಟಗಳಲ್ಲಿ ಅನೇಕ ಘಟನಾ ಪರಂಪರೆಗಳನ್ನು ಸವೇಗವಾಗಿ ಮೂಡಿಸುವ ಸಾಮರ್ಥ್ಯ ಈ ಬರೆವಣಿಗೆಗಿದೆ. ಕೇವಲ ಎಂಬತ್ತನಾಲ್ಕು ಪುಟಗಳಲ್ಲಿ ಅದೆಷ್ಟು ವ್ಯಕ್ತಿಗಳು, ಅದೆಷ್ಟು ಘಟನೆಗಳು. ಆದರೆ ಯಾವ ಒಂದು ಪಾತ್ರವೂ, ಈ ವೇಗದಿಂದ ತೆಳ್ಳಗಾಗುತ್ತದೆಯೇ ವಿನಾ, ಮೈತುಂಬಿಕೊಂಡು ನಿಲ್ಲುವುದಿಲ್ಲ. ಆದರೆ ಕೆಲವು ಘಟನೆಗಳು–ಹಳ್ಳಿಯ ಅನೈತಿಕ ಪ್ರಣಯಗಳು, ಆಕ್ರೋಶಗಳು, ನಂಬಿಕೆಗಳು – ಗೆರೆಯೆಳೆದು ರೂಪಿಸಿದಂತೆ, ನಿಲ್ಲುತ್ತವೆ.

ಈ ಕಾದಂಬರಿಯ ಒಂದು ವಿಶೇಷವೆಂದರೆ, ಇಡೀ ಕಾದಂಬರಿ, ಮುಗ್ಧನಾದ ಪುಟ್ಟ ಹುಡುಗನೊಬ್ಬನ ಕಣ್ಣಿನ ಮೂಲಕ ಕಂಡ ಬದುಕಿನ ನೋಟವಾಗಿದೆ. ಸಾವು ಮತ್ತು ಕಾಮ ಈ ಎರಡು ಪುಟ್ಟ ಹುಡುಗನ ಮನಸ್ಸಿನ ಮೇಲೆ ಮಾಡಿದ ವಿಲಕ್ಷಣ ಪರಿಣಾಮವೆ ಈ ಕಾದಂಬರಿಯ ಕೇಂದ್ರವಾಗಿದೆ. ಹಾವು ಕಡಿದು ಸತ್ತ ಅಜ್ಜನ ಸಾವು, ನಾಗಿಯ ಅಜ್ಜಿಯ ಸಾವು, ಗೌರಿ ಎಂಬ ಹಸುವಿನ ಸಾವು, ನೇಣುಹಾಕಿಕೊಂಡು ಸತ್ತ ಸಾವಿತ್ರಿಯ ಸಾವು, ಕಡೆಗೆ ತನ್ನ ಪ್ರೀತಿಯ ಅತ್ತೆಯ ಸಾವು – ಈ ನಡುವೆ ಆ ಹುಡುಗ ಕಂಡ, ಕೇಳಿದ ಆದರೆ ಅರ್ಥವಾಗದ 'ಕಾಮ'ದ ಸಂಗತಿ. ಈ ಎರಡು ಕಿಟ್ಟಿಯಂಥ ಹುಡುಗನ ಮನಸ್ಸಿನ ಸುತ್ತ ಅರ್ಥವಾಗದ ದಟ್ಟವಾದ ಕಾಡನ್ನು ನಿರ್ಮಿಸುತ್ತವೆ. ಈ ದೃಷ್ಟಿಯಿಂದ 'ಕಾಡು' ಈ ಕಾದಂಬರಿಯಲ್ಲಿ ಹೊರಗಿನದಲ್ಲ; ಒಳಗಿನದು. ಹೊರಗಿನ ಕಾಡು ಒಂದು ಜೀವಂತ ಪಾತ್ರವಾಗಿ ಇಲ್ಲಿನ ವ್ಯಕ್ತಿಜೀವನದೊಂದಿಗೆ ಬೆರೆತಿಲ್ಲ. ಮತ್ತು ಕಿಟ್ಟುವಿನ ಕಣ್ಣಮುಂದೆ ನಡೆಯುವ ಘಟನೆಗಳಿಗೆಲ್ಲ ವೈಚಾರಿಕ ಬಲವಿಲ್ಲ. ಕಮಲಮ್ಮನ ಪಾತ್ರವೊಂದನ್ನು ಬಿಟ್ಟರೆ ಉಳಿದ ಪಾತ್ರಗಳು ನೆರಳುಗಳಂತಿವೆ. ಕೆಲವು ಸಂಕೇತಗಳು ಯಶಸ್ವಿಯಾಗಿವೆ. ಬಣವೆ ಬೆಂಕಿ ಉರಿದು ತಣ್ಣಗೆ ಬಿದ್ದ ಬೂದಿರಾಶಿ – ಆ ಊರಿನ ಸ್ಥಿತಿಗೆ ಸಂಕೇತ; ಊರಲ್ಲಿ ನಾಟಕದ ಸಿದ್ಧತೆ ನಡೆದು, ಲಾರಿಯಲ್ಲಿ ಹೊಸ ದಿರುಸುಗಳು ಬಂದಾಗ, ಚಂದ್ರೇಗೌಡರು ಪೋಲಿಸರ ಹಿಂದೆ ಹೋಗಬೇಕಾಗಿ ನಾಟಕ ನಿಂತದ್ದು ಒಂದು ಯಶಸ್ವಿಯಾದ ಸಂಕೇತವಾಗಿದೆ, ಒಟ್ಟಿನಲ್ಲಿ ಇದು ಮಹತ್ವಾಕಾಂಕ್ಷೆಯ ಬರೆವಣಿಗೆ; ಭರವಸೆ ಹುಟ್ಟಿಸುವ ಬರೆವಣಿಗೆ.

ಗಿರಿ ಅವರ **ಗತಿ–ಸ್ಥಿತಿ** ಮತ್ತು ಶಾಂತಿನಾಥ ದೇಸಾಯಿಯವರ **ವಿಕ್ಷೇಪ**–ಇವೆರಡೂ ಬಹುಮಟ್ಟಿಗೆ ಒಂದೇ ರೀತಿಯ ಮನಃಸ್ಥಿತಿಯ ಚಿತ್ರಣವನ್ನು ಕೊಡುವ ಕಾದಂಬರಿಗಳು. ಒಂದು ಪರಿಸರದಿಂದ ಮತ್ತೊಂದು ಪರಿಸರಕ್ಕೆ ಓಡುವ, ಆದರೆ

ಎಲ್ಲೂ ಬೇರೂರದೆ ಅಸಹಾಯಕತೆಯಿಂದ ಪರಿತಪಿಸುವ ಇಂದಿನ 'ಯುವ ಜನಾಂಗ'ದ ಸ್ಥಿತಿಗೆ ಈ ಎರಡೂ ಕಾದಂಬರಿಗಳು ಪ್ರತಿಮೆಯಾಗಿವೆ.

ಅನಂತಮೂರ್ತಿಯವರ 'ಸಂಸ್ಕಾರ'ದ ನಂತರ ಓದುಗರ ಮತ್ತು ವಿಮರ್ಶಕರ ಗಮನವನ್ನು ವಿಶೇಷವಾಗಿ ಸೆಳೆದಿರುವುದು, ಹೆಚ್ಚಾಗಿ ವಿಮರ್ಶೆಗಳನ್ನು, ಪ್ರತಿಕ್ರಿಯೆ ಗಳನ್ನು ಗಿಟ್ಟಿಸಿಕೊಂಡದ್ದು, ಸಾಹಿತ್ಯಾಸಕ್ತರ ಕೂಟಗಳಲ್ಲಿ ಮತ್ತೆ ಮತ್ತೆ ಚರ್ಚೆಗೆ ವಿಷಯ ವಾದದ್ದು, ಗಿರಿಯವರ **ಗತಿ-ಸ್ಥಿತಿ**.

ಈ ಕಾದಂಬರಿಯನ್ನು ಓದಿದ ಮೇಲೆ, ಇದು ಗಾಢವಾಗಿ ಮನಸ್ಸನ್ನು ಕಲಕು ವಂಥ ಕೃತಿ ಎಂದು ಅನ್ನಿಸುವುದು. ವಿಲಕ್ಷಣವಾದ ಅನುಭವದಿಂದ ಮನಸ್ಸನ್ನು ಆಕ್ರ ಮಿಸುವುದು ನಿಜ. ಒಂದೇ ಹಿಡಿತದಲ್ಲಿ ಓದಿಸಿಕೊಂಡುಹೋಗುವ ಈ ಕೃತಿ, ಅನೇಕ ನೆಳಲು-ಬೆಳಕುಗಳ ಓಣಿ ತಿರುವುಗಳಲ್ಲಿ ಓದುಗನನ್ನು ಸುತ್ತಿಸಿ ವಿಲಕ್ಷಣಾನುಭವದಲ್ಲಿ ಅದ್ದುತ್ತದೆ. ಇದರಿಂದ ಪಾರಾಗಿ ವಿಚಾರ ಮಾಡುತ್ತ ಕೂತರೆ, ಈ ಕಾದಂಬರಿಯ ಉದ್ದೇಶ ಏನು? ಇಲ್ಲಿನ ಘಟನೆಗಳ ಅರ್ಥವಂತಿಕೆ ಏನು? ಇವರಲ್ಲಿನ ಪರಿಸರ ಲೇಖ ಕರ ವಿಲಕ್ಷಣ ಕಲ್ಪನೆಯೋ, ವಾಸ್ತವವೋ. ಅಥವಾ ವಾಸ್ತವಕ್ಕೆ ಒಡ್ಡಿದ ಅತಿಶಯ ಪ್ರತಿಮೆಯೋ? ಇದರ ಭಾಷೆಯ ಸೆಳವಿನ ಸ್ವರೂಪವೇನು?-ಇತ್ಯಾದಿ ಪ್ರಶ್ನೆಗಳು ಕಾಡುತ್ತವೆ.

ಈ ಕಾದಂಬರಿಯ ವಸ್ತು, ತಪ್ಪಿಸಿಕೊಂಡು ಓಡಿಹೋಗಲು ತವಕಪಡುವಂಥ ಒಂದು ಪರಿಸ್ಥಿತಿ; ಆದರೆ ತಪ್ಪಿಸಿಕೊಂಡು ಎಲ್ಲಿಗೂ ಹೋಗಲಾರದ ಒಂದು ಅಸಹಾಯ ಕತೆ. ಈ ಕಾದಂಬರಿಯ 'ಆತ', ಯಾರಾದರೂ ಆಗಬಹುದು. ಈತ ಸಿಕ್ಕಿಕೊಂಡು ತೊಳಲಾಡುವ ಊರು ಯಾವ ಊರಾದರೂ ಆಗಬಹುದು. ಆ ಊರು, ಅಲ್ಲಿ ಆತ ಪಡೆಯುವ ಅನುಭವಗಳು-ಮೊದಲು ಕೊಠಡಿಗೆ ಪರದಾಟ; ಕಡೆಗೆ ಸಿಕ್ಕ ಕೊಠಡಿಯ ಹಿಂದೆ ಆಗಲೋ ಈಗಲೋ ಜಾರಿಬೀಳುತ್ತದೆನ್ನುವ ಬಂಡೆಬೆಟ್ಟ ಬಿತ್ತುವ ಭಯ ವಿಸ್ಮಯ; ಕೊಠಡಿಗೆ ನೇರವಾಗಿ ನುಗ್ಗುವ ಆಗಂತುಕ; ಕೆಲಸಕ್ಕೆ ಆರ್ಡರ್ ಬಂದೂ, ಕೆಲಸಕ್ಕೆ ಸೇರಿಕೊಳ್ಳಲಾಗದ ಪರಿಸ್ಥಿತಿ; ನಿರಂತರ ಕಾಯುವಿಕೆ; ಫೈಲುಗಳಲ್ಲಿ 'ಆರ್ಡರ್ ಕಾಪಿ'ಯನ್ನು ಹುಡುಕುವ ಗುಮಾಸ್ತನ ನಡವಳಿಕೆ; ತಪ್ಪಿಸಿಕೊಂಡುಹೋಗಲೆಂದು ಹೊರಟರೆ ಅನೇಕ ಬೀದಿ ತಿರುವುಗಳು ಓಡಿ ಮತ್ತೆ ಹೊರಟಲ್ಲಿಗೇ ತಂದು ಮುಟ್ಟಿಸುವ ರೀತಿ; ಹೇಗೋ ಒಂದೂರಿಂದ ಇನ್ನೊಂದೂರಿಗೆ ಹೋದರೂ, ಆ ಊರೂ, ಬೇಸರವನ್ನು ಹಿಡಿಸಿ ಅಲ್ಲಿಂದಲೂ ತಪ್ಪಿಸಿಕೊಂಡು ಹೋಗಬೇಕೆನ್ನಿಸುವ ಆವರಣ- ಹೀಗೆ ಈ ಕಾದಂಬರಿಯ 'ಆತ' ನ ಅನುಭವಗಳು, ಒಂದು ಬಗೆಯ ಕ್ರೂರ, ಕಠೋರ ಪರಿಸ್ಥಿತಿಗೆ ಸಂಕೇತವಾಗಿವೆ. ವ್ಯಕ್ತಿತ್ವವೆ ಇಲ್ಲದ ಈ ಕಾದಂಬರಿಯ ಪಾತ್ರ, ಯಾವ ಪ್ರತಿಕ್ರಿಯೆಯ ಮೂಲಕವೂ ಯಾವ ಒಂದು ವೈಚಾರಿಕ ನಿಲುವನ್ನೂ ಪ್ರತಿಪಾದಿಸದೆ ಒಂದು ಪರಿಸರದಿಂದ ಮತ್ತೊಂದು ಪರಿಸರಕ್ಕೆ ಓಡುವುದರಿಂದ ಯಾವ ಅನುಭವವೂ ಅರ್ಥಪೂರ್ಣವಾಗದೆ, ಆತನ ಮನಸ್ಸು ಕ್ಯಾಮರಾದ ಕಣ್ಣಿನಂತೆ ಸುತ್ತಣ ಸ್ಥಿತಿ-ಗತಿಯ ನಡುವೆ ಹಾಯುತ್ತಾ ಹೋದ ಅನುಭವವಾಗುತ್ತದೆ.

ಈ ಕಾದಂಬರಿಯ ಭಾಷಾ ಪ್ರಯೋಗದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಗಿರಿಯವರ ಭಾಷೆಗೆ ಅದ್ಭುತವಾದ ಸೆಳವಿದೆ; ಸಂಕೀರ್ಣತೆಯನ್ನು ಸೆರೆಹಿಡಿದು ನಿಲ್ಲಿಸುವ ಶಕ್ತಿಯಿದೆ; ರೀಲುರೀಲಾಗಿ ಕಣ್ಮುಂದೆ ಚಿತ್ರವನ್ನು ಬಿಚ್ಚುವ ಸಾಮರ್ಥ್ಯವಿದೆ. ಆದರೆ ಒಂದು ಸಮಗ್ರ ಅನುಭವವನ್ನು ಕಟ್ಟಿಕೊಡುವುದರಲ್ಲಿ ಇದು ಸೋತಿದೆ; ಕೆಲವೆಡೆ ಭಾಷೆ ಬರಿಯ ವಿವರಣೆಯಾಗುತ್ತದೆ.

ಕಾಮು–ಕಾಫ್ಕಾ ಇವರ ನೆರಳು ಈ ಕಾದಂಬರಿಯ ವಸ್ತು ಹಾಗೂ ತಂತ್ರಗಳಲ್ಲಿ ಅನುರಣಿತವಾಗಿದೆ. ನಮ್ಮ ಸುತ್ತಣ 'ಸ್ಥಿತಿ–ಗತಿ' ಗಿರಿಯವರು ಚಿತ್ರಿಸುವಷ್ಟು ಭಯಾನಕವಾಗಿದೆಯೆ ಎಂಬ ಅನುಮಾನ ಬಂದರೂ, ಕಾಮು–ಕಾಫ್ಕಾ ಅವರು ಬರೆದ ಪರಿಸರದಂತೆ ನಮ್ಮದೂ ಇದೆ ಎಂದು ನಂಬಿಸುವ ಪ್ರಯತ್ನವಿದೆಯೇನೊ ಎಂಬ ಸಂದೇಹ ಏಳುತ್ತದೆ. ನಿದರ್ಶನಕ್ಕೆ ಈ ಕಾದಂಬರಿಯಲ್ಲಿ ಬರುವ ಬಿಸಿಲಿನ ಸಂಕೇತವನ್ನು ತೆಗೆದುಕೊಳ್ಳೋಣ: ಕಾಮುನ Outsider ಕಾದಂಬರಿಯ ಬಿಸಿಲನ್ನು ಲೇಖಕರು, ಈ ಕಾದಂಬರಿಯ ಪರಿಸರಕ್ಕೆ ವರ್ಗಾಯಿಸಿಕೊಂಡಂತಾಗಿದೆಯೆ ವಿನಾ, ಇಲ್ಲಿನ ಬಿಸಿಲು 'ಆತ'ನ ಮನಃಸ್ಥಿತಿಗೆ ಸಂಕೇತವಾಗುವುದಿಲ್ಲ. Outsider ಕಾದಂಬರಿಯಲ್ಲಿ ಇಂಥದೇ ಬಿಸಿಲು, ಆ ಕಾದಂಬರಿಯ ವಸ್ತುವಿಗೆ ಸಂಬಂಧಿಸಿದ್ದಾಗಿ, ಕಾದಂಬರಿಯ ನಾಯಕನ ಮನಸ್ಸಿನ ಮೇಲೆ ತೀವ್ರವಾದ ಪರಿಣಾಮ ಬೀರಿ, ಆತ ಮಾಡುವ ಕೊಲೆಗೆ, ತದನಂತರದ ಪರಿಣಾಮಗಳಿಗೆ ಕಾರಣವೂ ಆಗುತ್ತದೆ. ಆದರೆ, ಕಾಮು–ಕಾಫ್ಕರ ಕೃತಿಗಳನ್ನು ಓದಿದ ನಂತರ ಎಚ್ಚೆತ್ತ ಪ್ರಜ್ಞೆಯಲ್ಲಿ ನಮ್ಮ ಪರಿಸರದ ಅನುಭವಗಳನ್ನು ಗುರುತಿಸಿಕೊಳ್ಳುವ ಅನುಭವಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನವೂ ಇಲ್ಲಿ ನಡೆದಿದೆ.

ಈ ಕೃತಿಯಲ್ಲಿ ಕನ್ನಡದ ಎಷ್ಟೋ ಕಾದಂಬರಿಗಳಲ್ಲಿ ಕಾಣಲಾಗದ ವಿಶೇಷಾಂಶಗಳಿದ್ದರೂ, ಕೇವಲ ಭಾಷೆ ಹಾಗೂ ತಂತ್ರದ ಮಟ್ಟದಲ್ಲೇ ಸಾರ್ಥಕತೆಯನ್ನು ಕಂಡುಕೊಂಡು ವಿರಮಿಸಿದಂತೆ ತೋರುತ್ತದೆ.

ಶಾಂತಿನಾಥ ದೇಸಾಯಿ ಅವರ **ವಿಕ್ಷೇಪ** ದ ನಾಯಕ 'ರಾಹುಲ', 'ಸ್ಥಿತಿ–ಗತಿ'ಯ ನಾಯಕನಂತೆ ಬೇರಿಲ್ಲದವನು. ಆದರೆ 'ಸ್ಥಿತಿ–ಗತಿ'ಯ 'ಆತ'ನಂತೆ ಒಂದು ವ್ಯಕಿತ್ವವಿಲ್ಲದವನಲ್ಲ. ಆದರೆ ರಾಹುಲನ ವ್ಯಕಿತ್ವದಲ್ಲಿ 'ವಿಕ್ಷೇಪ'ವಿದೆ. ಈ ವಿಕ್ಷೇಪ ರಾಹುಲನ ಒಂದು ಮಾನಸಿಕ ಅವಸ್ಥೆಯಾಗಿದೆ. "ನಾನು ನಿಜವಾಗಿಯೂ ಯಾರು ಗೊತ್ತೆ? ಜಿಪ್ಸಿ–ಊರಿಂದ ಊರಿಗೆ, ದೇಶದಿಂದ ದೇಶಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ, ಹೆಣ್ಣಿನಿಂದ ಹೆಣ್ಣಿಗೆ, ತಿರುಗುವ ಜಿಪ್ಸಿ ನಾನು. ನನಗೆ ಬೇರೆಂಬುದಿಲ್ಲ ನೋಡು – ಅದಕ್ಕೇ ಹೃದಯವೂ ಇಲ್ಲ– ನನಗೆ ತಳವಿಲ್ಲ, ಬುಡವಿಲ್ಲ" (ಪು. 255) – ಎಂದು ಈ ಕಾದಂಬರಿಯ ನಾಯಕ ನಾಟಕೀಯವಾಗಿ ಸ್ವಾತ್ಮವಿಮರ್ಶೆ ಮಾಡಿಕೊಳ್ಳುವ ಸ್ವಗತವನ್ನೋದಿದರೆ, ಆತನ ಪಾತ್ರದ ಸ್ವರೂಪ ತಿಳಿಯುತ್ತದೆ. ರಾಹುಲ ಬುದ್ಧಿವಂತ; ಯಾವ ಹೆಣ್ಣೂ ಮೆಚ್ಚುವಂಥ ವ್ಯಕ್ತಿತ್ವ. ಆದರೆ ಆತನ ಮಾನಸಿಕ ಅಸ್ವಸ್ಥತೆಯಿಂದಾಗಿ ಆತ ಯಾವುದನ್ನೂ ಹಿಡಿಯಲಾರ; ಎಲ್ಲೂ ನಿಲ್ಲಲಾರ. ಮಾಥ ಪಿಯೊಂದಿಗೆ ಮದುವೆಮಾಡಿಕೊಳ್ಳುವ ಆಸೆ,

ಆದರೆ ಮದುವೆಯಾಗಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಲಾರೆ ಎಂಬ ನಿಲುವು–ಎರಡರ ನಡುವೆ ತೂಗಾಡುತ್ತ, ಕಂಡ ಕಂಡ ಹೆಣ್ಣಿನೊಡನೆ ತಾನು ಬಾಳುವೆ ಮಾಡಿದರೆ ಹೇಗೆ ಎಂಬ ಆಸೆಗಳನ್ನು ಪ್ರಕಟಿಸುತ್ತ, ಕಡೆಗೆ ಮದುವೆಯಾದ ಹೆಣ್ಣಿನ ಜತೆಗೂ ಸುಖಪಡ ಲಾರದೆ ತೊಳಲುವ ಅವಸ್ಥೆ ಓದುಗರನ್ನು ಬೆರಗುಗೊಳಿಸುತ್ತದೆ. ರಾಹುಲನ ಈ ಅಸ್ವಸ್ಥತೆ, ಆತನಿಗೇ ವಿಶಿಷ್ಟವಾದ ಚಿತ್ತಸ್ಥಿತಿಯೆ, ಅಥವಾ ಇಂದಿನ ಆಧುನಿಕಜೀವನದ ಪರಿಣಾಮದಿಂದ ಆದದ್ದೇ?–ಎಂಬ ಪ್ರಶ್ನೆ ಏಳುತ್ತದೆ. ಈ ಕಾದಂಬರಿಯನ್ನೋದಿದರೆ ಈ 'ವಿಕ್ಷೇಪ' ಆಧುನಿಕ ಜೀವನದ ಪರಿಣಾಮವಾದ 'ಯುವ ಜನಾಂಗದ ಪ್ರಜ್ಞೆ' – ಎಂದು ಅನ್ನಿಸುವುದಕ್ಕಿಂತ ಮಿಗಿಲಾಗಿ, ರಾಹುಲನಂಥ ವ್ಯಕ್ತಿಯ ಸ್ವಭಾವ ಮಾತ್ರವಾಗಿರ ಬಹುದು ಎಂಬ ಸಂದೇಹ ದೃಢವಾಗುತ್ತದೆ.

ಇಲ್ಲಿ ಕಾಣುವ ಯುವಜನಾಂಗವೊ, ಈ ಕಾದಂಬರಿಯ ಪರಿಸರವೊ ವಿದೇಶಿಯ ವೆನ್ನಿಸುವಷ್ಟು ವಿಲಕ್ಷಣವಾಗಿ ಕಾಣುತ್ತದೆ. ಘಟನೆಗಳಾಗಲಿ, ಪಾತ್ರಗಳಾಗಲಿ, ಪರಿಸರ ವಾಗಲಿ ಪಾಶ್ಚಿಮಾತ್ಯ ಕಾದಂಬರಿಗಳನ್ನೊ, ಇಂಗ್ಲಿಷ್ ಸಿನೆಮಾಗಳನ್ನೊ ನೆನಪಿಗೆ ತರು ತ್ತವೆ. ಮುಂಬೈ–ಗೋವಾದಂಥ ಪರಿಸರ, ಪಾಶ್ಚಾತ್ಯ ಮಾದರಿಯ ಹೋಟೆಲುಗಳು, ಕೈತುಂಬ ರೊಕ್ಕವಿರುವ ಸೊಕ್ಕಿದ ಹುಡುಗ ಹುಡುಗಿಯರು, ಇದರ ಮೇಲೆ ಕಾಲೇಜು ಗಳಲ್ಲಿ ಶಿಕ್ಷಣ ಪಡೆಯುತ್ತಿರುವವರು – ಇಷ್ಟಿದ್ದ ಮೇಲೆ ಕಾದಂಬರಿಯ ಪರಿಸರವಾಗಲಿ, ಪಾತ್ರಗಳ ನಡೆವಳಿಕೆಯಾಗಲಿ 'ಅಂತರ್ ರಾಷ್ಟ್ರೀಯ'ವಾಗುವುದು ಸಹಜ ತಾನೆ?

ಕಾದಂಬರಿಯ ಒಂದೊಂದು ಅಧ್ಯಾಯವೂ, ಒಂದೊಂದು ಘಟಕದಂತಿದ್ದು ನಾಟ್ಯಮಯವಾದ ಸಂದರ್ಭಗಳನ್ನು ಒಳಗೊಂಡಿದೆ. ರಾಹುಲನ ಪಾತ್ರದ ಒಂದೊಂದು ಎಳೆಯೂ, ಈ ಅಧ್ಯಾಯಗಳ ಮೂಲಕ ಹಾಯುತ್ತ ಬೆಳೆದುಕೊಂಡಿದೆ. ಮಾಧವಿ, ರಣಜಿತ್, ಅರವಿಂದ, ವೈದೇಹಿ, ಶಿರೀನ್ – ಇಂಥ ಪಾತ್ರಗಳು ಮೈತುಂಬಿಕೊಂಡು ನಿಂತಿವೆ. ಎಲ್ಲಕ್ಕೂ ಮಿಗಿಲಾಗಿ, ಈ ಬದುಕಿಗೆ ಒಂದು ಅರ್ಥವಿರಬೇಕೆ ಎಂಬ ಪ್ರಶ್ನೆಯ ಹಿಂದೆ ಧಾವಿಸುವ, ಕಡೆಗೆ ಯಾವುದರಲ್ಲೂ ಅರ್ಥವನ್ನು ಕಾಣದೆ, ಯಾವುದರಲ್ಲೂ ಬೇರೂರದೆ, ಕಡೆಗೆ ಈ ಪರಿಸರವನ್ನೇ ಬಿಟ್ಟು ಬೇರೊಂದು ದೇಶಕ್ಕೆ ಹೋಗಬೇಕೆಂಬ ಸಂಕಲ್ಪದಲ್ಲಿ ಆಸರೆ ಪಡೆಯುವ ರಾಹುಲನ ವಿಕ್ಷಿಪ್ತ ಮನಃಸ್ಥಿತಿ ಮರುಕ ತರುವಂಥದ್ದು, ಗಿರಿಯವರ 'ಗತಿ–ಸ್ಥಿತಿ'ಯಲ್ಲಿ ಇಲ್ಲದಿದ್ದ ಪಾತ್ರಕಲ್ಪನೆ, ಕಥಾವಸ್ತು; ವೈಚಾರಿಕತೆ, ದೇಸಾಯಿಯವರ 'ವಿಕ್ಷೇಪ'ದಲ್ಲಿದೆ. ಆದರೆ ಗಿರಿಯವರಿಗಿರುವ ಭಾಷೆ, ದೇಸಾಯಿಯವರಿ ಗಿಲ್ಲ. ಆದರೂ ಶಾಂತಿನಾಥ ದೇಸಾಯಿಯವರ ಭಾಷೆಯ ದೌರ್ಬಲ್ಯವನ್ನು ಮುಚ್ಚಿ ಬಿಡುವ ಗಟ್ಟಿಮುಟ್ಟಾದ ಅವರ ಕಥನಕಲೆ ಎಲ್ಲವನ್ನೂ ಗೆದ್ದು ನಿಲ್ಲುತ್ತದೆ. 'ಮುಕ್ತಿ' ಕಾದಂಬರಿಯ ಮುಂದುವರಿದ ರೂಪದಂತಿರುವ 'ವಿಕ್ಷೇಪ' ಒಂದು ಯಶಸ್ವಿಯಾದ ನೂತನಪ್ರಯೋಗವಾಗಿದೆ.

–5–

ಈ ವರ್ಷದ ಕಾದಂಬರಿಗಳ ಪರಿಶೀಲನೆಯಿಂದ ಈ ಕೆಲವು ಅಂಶಗಳು ಸ್ಫುಟ ವಾಗುತ್ತವೆ: ಅಧಿಕ ಸಂಖ್ಯೆಯ ಕಾದಂಬರಿಕಾರರು ಯಾವ ಸಮಸ್ಯೆಯನ್ನೂ ತಲೆಗೆ

ತಂದುಕೊಳ್ಳದೆ, ಸಲೀಸಾಗಿ ಓದಿಸಿಕೊಂಡು ಹೋಗಬಲ್ಲ ರೋಚಕವಾದ 'ಚಲನಚಿತ್ರ ಕಥೆ'ಗಳನ್ನು ಬರೆದಿದ್ದಾರೆ. ಚಲನಚಿತ್ರ ತಯಾರಕರು ಕಾದಂಬರಿಗಳನ್ನು ಹುಡುಕಿಕೊಂಡು ಬರಬೇಕೆ ಹೊರತು ಕಾದಂಬರಿಗಳು ಚಲನಚಿತ್ರ ತಯಾರಕರನ್ನು ಹುಡುಕಿಕೊಂಡು ಹೊರಡಬಾರದು. ಆದರೆ ಬಹುಸಂಖ್ಯೆಯ ಕಾದಂಬರಿಗಳು ಚಲನಚಿತ್ರವಾಗುವ ಗೀಳಿನಿಂದ, ಅಥವಾ ಎಂತೆಂಥವೋ ಚಲನಚಿತ್ರಗಳ ಪ್ರಭಾವದಿಂದ, ಬರೆದವಾಗಿವೆ. ರೋಮಾಂಚಕಾರಿಯಾದ ಸನ್ನಿವೇಶಗಳು; ಬದುಕಿನಲ್ಲಿ ಅಸಂಭಾವ್ಯವೆನ್ನಿಸುವ ಸಂಗತಿಗಳು; ಲೆಕ್ಕಾಚಾರ ಹಾಕಿಕೊಂಡು ಕತೆಯ–ತಂತ್ರದ ಗೆರೆಗಳನ್ನೆಳೆದು ಅದನ್ನು ತುಂಬಿಸುವ ಪ್ರವೃತ್ತಿ; ಭಾವಾತಿಸಾರ ರೋಗದ ಪಾತ್ರಗಳು; ಅಲ್ಲಲ್ಲಿ ಉಪನ್ಯಾಸಗಳು – ಹೀಗೆ ಬಹುತೇಕ ಕಾದಂಬರಿಗಳು, ಸಾಹಿತ್ಯನಿರ್ಮಿತಿಗಳೆನ್ನಿಸಿಕೊಳ್ಳಲು ತಕ್ಕ ಸತ್ವವನ್ನು ಪಡೆದಿಲ್ಲ. ಆದರೂ, ಹತ್ತು ಹನ್ನೆರಡು ಕಾದಂಬರಿಗಳು ನಿಜವಾದ ಕಾದಂಬರಿಗಳಾಗಿವೆ ಈ ವರ್ಷದ ಬರಹಗಳಲ್ಲಿ, ಎಂದು ಸಮಾಧಾನ ಪಟ್ಟುಕೊಳ್ಳಬಹುದಾಗಿದೆ. ಈ ಕೆಲವು ಕಾದಂಬರಿಗಳು ತೆಗೆದುಕೊಳ್ಳುವ ವಸ್ತು, ಎತ್ತಿರುವ ಪ್ರಶ್ನೆಗಳು, ನಡೆಸಿರುವ ಪ್ರಯೋಗಗಳು, ಓದಿದ ಮೇಲೂ ಅವು ಮಾಡುವ ಗಂಭೀರವಾದ ಪರಿಣಾಮ – ವಿಶೇಷ ರೀತಿಯದಾಗಿದೆ. ಕಾದಂಬರಿಯ ಬಗೆಗೆ ಗೌರವ ಹುಟ್ಟಿದರೆ, ನಾಳೆ ಇನ್ನೂ ಉತ್ತಮವಾದ ಭವಿಷ್ಯವನ್ನು ನಿರೀಕ್ಷಿಸುವುದಾದರೆ, ಇಂಥವುಗಳಿಂದ ಮಾತ್ರ.

## ವಿಮರ್ಶೆ

**ಕೆ. ವಿ. ನಾರಾಯಣ**

ಇಲ್ಲಿ ಗಮನಿಸಲಾಗುವ ಪುಸ್ತಕಗಳಲ್ಲಿ ಕೆಲವು ತಮ್ಮ ಉದ್ದೇಶವನ್ನು ತಲಪುವಾಗ ಸಾಹಿತ್ಯವಿಮರ್ಶೆಯ ವಲಯವನ್ನೂ ಸ್ಪರ್ಶಿಸುತ್ತವೆ. ಉಳಿದವುಗಳಲ್ಲಿ ಎರಡು ಮುಖ್ಯ ವರ್ಗಗಳು: ನೇರವಾಗಿ ಸಾಹಿತ್ಯಕೃತಿಗಳ ವಿಮರ್ಶೆಯಲ್ಲಿ ನಿರತವಾದ ಕೃತಿಗಳು; ಮತ್ತು ಸಾಹಿತ್ಯವಿಮರ್ಶೆಯ ತತ್ತ್ವಗಳು. ಸೂತ್ರಗಳು ಇವನ್ನು ಕುರಿತ ಕೃತಿಗಳು.

ಡಾ॥ ಡಿ. ಎಲ್. ನರಸಿಂಹಾಚಾರ್ ಅವರು ಕನ್ನಡದಲ್ಲಿ ಬರೆದ ಲೇಖನಗಳ ಸಂಕಲನವೊಂದು (**ಪೀಠಿಕೆಗಳು ಮತ್ತು ಲೇಖನಗಳು**) ಹೊರಬಂದಿದೆ. ಪರಿಶೋಧಕರ, ಅಭ್ಯಾಸಿಗಳ ದೃಷ್ಟಿಯಿಂದ ಈ ಗ್ರಂಥ ಅತ್ಯಂತ ಉಪಯುಕ್ತ, ಸಾಮಯಿಕ. ಡಿ. ಎಲ್, ಎನ್.ರವರ ಆಸಕ್ತಿಯ ವಲಯದ ವೈಶಾಲ್ಯವನ್ನು ಪರಿಚಯಿಸಿಕೊಡುವ ಈ ಗ್ರಂಥ ಅವರ ಪಾಂಡಿತ್ಯದ ಆಳಕ್ಕೂ ಸಾಕ್ಷಿಯಾಗಿದೆ. ಇಷ್ಟಲ್ಲದೆ ಅವರ ಸಂಶೋಧನ ವ್ಯವಸಾಯದ ತಾತ್ತ್ವಿಕ ನೆಲೆಯನ್ನು ಗುರುತಿಸುವ ಲೇಖನಗಳೂ 'ಕನ್ನಡ ನಿರುಕ್ತ' ಎನ್ನುವ ಭಾಗದಲ್ಲಿವೆ. ಈ ಗ್ರಂಥ ಅವರ ಇಂಗ್ಲಿಷ್ ಲೇಖನಗಳು ಮತ್ತು ಪುನರ್ರಚಿತವಾಗುತ್ತಿರುವ ಉಪನ್ಯಾಸಗಳೊಡನೆ ತನ್ನ ಸಮಗ್ರತೆಯನ್ನು ರೂಪಿಸಿಕೊಳ್ಳುವ ಹಾದಿಯಲ್ಲಿದೆ.

ಡಾ॥ ರಂ. ಶ್ರೀ. ಮುಗಳಿಯವರು ತಮ್ಮ **ಕನ್ನಡ ಸಾಹಿತ್ಯ ಚರಿತ್ರೆ**ಯ ಕಿರಿಯ ಆವೃತ್ತಿಯನ್ನು ನೀಡಿದ್ದಾರೆ. ಸಾಂಗತ್ಯ ತಪ್ಪದಂತೆ ಮೂಲಕೃತಿಯ ಕೆಲವು ಭಾಗಗಳನ್ನು ಬಿಡಲಾಗಿದೆ. 'ಸಂಕ್ಷಿಪ್ತರೂಪದಲ್ಲಿ ಕನ್ನಡ ಸಾಹಿತ್ಯದ ಯಥಾರ್ಥದರ್ಶನವನ್ನು ಪಥ್ಯವಾಗಿ' ಉಳ್ಳವರಿಗಾಗಿ ಈ ಕಿರಿಯ ಆವೃತ್ತಿ. ಈ ಉದ್ದೇಶಕ್ಕೆ ಅನುಗುಣವಾಗಿರುವ ಈ ಗ್ರಂಥ ಮೂಲದತ್ತ ಹೋಗದೆ ಸಂಗ್ರಹಗಳಲ್ಲಿ ತೃಪ್ತವಾಗುವ ಪ್ರವೃತ್ತಿಗೆ ಪೋಷಕವಾದೀತೇನೋ ಎನ್ನುವ ಅನುಮಾನ ಏಳುತ್ತದೆ.

ಪ್ರೊ॥ ಎ. ಆರ್. ಕೃಷ್ಣಶಾಸ್ತ್ರೀಯವರ ಬದುಕಿನ ಬಗ್ಗೆ, ಸಾಹಿತ್ಯಕೃಷಿಯ ಬಗ್ಗೆ ಬರೆದ ಲೇಖನಗಳ ಸಂಗ್ರಹ– **ಎ. ಆರ್. ಕೃ: ಜೀವನ, ಸಾಧನೆ.** ಇದು ಪ್ರಬುದ್ಧ ಕರ್ನಾಟಕ ವಿಶೇಷಾಂಕದ ಪುನರ್ಮುದ್ರಣ. ಬಹಳಷ್ಟು ಲೇಖನಗಳು ಶ್ರೀಯುತರ ಬದುಕನ್ನು ಕುರಿತಿವೆ. ಅವರ ಸಾಹಿತ್ಯವನ್ನು ಗಮನಿಸಿದ ಲೇಖನಗಳಲ್ಲಿ ಶ್ರೀನಿವಾಸರಾವ್ ಕೊರಟಿಯವರ "ಡಾ. ಎ. ಆರ್. ಕೃ. ಅವರ ಒಂದು ಅಪ್ರಕಟಿತ ಕೃತಿ–ರಾಮಪ್ಪ' (ಪುಟ 130–144) ಮತ್ತು ಶ್ರೀ ಸುಜನಾರವರ 'ಕನ್ನಡ ವ್ಯಾಸಭಾರತ: ವಚನಭಾರತ' (342–359) ಗಮನ ಸೆಳೆಯುತ್ತವೆ.

ಡಾ॥ ಎಸ್. ವಿ. ರಂಗಣ್ಣನವರು ಮೂರು ಹಂತಗಳಲ್ಲಿ ಬರೆದು ಪ್ರಕಟಿಸಿದ ಶೈಲಿಯ ವಿಚಾರ ಮತ್ತು ಕನ್ನಡದ ಕೆಲವು ಪ್ರಮುಖ ಕವಿಗಳ ಶೈಲಿ ಮೀಮಾಂಸೆ ಈಗ **ಶೈಲಿ–೧, ೨, ೩** ಎನ್ನುವ ಹೆಸರಲ್ಲಿ ಹೊರಬಂದಿದೆ. ಇದರಲ್ಲಿ ಕೊನೆಯ ಒಂಬತ್ತು

ಲೇಖನಗಳು ಮಾತ್ರ ಹೊಸವು. ಶೈಲಿಯ ಬಗ್ಗೆ ಪಾಶ್ಚಾತ್ಯ ಕಾವ್ಯವಿಮರ್ಶಕರ ಅಭಿಪ್ರಾಯಗಳನ್ನು ಉಲ್ಲೇಖಿಸಿ, ಚರ್ಚಿಸಿ ಅವುಗಳಿಂದ ಸಿದ್ಧವಾದ ಅಳತೆಗೋಲಿಂದ ಕನ್ನಡದ ಕವಿಗಳ ಶೈಲಿಯನ್ನು ವಿಮರ್ಶಿಸಿದ್ದಾರೆ. ಅನ್ಯಯ ಲೇಖನಗಳಲ್ಲಿ ಧಾರಾಳವಾಗಿ ಭಾರತೀಯ ಕಾವ್ಯಮೀಮಾಂಸೆಯ ಪಾರಿಭಾಷಿಕ ಶಬ್ದಗಳನ್ನು ಬಳಸಿದ್ದಾರೆ. ಹೀಗೆ ಬಳಸುವುದಕ್ಕೆ ಬೇಕಾದ ಸೈದ್ಧಾಂತಿಕ ಸಮನ್ವಯ ದೃಷ್ಟಿಕೋನ ಮಾತ್ರ ಕಂಡುಬರುವುದಿಲ್ಲ. ಈ ಗ್ರಂಥದಲ್ಲಿ ಸೇರಿರುವ ಹತ್ತೊಂಬತ್ತು ಕವಿಗಳ ಆಯ್ಕೆಯೇ ಅವರ ಬಗ್ಗೆ ಮಾಡಿದ ಒಂದು ಸ್ಥೂಲ ವಿಮರ್ಶೆಯಾಗುತ್ತದೆ. ಆದರೆ 'ಜನಪದ ಕವಿಯ ಶೈಲಿ' ಎನ್ನುವ ಲೇಖನದ ಔಚಿತ್ಯ ಮಾತ್ರ ಅರಿವಾಗುವುದಿಲ್ಲ. ಕವಿ ಅನಾಮಧೇಯನೆಂದು 'ಜನಪದ ಕಾವ್ಯದ ಶೈಲಿ' ಎಂದು ಬದಲಿಸಿಕೊಂಡರೆ ಪ್ರಬಂಧ ಕೇವಲ ತ್ರಿಪದಿಯ ಬಂಧಗಳನ್ನೇ ಗಮನಿಸಿದೆ. ಕೊಡಗು ಭಾಷೆಯ ಉದಾಹರಣೆಗಳೂ ತಲೆಹಾಕಿವೆ. ಈ ಪ್ರಬಂಧದ ಗೊಂದಲ ಇಡೀ ಗ್ರಂಥದ ಬಗ್ಗೆ ಕೆಲವು ಮುಖ್ಯ ಸಂಗತಿಗಳನ್ನು ತಿಳಿಸುತ್ತದೆ. ಶೈಲಿಯ ಅರ್ಥ ಲೇಖನದಿಂದ ಲೇಖನಕ್ಕೆ ವ್ಯತ್ಯಸ್ತಗೊಳ್ಳುತ್ತಾ ಹೋಗುತ್ತದೆ. ಅಭಿವ್ಯಕ್ತಿಯ ಶಾಬ್ದಿಕ ರೂಪವನ್ನು ಕೆಲವು ಸಾರಿ ಗಮನಿಸಿದರೆ ಇನ್ನೊಮ್ಮೆ ಆಶಯವನ್ನೂ ಒಳಗೊಳ್ಳುತ್ತದೆ. ಶೈಲಿಯ ಕ್ಷೇತ್ರದಲ್ಲಿ ಇನ್ನೂ ಆಗಬೇಕಾಗಿರುವ ವ್ಯವಸ್ಥಿತ ಪ್ರಯತ್ನಕ್ಕೆ ಈ ಗ್ರಂಥ ಕಾರಣವಾಗಬಲ್ಲುದು.

ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಕರ್ಪೂರ ಶ್ರೀನಿವಾಸರಾವ್‌ರವರು ಬರೆದಿದ್ದ ಕಾವ್ಯ ಮೀಮಾಂಸೆಯನ್ನು ಕುರಿತ ಲೇಖನಗಳ ಸಂಗ್ರಹ **ಸಾಹಿತ್ಯಶಾಸ್ತ್ರ.** ಈ ಶಾಸ್ತ್ರದ ವಿಷಯದಲ್ಲಿ ಅವರಿಗಿದ್ದ ಪಾಂಡಿತ್ಯದ ಆಳ ಮತ್ತು ನಿಖರತೆಗಳು 'ಶಬ್ದದ ಅಭಿಧಾಶಕ್ತಿ ಮತ್ತು ಲಕ್ಷಣಾಶಕ್ತಿ'ಗಳನ್ನು ಕುರಿತ ಕೊನೆಯ ಎರಡು ಲೇಖನಗಳಲ್ಲಿ ಸ್ಪಷ್ಟವಾಗಿವೆ. ಮುಖ್ಯ ಶೀರ್ಷಿಕೆಯನ್ನು ಉಪವಿಭಾಗಗಳನ್ನಾಗಿ ಮಾಡಿಕೊಂಡು ತರ್ಕಬದ್ಧವಾಗಿ ವಿಷಯ ನಿರೂಪಣೆ ಮಾಡುವುದು ಇವರ ವಿಧಾನ. ಕಾವ್ಯಕ್ಕೆ ಉದ್ದೇಶವಿದೆ ಎನ್ನುವುದೂ, ಕಾಂತಾಸಮ್ಮಿತತೆಯಿಂದ ಸಹೃದಯನನ್ನು ಮೋಕ್ಷದ ಕಡೆಗೆ ಪ್ರವೃತ್ತನನ್ನಾಗಿಸುವುದೇ ಆ ಉದ್ದೇಶವೆಂಬುದೂ ಇಲ್ಲಿನ ಮೊದಲ ನಾಲ್ಕು ಲೇಖನಗಳ ಸ್ಥಾಯಿ. ಅದನ್ನವರು ಆಲಂಕಾರಿಕರ ಮಾತುಗಳಿಂದ, ತಮ್ಮ ವಿಚಾರಗಳಿಂದ ಸಮರ್ಥಿಸಿದ್ದಾರೆ. ಪ್ರಾಚೀನರ ಆಲೋಚನೆಗಳ ನಿರೂಪಣೆಯಲ್ಲಿ ಪ್ರೌಢತೆಯನ್ನು ತೋರಿಸಿದರೂ ಸ್ವತಂತ್ರ ಅಭಿಪ್ರಾಯಗಳನ್ನು ಹೇಳುವಾಗ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆಯೊಡನೆ ಹೋಲಿಸುವಾಗ ಚರ್ಚಾರ್ಹವಾದ ನಿಲುವುಗಳನ್ನು ವ್ಯಕ್ತಪಡಿಸುತ್ತಾರೆ. ಸಾಹಿತ್ಯವಿಮರ್ಶೆಯ ಬಗ್ಗೆ 68ನೇ ಪುಟದಲ್ಲಿ ಹೇಳುವ ಮಾತುಗಳು ಇದಕ್ಕೆ ಉದಾಹರಣೆ.

'ಅಲಂಕಾರ', 'ಗುಣ-ದೋಷ' ಮತ್ತು 'ರಸ-ಧ್ವನಿ' ಈ ವಿಷಯಗಳನ್ನು ಗಮನಿಸಿದ ಮೂರು ಉಪನ್ಯಾಸಗಳ ಸಂಗ್ರಹ ಡಾ॥ ಕೆ. ಕೃಷ್ಣಮೂರ್ತಿಯವರ **ಭಾರತೀಯ ಕಾವ್ಯಮೀಮಾಂಸೆ: ತತ್ತ್ವ ಮತ್ತು ಪ್ರಯೋಗ.** ಅಲಂಕಾರದ ಬಗೆಗಿನ ಮೊದಲ ಉಪನ್ಯಾಸದಲ್ಲಿ ಪ್ರಾಚೀನರ ಅಲಂಕಾರತತ್ತ್ವದ ತಳಹದಿಯನ್ನು ಕುರಿತ ಬೆಲೆಯುಳ್ಳ ವಿಶ್ಲೇಷಣೆಯಿದೆ. ಅವರ 'ಸಂಸೃಷ್ಟಿ', 'ಭಾವಿಕ' ಮುಂತಾದ ಕಲ್ಪನೆಗಳು ಧ್ವನಿ ಸಿದ್ಧಾಂತದಲ್ಲಿ

ಪಡೆದ ವಿಸ್ತರಣೆ. ಕವಿನಿಬದ್ಧ ಪ್ರೌಢೋಕ್ತಿ ಎಂದು ಆಲಂಕಾರಿಕರು ಕರೆದದ್ದರ ಆಧುನಿಕ ವಿಮರ್ಶೆಯ ಸಂವಾದಿಪ್ರಕ್ರಿಯೆ (Objective correlative) ಮುಂತಾದವುಗಳ ಪ್ರೌಢ ವಿವರಣೆ ಇದೆ. ಆದರೆ ಅಲಂಕಾರಗಳ ಜ್ಞಾನ, ಅಂಗಾಂಗಿ ಭಾವದ ವಿವೇಚನೆ ಮೊದಲಾದವುಗಳು ಕಾವ್ಯಾಸ್ವಾದನೆಯನ್ನು ಗಮನಿಸುವ ಸಹೃದಯರಿಗೆ ಅವಶ್ಯಕವೇ ಎಂಬುದರ ಬಗ್ಗೆ ಪ್ರಶ್ನೆ ಉಳಿದೇಬಿಡುತ್ತದೆ. ಸಹೃದಯನೊಬ್ಬನು ಸಿದ್ಧವಾಗುವ ಹಂತದಲ್ಲಿ ಅಲಂಕಾರ ವಿವೇಚನೆಯ ತಾತ್ತ್ವಿಕ ಹಿನ್ನೆಲೆ ಪ್ರಭಾವ ಬೀರುತ್ತದೆ ಎಂಬುದು ಬಹುಶಃ ಅದಕ್ಕೆ ಉತ್ತರವಿದ್ದೀತು. ಗುಣದೋಷಗಳು ಸಾಪೇಕ್ಷ ಕಲ್ಪನೆಗಳಾಗಿ ಪ್ರಾರಂಭವಾದ ಆಲೋಚನಾ ಪರಂಪರೆ ಗುಣಗಳ ವಿಷಯದಲ್ಲಿ ಧ್ವನಿಸಿದ್ಧಾಂತಕ್ಕೆ ಪೂರ್ವಭಾವಿಯಾದ ಹಿನ್ನೆಲೆಯನ್ನು ಕಲ್ಪಿಸುವ ಮಟ್ಟಕ್ಕೆ ಬೆಳೆದುದನ್ನು ಹೇಳಿದ್ದಾರೆ. ಅನಿತ್ಯತ್ವವನ್ನು ದೋಷಗಳಿಗೆ ಆರೋಪಿಸಿದರೂ 'ಅನೌಚಿತ್ಯ'ದಂತಹ ದೋಷದ ಕಲ್ಪನೆ ಮತ್ತೆ ಧ್ವನಿ ಸಿದ್ಧಾಂತದಲ್ಲಿ ಪಡೆದ ನಿತ್ಯತ್ವವನ್ನು ಗುರುತಿಸಿದ್ದಾರೆ. 'ಉಚಿತತೆ'ಯೂ ಸಾಪೇಕ್ಷವಾಗುವುದನ್ನು ಹೇಳಿ ಅದನ್ನು ಪರಿಹರಿಸುವುದು ಸಾಧ್ಯವಿಲ್ಲವೆನ್ನುವ ನಿರ್ಣಯವನ್ನು ತಲಪಿದ್ದಾರೆ (ಪು. 34). ಮೂರನೆಯ ಉಪನ್ಯಾಸದಲ್ಲಿ ಭಾರತೀಯ ಕಾವ್ಯಮೀಮಾಂಸಕರ ಆಲೋಚನೆ ತಲಪಿದ ಪಕ್ವತೆಯನ್ನು ಹೇಳಲಾಗಿದೆ. ರಸ–ಧ್ವನಿ ಮುಂತಾದ ಪ್ರಕ್ರಿಯೆಗಳನ್ನು ಕಾವ್ಯಮೀಮಾಂಸೆಯಲ್ಲಿ ಅಳವಡಿಸಿಕೊಳ್ಳುವಾಗ ಪ್ರದರ್ಶಿಸಿದ ನಮನಶೀಲತೆಯನ್ನು ಗುರುತಿಸಿದ್ದಾರೆ. ತಾತ್ತ್ವಿಕವಾಗಿ ಇವೆರಡು ಕಲ್ಪನೆಗಳು ಕಾವ್ಯವಿಮರ್ಶೆಯ ಹಂತದಲ್ಲಿ ಪಡೆದ ಸ್ವರೂಪದ ವಿವರ ಇಲ್ಲಿದೆ. ಈ ಮೂರು ಉಪನ್ಯಾಸಗಳ ಇನ್ನೊಂದು ವೈಶಿಷ್ಟ್ಯವೆಂದರೆ ಮೂರು ಭಿನ್ನ ಪ್ರಕ್ರಿಯೆಗಳನ್ನು ಕುರಿತು ವಿಶ್ಲೇಷಣೆ ನಡೆಸುವಾಗಲೂ ಪರಸ್ಪರ ವಿರೋಧವನ್ನುಳ್ಳ ನಿಲುವುಗಳನ್ನು ತೋರಿಸದೆ ಇರುವುದು. ಇವುಗಳು ಸ್ವತಃ ಭಿನ್ನವಾಗಿರದೆ ಮೂರು ಹಂತಗಳೆಂದು ಶ್ರೀಯುತರು ಪರಿಗಣಿಸಿದ್ದರಿಂದ ಇದು ಸಾಧ್ಯವಾಗಿದೆ.

**ಕಾವ್ಯದಲ್ಲಿ ಧ್ವನಿ** ಗುರುಪಾದ ಹೆಗಡೆಯವರ ಪುಸ್ತಕ. ಪ್ರಚಾರೋಪನ್ಯಾಸ ಮಾಲೆಯ ಪುಸ್ತಿಕೆಯಾದ್ದರಿಂದ ಇದರಲ್ಲಿನ ಪರಿಚಯಾತ್ಮಕ ಧಾಟಿ ತಕ್ಕುದೇ ಆಗಿದೆ. ಮೊದಲು ಧ್ವನಿತತ್ತ್ವವನ್ನು ಅಲಂಕಾರಿಕರ ಮಾತಿನಲ್ಲಿ ವಿವರಿಸಲಾಗಿದೆ. ಆ ಮೇಲೆ, ಸಂಸ್ಕೃತ ಕಾವ್ಯನಾಟಕಗಳಲ್ಲಿ 'ಧ್ವನಿ' ಶಕ್ತಿಯನ್ನುಳ್ಳ ಉದಾಹರಣೆಗಳನ್ನು ನೀಡಿದ್ದಾರೆ. ಕೊನೆಗೆ ಕನ್ನಡ ಕಾವ್ಯಗಳಿಂದಲೂ ಉದಾಹರಣೆಗಳನ್ನು ನೀಡಿರುವುದು ಇದರ ಉಪಯುಕ್ತತೆಯನ್ನು ಹೆಚ್ಚಿಸಿದೆ. ಇವರ ಆಯ್ದ ಉದಾಹರಣೆಗಳು ಈಗಾಗಲೇ ಬಹುಪಾಲು ಅಲ್ಲಲ್ಲಿ ಉದಾಹೃತ ಆಗಿರುವಂತಹವು. ಉದಾಹರಣೆಗಳ ಆಯ್ಕೆಯಲ್ಲಿ ಸಮಾನ ಅಭಿರುಚಿ ಕಾಣುವುದಿಲ್ಲ. 29ನೇ ಪುಟದ ಜನಪದಗೀತೆ ಮತ್ತು 57ನೇ ಪುಟದ "ಇದರೊಳ್ ಶ್ವೇತಾತಪತ್ರ" ಇವು ಸಾಮಾನ್ಯ ಉದಾಹರಣೆಗಳಾಗಿವೆ. ಧ್ವನಿ ಇದೆ ಎಂದು ಹೇಳಿದರೂ ಅಲ್ಲಿ ಏನೂ ಇಲ್ಲ. ಇಷ್ಟಲ್ಲದೆ ಧ್ವನಿಯ ಎಲ್ಲ ಪ್ರಭೇದಗಳನ್ನು ಪರಿಗಣಿಸಬಹುದಾಗಿತ್ತು.

**ಪ್ರಾಯೋಗಿಕ ವಿಮರ್ಶೆ** [ಸಂ: ಡಾ॥ ಜಿ. ಎಸ್. ಶಿವರುದ್ರಪ್ಪ ಮತ್ತು ಎನ್.ಎಸ್.

ಲಕ್ಷ್ಮೀನಾರಾಯಣ ಭಟ್ಟ]ಯಲ್ಲಿ 19 ಲೇಖನಗಳಿವೆ. ಜೊತೆಗೆ ಪ್ರಾಯೋಗಿಕ ವಿಮರ್ಶೆಯನ್ನು ಕುರಿತ ಪೀಠಿಕೆಯೊಂದು ಇದೆ. ಕನ್ನಡದ ಸಂದರ್ಭದಲ್ಲಿ ಕಾವ್ಯದ ಬಗ್ಗೆ ಕೆಲವು ಮಾತುಗಳು ಪೀಠಿಕೆಯಲ್ಲಿವೆ. ಪ್ರಾಯೋಗಿಕ ವಿಮರ್ಶೆಯ ಮಾರ್ಗವನ್ನು ಕುರಿತಂ ಇಲ್ಲಿ ಏನನ್ನೂ ಹೇಳಿಲ್ಲ; ಅದರ ಗುರಿಯನ್ನು ಅಥವಾ ವಿಶ್ಲೇಷಣೆಗೆ ನಿಲುಕುವ ಕಾವ್ಯಾಂಶವನ್ನು ಕುರಿತು ಹೇಳಲಾಗಿದೆ. ಇನ್ನು ವಿಮರ್ಶೆಗಳಲ್ಲಿ ಮೂರು ವರ್ಗದವುಗಳಿವೆ: ಕೃತಿಯ ವಿಶ್ಲೇಷಣೆ ಮಾತ್ರ ಗುರಿಯನ್ನಾಗಿ ಪಡೆದವುಗಳು, ಕೃತಿಯ ವಿಶ್ಲೇಷಣೆಯಿಂದ ಕವಿಯ ಕಾವ್ಯಮಾರ್ಗದ ಹುಡುಕಾಟ ನಡೆಸಿರುವಂತಹವು, ಮತ್ತು ಕವಿಯ ಕಾವ್ಯಮಾರ್ಗದ ಬಗ್ಗೆ ತಳೆದ ನಿಲುವುಗಳಿಗೆ ಕೃತಿಯನ್ನು ಉದಹರಿಸುತ್ತಾ ಹೋಗುವಂತಹವು. ಈ ವರ್ಗೀಕರಣ ಶುದ್ಧ (Absolute) ವಾದುದಲ್ಲ; ಪ್ರಾಯೋಗಿಕ ವಿಮರ್ಶೆಯ ವ್ಯಾಪ್ತಿಯನ್ನು ಸೂಚಿಸುವಂತಹವು. ಕೆಲವು ವಿಮರ್ಶೆಗಳು ಭಾರತೀಯ ಕಾವ್ಯಮೀಮಾಂಸೆಯ ಪರಿಕರಗಳನ್ನು ಬಳಸಿದರೆ, ಕೆಲವು ಪಾಶ್ಚಾತ್ಯ ವಿಮರ್ಶಾತತ್ತ್ವವನ್ನು ಅನುಸರಿಸಿವೆ. 'ವಚನಗಳ'ನ್ನು ಕುರಿತ ಎಂ. ಜಿ. ಕೃಷ್ಣಮೂರ್ತಿಯವರ ಲೇಖನ Stylistics ನ ತತ್ತ್ವಗಳನ್ನು ಆಧರಿಸಿದೆ. ಕನ್ನಡ ಬಲ್ಲವರು ವಚನಗಳನ್ನು ಗುರುತಿಸುವ ರೀತಿಗಿಂತ ಭಿನ್ನವಾದ ಅವರ ಮಾರ್ಗಕ್ಕೆ ಕೆಲವು ಮಿತಿಗಳಿವೆ. 'ಕೂಡಲಸಂಗಮ' ಎನ್ನುವಲ್ಲಿ ಶಬ್ದಗಳು ಸಂಸ್ಕೃತ ಮತ್ತು ಕನ್ನಡದ ಮಿಶ್ರಣವಾಗುವುದಲ್ಲದೆ ಪುನರುಕ್ತಿಯೂ ಆಗಿರುವುದನ್ನು ತಾವು ಆಯ್ದ ವಚನದ ಸಂದರ್ಭದಲ್ಲಿ ಪಾದಕ್ಕೆ ಪೂರಕವಾಗಿ ಬಳಸುತ್ತಾರೆ. ಇದು ಕನ್ನಡ ತಿಳಿಯದವರಿಗೆ ಮಾತ್ರ ಸಂವಹನಗೊಳ್ಳಬಲ್ಲುದು. ಏಕೆಂದರೆ ಕಾವ್ಯವನ್ನು ಪರಂಪರೆಯ ಭಾವವಲಯದಿಂದ ಬೇರ್ಪಡಿಸುವುದು ಸಾಧ್ಯವಲ್ಲ. ಈ ಲೇಖನ ಪ್ರಾಯೋಗಿಕ ವಿಮರ್ಶೆಯ ಮಿತಿಗಳನ್ನು ಸೂಚಿಸುತ್ತದೆ. ಇದಕ್ಕೆ ವಿರುದ್ಧವಾಗಿ ಪೂರ್ಣಚಂದ್ರ ತೇಜಸ್ವಿಯವರ 'ಪಂಪ – ಒಂದು ಮೌಲ್ಯವಿವೇಚನೆ' ಒಟ್ಟು ಕಾವ್ಯದಿಂದ ಎತ್ತಿದ ಭಾಗವನ್ನು ಕುರಿತು ವಿಶ್ಲೇಷಣೆ ನಡೆಸಿದರೂ ಅದರಿಂದ ಪಡೆಯುವ ನಿರ್ಣಯಗಳು ಮಹತ್ತ್ವದ್ದಾಗುತ್ತವೆ. ಏಕೆಂದರೆ ಕವಿಯನ್ನವರು ಆತನ ಕಾಲದ ಸಂದರ್ಭದಿಂದ ಬೇರ್ಪಡಿಸುವುದಿಲ್ಲ. ಇದರ ಜತೆಗೆ ಅವರು ಕೃತಿಯನ್ನು ಅದರ ಬಾಹ್ಯಸ್ವರೂಪದಿಂದಲೇ ಪ್ರವೇಶಮಾಡುತ್ತಾರೆ. ಒಟ್ಟು ಬಂಧವನ್ನು ಕ್ರಮವಾಗಿ ವಿಶ್ಲೇಷಿಸಿ ನಿಲುವುಗಳನ್ನು ಪಡೆಯುತ್ತಾರೆ. ಬಾಹ್ಯಸ್ವರೂಪದಿಂದ ವಿಶ್ಲೇಷಣೆಯನ್ನು ಪ್ರಾರಂಭಿಸಿದರೂ ಒಟ್ಟು ಕಾವ್ಯಬಂಧವನ್ನು ಅರ್ಥವಿಸದೇ ಹೋಗುವುದರಿಂದ 'ಭೂಮಿಗೀತ'ದ ಮೇಲಿನ ಎಂ. ಜಿ. ಕೃಷ್ಣಮೂರ್ತಿಯವರ ಲೇಖನ ಸಫಲವಾಗುವುದಿಲ್ಲ. ಒಂದು ಕಾವ್ಯ ಪ್ರಬಂಧದಿಂದ ಎತ್ತಿಕೊಂಡ ಭಾಗಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವ ಐದು ಲೇಖನಗಳಲ್ಲಿ 'ಪಂಪನ ಎರಡು ಪದ್ಯಗಳು' [ದಿ॥ ಪ್ರೊ॥ ಟಿ. ಎಸ್. ವೆಂಕಣ್ಣಯ್ಯ] ಕವಿಯ ವರ್ಣನಾಶಕ್ತಿಗೆ ಹುಡುಕಿದ ನಿದರ್ಶನ ಮಾತ್ರವಾಗಿದೆ. 'ಸರೋವರದ ಸಿರಿಗನ್ನಡಿ' [ಕುವೆಂಪು] ಅಲ್ಲಿಂದ ಸ್ವಲ್ಪ ಮುಂದುವರಿದು ವರ್ಣನೆಗಳು ಧ್ವನಿಪೂರ್ಣವಾಗಿರುವುದನ್ನು ವಿವರಿಸುತ್ತದೆ. ಕುಮಾರವ್ಯಾಸನ ಮೂರು ಷಟ್ಪದಿಗಳನ್ನು ಕುರಿತ ಲೇಖನ (ಅ. ರಾ. ಮಿತ್ರ) ಮತ್ತು 'ಯಶೋಧರ ಚರಿತೆಯಿಂದ' (ಜಿ. ಎಸ್. ಸಿದ್ಧಲಿಂಗಯ್ಯ) ಇವೆರಡೂ ಘಟಕಗಳ ಅರ್ಥಪೂರ್ಣತೆಯನ್ನು ವಿವರಿಸುತ್ತವೆ. ಈ ನಾಲ್ಕು ಲೇಖನಗಳು ಹಳಗನ್ನಡ ಕಾವ್ಯಪ್ರಬಂಧಗಳ ಅಧ್ಯ

ಯನದಲ್ಲಿ ಪ್ರಾಯೋಗಿಕ ವಿಮರ್ಶೆ ತಳೆಯಬಹುದಾದ ಒಂದು ಸ್ವರೂಪಕ್ಕೆ ನಿದರ್ಶನ. ತೇಜಸ್ವಿಯವರ ಲೇಖನ ಇನ್ನೊಂದು ಮುಖ. ಕುವೆಂಪು (ಎ. ಎಸ್. ಜಯರಾಂ), ಬೇಂದ್ರೆ (ಸುಮತೀಂದ್ರ ನಾಡಿಗ), ಪು.ತಿ. ನ. (ಜಿ. ಎಸ್. ಶಿವರುದ್ರಪ್ಪ) ಈ ಮೂರು ಕವಿಗಳ ಒಂದೊಂದು ಕವನವನ್ನು ವಿಶ್ಲೇಷಿಸುವ ಲೇಖನಗಳಲ್ಲಿ 'ದೇವರು ರುಜುಮಾಡಿದನು' (ಎ. ಎಸ್. ಜಯರಾಂ) ಮತ್ತು 'ಪ್ರತೀಕ್ಷೆ'ಗಳು (ಜಿ. ಎಸ್. ಶಿವರುದ್ರಪ್ಪ) ಸಫಲವಾಗಿವೆ. ಕವನಗಳನ್ನು ವಿಶ್ಲೇಷಿಸುತ್ತಲೇ ಅದು ಆ ಕವಿಯ ಒಟ್ಟು ಕಾವ್ಯದ ಹಿನ್ನೆಲೆಗೆ ಹೇಗೆ ಪೂರಕವಾಗಿದೆ ಎಂಬುದನ್ನು ಇವೆರಡೂ ವಿಶ್ಲೇಷಿಸುತ್ತವೆ. 'ಪ್ರತೀಕ್ಷೆ'ಯಲ್ಲಿ ಇನ್ನಷ್ಟು ಮುಂದುವರಿದು ಈ ಕಾವ್ಯಸಂಪ್ರದಾಯದ ಹಿನ್ನೆಲೆಗೆ ಕವನವನ್ನು ಇಟ್ಟು ನೋಡುತ್ತದೆ. 'ಜೋಗಿ'ಯನ್ನು ಕುರಿತ ಲೇಖನ ಆ ಕವನವನ್ನು ಸಮಗ್ರವಾಗಿ ವಿಶ್ಲೇಷಿಸುವುದಿಲ್ಲ. ಅಲ್ಲದೆ ಅಭಿಪ್ರಾಯಗಳಲ್ಲಿ ಅಸ್ಪಷ್ಟತೆ ಇದೆ. ಅಡಿಗರ 'ಭೂತ' (ಯು. ಆರ್. ಅನಂತಮೂರ್ತಿ) ಮತ್ತು 'ವರ್ಧಮಾನ' (ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ) ಗಳ ಪ್ರಾಯೋಗಿಕ ವಿಮರ್ಶೆಯಲ್ಲಿ ವರ್ಧಮಾನವನ್ನು ಕುರಿತದ್ದು ಚೊಕ್ಕವಾಗಿದೆ. ಕವನವನ್ನೂ ಅದರ ಸೂಕ್ಷ್ಮ ಭಾವಗಳನ್ನೂ ಅರ್ಥವಿಸುವಾಗ ಎಲ್ಲೂ ಗೊಂದಲಗಳಿಲ್ಲ. ಆದರೆ ನಾಲ್ಕನೆಯ ಭಾಗದ 'ರಾಮಾಯಣದ ಪ್ರತಿಮೆ' ಇಲ್ಲಿ ವಿಶ್ಲೇಷಣೆಗೆ ಗುರಿಯಾಗಿಲ್ಲ. ಇದು ಕವನ ಹೇಗೆ ಎಂಬುವನ್ನು ಹೇಳುವುದೇ ಅಲ್ಲದೆ ಅಡಿಗರ ಕವನ ಹೇಗೆ ಎಂಬುದನ್ನು ಹೇಳಬೇಕೆನ್ನಿಸುತ್ತದೆ. 'ಭೂತ'ವನ್ನು ಕುರಿತ ವಿಮರ್ಶೆಗೆ ಚಾರಿತ್ರಿಕ ಮಹತ್ತ್ವವಿದೆ. ಆದರೆ ಅದು ಕವನದ ಸಮಗ್ರ ವಿಶ್ಲೇಷಣೆಯಲ್ಲ. ಆ ಲೇಖನದೊಳಗೆ ಇರುವ ಪ್ರಶ್ನೆಗಗೆಳಿ ಉತ್ತರ ಇನ್ನೂ ಸಿಗಬೇಕಿದೆ. 'ಕೆ. ಎಸ್. ನ. ರವರ ಎರಡು ಕವನಗಳು' (ಚನ್ನಯ್ಯ) ಭಾಷೆಯಿಂದಾಗಿ ಅಸ್ಪಷ್ಟವಿದೆ. ಬಳಸುವ ಪರಿಭಾಷೆಯಲ್ಲಿ ಕ್ಲಿಷ್ಟತೆಯಿದ್ದು, ಪ್ರತ್ಯೇಕ ವಿವರಣೆಯನ್ನು ಬಯಸುತ್ತದೆ (ಉದಾ: ರೂಪಕ ಚಲನೆಯ ವೇಗ). ಕವನಗಳನ್ನು ಅರ್ಥವಿಸುವುದರಲ್ಲಿ ಎರಡು ಮಾತುಗಳಿರಬಹುದು; ಆದರೆ ಒಂದು ಪ್ರಯತ್ನದಲ್ಲಿ ಸ್ಪಷ್ಟತೆ ಅವಶ್ಯಕ. ಆದರೂ ಅಲ್ಲಲ್ಲಿ ಬರುವ ಒಟ್ಟು ಕೆ. ಎಸ್. ನ. ಅವರ ಕಾವ್ಯದ ಬಗೆಗಿನ ಮಾತುಗಳು ಗಮನಾರ್ಹ. ಪ್ರಾಯೋಗಿಕ ವಿಮರ್ಶೆಯಾಗಿ ಈ ಲೇಖನ ಕೊಂಚ ದೂರಾನ್ವಯದ್ದೆಂದು ಅನ್ನಿಸದಿರದು. 'ಮುಂಬೈ ಜಾತಕ'ದಲ್ಲಿ (ಚಂದ್ರಶೇಖರ ಕಂಬಾರ) ಜಿ. ಎಸ್. ಶಿವರುದ್ರಪ್ಪನವರು ಹೇಗೆ ಅಡಿಗರಿಂದಲೂ, ಅಡಿಗೋತ್ತರರಿಂದಲೂ ಭಿನ್ನರೆಂಬುದನ್ನು ಸಿದ್ಧಪಡಿಸಲು ಆ ಕವಿತೆಯನ್ನು ಉದಾಹರಿಸಿದ್ದಾರೆ. ಕವನದ ವಿವರಣೆಗಿಂತ ಒಟ್ಟಾರೆ ಕವಿಯ ಕಾವ್ಯದ ಬಗ್ಗೆ ಆಡುವ ಮಾತುಗಳು ಗಮನಾರ್ಹವಾಗಿವೆ. ಇದೇ ದಾರಿಯ ಇನ್ನೊಂದು ವಿಮರ್ಶೆ 'ಮಬ್ಬಿನಿಂದ ಮಬ್ಬಿಗೆ' (ಜಿ. ಎಚ್. ನಾಯಕ). ಇದು 'ದೇವರು ರುಜು ಮಾಡಿದನು' (ಎ. ಎಸ್. ಜಯರಾಂ) ಧಾಟಿಯದು. ಕವನದಿಂದ ಕವಿಯ ಕಾವ್ಯಮಾರ್ಗದ ಬಗ್ಗೆ ನಿಲುವುಗಳನ್ನು ತಾಳುವುದು ಇಲ್ಲಿನ ಉದ್ದೇಶ. ಸಫಲವಾದ ವಿಮರ್ಶೆ. 'ಕಾಲ ನಿಲ್ಲುವುದಿಲ್ಲ' (ಆರ್. ಸಿ. ಕುಲಕರ್ಣಿ) ಮತ್ತು 'ಏಳು ಸುತ್ತಿನ ಕೋಟೆ' (ದೇಶ ಕುಲಕರ್ಣಿ) ಆಯಾ ಕವನಗಳ ಅಭ್ಯಾಸಗಳಾಗಿವೆ. ಎರಡನೆ ಲೇಖನ ಕೊನೆಯಲ್ಲಿ ಕೊಂಚ ವಿಮರ್ಶೆಯತ್ತಲೂ ಹರಿಯುತ್ತದೆ. 'ಎ. ಕೆ. ರಾಮಾನುಜನ್: ನಾಲ್ಕು ಕವನಗಳು' (ಡಿ. ಎ. ಶಂಕರ್) ಸ್ವಲ್ಪ ಮಟ್ಟಿಗೆ ಭಿನ್ನವಾದ ವಿಮರ್ಶೆ. ಇಲ್ಲಿ

ಕಾವ್ಯದ ಚಿಕ್ಕ ಘಟಕಗಳಿಂದ ಕಾವ್ಯದ ವಿಶ್ಲೇಷಣೆಗೆ ಮಾರ್ಗವನ್ನು ಹುಡುಕುವ ತಂತ್ರ ವಿದೆ. ಇದು 'ಸ್ವಭಾವೋಕ್ತಿಯ ಕಾವ್ಯ'ವೆಂದು ರಾಮಾನುಜನ್ನರ ಕಾವ್ಯವನ್ನು ಗುರುತಿ ಸಲು ಸಹಾಯಮಾಡಿದೆ. ಆದರೆ 'ನಲವತ್ತು ನೆರಳು' ವಿನಂತಹ ಸಂಕೀರ್ಣ ಕವನಗಳ ಅಭ್ಯಾಸಕ್ಕೆ ಇವಷ್ಟೇ ಸಲಕರಣೆಗಳು ಸಾಲುವುದಿಲ್ಲ. ಒಟ್ಟಾರೆ ಈ ಸಂಗ್ರಹದ ಎಲ್ಲ ಲೇಖನಗಳು ಪ್ರಾಯೋಗಿಕ ವಿಮರ್ಶೆಯ ಸ್ವರೂಪ ನಿರ್ಣಯಕ್ಕೆ ಸಹಾಯಮಾಡು ತ್ತವೆ. ಜತೆಗೆ ಒಂದು ಪ್ರಾರಂಭಿಕ ನೆಲೆಯನ್ನು ಕಟ್ಟಿಕೊಡುತ್ತವೆ.

**ಪ್ರಜ್ಞೆ ಮತ್ತು ಪರಿಸರ** [ಡಾ॥ ಯು. ಆರ್. ಅನಂತಮೂರ್ತಿ] ಈ ವರ್ಷದ ಮುಖ್ಯ ಕೃತಿಗಳಲ್ಲೊಂದು. ಇಲ್ಲಿನ ಲೇಖನಗಳ ಹಿಂದೆ ಒಂದು ತಾತ್ತ್ವಿಕ ಹಿನ್ನಲೆ ಕಂಡು ಬರುತ್ತದೆ. ಲೋಹಿಯಾ ವಿಚಾರಗಳು, ಮಾರ್ಕ್ಸ್ ಮತ್ತು ಮಾರ್ಕ್ಸ್ ಅನುಯಾಯಿ ಗಳ ವಿಚಾರಗಳು, ಅಸ್ತಿತ್ವವಾದಿಗಳ ನಿಲುವುಗಳ ಅಭ್ಯಾಸ ಇಲ್ಲಿನ ಲೇಖನಗಳಿಗೆ ಬೆನ್ನೆಲು ಬಾಗಿದೆ. 'ಮಾರ್ಕ್ಸ್‌ವಾದ ಮತ್ತು ಸಾಹಿತ್ಯದಲ್ಲಿ ನಿಷ್ಠೆಯ ಪ್ರಶ್ನೆ' ಹಾಗೂ 'ಸಾಹಿತ್ಯದಲ್ಲಿ ವೈಚಾರಿಕತೆ' ಪರಸ್ಪರ ಸಂಬಂಧವಿರುವ ಬರೆಹಗಳು. ಸಾಹಿತ್ಯ ಮತ್ತು ವಿಚಾರಗಳ ನಡುವೆ ಇರಬಹುದಾದ ಸಂಬಂಧಗಳಲ್ಲಿ–ಅವು ಸಂಖ್ಯೆಯಲ್ಲಿ ಮೂರು–ವಿಚಾರಗಳು ಕೃತಿಯಲ್ಲಿ ಸಂಭವಿಸಬೇಕೆಂದು ಹೇಳುವ ಲೀವಿಸನ ನಿಲುವು ಸಾಧುವೆಂದು ಒಪ್ಪುತ್ತಾರೆ. ಲೇಖಕನ ವೈಯಕ್ತಿಕ ವಿಚಾರಗಳಿಗೂ, ಅವನ ಕೃತಿಯ ವಿಚಾರಗಳಿಗೂ ವಿರೋಧವಿರ ಬಹುದೆಂಬುದನ್ನು ಬಾಲ್ಜಾಕನ ಉದಾಹರಣೆಯಿಂದ ಸಮರ್ಥಿಸುತ್ತಾರೆ. 'ಪಕ್ಷದ ತತ್ತ್ವ ವನ್ನು ಸಾಹಿತಿ ಹೇಳಬೇಕೆ'ಂದು ಮಾರ್ಕ್ಸ್‌ವಾದಿಗಳು ಅಭಿಪ್ರಾಯಪಟ್ಟರೂ, ಸಾಹಿತಿಯ ಕೃತಿ ಬೇರೆ ಏನನ್ನೋ ಹೇಳಲು ಸಾಧ್ಯವಿದೆ. ಆದ್ದರಿಂದಲೇ ಲೀವಿಸನ ಸಂಭವಿಸುವ ತತ್ತ್ವ ಮುಖ್ಯವಾಗಿಬಿಟ್ಟು, 'ನಿಷ್ಠೆ'ಯ ಪ್ರಶ್ನೆ ಸರಳತೆಯನ್ನು ಕಳೆದುಕೊಳ್ಳುತ್ತದೆ. ಇವೆರಡೂ ಲೇಖನಗಳಲ್ಲಿ ಉಳಿಯುವ ಪ್ರಶ್ನೆ—ವಿಮರ್ಶಕನ ಗಮನ 'ಸಂಭವಿಸುವಿಕೆ'ಯ ಕಡೆಗೋ ಅಥವಾ ಸಂಭವಿಸಿದ್ದರ ಕಡೆಗೋ ಎಂಬುದು. 'ಕನ್ನಡ ಸಾಹಿತ್ಯ ಮತ್ತು ಗಾಂಧೀವಾದ' ಎನ್ನುವ ಇನ್ನೊಂದು ಲೇಖನದಲ್ಲಿ ವಿಚಾರ ಮತ್ತು ಸಾಹಿತ್ಯ ಇವುಗಳ ಸಂಬಂಧದ ಇನ್ನೊಂದು ಮುಖವಿದೆ. ಒಂದು ವಿಚಾರದೊಡನೆ ವಸ್ತುನಿಷ್ಠ ಸಂವಾದ ವನ್ನು ಲೇಖಕ ಬೆಳೆಸಿಕೊಂಡರೆ ಅತ ತನ್ನ ಕೃತಿಯಲ್ಲಿ ಆ ವಿಚಾರ ಇದ್ದಂತೆಯೇ ಸಂಭವಿ ಸಲು ಬಿಡಲಾರ. ಈ ಮಾತಿಗೆ ಕಾರಂತರನ್ನು ನಿದರ್ಶನವನ್ನಾಗಿ ವಿವರಿಸಿದ್ದಾರೆ. ಆದ್ದ ರಿಂದ 'ಸಂಭವಿಸುವಿಕೆ'ಗೆ ಹೆಚ್ಚು ಪ್ರಾಧಾನ್ಯವೆಂಬುದು ಇಲ್ಲಿನ ಸಿದ್ಧಾಂತವಾಗುತ್ತದೆ. ಇದೇ ಸಮಸ್ಯೆಯ ಮುಂದುವರಿದ ರೂಪ 'ಭಾರತೀಯ ಸಂಸ್ಕೃತಿ ಮತ್ತು ಲೇಖಕ' ಎನ್ನುವ ಲೇಖನದಲ್ಲಿದೆ. ಸಂಸ್ಕೃತಿ ಕೇವಲ ವಿಚಾರವಾಗದೇ ಲೇಖಕನನ್ನು ನಿಯಂತ್ರಿ ಸುವುದೆನ್ನುವುದು ಇಲ್ಲಿನ ನಿಲುವು. ಸಂಸ್ಕೃತಿಯನ್ನು 'ದೂರ'ವಿರಿಸಿ ಅದರೊಡನೆ ಭಾವ ನಾತ್ಮಕ ಸಂಬಂಧಗಳನ್ನು ಕಡಿದುಕೊಳ್ಳಬೇಕೆಂಬುದು ಸ್ಥೂಲವಾಗಿ ಲೇಖಕರ ನಿಲುವಿರ ಬಹುದು. ಅಡಿಗರು ಮತ್ತು ಕಾರಂತರ ಬಗ್ಗೆ ಅವರು ಹೇಳುವ ಮಾತುಗಳಿಂದ ಹಾಗೆ ಅನ್ನಿಸುತ್ತದೆ. ವಿಮರ್ಶೆಯ ಸ್ವರೂಪ ಮತ್ತು ವ್ಯಾಪ್ತಿಗಳ ಬಗ್ಗೆ ಹೊಸದನ್ನು ಹೇಳುವ ಈ ಲೇಖನ ಸಾಹಿತ್ಯ ಮತ್ತು ವಸ್ತುಗಳ ಸಂಬಂಧದಲ್ಲಿ ಒಂದು ಮಹತ್ವದ ಸಂಗತಿ ಯನ್ನು ಹೊರಚೆಲ್ಲುತ್ತದೆ. ವಿಚಾರಗಳೂ ಒಂದು ಅರ್ಥದಲ್ಲಿ ವಸ್ತುಗಳೇ ಆಗುವುದ

ರಿಂದ, ವಿಚಾರಗಳು ಅವುಗಳನ್ನು ನಿರೂಪಿಸಿದವರು ಇರಿಸಿದ ಸ್ವರೂಪದಲ್ಲೇ ಸಂಭವಿಸು ವುದು ಕೃತಿಗೆ ಬೆಲೆ ತರುವುದಿಲ್ಲ. ವಿಚಾರವಂತರು ತಮ್ಮ ವಾದಗಳಿಗೆ ಪೂರಕವಾಗು ವಂತೆ ತಾವು ನಿರೂಪಿಸುವ ವಿಚಾರಗಳ ವಿರೋಧಾಂಶಗಳನ್ನು ನಯಗೊಳಿಸುತ್ತಾರೆ. ಸಾಹಿತಿ ಅವುಗಳನ್ನೂ ಕೆದರಿಸಿ ಕೃತಿಯಲ್ಲಿ ತರುತ್ತಾನೆ. ಈ ಮಾತನ್ನು 'ಪ್ರಜ್ಞೆ ಮತ್ತು ಪರಿಸರ'ದಲ್ಲಿ ಒಪ್ಪುತ್ತಾರೆ (ಪುಟ 4. ಸಾಲು 21–28).

ಕಾವ್ಯವನ್ನು ಕುರಿತು ಬರೆದ ನಾಲ್ಕು ಲೇಖನಗಳಲ್ಲೂ ಪರಸ್ಪರ ಪೂರಕತೆಯಿದೆ. ಚನ್ನಯ್ಯ ಮತ್ತು ಚಿತ್ತಾಲರ ಕವನಸಂಗ್ರಹಗಳಿಗೆ ಬರೆದ ಮುನ್ನುಡಿಗಳು ('ಆಮೆ' ಮತ್ತು 'ಹರಿವ ನೀರಿದು') ಕಾವ್ಯದ ಪರಿಚಯದ ಜತೆಗೆ ಇನ್ನೆರಡು ಮುಖ್ಯಸಂಗತಿಗಳಿವೆ; ಸಾಹಿತ್ಯ ಮತ್ತು ಕಾಮದ ಸಂಬಂಧದ ಬಗ್ಗೆ ನಡೆಸುವ ವಿಶ್ಲೇಷಣೆ ಮತ್ತು 'ಸಂಪೂರ್ಣ ಮುಕ್ತ ಸಂವೇದನೆ'ಯ ವಿವರಣೆ. 'ಸಂಪೂರ್ಣ ಮುಕ್ತ ಸಂವೇದನೆ'ಯನ್ನು ಕುರಿತು ಸಾಕಷ್ಟು ಚರ್ಚೆ ಈಗಾಗಲೇ ನಡೆದಿದೆ. ಈ ಪರಿಭಾಷೆಯ ಮೂಲ ಎಲ್ಲೇ ಇರಲಿ, ಅದನ್ನು ಚಿತ್ತಾಲರ ಕಾವ್ಯಕ್ಕೆ ಮಾತ್ರವೇ ಅನ್ವಯಿಸಬೇಕಿಲ್ಲ. ಏಕೆಂದರೆ ಅದು ಒಟ್ಟಾರೆ ಕಾವ್ಯವನ್ನು ಕುರಿತ ಅತ್ಯಂತ ಸರಳರೂಪದ ವಿವರಣೆಯಾಗಿದೆ. ಅಡಿಗರ 'ಭೂಮಿಗೀತ'ಕ್ಕೆ ಬರೆದ ಹಿನ್ನುಡಿ ಅವರ ಕಾವ್ಯಕ್ಕೆ ತಕ್ಕ ಮಾರ್ಗದರ್ಶಿಯಾಗಿದ್ದರೂ–ಇಲ್ಲಿ ಮೆಚ್ಚುಗೆಯ ಹಂತದಲ್ಲೇ ಲೇಖಕರು ಅಲ್ಲಲ್ಲಿ ನಿಲ್ಲುವ ಸೂಚನೆಗಳಿವೆ – ಅಡಿಗರ ಕಾವ್ಯದ ಮಿತಿಗಳನ್ನು ಹುಡುಕುವುದಿಲ್ಲ. ನನ್ನ ಮಾತಿನ ಅರ್ಥ: ಒಂದು ಸಂಪ್ರತ್ಯಯವನ್ನು ಕಾವ್ಯಾನುಭವ ವನ್ನಾಗಿ ಪರಿವರ್ತಿಸುವ ಅಡಿಗರ ಕಾವ್ಯ– ನಡೆದು ಬಂದ ದಾರಿಯ ನಂತರದ್ದು–ಕೇವಲ 'ಸಂಭವಿಸುವಿಕೆ'ಗಾಗಿಯೇ ಅತ್ಯಂತ ಶ್ರೇಷ್ಠ ದರ್ಜೆಗೆ ಹೋಗಬಹುದು. ಆದರೆ ಇದನ್ನು ಲೇಖಕ ಮೀರಬೇಕೆಂದು – ಸಂಭವಿಸುವುದರ ಎಲ್ಲ ಸಾಧ್ಯಾಸಾಧ್ಯತೆಗಳನ್ನು ಸಂವಾದಿಸ ಬೇಕೆಂದು – ಅನಂತಮೂರ್ತಿಯವರು ಅಭಿಪ್ರಾಯ ಪಡುತ್ತಾರಷ್ಟೆ. ಈ ಹಿನ್ನೆಲೆಯಲ್ಲಿ ಅಡಿಗರ ಕಾವ್ಯಪರೀಕ್ಷೆಗೆ ಅವಕಾಶವಿದೆ. ಕಾವ್ಯಮಾರ್ಗ ನವೋದಯದಿಂದ ನವ್ಯಕ್ಕೆ ಬದಲಾದುದಕ್ಕೆ ತಾತ್ತ್ವಿಕ ನೆಲೆಯನ್ನು ಹುಡುಕುವ ಲೇಖನ 'ಬದಲಾಗುತ್ತಿರುವ ಕನ್ನಡ ಕಾವ್ಯಮಾರ್ಗ'. ಸಾಮಾಜಿಕ ಬದಲಾವಣೆಗಳು ಮುಂತಾದ ಕ್ಲೀಷೆಗಳನ್ನು ಉಪಯೋಗಿ ಸದೆ ಹೆಚ್ಚು ವಸ್ತುನಿಷ್ಠವಾಗಿ ಪರಿಸ್ಥಿತಿಯನ್ನು ಕಾಣಲು ಪ್ರಯತ್ನ ನಡೆಸಿದ್ದಾರೆ. ಭಾಷೆಯ ದೃಷ್ಟಿಯಿಂದ ಈ ಬದಲಾವಣೆಯನ್ನು ವಿವರಿಸುವ ಪ್ರಯತ್ನ ಅನಂತಮೂರ್ತಿಯವರ ಚಿಂತನೆಯ ಬೇರನ್ನು ಸೂಚಿಸುತ್ತದೆ; ಆದ್ದರಿಂದಲೇ ಈ ಪುಸ್ತಕದ 'ಲೋಹಿಯಾ' ಲೇಖ ನವೂ ಮುಖ್ಯ. ಈ ಬಗೆಯ ತಾತ್ತ್ವಿಕ ನೆಲೆಯ ಹುಡುಕಾಟದಲ್ಲಿ ಉಂಟಾಗುವ ತೊಂದರೆ ಗಳನ್ನು ಗಮನಿಸಬಹುದು. ಬದಲಾದ ಮಾರ್ಗದ ಕಾವ್ಯದಿಂದ ಉಲ್ಲೇಖಗಳನ್ನು ಕೊಡುತ್ತಾ ನಡೆಸುವ ವಿಶ್ಲೇಷಣೆ ಒಂದು ದೃಷ್ಟಿಯಲ್ಲಿ ವಸ್ತುಸ್ಥಿತಿಯ ಸಮರ್ಥನೆಯಾಗಿ ಯಾವುದನ್ನು 'ಆಶಯಪ್ರಧಾನ'ವೆಂದು ತಳ್ಳಿಹಾಕುತ್ತೇವೋ ಆ ದಾರಿಯನ್ನೇ ಹಿಡಿಯ ಬಹುದಾಗಿದೆ. ಅನಂತಮೂರ್ತಿಯವರು ಈ ಗೊಂದಲವನ್ನು ತಂದುಕೊಂಡಿಲ್ಲ. ಆದರೂ ಪೂರ್ವಭಾವಿ ಷರತ್ತುಗಳಿಲ್ಲದೆ ಈ ಲೇಖನವನ್ನು ಓದುವುದು ಸುಲಭವಲ್ಲ. ಕಾವ್ಯದ ಮಾರ್ಗ ಬದಲಾಗುವುದೆಂದರೆ ಕಾವ್ಯಾನುಭವದ ಬಗೆಗಿನ ನಿಲುವುಗಳು ಬದಲಾಗಬೇಕು. ಇದು ಬದಲಾಗದ ಓದುಗನಿಗೆ ಕಾವ್ಯವೆಂದು ಉದ್ಧರಿಸಿದ ಸಾಲುಗಳು ಸಂವಹನಗೊಳ್ಳ

ಲಾರವು. (ಇದಕ್ಕೆ ಪೋಷಕವಾಗುವಂತೆ ಗರುಡಪುರಾಣದ ಮಾತೂ ಬಂದುಬಿಟ್ಟಿದೆ.) ಇದರಿಂದ ಸ್ಪಷ್ಟವಾಗುವ ಮಾತೆಂದರೆ ಇಲ್ಲಿ ಸಿದ್ಧಗೊಂಡ ತಾತ್ತ್ವಿಕ ನೆಲೆಗಿಂತ ಭಿನ್ನವಾದ ಕಾವ್ಯಾನುಭವವನ್ನು ಕುರಿತ ನೆಲೆಯೊಂದರ ಅವಶ್ಯಕತೆಯಿದೆ. ಲೇಖನದ ಕೊನೆಯಲ್ಲಿ (1967ರಲ್ಲಿ ಬರೆದದ್ದು) ಅಡಿಗೋತ್ತರ ಕಾವ್ಯದಲ್ಲೂ ಮತ್ತೊಂದು ಬದಲಾವಣೆಗೆ ಕಾಲ ಮಾಗಿದೆ ಎನ್ನುತ್ತಾರೆ ಲೇಖಕರು. ಐದು ವರ್ಷ ಕಳೆದ ಮೇಲೂ ಆ ಮಾತನ್ನು ಪುನರಾವರ್ತಿಸಬೇಕಾಗಿದೆ.

'ಕಾರಂತರ ಅಥೆಂಟಿಕ್ ಪ್ರಪಂಚ' ದಲ್ಲಿ ಕಾರಂತರ ಬಗ್ಗೆ ಒಂದು ಮೌಲಿಕ ವಿವೇಚನೆ ಇದೆ. 'ಭಾರತೀಯ ಸಂಸ್ಕೃತಿ ಮತ್ತು ಲೇಖಕ'ದಿಂದ ಬೆಳೆದು ಬರುತ್ತದೆ. ಸಂಸ್ಕೃತಿಯ ಭೋಳೆತನದಿಂದ ತಪ್ಪಿಸಿಕೊಳ್ಳಲು ಕಾರಂತರು ಪ್ರಯತ್ನಿಸುವುದರಿಂದ ಅವರ ಕಾದಂಬರಿಗಳ ಸ್ವರೂಪದಲ್ಲಿ ಆದ ಪರಿಣಾಮವನ್ನು, ವಸ್ತುವಿನ ಆಯ್ಕೆ ಮತ್ತು ಗ್ರಹಿಕೆಗೆ ಬಂದ ಸೀಮಿತತೆಯನ್ನು ಗುರುತಿಸುತ್ತಾರೆ. ಜಾಯ್ಸ್ ಮತ್ತು ಕಾಫ್ಕರಂತೆ ಕಾರಂತರು ರಿಸ್ಕ್ ತೆಗೆದುಕೊಂಡು ಬರೆಯುವುದಿಲ್ಲವೆನ್ನುವುದು ಅವರ ಬಗ್ಗೆ ತೆಗೆದುಕೊಳ್ಳುವ ನೇತ್ಯಾತ್ಮಕ ನಿಲುವಾಗಿ ತೋರುತ್ತದೆ. ಲೇಖಕನ ಕಾಳಜಿಗಳು ಅವನ ವಲಯವನ್ನು ನಿರ್ಧರಿಸುವುದನ್ನು ಅವರೇ ಒಪ್ಪಿಕೊಳ್ಳುವುದರಿಂದ ನನ್ನ ಮಾತಿಗೆ ಬೇರೆ ಪುರಾವೆಗಳು ಬೇಕಿಲ್ಲ. ಕಾಳಜಿಗಳನ್ನು ವಿಸ್ತರಿಸಬೇಕೆಂದು ಹೇಳುವುದು ಬೇರೆಯ ಮಾತು. ಮಾಗುವಿಕೆಯನ್ನು ಜೀವನದೃಷ್ಟಿಯನ್ನಾಗಿ ತೆಗೆದುಕೊಳ್ಳುವ ಕಾರಂತರು ಅದರ ಜತೆಗೆ ಭಾವುಕರಾಗುವುದಿಲ್ಲವೆಂಬ ಮಾತು ಮುಖ್ಯ. ಆದರೆ ಲೇಖನದ ಕೊನೆಗೆ ಇವರು ಮಾಡುವ ಊಹೆ, ಊಹೆಯಾಗಿಯೇ ಉಳಿಯುತ್ತದೆ (ಪುಟ 118, ಪ್ಯಾರಾ 2). ಏಕೆಂದರೆ ಕಾರಂತರು ನೃತ್ಯನಾಟಕ, ಸಂಗೀತಗಳನ್ನು ಅವುಗಳ ಪಾರಂಪರಿಕ ಸ್ಥಿತಿಯಲ್ಲಿ ಸ್ವೀಕರಿಸಲೇ ಇಲ್ಲ. ಆದ್ದರಿಂದಲೇ ಅವರು ಅವುಗಳ 'ರಸಾಸ್ವಾದನೆ'ಯ ಮುಖವನ್ನು ಅಲ್ಲಿಯೂ ಪ್ರಶ್ನಿಸಿದ್ದಾರೆಂದೇ ಹೇಳಬೇಕು.

ಒಟ್ಟಿನಲ್ಲಿ ಇಲ್ಲಿನ ಲೇಖನಗಳಲ್ಲಿ ಕಾಣುವ ಸಂಭಾವ್ಯ ಪೂರಕತೆ ಕನ್ನಡ ವಿಮರ್ಶೆಯ ಕ್ಷೇತ್ರದಲ್ಲಿ ಗಟ್ಟಿಯಾದ ಪ್ರಯತ್ನವೊಂದಕ್ಕೆ ಕಾರಣವಾಗಿದೆ. ಇಷ್ಟಾಗಿಯೂ ಲೇಖಕರ ತಾತ್ತ್ವಿಕ ನೆಲೆ ಪ್ರಶ್ನಾರ್ಥಕವಾಗಿಯೇ ಉಳಿಯುತ್ತದೆ ಎಂದೇನಲ್ಲ. ಆದರೆ ತಾತ್ತ್ವಿಕ ನೆಲೆಯಲ್ಲಿ ನಿಂತಿದ್ದಾರೆಂಬುದೇ ಸಧ್ಯ ಮುಖ್ಯವಾಗುತ್ತದೆ.

**ಶ್ರೀ ಮಾಸ್ತಿಯವರ ಕತೆಗಳು** (ಎ. ಎಸ್. ಮೂರ್ತಿರಾವ್): ಇಲ್ಲಿ ಶ್ರೀನಿವಾಸರ ಗದ್ಯಕಥಾ ಸಾಹಿತ್ಯದ 'ಪೂರ್ವಗ್ರಹ ಪೀಡಿತವಲ್ಲದ, ಸಾಹಿತ್ಯದ ಮೌಲ್ಯಗಳನ್ನೇ ಬಳಸಿದ' ವಿಮರ್ಶೆ ಇದೆ. ಕಥೆಗಳನ್ನು ವರ್ಗೀಕರಿಸಿಕೊಳ್ಳುವಾಗ ಕೆಲವು ವರ್ಗಗಳಲ್ಲಿ ಸಾಮಾನ್ಯ ಸೂತ್ರವೊಂದಿದ್ದರೆ (ಉದಾ: ಕೆಳವರ್ಗದವರ ಜೀವನ) ಇನ್ನೂ ಕೆಲವದರಲ್ಲಿ ಒಂದೊಂದೇ ಕಥೆಗಳಿವೆ (ನಳಿನಿಯ ತಂದೆ, ಆಚಾರ್ಯರ ಪತ್ನಿ). ಮಾಸ್ತಿಯವರ ಎರಡೂ ಕಾದಂಬರಿಗಳು ಅವುಗಳ ಕಥೆಗಳಿಂದಾಗಿ ಇಲ್ಲಿ ವಿಮರ್ಶೆಗೆ ಒಳಗಾಗಿವೆ. ಮೂರ್ತಿರಾಯರು ತಾವು ಗಮನಿಸಿದ ಕಥೆಗಳಲ್ಲೆಲ್ಲಾ ಮಾಸ್ತಿಯವರ ಜೀವನದೃಷ್ಟಿ ಹೇಗೆ ಕಲಾ

ತ್ಮಕವಾಗಿ ಮೂಡಿದೆ ಅಥವಾ ಮೂಡಿಲ್ಲ ಎನ್ನುವ ಮುಖ್ಯ ಪಾತಳಿಯಲ್ಲೇ ನಡೆಯುತ್ತಾರೆ. ಸಾಮಾನ್ಯಾವಲೋಕನ (XII) ಎನ್ನುವ ಅಧ್ಯಾಯದಲ್ಲಿ ಶ್ರೀನಿವಾಸರ ಕಥಾವಸ್ತುವಿನ ವೈವಿಧ್ಯವನ್ನು ಕುರಿತು ಹೇಳುತ್ತಾ 'Here's God's plenty' ಎಂದಿದ್ದಾರೆ. 'ಜೀವನ ಪರಿಶೀಲನೆಗೆ ವೈಶಾಲ್ಯವಿರುವಂತೆ ವಿವರಗಳ ಮೇಲಿನ ಹಿಡಿತವೂ ಇದೆ' ಎನ್ನುವುದು ಮುಂದಿನ ನಿಲುವು. 'ಮಾಸ್ತಿಯವರ ದೃಷ್ಟಿ ಏನೇ ಇರಲಿ, ಅದರಲ್ಲಿ ನಿಷ್ಠುರತೆ ಇಲ್ಲ, ಔದಾರ್ಯವೂ ಕನಿಕರವೂ ಇದೆ' ಈ ಮಾತನ್ನು ಹೇಳುವ ಮೂರ್ತಿರಾಯರು ಅದನ್ನು ಒಪ್ಪಿಕೊಳ್ಳುವುದರಿಂದ ಮಾಸ್ತಿಯವರ ಕಥೆಗೆ ನಿಲುಕಲಾರದ ಕ್ಷೇತ್ರಗಳನ್ನವರು ಎದುರಿಸುವುದಿಲ್ಲ. ತಮ್ಮ ಜೀವನದೃಷ್ಟಿಯಲ್ಲಿ ಗಾಢವಾದ ನಂಬಿಕೆಗಳನ್ನು ಮಾಸ್ತಿಯವರು ಹೊಂದಿರುವವರಾದ್ದರಿಂದ ಅವರ ಕಥೆಗಳು ಅವರನ್ನು ಮೀರಿ ಹೋಗದೇ ನಿಷ್ಠವಾಗಿಯೇ ಉಳಿಯುತ್ತವೆ. ಇದು ವೈಶಿಷ್ಟ್ಯದಂತೆ ಮಿತಿಯೂ ಹೌದು. ಈ ದೃಷ್ಟಿ ಮೂರ್ತಿರಾಯರಿಗೆ ಮುಖ್ಯವಲ್ಲವೆಂದು ಈ ಗ್ರಂಥದಿಂದ ತೋರಿಬರುತ್ತದೆ.

**ಕಾವ್ಯವಿಚಾರ ಸಾರ** (ಸಿ.ಪಿ.ಕೆ) ದಲ್ಲಿ ಕಾವ್ಯಮೀಮಾಂಸೆ ಹಾಗೂ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಅನೇಕ ಇಂಗ್ಲಿಷ್ ಗ್ರಂಥಗಳಿಂದ ಆಯ್ದ ಭಾಗಗಳ ಅನುವಾದಗಳಿವೆ. ಸೂತ್ರರೂಪದ ಮಾತುಗಳ ಆಯ್ಕೆಗೆ ಗಮನವಿದೆ. ಉಲ್ಲೇಖಗಳು ತಮಗೆ ತಾವೇ ಪೂರ್ಣವಾಗಿ ಕಾಣುವ ಸೋಗನ್ನು ತಾಳುತ್ತವೆ. ಯಾವುದೋ ಸಂದರ್ಭದಲ್ಲಿ ಈ ಮಾತುಗಳನ್ನಾಡಿದ ಲೇಖಕನ ವಿವಕ್ಷಿತ ಅರ್ಥ ನಮಗೆ ಸಿಗುವುದಿಲ್ಲ. ಮೂಲಭಾರವಾದ ಪರೀಕ್ಷಾರ್ಥಿಗಳಿಗೆ ಇದು ಆಧಾರವಾಗಬಹುದು. ಒಂದೇ ಪುಸ್ತಕದಿಂದ ಆಯ್ದ ಭಾಗಗಳಲ್ಲೂ ಲೇಖಕನ ನಿಲುವಿನ ಬೆಳವಣಿಗೆಯಾಗಲೀ ಅಭಿಪ್ರಾಯದ ತಾರ್ಕಿಕ ಮಂಡನೆಯಾಗಲೀ ಇಲ್ಲದಿರುವುದರಿಂದ ಆ ಭಾಗ 'ಮೂಲದತ್ತ ಓದುಗನನ್ನು ತಿರುಗಿಸುವ' ಕೆಲಸವನ್ನು ಇನ್ನೊಂದು ಅರ್ಥದಲ್ಲಿ ನಿಜವಾಗಿಸುತ್ತದೆ. ಗ್ರಂಥಗಳ ಹೆಸರನ್ನು ಕನ್ನಡಿಸಿರುವುದು ಅತಿಯಾಗಿದೆ (ಟಿ. ಎಸ್. ಎಲಿಯಟ್‌ನ 'The Sacred Wood' ಅನ್ನು 'ತಪೋವನ'ವೆಂದಿದ್ದಾರೆ). ಪುಟ 111ರಲ್ಲಿ ಬರುವ 'ಸಿಗ್ನರ್ ಕ್ರೋಚೆ' ಎಂಬುದು ಹೆಸರನ್ನು ತಪ್ಪಾಗಿ ಓದಿದುದರ ಪರಿಣಾಮ. 'ಸಿಗ್ನರ್' ಎಂಬುದರ ಉಚ್ಚಾರಣೆ 'ಸಿನ್ಯೋರ'. ಇಷ್ಟಕ್ಕೂ ಅದು ಗೌರವ ಸೂಚಕ ಪದ; ಹೆಸರಲ್ಲ. ಒಟ್ಟಿನಲ್ಲಿ ಪುಸ್ತಕ ಯಾವ ಸಾಧನೆಗೂ ಕಾರಣವಾಗುವುದಿಲ್ಲ.

**ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ** (ವಿವಿಧ ಲೇಖಕರು) 1920 ರಿಂದ 47 ರ ವರೆಗೆ ಮತ್ತು 47ರಿಂದ 68ರವರೆಗೆ–ಹೀಗೆ ಎರಡು ಭಾಗಗಳಲ್ಲಿ ಕಾವ್ಯ, ನಾಟಕ, ಕತೆ, ಕಾದಂಬರಿ ಈ ಪ್ರಕಾರಗಳಿಗೂ ಸಾಮಾಜಿಕ ಮೌಲ್ಯಗಳಿಗೂ ಇರುವ ಸಂಬಂಧವನ್ನು ಕುರಿತಾದ ವಿಶ್ಲೇಷಣೆ ಇಲ್ಲಿನ ಎಂಟು ಲೇಖನಗಳ ಉದ್ದೇಶ. 'ಉದ್ದೇಶವನ್ನೇ ಕುರಿತಾದ ಭ್ರಮೆ' (ಡಾ॥ ಶಿವರಾಮ ಕಾರಂತರ ಮಾತು) ಯಿಂದಾಗಿ ಇಲ್ಲಿನ ಎಲ್ಲ ಲೇಖನಗಳೂ ಒಂದೇ ವೇದಿಕೆಯ ಮೇಲೆ ಬರಲಾರವು. ಕೆಲವು ಸಮೀಕ್ಷೆಗಳು ಸಾಮಾಜಿಕ ಮೌಲ್ಯ ಮತ್ತು ಸಾಮಾಜಿಕ ಪ್ರಜ್ಞೆಗಳ ನಡುವ ಇರುವ ವ್ಯತ್ಯಾಸಗಳನ್ನು ಗಮನಿಸುವುದಿಲ್ಲ. ಸಾಹಿತ್ಯದ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯದಲ್ಲಿನ ಸಾಮಾಜಿಕ ಮೌಲ್ಯ–(ಇದೇ

ಸಂಕಿರಣದ ನಿಜವಾದ ಉದ್ದೇಶ)– ಇವುಗಳಲ್ಲೂ ಗೊಂದಲವಿರುವ ಸಮೀಕ್ಷೆಗಳು ಕೆಲವು. ಸಾಮಾಜಿಕ ಮೌಲ್ಯಗಳಿಗೂ ಸಾಹಿತ್ಯಕ್ಕೂ ಇರುವ ಸಂಬಂಧವನ್ನು ಮೂಲಭೂತವಾಗಿ ನಿರ್ಧರಿಸಿಕೊಂಡ ಲೇಖನಗಳು ಇಲ್ಲಿ ಸೂಕ್ತವಾಗಿವೆ (ಕ. ವೆಂ. ರಾಜಗೋಪಾಲ ಮತ್ತು ಪಿ. ಲಂಕೇಶ). ಉಳಿದವುಗಳಿಗೆ ಸ್ವತಂತ್ರ ಸಮೀಕ್ಷೆಗಳಾಗಿ ಯಾವ ಅರ್ಹತೆಗಳೇ ಇದ್ದರೂ ಈ ವೇದಿಕೆಯಲ್ಲಿ ನೇರವಾಗಿ ಬೇರುಬಿಡುವುದಿಲ್ಲ. ಡಾ॥ ಶಿವರಾಮ ಕಾರಂತರ ಸಮಾರೋಪ ಭಾಷಣ – ಭಾಷಣದ ಅಸ್ತವ್ಯಸ್ತತೆಯಲ್ಲೂ – ಸಾಮಾಜಿಕ ಮೌಲ್ಯಗಳ ಪರೀಕ್ಷೆ ಸಾಹಿತಿಯ ಕೃತಿ ಮತ್ತು ಬದುಕುಗಳ ಉದ್ದೇಶವೆನ್ನುವ ಮೌಲಿಕವಾದ ವಿಚಾರವನ್ನು ನಿರೂಪಿಸುತ್ತದೆ.

**ಪಂಪ–ನನ್ನಯ: ಒಂದು ಸಮೀಕ್ಷೆ** (ಕೆ. ವೆಂಕಟರಾಮಪ್ಪ): ವ್ಯಾಸಪ್ರಣೀತ ಮಹಾಭಾರತವನ್ನು ಆಧರಿಸಿ ಪಂಪ ಕನ್ನಡದಲ್ಲಿ, ನನ್ನಯ ತೆಲುಗಿನಲ್ಲಿ ರಚಿಸಿದ ಭಾರತಗಳ ತೌಲನಿಕ ಅಧ್ಯಯನವಿದೆ. ಇಬ್ಬರಿಗೂ ಇರುವ ವ್ಯತ್ಯಾಸಗಳು, ಹೋಲಿಕೆಗಳು ಮತ್ತು ಮೂಲಭಾರತದೊಡನೆ ಇಬ್ಬರನ್ನೂ ಹೋಲಿಸುವುದಕ್ಕೆ ಹೆಚ್ಚು ಒತ್ತು ಬಿದ್ದಿದೆ. ಅವರಿಬ್ಬರ ಕಾವ್ಯಗಳ ಮೌಲ್ಯಾತ್ಮಕ ವಿವೇಚನೆ ನಡೆದಿಲ್ಲ. ಪಂಪನ ಉದ್ದೇಶವೇ ಅವನ ಕಾವ್ಯದಲ್ಲಿನ ಬದಲಾವಣೆಗಳಿಗೆ ಕಾರಣವನ್ನುವ ಮಾತನ್ನು ಸಮರ್ಥಿಸುವ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಪಂಪನ ಬಗ್ಗೆ ಹೊಸದೇನೂ ಇಲ್ಲವಾದರೂ ಅವನಿಂದ ಪ್ರಭಾವಿತನಾಗಿದ್ದನೆಂದು ಲೇಖಕರು ಹೇಳುವ ನನ್ನಯನ ಬಗ್ಗೆ ಕನ್ನಡದಲ್ಲಿ ವಿಷಯವನ್ನು ಸಂಗ್ರಹಿಸಿಕೊಡುತ್ತದೆ.

'ಶ್ರೀ ರಾಮಾಯಣ ದರ್ಶನ'ವನ್ನು ಕುರಿತು ನಾಲ್ವರು ಬರೆದಿದ್ದಾರೆ: **'ಶ್ರೀ ರಾಮಾಯಣದರ್ಶನಂ ಮಹಾಕಾವ್ಯಸಮೀಕ್ಷೆ** (ಕೋ. ಚೆನ್ನಬಸಪ್ಪ) ಮತ್ತು **ಶ್ರೀ ರಾಮಾಯಣದರ್ಶನಂ ಸಮೀಕ್ಷೆ**(ಕೀರ್ತಿನಾಥ ಕುರ್ತಕೋಟಿ) ಇವೆರಡೂ ಪುಸ್ತಕಗಳು; **ಕುವೆಂಪು ಸಾಹಿತ್ಯ: ಕೆಲವು ಅಧ್ಯಯನಗಳು** (ದೇ. ಜವರೇಗೌಡ) ದಲ್ಲಿನ ಹತ್ತು ಲೇಖನಗಳು; 'ಸಮಾರಾಧನ' (ಗುಡ್ಮಿ, ಚಂದ್ರಶೇಖರ ಐತಾಳ)ದಲ್ಲಿ ಒಂದು ಲೇಖನ. ಐತಾಳರ ಲೇಖನ ಕೃತಿಯಲ್ಲಿ ಕಥಾಪ್ರವಾಹದೊಡನೆ ಪ್ರಕೃತಿಯಿಂದ ಎಳೆದ ಉಪಮೆ. ರೂಪಕಾದಿಗಳು ಹೇಗೆ ಹೆಣೆದುಕೊಂಡಿವೆ ಎಂದುದರ ನಿರೂಪಣೆಯಿದೆ. ಪ್ರಕೃತಿಯ ಈ ಭಾಗವಹಿಸುವಿಕೆ ಶಿಲ್ಪಕ್ಕೆ ಹೇಗೆ ಪೂರಕವಾಗಿದೆ ಎನ್ನುವುದರ ವಿಮರ್ಶೆಯಿಲ್ಲ. ಆದ್ದರಿಂದ ಪ್ರಕೃತಿಯ ಅಭ್ಯಾಸವನ್ನು ಕಾವ್ಯದ ಪ್ರವೃತ್ತಿಯನ್ನಾಗಿ ಮಾಡಿಕೊಂಡ ಕವಿಯ ಬಗ್ಗೆ ಈ ಲೇಖನ ಹೊಸದೇನನ್ನೂ ಹೇಳುವುದಿಲ್ಲ. ಕೋ. ಚೆನ್ನಬಸಪ್ಪ ಮತ್ತು ದೇ. ಜವರೇಗೌಡರ ದೃಷ್ಟಿಯಲ್ಲಿ ಸಾಮ್ಯತೆಯಿದೆ: ಹಲವು ವಿಚಾರಗಳಲ್ಲಿ ಒಮ್ಮತವಿದೆ. ತಾವು ಕೃತಿಯನ್ನು ಅರ್ಥಮಾಡಿಕೊಂಡ, ಮೆಚ್ಚಿದ ಬಗೆಯಲ್ಲಿ ವಿವರಿಸುತ್ತಾರೆ. 'ದರ್ಶನಧ್ವನಿ'ಗಾಗಿ ಈ ಕೃತಿ ಮಹತ್ತರವಾದುದೆಂದು ಒಪ್ಪಿಕೊಳ್ಳುವುದರಿಂದ, ದರ್ಶನ ಕಾವ್ಯವಾಗುವ ಪ್ರಕ್ರಿಯೆಯ ಬಗ್ಗೆ ಕಾಳಜಿಯಿಲ್ಲದಿರುವುದರಿಂದ ಕೃತಿಯ ಅಧ್ಯಯನದಲ್ಲಿ ಯಶಸ್ವಿಗಳಾಗಿದ್ದಾರೆ. ಕೃತಿಯನ್ನು ಓದುವವನಿಗೆ ಅಲ್ಲಲ್ಲಿ ಸಹಾಯಮಾಡುವ ಮತ್ತು ಧ್ವನಿಯನ್ನು ಗದ್ಯದಲ್ಲಿ ವಿವರಿಸುವ, ವಾಚ್ಯವಾಗಿಸುವ ಪ್ರಯತ್ನಕ್ಕಿಂತ ಹೆಚ್ಚೇನೂ ಸಾಧ್ಯ

ವಾಗುವುದಿಲ್ಲ. ರಾಮಾಯಣವನ್ನು ಒಂದು Allegory ಯನ್ನಾಗಿ ಕುವೆಂಪು ಕಂಡರೆಂಬುದನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಒಂದೇ ಕಾಲಕ್ಕೆ ಶ್ರೀರಾಮನನ್ನು ಸಾಮಾನ್ಯನನ್ನಾಗಿಯೂ ಮತ್ತು ಸಾಮಾನ್ಯನ ನಿಯಮಗಳನ್ನು ಮೀರಿದವನನ್ನಾಗಿಯೂ ಕಾಣುವುದು ಒಂದು ವಿರೋಧದಂತೆ ಕಾಣುತ್ತದೆ. ಇದು ಆ ಕೃತಿಯ ಮೌಲ್ಯವಿವೇಚನೆಗೆ ಒಂದು ಮಾರ್ಗವೂ ಆಗುತ್ತದೆ.

ಕೀರ್ತಿನಾಥ ಕುರ್ತಕೋಟಿಯವರದು ಬೇರೆ ದೃಷ್ಟಿ. ವಿಮರ್ಶಕನಾಗಿ ಅದನ್ನು ನೋಡಲು ಪ್ರಯತ್ನಿಸಿದ್ದಾರೆ. ಮೊದಲ ಭಾಗದಲ್ಲಿ 'ದರ್ಶನಧ್ವನಿ' ಎನ್ನುವ ಪಾರಿಭಾಷಿಕ ಶಬ್ದದ ಔಚಿತ್ಯವನ್ನು ಪ್ರಶ್ನಿಸಿದ್ದಾರೆ. ದರ್ಶನ ಮತ್ತು ಕಾವ್ಯಾನುಭವಗಳು ಬೇರೆಬೇರೆಯಾಗಿ ನಿಲ್ಲುವ ಕೆಲವು ಸನ್ನಿವೇಶಗಳನ್ನು ಉದಾಹರಿಸಿದ್ದಾರೆ. ರಸಸ್ಥಿತಿಯನ್ನು ತಲಪಬೇಕಾದ ಘಟನೆಗಳಲ್ಲಿ ಪಾತ್ರಗಳು ಭಾವವಿಕಾರತೆಯನ್ನು ಪ್ರದರ್ಶಿಸುತ್ತವೆ ಎಂಬುದನ್ನು ರಾಮ ಶಬರಿಯರ ವೃತ್ತಾಂತ ಮತ್ತು 'ಸೆರೆಸಿಲ್ಕಿದನೊ ವೈರಿ' ಎನ್ನುವ ಪ್ರಸಂಗಗಳಿಂದ ಸಮರ್ಥಿಸಿದ್ದಾರೆ. ರಾಮನನ್ನು ಮನುಷ್ಯಸಾಮಾನ್ಯನೆಂಬಂತೆ ಕುವೆಂಪು ನೋಡುತ್ತಾರೆಂದು ಒಪ್ಪಿಕೊಳ್ಳುವುದರಿಂದ (ಪು. 21) ಶಬರಿಯ ಪ್ರಸಂಗದಲ್ಲಿ ಭಾವವಿಕಾರ ಹೇಗೆ ಬರುವುದೋ ತಿಳಿಯುವುದಿಲ್ಲ. ಆದ್ದರಿಂದ ಈ ಮೊದಲೇ ಹೇಳಿದಂತೆ ಈ ಕೃತಿಯ ವಿಮರ್ಶೆಯಲ್ಲಿ ವ್ಯಕ್ತವಾದ ಅಭಿಪ್ರಾಯಗಳಲ್ಲಿನ ವಿರೋಧವೇ ಕೃತಿಯ ವಿಮರ್ಶೆಗೆ ದಾರಿಯಾಗಬಲ್ಲುದು. ಎರಡನೇ ಭಾಗದಲ್ಲಿ ಕವಿಯ ಸ್ವಕಾವ್ಯಪ್ರಜ್ಞೆ ಕಾವ್ಯವನ್ನು ದುರ್ಬಲಗೊಳಿಸಿದೆ ಎನ್ನುವ ನಿಲುವನ್ನು ಬೆಳೆಸಲಾಗಿದೆ. ಕಾವ್ಯದ ಭಾಷೆಯ ಮೇಲೆ ಇದು ಬೀರಿರುವ ಪರಿಣಾಮಗಳ ಕಡೆ ಗಮನ ಹರಿದಿದೆ. ಕುವೆಂಪು ಅವರ ಒಟ್ಟು ಕಾವ್ಯದ ಬಗೆಗೆ ಹೇಳಲಾಗುವ ಮಾತುಗಳನ್ನು ಹೇಳಿ ಅದನ್ನು ಸಮರ್ಥಿಸಲು ಪುಟ 28ರಲ್ಲಿ ಎರಡು ಉದಾಹರಣೆ ಕೊಟ್ಟಿದ್ದಾರೆ. (ಅಲ್ಲಿ 'ಕಿವಿಗೆ ಹಿತವಾದ ಸ್ವರಮೇಳ'ವಿದೆ ಎನ್ನುತ್ತಾರೆ. 'ಆದರೆ ಪದಮೈತ್ರಿಗೂ ಭಾವಾರ್ಥವೈರಕ್ಕೂ ಏನು ಸಂಬಂಧ?' ಎಂಬ ಪ್ರಶ್ನೆ ಅರ್ಥವಾಗುವುದಿಲ್ಲ.) 31ನೇ ಪುಟದ ಎರಡು ಉದಾಹರಣೆಗಳಲ್ಲಿ ಮೊದಲನೆಯದರಲ್ಲಿ ಬರುವ 'ದರ್ಶನ' ಶಬ್ದಕ್ಕೆ ಕಣ್ಣಿಗೆ ಸಂಬಂಧಪಟ್ಟ ಅನುಭವವೆಂದು ಅರ್ಥೈಸಿ ತಮ್ಮ ವಾದಕ್ಕೆ ಅನುಕೂಲ ಮಾಡಿಕೊಂಡಿದ್ದಾರೆ. ಅಲ್ಲಿನ ಎರಡನೇ ಉದಾಹರಣೆಯನ್ನವರು ತಪ್ಪಾಗಿ ಓದಿದ್ದಾರೆ. (ಪುಸ್ತಕದ ಮುದ್ರಣವೂ ಹಾಗೇ ಇದೆ)..."ಪೃಥಿವೀ ಬೃಹನ್ ವಲ್ಮೀಕದಿಂದುಣ್ಮಿದಾದಿ ಶೇಷಂ ದೇವಿ ಲಕ್ಷ್ಮಿಯನರಸಿ ವಿಷ್ಣು ಶಯ್ಯಾಗಾರಮಂ ಪ್ರವೇಶಿಸುವ ಮಾಳ್ಕೆಯಿಂ..." ಎಂಬಲ್ಲಿ 'ಆದಿಶೇಷ ವಲ್ಮೀಕದಿಂದೆದ್ದು ಲಕ್ಷ್ಮಿಯನ್ನರಸಿ' ಎನ್ನುವ ಅರ್ಥ ಬರುವುದಿಲ್ಲ. 'ವಿಷ್ಣು' ಮತ್ತು 'ಶಯ್ಯಾಗಾರ' ಇವೆರಡೂ ಬೇರೆ ಬೇರೆ ಪದಗಳು. ವಿಷ್ಣು ಶಬ್ದಕ್ಕೆ ಪ್ರಥಮಾ ವಿಭಕ್ತಿಯ ಬದಲು ಷಷ್ಠಿಯನ್ನು ಆರೋಪಿಸಿ ಓದಿದ್ದಾರೆ. ಮಹಾಕಾವ್ಯ ಬರೆಯಬೇಕೆಂಬ ಛಲವೊಂದೇ ಈ ಕಾವ್ಯಕ್ಕೆ ಕಾರಣವೆಂಬುದು ಇಲ್ಲಿನ ನಿಲುವು. ತನ್ನ ಸುತ್ತ ಪಾರಿಭಾಷಿಕ ಶಬ್ದಗಳ ಆವರಣವೊಂದನ್ನು ನಿರ್ಮಿಸಿಕೊಂಡ ಕಾವ್ಯವನ್ನು ಚಿಕಿತ್ಸಕ ದೃಷ್ಟಿಯಿಂದ ಸಮೀಪಿಸುವ ಕುರ್ತಕೋಟಿಯವರು ಇನ್ನಷ್ಟು ಆಳಕ್ಕೆ ಹೋಗಬೇಕಿತ್ತೆಂದು ಅನ್ನಿಸುತ್ತದೆ. ಕೃತಿಯಲ್ಲಿನ ದೋಷಗಳನ್ನು ಹುಡುಕುವಾಗಲೇ ಅವುಗಳನ್ನು ಕುವೆಂಪು

ಅವರ ಕಾವ್ಯಕೃಷಿಯ ಹಿನ್ನೆಲೆಯಲ್ಲಿ ವಿವರಿಸುವ ಪ್ರಯತ್ನವಿಲ್ಲ. ಕೋ. ಚೆನ್ನಬಸಪ್ಪ ಮತ್ತು ದೇ. ಜವರೇಗೌಡರ ಬರೆಹದ ಹಿಂದೆ ಅಧ್ಯಯನಶೀಲತೆಯಿದೆ. ಪೂರಕ ಗ್ರಂಥ ಗಳನ್ನು ಗಮನಿಸಿದ್ದಾರೆ. ಆದರೆ ಕೃತಿಯನ್ನು ಮೆಚ್ಚುವುದು ವಿಮರ್ಶೆಯ ಮೊದಲ ಹಂತವಾದರೂ ಅದೇ ಕೊನೆಯ ಹಂತವೂ ಅಲ್ಲ.

**ಕುವೆಂಪು ಸಾಹಿತ್ಯ: ಕೆಲವು ಅಧ್ಯಯನಗಳು** ಎಂಬ ಪುಸ್ತಕದ ಉಳಿದ ವಿಮರ್ಶಾ ಲೇಖನಗಳಲ್ಲಿ ಅವರ ಕಾವ್ಯ, ಕಾದಂಬರಿ, ನಾಟಕಗಳನ್ನು ಗಮನಿಸ ಲಾಗಿದೆ. ಎಲ್ಲವೂ ಪೂರ್ಣಪ್ರಮಾಣದ ವಿಮರ್ಶೆಗಳಾಗಿಲ್ಲ. ಪರಿಚಯ, ಮೆಚ್ಚುಗೆಗಳ ಹಂತವನ್ನು ದಾಟಿ ಅಲ್ಲಲ್ಲಿ ಸಮೀಕ್ಷಿಸಲಾಗಿದೆ. 'ಕುವೆಂಪು ಕಾವ್ಯದಲ್ಲಿ ರಾಜಕೀಯ ವಿಚಾರ ಧಾರೆ' ಎನ್ನುವ ಲೇಖನದಲ್ಲಿ ಭಾವಗೀತಗಳಲ್ಲಿ ಸಾಮಾಜಿಕ ಸಂದರ್ಭಗಳ ಬಗ್ಗೆ ಕವಿ ಹೇಳಿದ ಮಾತುಗಳನ್ನು ಒಟ್ಟುಗೂಡಿಸಲಾಗಿದೆ. ಅಲ್ಲಿ ಕಾಣುವ ಅಭಿಪ್ರಾಯಗಳನ್ನು ಕುವೆಂಪು ಅವರ ರಾಜಕೀಯ ವಿಚಾರಧಾರೆ ಎಂದಿದ್ದಾರೆ. ಅದು ಕಾವ್ಯದ ಸ್ವರೂಪದ ಮೇಲೆ ಬೀರಿದ ಪರಿಣಾಮದ ಬಗ್ಗೆ ವಿವೇಚನೆ ನಡೆಸಿಲ್ಲ. ಆ ಮಾತು 'ಕುವೆಂಪು ಕಾವ್ಯದಲ್ಲಿ ನಿಸರ್ಗ' ಎನ್ನುವ ಲೇಖನಕ್ಕೂ ಹೊಂದುತ್ತದೆ. ಅಲ್ಲಿ 'ಶ್ರೀ ಕುವೆಂಪು ಪ್ರಥಮತಃ ದಾರ್ಶ ನಿಕರು; ಅನಂತರ ಕವಿಗಳು' ಎನ್ನುವ ಮಾತು (ಪ್ರ. 251) ಕವಿಯ ಬಗೆಗಿನ ನೇತ್ಯಾತ್ಮಕ ನಿಲುವು ಕೂಡಾ ಆಗಬಹುದಾಗಿದೆ.

**ಚಂದ್ರಹಾಸ: ನಾಟಕ ಸಮೀಕ್ಷೆ.** (ಸಂ: ಎಂ. ಸಿ. ವಸಂತಕುಮಾರ್) ಐದು ಲೇಖನಗಳ ಸಂಗ್ರಹ. ನಾಟಕದ ಸ್ವರೂಪ ಮತ್ತು ಚಂದ್ರಹಾಸ ನಾಟಕ ಇವರಡರ ಸಂಬಂಧದ ಬಗ್ಗೆ ಯಾವ ಲೇಖನವೂ ಗಮನ ಹರಿಸುವುದಿಲ್ಲ. ಕಾವ್ಯಕ್ಕೂ. ನಾಟಕಕ್ಕೂ ಅನ್ವಯವಾಗುವಂತೆ ವಿಮರ್ಶೆಯಲ್ಲಿ ಯಾವ ಭೇದವೂ ಇಲ್ಲವೆಂದು ಇಲ್ಲಿ ಭಾಸವಾಗು ತ್ತದೆ. 'ಚಂದ್ರಹಾಸ ನಾಟಕದಲ್ಲಿ ಪ್ರಕೃತಿ' ( ಭೈರವಮೂರ್ತಿ. ಕೆ ) ಎನ್ನುವ ಲೇಖನ ಇದಕ್ಕೆ ನಿದರ್ಶನ. ಉದ್ದಕ್ಕೂ ನಾಟಕವೆಂಬುದನ್ನು ಮರೆಯಲಾಗಿದೆ. ಎಲ್ಲ ಪ್ರಯತ್ನ ಗಳೂ ಒಂದರಿಂದ ಒಂದು ಬೇರೆಯಾಗುವುದಿಲ್ಲ. ವಿಷಯಗಳು ಪುನರಾವರ್ತನೆಯಾಗು ತ್ತವೆ. ವಿಮರ್ಶೆಯ ಭಾಷೆಯಲ್ಲಿ ಅಲ್ಲಲ್ಲಿ ಔಚಿತ್ಯ ಮೀರಿದ ಸಾಲುಗಳು ಬರುವು ದುಂಟು. (ಪುಟ 48"...ಲಕ್ಷ್ಮೀಶನ ಕಾವ್ಯ ಗದ್ದೆಯಲ್ಲಿ ಚಂದ್ರಹಾಸ ಕತೆ ಎಂಬ ಕಬ್ಬನ್ನು ಕತ್ತರಿಸಿದ ಕುವೆಂಪು ತಮ್ಮ ಪ್ರತಿಭಾ ಗಾಣದಿಂದ ಹಿಂಡಿ ರಸವನ್ನು ತೆಗೆದು ಜ್ಞಾನದ ಜ್ವಾಲೆಯಿಂದ ಕಾಯಿಸಿ. ದರ್ಶನದ ಅಚ್ಚಿನಲ್ಲಿ ಹಾಕಿ ಸೊಗಸಾದ ಕಲ್ಲುಸಕ್ಕರೆ ಯಂತಹ ನಾಟಕವನ್ನು ..."), ಚಂದ್ರಹಾಸ ನಾಟಕವನ್ನು ಕುರಿತು ಇಲ್ಲಿ ಯಾವ ಪ್ರಬುದ್ಧ ವಿಚಾರಗಳೂ ಸಿಗುವುದಿಲ್ಲ.

**ಕಾವ್ಯಾನುಸಂಧಾನ:** (ಚನ್ನವೀರ ಕಣವಿ) ದಲ್ಲಿ ಎಲ್ಲ ಲೇಖನಗಳೂ ತಮ್ಮ ಮಟ್ಟವನ್ನು ಕಾಯ್ದುಕೊಂಡಿಲ್ಲ. 'ಜನಪದ ಕಾವ್ಯದಲ್ಲಿ ಪ್ರತಿಮಾ ವಿಧಾನ' ತುಂಬ ಒಳ್ಳೆಯ ಪ್ರಯತ್ನ. ಪ್ರತಿಮೆಗಳ ನಿರ್ಮಾಣವನ್ನು ಕುರಿತು ಒಂದು ವಿಶ್ಲೇಷಣೆಯನ್ನು ನಡೆಸಿ ಆ ಹಿನ್ನೆಲೆಯಲ್ಲಿ ಜನಪದ ಕಾವ್ಯದ ಉದಾಹರಣೆಗಳನ್ನು ಕಂಡಿದ್ದಾರೆ. ನಾಗರಿಕ ಕಾವ್ಯದ ಈ ಮಾಪನಗಳನ್ನು ಅಲ್ಲಿ ಅನ್ವಯಿಸಬೇಕೆ ಎಂಬುದು ಬೇರೆ ಪ್ರಶ್ನೆ. ಈ ದೃಷ್ಟಿಯ

ಅಧ್ಯಯನವೂ ಒಂದು ಮುಖ. ಅಪ್ರಯತ್ನಪೂರ್ವಕವಾದ ನಿರ್ಮಿತಿಯಾದ್ದರಿಂದ ಪ್ರತಿಮಾ ನಿರ್ಮಾಣದ ಬಗ್ಗೆ ತಾತ್ತ್ವಿಕವಾದ ನೆಲೆಯನ್ನೂ ಬೆಳೆಸಲು ಸಾಧ್ಯವಿದೆ. 'ಬಸವಣ್ಣನವರ ವಚನಗಳ ಸಾಹಿತ್ಯಕ ಮೌಲ್ಯ'ದಲ್ಲಿ ಸಾಹಿತ್ಯವನ್ನು ಕಾವ್ಯದೊಡನೆ ಸಮೀಕರಿಸಿ ಬಸವಣ್ಣನವರ ವಚನಗಳಲ್ಲಿ ಕಾವ್ಯಾಂಶವನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ವಚನಗಳಲ್ಲಿ ಕಾವ್ಯದ ಬಾಹ್ಯ ಸ್ವರೂಪಗಳು–ಲಯ, ಪ್ರಾಸಗಳು, ಔಚಿತ್ಯ, ಉಪಮೆ, ರೂಪಕಗಳನ್ನು ಕುರಿತಾದ ವಿವರಣೆಯಿದೆ. ಕಾವ್ಯದ ಸಾಂಪ್ರದಾಯಿಕ ವಿವರಣೆಗೆ ಸವಾಲಾಗಿ ನಿಲ್ಲುವ ವಚನಗಳನ್ನು ಬಳಕೆಯ ಪರಿಭಾಷೆಯ ಆವರಣದಲ್ಲಿಟ್ಟು ನೋಡುವುದು ಅವುಗಳ ಅಭ್ಯಾಸವನ್ನು ಸೀಮಿತಗೊಳಿಸುತ್ತದೆ. 'ಪಿ. ಸೀ ಕಾವ್ಯದ ಹೆಜ್ಜೆಪಾಡು' ಮತ್ತು 'ಕೆ.ಎಸ್. ನರಸಿಂಹಸ್ವಾಮಿಯವರ ವಾತ್ಸಲ್ಯ ಗೀತಗಳು' ಇನ್ನೆರಡು ಒಳ್ಳೆಯ ಪ್ರಯತ್ನಗಳು. ಮೊದಲ ಲೇಖನದಲ್ಲಿ ಸಂಕಲನದಿಂದ ಸಂಕಲನಕ್ಕೆ ಪಿ.ಸೀ.ಯವರು ಬೆಳೆದ ರೀತಿಯನ್ನು ಗುರುತಿಸಿ, ಕವಿಯ ಭಾವಗೀತೆಗಳ ಸ್ವರೂಪ, ವೈಶಿಷ್ಟ್ಯ ಮತ್ತು ಮಿತಿಗಳನ್ನು ನಿರೂಪಿಸಿದರೆ, ಇನ್ನೊಂದು ಲೇಖನದಲ್ಲಿ 'ಮಕ್ಕಳನ್ನು ಕುರಿತ' ಕವಿತೆಗಳ ಪರಿಚಯ ವಿಮರ್ಶೆಯ ಜತೆಗೆ ಸ್ವಭಾವೋಕ್ತಿಯನ್ನು ತಮ್ಮ ಕಾವ್ಯಾಭಿವ್ಯಕ್ತಿಯ ಮಾಧ್ಯಮವನ್ನಾಗಿ ಈಗ ಸ್ವೀಕರಿಸುವ ಕೆ. ಎಸ್. ನ. ರವರು ಈ ಪ್ರವೃತ್ತಿಯನ್ನು ಕಾವ್ಯೋದ್ಯೋಗದ ಮೊದಲ ಹಂತದಲ್ಲೇ ತೋರಿಸಿದ್ದಾರೆಂದು ಗುರುತಿಸಲಾಗಿದೆ.

**ಸಮಾವೇಶ:** (ಸಿ. ಪಿ. ಕೆ.): ಲೇಖಕರು ಆಗಾಗ ಬರೆದ ಲೇಖನಗಳ ಸಂಗ್ರಹ. ವಿದ್ಯಾರ್ಥಿಯಾಗಿದ್ದಾಗ ಬರೆದವೂ ಸೇರಿವೆ. ಆಶಯಪ್ರಧಾನವಾದ ವಿಮರ್ಶಾದೃಷ್ಟಿಯಿಂದಾಗಿ ಎಲ್ಲವೂ ಸರಳವಾಗಿದೆ. ಇಲ್ಲದಿದ್ದಲ್ಲಿ ಕೇವಲ ವಿವರಣೆ ಇರುತ್ತದೆ. ಸ್ವಲ್ಪ ಮಟ್ಟಿಗೆ ಬೇರೆಯಾಗಿ ನಿಲ್ಲುವ 'ಹರಿಶ್ಚಂದ್ರ ಕಾವ್ಯದ ಒಂದು ಪ್ರತಿಮೆ'ಯಲ್ಲಿ ರಾಘವಾಂಕನು ಹರಿಶ್ಚಂದ್ರನ ಕೈಲಿ ಹೊಲತಿಯನ್ನು ದಂಡಿಸುವುದನ್ನು ಪ್ರತಿಮಾತ್ಮಕವೆಂದು ಹೇಳಿದ್ದಾರೆ. ಆದ್ದರಿಂದ ಆ ಪ್ರಸಂಗದಲ್ಲಿ ಅನೌಚಿತ್ಯವಿಲ್ಲವೆನ್ನುತ್ತಾರೆ. ಹೊಲತಿಯರು ಅಸತ್‌ನ ಪ್ರತೀಕಗಳಾಗಿದ್ದು ಅವರನ್ನು ಸತ್–ನ ಪ್ರತಿನಿಧಿಯಾಗಿ ಹರಿಶ್ಚಂದ್ರನೇ ಶಿಕ್ಷಿಸಬೇಕೆಂಬುದು ಧ್ವನಿ ಎಂದಿದ್ದಾರೆ. ಇದು ಪ್ರಸಂಗವನ್ನು ಹೊಂದಿಸಿದರೂ ಕಾವ್ಯದ ಚೌಕಟ್ಟಿನಲ್ಲಿ ಹರಿಶ್ಚಂದ್ರನ ವರ್ತನೆಯಿಂದ ಬೇರೆಯಾಗಿ ಕಾಣುತ್ತದೆ. ಉಳಿದವು ಸಾಮಾನ್ಯ ಲೇಖನಗಳು. 'ಒಂದು ಜಾನಪದ ಪ್ರಾರ್ಥನೆ'ಯ ಎರಡು ಸಾಲುಗಳಿಗೆ ದೂರಾನ್ವಯದ ಅರ್ಥ ಹಚ್ಚಿದ್ದಾರೆ. ಒಂದು ವೈಚಾರಿಕ ಹಿನ್ನೆಲೆಯ ಕೊರತೆಯಿಂದಾಗಿ ಸಂಗ್ರಹ ಸ್ವಂತದ್ದನ್ನು ನೀಡುವುದಿಲ್ಲ

**ಸಮಾರಾಧನೆ:** ( ಗುಂಡ್ಮಿ, ಚಂದ್ರಶೇಖರ ಐತಾಳ ) ಐದು ಲೇಖನಗಳಲ್ಲಿಯೂ ಮೇಲಿನವೇ ಕೊರತೆ. ಮೆಚ್ಚುಗೆಯ ಹಂತದಿಂದ ಮುಂದುವರೆಯಲು ಪ್ರಯತ್ನವಿಲ್ಲ. ಮೆಚ್ಚುಗೆ ತನ್ನ ಗರಿಷ್ಠಮಿತಿಯನ್ನು ಮೀರಿದ ಉದಾಹರಣೆಗಳಿವೆ. 'ಕುವೆಂಪು ಅವರನ್ನು ಕನ್ನಡದ ವರ್ಡ್ಸ್‌ವರ್ತ್ ಅನ್ನುವುದಕ್ಕಿಂತ ವರ್ಡ್ಸ್‌ವರ್ತ್ ಇಂಗ್ಲಿಷಿನ ಕುವೆಂಪು ಎನ್ನುವುದು ಹೆಚ್ಚು ಉಚಿತ' (ಪು. ೭೧). ಪು. ತಿ. ನ. ಅವರು ದ್ವಾಪರಯುಗದಲ್ಲಿ ಬಹುಶಃ ಶ್ರೀಕೃಷ್ಣನ ಗೋಪಿಕಾಸ್ತ್ರೀ ವೃಂದದಲ್ಲಿ ಒಬ್ಬರಾಗಿದ್ದಿರ

ಬೇಕು (ಪು ೯೬) 'ಸಹೃದಯನಿಗೆ ಮೆಚ್ಚಿಕೆಯಾದ ಕವಿಕೃತಿಯ ಅಂಶವನ್ನು ಗುರುತಿಸುವುದು' ಉದ್ದೇಶವೆಂದಿದ್ದಾರೆ. ಮೆಚ್ಚಿಕೆ ಏಕಾಯಿತು ಎಂಬುದನ್ನು ಹೇಳಬೇಕಷ್ಟೆ.

**ಸಾಹಿತ್ಯ ಸಾನ್ನಿಧ್ಯ:** (ಜಿ. ವರದರಾಜರಾವ್) ಮತ್ತೊಂದು ಆಶಯಪ್ರಧಾನ ವಿಮರ್ಶಾಕೃತಿ. ಇಲ್ಲಿರುವ ಎಲ್ಲ ಲೇಖನಗಳೂ ಉದ್ದೇಶಿತ ಕೃತಿಯನ್ನು ತಮ್ಮದೇ ಆದ ರೀತಿಯಲ್ಲಿ ವಿವರಿಸುತ್ತವೆ. ಲೇಖನಗಳ ಉದ್ದೇಶವೂ ಅಷ್ಟೇ ಎನ್ನುವುದು ಕೃತಿಯ ಹೆಸರಿನಿಂದ ಹೊಳೆಯುತ್ತದೆ. 'ಕೋಳೂರು ಕೊಡಗೂಸಿನ ಕಥಾವಾಹಿನಿ' ಸ್ವಲ್ಪ ಮಟ್ಟಿಗೆ ಹೊಸತನದಿಂದ ಕೂಡಿದೆ. ಅಧ್ಯಯನಕ್ಕೆ ಸಾಮಗ್ರಿಯನ್ನು ಕೊಡುತ್ತದೆ.

**ಪ್ರಬಂಧಗಳು:** (ಎಸ್.ವಿ. ಪರಮೇಶ್ವರಭಟ್ಟ): ಮೊದಲ ಮೂರು ಲೇಖನಗಳು ಗಮನಾರ್ಹವಾದವು. .ಏಕೆಂದರೆ ಸಂಸ್ಕೃತ ಸಾಹಿತ್ಯವನ್ನು ಪರಿಚಯಿಸುವ ಉದ್ದೇಶ ಅವಕ್ಕಿದೆ; ವಿಮರ್ಶೆ ಅಲ್ಲಿಲ್ಲ. ಸಂಸ್ಕೃತ ಮೂಲ. ಕನ್ನಡ ಅನುವಾದಗಳೆರಡೂ ಬಳಕೆಯಾಗಿವೆ. ಮುದ್ದಣ ಕವಿಯ ಅದ್ಭುತರಾಮಾಯಣ ವಿಮರ್ಶೆಯಲ್ಲಿ ವಿಮರ್ಶೆಯ ಬಾಹ್ಯ ಲಕ್ಷಣಗಳ ಅನ್ವಯವಿದೆ. ಪಾತ್ರಪರಿಚಯ. ಉಕ್ತಿಚಾತುರ್ಯ, ನಾಣ್ನುಡಿ–ಇತ್ಯಾದಿ. ಅಧ್ಯಯನ ಶೀಲತೆಯೇ ಇಲ್ಲಿಯ ಲೇಖನಗಳ ಪ್ರಮುಖ ಗುಣ: ವಿಮರ್ಶೆ ಆಚೆಗಿನ ಮಾತು.

**ಭಕ್ತವಾಣಿ:** (ವಿವಿಧ ಲೇಖಕರು) ಯಲ್ಲಿ ಶಿವಶರಣೆಯರು, ಹರಿಹರ, ಚಾಮರಸ ಮತ್ತು ಶ್ರೀಪಾದರಾಜರ ಕೃತಿಗಳ ಬಗ್ಗೆ ಬರೆದ ನಾಲ್ಕು ಲೇಖನಗಳಿವೆ. ಬಿ. ವಿ. ವೀರಭದ್ರಪ್ಪನವರ 'ಚಾಮರಸನ ಪ್ರತಿಮಾ ಪ್ರಪಂಚ' ಒಂದು ಜವಾಬ್ದಾರಿಯುತವಾದ ಪ್ರಯತ್ನ. ಮೊದಲು ಪ್ರಭುಲಿಂಗಲೀಲೆ ಮತ್ತು ಹರಿಹರನ ರಗಳೆಗಳನ್ನು ಹೋಲಿಸಿದ್ದಾರೆ. ಚಾಮರಸನಲ್ಲಿ ಅಲ್ಲಮನ ಮೊದಲ ಹಂತದ ಬದುಕಿನಲ್ಲಿ ಬರುವ ವ್ಯಕ್ತಿಗಳ ಹೆಸರು, ಘಟನೆಗಳ ನಿರೂಪಣೆಯಲ್ಲಿ ಕವಿ ಉಪಯೋಗಿಸುವ ಶಬ್ದಗಳು ಅಧ್ಯಾತ್ಮಿಕ ಪರಿಭಾಷೆಗೆ ಸಂಬಂಧಿಸಿದ್ದು ಅವಲ್ಲವೂ ಮತ್ತೊಂದು ಅನುಭವವನ್ನು ನಿರ್ಮಿಸಿಕೊಡುವುದನ್ನು ಗುರುತಿಸಿದ್ದಾರೆ. 'ಶ್ರೀಪಾದರಾಜರ ಕೃತಿಗಳು' (ಜಿ. ವರದರಾಜರಾವ್) ಒಂದು ಪರಿಚಯಾತ್ಮಕ ಲೇಖನ. ಸಮಾಜದ ಲೋಪದೋಷಗಳತ್ತ ಗಮನ ಹರಿಸದಿದ್ದರೂ ಸಾತ್ತ್ವಿಕ ಬದುಕಿನ ಲಕ್ಷಣಗಳನ್ನು ಕುರಿತು ಹಾಡಿದವರೆಂದು ಶ್ರೀಪಾದರಾಜರನ್ನು ಗುರುತಿಸಲಾಗಿದೆ.

**ಸಾಹಿತ್ಯಮನನ:** (ಆರ್ ರಾಚಪ್ಪ) ಮತ್ತು **ಕನ್ನಡ ಸಾಹಿತ್ಯ ಪರಿಚಯ** (ಹೀ. ಚಿ. ಶಾಂತವೀರಯ್ಯ) ಇವೆರಡೂ ಸಾಮಾನ್ಯ ದರ್ಜೆಯ ಪುಸ್ತಕಗಳು. ಸಾಹಿತ್ಯ ಮನನದಲ್ಲಿ ದುರ್ಬಲವಾದ ಆಲೋಚನೆಯಿದೆ. ಎರಡನೆ ಪುಸ್ತಕದ ಉದ್ದೇಶವಂತೂ ಅಸ್ಪಷ್ಟ.: ಅವ್ಯವಸ್ಥಿತವಾಗಿದೆ.

ಇಲ್ಲಿಗೆ ಈ ವರ್ಷದ ವಿಮರ್ಶೆಯ ಗ್ರಂಥಗಳ ಸಮೀಕ್ಷೆ ಮುಗಿಯುತ್ತದೆ. ಈಗ ಒಟ್ಟಾರೆ ಅನ್ನಿಸಿದ ಕೆಲವು ಮಾತುಗಳನ್ನಾಡಬಹುದೆಂದು ತೋರುತ್ತದೆ:

(೧) ವಿಮರ್ಶಕರು ಕಾವ್ಯದತ್ತ ಗಮನ ಹರಿಸಿದಷ್ಟು ಉಳಿದ ಸಾಹಿತ್ಯ ಪ್ರಕಾರಗಳತ್ತ ಗಮನ ಹರಿಸಿಲ್ಲ.

(೨) ಬಹಳ ಪಾಲು ಲೇಖನಗಳು ಈ ವರೆಗೆ ಆ ಕೃತಿಯ ಬಗ್ಗೆ ಬಂದ ವಿಮರ್ಶೆಯ ಮಾಹಿತಿಯನ್ನು ಪಡೆದಿಲ್ಲವೆನ್ನಿಸುತ್ತವೆ. ಆದ್ದರಿಂದಲೇ ಪುನರಾವರ್ತನೆ ಸ್ಥಾಯಿ ಯಾಗಿ ಕೂಚು ನಡೆವಾಗಿನ 'ಮಾರ್ಕ್‌ಟೈಂ' ಅನ್ನು ನೆನಪಿಗೆ ತರುತ್ತದೆ.

(೩) ವಿಮರ್ಶೆ ಮೆಚ್ಚುಗೆ, ಉದ್ಗಾರ ಪರಿಚಯಗಳ ಹಂತಗಳನ್ನು ದಾಟಿ ದಾಗ ಆಶಯಪ್ರಧಾನವಾಗಿ ಬಿಡುತ್ತದೆ. ದಾಟುವುದಂತೂ ಹಲವು ಲೇಖನಗಳಲ್ಲಿ ಇಲ್ಲವೇ ಇಲ್ಲ. ಸಂಭ್ರಮಿಸುವುದರಿಂದ ಕನಿಷ್ಠ ಮಿತಿಯ ವಸ್ತುನಿಷ್ಠತೆಯೂ ಇಲ್ಲವಾ ಗುತ್ತದೆ.

(೪) ಸಂಗ್ರಹಗಳ ಹಿಂದೆ ಹಲವು ವಿಮರ್ಶಕರಲ್ಲಿ ಒಂದು ವೈಚಾರಿಕ ನೆಲೆ ಇಲ್ಲ. ಸಾಹಿತ್ಯದ ಬಗೆಗಿನ ನಿಲುವುಗಳು ಅವರ ವಿಮರ್ಶೆಗಳಿಗೆ ಒರೆಗಲ್ಲಾಗಬೇಕಾಗಿತ್ತು.

(೫) ಒಟ್ಟಿನಲ್ಲಿ ವಿಮರ್ಶೆಯನ್ನು ಅಭಿಪ್ರಾಯ ನಿರೂಪಣೆಯ ಹಂತದಲ್ಲಿ ನಿಲ್ಲಿಸಿದವರೇ ಹೆಚ್ಚು; ಅದನ್ನೊಂದು ಶಿಸ್ತು ಎಂದು ಪರಿಗಣಿಸಿದವರು ತೀರಾ ಕಡಿಮೆ. ಇದು ಆರೋಗ್ಯಕರವಲ್ಲ.

(೬) ಇಷ್ಟಾದರೂ ನಿರಾಶೆಗೆ ಕಾರಣವಿಲ್ಲ. ಸೃಜನಾತ್ಮಕ ಸಾಹಿತ್ಯದ ಬಗ್ಗೆ ಅಭಿರುಚಿಯನ್ನು ನಿರ್ಮಿಸುವುದು ವಿಮರ್ಶೆಯ ಉದ್ದೇಶವೆಂದು, ಅದು ವಿಮರ್ಶಕನ ಪ್ರಮುಖ ಜವಾಬ್ದಾರಿಯೆಂದು ಭಾವಿಸಿದ ಲೇಖಕರೂ ಇದ್ದಾರೆ. (ಅಭಿರುಚಿ ಎನ್ನು ವಾಗ ಕೇವಲ 'ಆಸ್ವಾದನೆ'ಯನ್ನು ನಾನು ಗಮನಿಸಿಲ್ಲ. ಚಿಕಿತ್ಸಕ ದೃಷ್ಟಿಯೂ ಅದರಲ್ಲಿ ಅಡಕವಾಗಿದೆ.)

## ಜೀವನ ಚರಿತ್ರೆ ಮತ್ತು ಪ್ರಬಂಧ

### ಎಸ್. ವಿದ್ಯಾಶಂಕರ್

**ನನ್ನ ಬಾಳುವೆಯ ಹೋರಾಟ**. ಇದು ಖಾನ್ ಅಬ್ದುಲ್ ಗಫಾರ್‌ಖಾನ್‌ರ 'ಮೈ ಲೈಫ್ ಅಂಡ್ ಸ್ಟ್ರಗಲ್' ಎಂಬ ಅವರ ಆತ್ಮಚರಿತ್ರೆಯ ಕನ್ನಡಾನುವಾದ. ಇದನ್ನು ಮುಂಡಕಾನ ವಾಸುದೇವಭಟ್ಟರು ಅನುವಾದಿಸಿದ್ದಾರೆ. ಖಾನರು ಪಶ್ತು ಭಾಷೆಯಲ್ಲಿ ಹೇಳಿದ ವಿಷಯವನ್ನು ಧ್ವನಿಮುದ್ರಣ ಮಾಡಿ ಅನಂತರ ಇಂಗ್ಲೀಷಿನಲ್ಲಿ ಹೆಲೆನ್ ಎಚ್. ಬೌಮನರು ಬರೆದರು. ಈ ಕೃತಿ ಹಲವಾರು ಭಾಷೆಗೆ ಅನುವಾದಗೊಂಡಿದ್ದು ಖಾನರ ಸಾಹಸಮಯ ಬದುಕನ್ನೂ ಅವರ ಕೆಚ್ಚೆದೆಯ ಹೋರಾಟವನ್ನೂ ಅವರ ಸುಸಂಸ್ಕೃತ ವಿಚಾರಧಾರೆಗಳನ್ನೂ ಹೇಳಹೊರಟಿದ್ದು, ಇಂದಿನ ಯುವಜನರಿಗೆ ಸ್ಫೂರ್ತಿಯನ್ನು ನೀಡುವಂತಿದೆ.

ಖಾನರು ಭಾರತ ವಿಭಜನೆಯಾಗುವುದಕ್ಕೆ ಮುನ್ನ ಭಾರತದ ಸ್ವಾತಂತ್ರ್ಯ ಸಮರದಲ್ಲಿ ಪ್ರಮುಖವಾಗಿ ಪಾಲ್ಗೊಂಡಿದ್ದರು. ಗಾಂಧೀಜಿಯ ಅಹಿಂಸೆಯ ಹೋರಾಟದಲ್ಲಿ ಗೆಲುವಿನ ವಿಶ್ವಾಸವುಳ್ಳವರಾಗಿದ್ದರು. ಭಾರತೀಯರು, ಗಾಂಧೀಜಿಯ ಆದರ್ಶವನ್ನು ಹಿಡಿದು ಹೋರಾಡಿದ ಇವರನ್ನು 'ಗಡಿನಾಡಿನ ಗಾಂಧಿ' ಎಂದು ಬಿರುದಿತ್ತು ಗೌರವಿಸಿರುವರು. ಬ್ರಿಟಿಷರ ದಬ್ಬಾಳಿಕೆಗೆ ಕ್ರುದ್ಧರಾಗಿ ದೇಶಪ್ರೇಮಿ ಖಾನರು ಹೋರಾಡಿದ ಸಾಹಸಮಯವಾದ, ಸ್ಫೂರ್ತಿಯುತವಾದ ಹೋರಾಟದ ಎಳೆಎಳೆಯನ್ನೂ ನಾವು ಈ ಆತ್ಮಚರಿತ್ರೆಯನುಲ್ಲಿ ನೋಡಬಹುದಾಗಿದೆ. ಭಾರತಕ್ಕೆ ಸ್ವಾತಂತ್ರ್ಯಬರಲು ಹೋರಾಡಿದ ಖಾನ್‌ರವರು ಅದು ಬಂದ ಮೇಲೆ ಇಂಡಿಯಾ ಪಾಕಿಸ್ತಾನ್ ಪ್ರಶ್ನೆಯ ತೀರ್ಮಾನ ಮತಸಂಗ್ರಹದ ಮೂಲಕ ಆಗಹೊರಟಾಗ ಅದನ್ನು ವಿರೋಧಿಸಿದರು. ವಾಯುವ್ಯ ಗಡಿನಾಡಿನ ಪಠಾಣರು ಸ್ವಾತಂತ್ರ್ಯ ಸಮರದಲ್ಲಿ ಕಾಂಗ್ರೆಸ್ಸಿನೊಡನೆ ಸೇರಿ ಬಹಳ ತ್ಯಾಗಮಾಡಿದುದನ್ನು ಗಾಂಧೀಜಿಯವರಿಗೆ ಖಾನರು ಮನವರಿಕೆ ಮಾಡಿಕೊಟ್ಟರು. ದೇಶವಿಭಜನೆಗೆ ಮತ್ತು ಮತ ಸಂಗ್ರಹಕ್ಕೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಒಪ್ಪಿದಾಗ ಪಠಾಣರಿಗೆಲ್ಲ ಮರಣಶಿಕ್ಷೆ ವಿಧಿಸಿದಂತಾಯಿತಂತೆ ಖಾನರಿಗೆ! ಫಕ್ತೂನರು ಭಾರತದೊಡನೆ ಸೇರಬೇಕೆಂಬ ಬಹುದಿನದ ಆಸೆಗೆ ಭಂಗಬಂದಾಗ ಖಾನರನ್ನು ಮುಸ್ಲಿಂ ಲೀಗಿಗೆ ಸೇರುವಂತೆ ಮೌಲಾನಾ ಆಝಾದರು ಸಲಹೆಯಿತ್ತರು. ಮುಸ್ಲಿಂ ಲೀಗು ವಿನಾಶದ ಹಾದಿಯಲ್ಲಿ ನಡೆದಿದ್ದುದನ್ನು ಅರಿತಿದ್ದ ಖಾನರು ಅದಕ್ಕೊಪ್ಪದೆ ಆ ಸಲಹೆಯನ್ನು ತಿರಸ್ಕರಿಸಿದರು. ಭಾರತ ವಿಜಭನೆಯಾದ ಮೇಲೆ ನೆಲೆಗೊಂಡ ಪಾಕೀಸ್ತಾನ ಸರಕಾರ ಅವರನ್ನು 'ಪಾಕೀಸ್ತಾನದ ವೈರಿ' ಎಂದು ಬಂಧಿಸಿ ಹದಿನೆಂಟು ವರ್ಷ ಕಾರಾಗೃಹದಲ್ಲಿರಿಸಿತು. ಯಾವ ದುಷ್ಕೃತ್ಯವನ್ನೂ ಮಾಡದ ಅವರನ್ನು ಪಾಕಿಸ್ತಾನ ಸರಕಾರ ನೋಡಿಕೊಂಡ ರೀತಿ ಪರಕೀಯ ಬ್ರಿಟಿಷರ ಪೀಡೆಗಿಂತ ಕಠಿಣವಾಗಿತ್ತು. ಪಾಕಿಸ್ತಾನದ ಇಸ್ಲಾಮಿಾ ಸರಕಾರ ಅವರ ಮನೆಮಠಗಳನ್ನು ದೋಚಿತು. ಫಖ್ತೂನ್ ಮಹಿಳೆಯರನ್ನು ಅವಮಾನ

ಪ್ಯಾಡಿಶ್ರೆ. ಭಾರತದ ಸ್ವಾತಂತ್ರ್ಯದ ಆಂದೋಳನದಲ್ಲಿ ಸಕ್ರಿಯವಾಗಿ ಭಾಗವಹಿಸಿದ ಪಖ್ತೂನಿಸ್ತಾನದ ಈ ವೀರಯೋಧನಿಗೆ ಪಾಕೀಸ್ತಾನ ಸರಕಾರ ಸೆರೆಮನೆಯ ಶಿಕ್ಷೆ ವಿಧಿಸಿತು. ಪಠಾಣ ಸ್ತ್ರೀಪುರುಷರಿಗೆ ಪಾಕೀಸ್ತಾನಿ ಸರಕಾರ ಕೊಟ್ಟ ತೊಂದರೆಗಳು ಅಮಾನುಷವಾಗಿದ್ದುವು. ಖಾನರನ್ನೂ ಸೆರೆಮನೆಯಲ್ಲಿ ನಿರ್ದಯರಾಗಿ ಶಿಕ್ಷಿಸಿದರು. ದೇಶಕ್ಕಾಗಿ ಕಷ್ಟನಷ್ಟ ನೋವುಗಳನ್ನು ಅನುಭವಿಸಿದ ಖಾನರ ಬದುಕಿನ ಚಿತ್ರವನ್ನು ಈ ಜೀವನ ಚರಿತ್ರೆಯಲ್ಲಿ ಕಂಡಾಗ ಅವರ ಅಪೂರ್ವ ದೇಶಪ್ರೇಮ, ತ್ಯಾಗಮನೋಭಾವ, ಕಷ್ಟ ಸಹಿಷ್ಣು ಸ್ವಭಾವಗಳು ಓದುಗರಲ್ಲಿ ಅವರ ಬಗ್ಗೆ ತುಂಬಾ ಗೌರವಭಾವನೆಯನ್ನು ಮೂಡಿಸುತ್ತವೆ.

ಈ 'ಆತ್ಮಚರಿತ್ರೆ'ಯ ಕೊನೆಯಲ್ಲಿ ಖಾನ್‌ರವರು ಕಾಬೂಲಿನಲ್ಲಿ ಮಾಡಿದ ಭಾಷಣಗಳನ್ನು ಕೊಟ್ಟಿರುವರು. ೧೯೬೪ರ ಜನವರಿ ೩೦ರಂದು ಪಾಕಿಸ್ತಾನದ ಸೆರೆಮನೆಯಿಂದ ಬಿಡುಗಡೆಯಾದ ಖಾನರು ಡಿಸೆಂಬರ್ ತಿಂಗಳಲ್ಲಿ ಕಾಬೂಲಿಗೆ ಬಂದು ಮೂರು ಭಾಷಣಗಳನ್ನು ಮಾಡಿದರು. ಅವರ ಈ ಭಾಷಣಗಳ ವರದಿಯನ್ನೋದುತ್ತಿದ್ದರೆ ಓದುಗನ ಮೈ ನವಿರೇಳುತ್ತದೆ. ೭೪ ವಯಸ್ಸಿನ ಆ ವೀರಯೋಧನ ಮಾತುಗಳಲ್ಲಿ ಒಂದು ಕಾಂತಿಯಿದೆ. ಬಡಿದೆಬ್ಬಿಸುವ ಶಕ್ತಿಯಿದೆ. ಒಂದೆಡೆ ಅವರು ಹೀಗೆಂದರು: "ನಾನು ನಿಮ್ಮ ನಾಯಕನಾಗಬಯಸುವುದಿಲ್ಲ. ಈಗಲೂ ಇಲ್ಲ. ಎಂದಿಗೂ ಇಲ್ಲ. ನಿಮ್ಮ ಯಜಮಾನನಾಗಲು. ನಿಮ್ಮ ಮಾರ್ಗದರ್ಶಕನಾಗಲು ಕೂಡ ಇಷ್ಟಪಡುವುದಿಲ್ಲ. ನಿಮ್ಮ ಆಳಾಗಿದ್ದು ಸೇವೆ ಸಲ್ಲಿಸುವುದೇ ನನಗೆ ಪರಮ ಸಂತೋಷ. ನಾನು ಕೇವಲ ನಿಮ್ಮ ಸೇವಕನಲ್ಲ. ಪ್ರಪಂಚವೆಲ್ಲದರ ಸೇವಕ. ದೇವನಿರ್ಮಿತ ಜೀವರಾಶಿಯ ಸೇವಕ." ಖಾನರ ಈ ವಿನಯವಂತಿಕೆ. ವಿಶಾಲವಾದ ಹೃದಯ ಅವರನ್ನು ಮಹಾಪುರುಷರನ್ನಾಗಿ ಮಾಡಿದೆ.

**ನನ್ನ ಜೀವನದ ಹೋರಾಟ:** ಕಥೆ. ಕವನ. ನಾಟಕ. ಮಕ್ಕಳ ಸಾಹಿತ್ಯ– ಈ ಪ್ರಕಾರಗಳಲ್ಲಿ ಸೇವೆಸಲ್ಲಿಸಿರುವ ಭಾಲಚಂದ್ರ ಘಾಣೇಕರರು ತಮ್ಮ ಆತ್ಮಕಥನವನ್ನು ಈ ಕಿರುಹೊತ್ತಗೆಯಲ್ಲಿ ಬರೆದಿರುವರು. ಶ್ರೀ ಬಾಲಚಂದ್ರ ಘಾಣೇಕರರು. ಮುನ್ನುಡಿಯಲ್ಲಿ ಬೆಟಗೇರಿ ಕೃಷ್ಣಶರ್ಮರು ಹೇಳಿರುವಂತೆ."ಸೋಲಿಗಂಜದೆ ಗೆಲುವನ್ನು ಗಳಿಸಿದ ಆದರ್ಶ ಜೀವಿ". ಬಡ ಕುಟುಂಬವೊಂದರಲ್ಲಿ ಜನಿಸಿ ಹಲವಾರು ಕಷ್ಟ ಕಾರ್ಪಣ್ಯಗಳ ಅಗ್ನಿಪರೀಕ್ಷೆಗೆ ಒಳಗಾಗಿ ನೊಂದು ಅಪಾರ ಪರಿಶ್ರಮದಿಂದ ಮುಂದೆ ಬಂದ. ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯಾದ ಜೀವ ಅದು, ಸ್ವಾತಂತ್ರ್ಯಕ್ಕೆ ಹೋರಾಟ ನಡೆದಿದ್ದ ದಿನಗಳಲ್ಲಿ ಗಾಂಧೀಜಿಯವರ ಸಂದೇಶವನ್ನು ಮನೆ ಮನೆಗೆ ಮುಟ್ಟಿಸುವ ಸ್ವಯಂಸೇವಕರಾಗಿ ಬದುಕನ್ನು ಆರಂಭಿಸಿ ಲೇಖಕನಾಗಿ. ಪತ್ರಿಕಾಸಂಪಾದಕನಾಗಿ. ಮುದ್ರಣಾಗಾರದ ಒಡೆಯನಾಗಿ. ಕಾಗದದ ವ್ಯಾಪಾರಿಯಾಗಿ ಕೊನೆಗೆ ಪ್ರಕಾಶಕನಾಗಿ ಜೀವನದಲ್ಲಿ ಹೋರಾಟ ನಡೆಸಿದ ಘಾಣೇಕರರು ತಮ್ಮ ಬದುಕು ನಡೆದು ಬಂದ ದಾರಿಯ ಪರಿಚಯವನ್ನು ತೀರ ಸರಳವಾಗಿ ನಿರೂಪಿಸಿರುವರು. ಅರವತ್ತು ವರುಷಗಳನ್ನು ದಾಟಿದ ಅವರಿಗೆ ಕಾಲ ಗತಿಸಿದ್ದೇ ತಿಳಿಯದು. "ಯಾರು ಯಾರೋ ಸೇರಿ ಸಾಕಿ ಸಲಹಿದಂತಾಗಿದೆ ನನ್ನ ಜೀವನ. ಎಲ್ಲರ ಋಣವನ್ನ ತೀರಿಸುವದು ಈ ಜನ್ಮದಲ್ಲಿ ಸಾಧ್ಯವಾಗಲಾರದು" ಎನ್ನುವ ವಿಶಾಲ ಮನಸ್ಸು ಅವರದು.

ಕೇವಲ ೩೧ ಪುಟಗಳಲ್ಲಿ 'ಆತ್ಮಕಥನ' ಮುಗಿದಿದ್ದು ಒಬ್ಬ ವ್ಯಕ್ತಿಯ ಹೋರಾಟದ ಬದುಕಿನ ಸಮಗ್ರ ತಿಳುವಳಿಕೆ ಇಷ್ಟರಿಂದಲೇ ಆಗದು ಎನ್ನುವ ಅನಿಸಿಕೆ ಓದುಗನಿಗೆ ಅಗುತ್ತದೆ.

**ಸಮಾಜವಾದಿ ಇಂದಿರಾಗಾಂಧಿ:** ಇದು ಪ್ರಧಾನಿ ಇಂದಿರಾಗಾಂಧಿಯವರ ಜೀವನ ಚರಿತ್ರೆಯನ್ನು ಕುರಿತು ಹೇಳುವ ಕೃತಿಯಾಗಿದೆ. ಕಾಂಗ್ರೆಸ್ ಒಡೆದು ಇಬ್ಭಾಗವಾದ ಮೇಲೆ ಇಂದಿರಾಗಾಂಧಿಯವರು ಪ್ರಧಾನಿಯಾಗಿ ಆಡಳಿತ ಸೂತ್ರವನ್ನು ಕೈಗೆ ತೆಗೆದುಕೊಂಡ ಮೇಲೆ ಅವರ ಕ್ರಾಂತಿಕಾರಿ ವಿಚಾರಗಳಿಗೆ ಧೋರಣೆಗಳಿಗೆ ಮನತೆತ್ತ ಲೇಖಕ ಶ್ರೀ ಕೆ. ಎಫ್ ಪಾಟೀಲರು ವೀರರಮಣಿ ಇಂದಿರಾಜಿಯ ಬದುಕನ್ನು ಅವರ 'ಸಮಾಜವಾದದ ಪ್ರತಿಷ್ಠಾಪನೆ ಧರ್ಮಯುದ್ಧ'ವೆಂದು ಸಾರಿದ ಘೋಷಣೆಯನ್ನು, ಅವರು 'ಬಡ ಬೋರೇಗೌಡನ ಆಶೋತ್ತರಗಳ ಕನಸನ್ನು ನನಸಾಗಿಸುವ ಯಕ್ಷಿಣಿಯಾಗಿ' ನೆರವಿಗೆ ಬಂದಿರುವುದನ್ನು ಸವಿವರವಾಗಿ, ಸರಳವಾಗಿ ಈ ಪುಸ್ತಕದಲ್ಲಿ ನಿರೂಪಿಸಿರುವರು.

ಕೃತಿ ಇಂದಿರಾಗಾಂಧಿಯ ಜನನದಿಂದ ಪ್ರಾರಂಭವಾಗುತ್ತದೆ. ಮೋತಿಲಾಲರ, ಜವಾಹರಲಾಲರ ಸ್ಥೂಲ ಪರಿಚಯವನ್ನು ಲೇಖಕರು ಪ್ರಾರಂಭದಲ್ಲಿ ಮಾಡಿಕೊಟ್ಟು ಆನಂತರ ನೆಹರೂ ಕುಟುಂಬದಲ್ಲಿ ನಾಯಕತ್ವದ ಪರಂಪರೆಯ ಪರಿಚಯ ಮಾಡಿಕೊಟ್ಟಿರುವರು. 'ತ್ಯಾಗದ ಪ್ರತೀಕ ಕಮಲಾ' ಎಂಬ ಅಧ್ಯಾಯದಲ್ಲಿ ಕಮಲಾ ನೆಹರೂರವರ ತ್ಯಾಗಶೀಲದ ಪರಿಚಯವನ್ನೂ ಮಾಡಿಕೊಟ್ಟಿರುವರು. ಮುಂದಣ ಅಧ್ಯಾಯಗಳಲ್ಲಿ ಇಂದಿರಾರವರ ಜೀವನವನ್ನು ಕುರಿತ ವಿವರಗಳನ್ನು ಕೊಟ್ಟಿರುವರು. ಕೃತಿಯ ಕೊನೆಯ ಕೆಲವು ಅಧ್ಯಾಯಗಳಲ್ಲಿ ಸಮಕಾಲೀನ ಭಾರತದ ರಾಜಕೀಯ ವಿದ್ಯಮಾನಗಳ ಸಿಂಹಾವಲೋಕನವೂ ನಡೆದಿದೆ.

ತಮಗೆ 'ಆರಾಧ್ಯಮೂರ್ತಿ'ಯಾಗಿರುವ ಇಂದಿರಾಗಾಂಧಿಯವರ ಬದುಕು, ಸಾಧನೆ –ಸಿದ್ಧಿ, ಆಶೋತ್ತರಗಳನ್ನು ವಿವರಿಸುವ ಉದ್ದೇಶ ಲೇಖಕರದು. ಅವರ ಉದ್ದೇಶ ಘನವಾದದ್ದೇ. ಎಲ್ಲರೂ ಮೆಚ್ಚಬೇಕಾದ್ದೇ. ಆತ್ಮೀಯರ ಬಗ್ಗೆ ಹೇಳುವಾಗ ತುಂಬಾ ಭಾವಪರವಶರಾಗುವುದರಿಂದ ಲೇಖಕರು ಒಮ್ಮೊಮ್ಮೆ ಗುಣಗಾನ ಮಾಡಹೊರಟಂತೆ ಓದುಗನಿಗೆ ಅನ್ನಿಸುತ್ತದೆ. ಉದಾಹರಣೆಗೆ ಪು. ೩೨, ೩೮, ೮೩ ಇತ್ಯಾದಿ. ಕೊನೆಯ ಕೆಲವು ಅಧ್ಯಾಯಗಳಲ್ಲಿ ಇಂದಿರಾಗಾಂಧಿಯವರ 'ಸಮಾಜವಾದ'ದ ಪರಿಚಯವನ್ನು ಸಾಕಷ್ಟು ಮಾಡಿಕೊಟ್ಟಿರುವರು. ಸಮಾಜವಾದಿ ಇಂದಿರಾಗಾಂಧಿಯವರು ಪ್ರಧಾನಿಯಾದ ಮೇಲೆ ಕೈಗೊಂಡ ನಿರ್ಣಯಗಳು, ಅವುಗಳನ್ನು ಜಾರಿಗೆ ತಂದು ಭಾರತದ ಭವಿಷ್ಯವನ್ನು ರೂಪಿಸ ಹೊರಟವರ ವಿವರಣೆ-ಗಳನ್ನು ಲೇಖಕರು ಚೆನ್ನಾಗಿ ಕೊಟ್ಟಿರುವರು.

'ವೀರರಮಣಿ' 'ಭಾರತದ ಕಣ್ಮಣಿ' 'ಭಾರತದ ಬೆಳಕು' 'ಲಕ್ಷ ಕಾಳಗದ ಮಹಾಕಾಳಿ' ಇತ್ಯಾದಿ ಗುಣವಿಶೇಷಣಗಳು ಆದಷ್ಟು ಕಡಿಮೆ ಇದ್ದಿದ್ದರೆ ಪುಸ್ತಕಕ್ಕೆ ಮತ್ತಷ್ಟು ಬೆಲೆ ಬರುತಿತ್ತು.

'ಭಾರತದ ಮಹಿಳಾಪ್ರಧಾನಿ'ಯೋರ್ವರ ಜೀವನಚರಿತ್ರೆ ಸರಳವಾಗಿ ಕನ್ನಡದಲ್ಲಿ ಮೊದಲಿಗೆ ಇಲ್ಲಿ ನಿರೂಪಿತವಾಗಿದೆ. ಈ ಕೃತಿಯಲ್ಲಿ ಸಮಕಾಲೀನ ಭಾರತದ ರಾಜಕೀಯ

ವಿದ್ಯಮಾನಗಳ ಬಗೆಗೆ ಸಾಕಷ್ಟು ವಿವರಗಳು ಲಭ್ಯವಾಗುವುದರಿಂದ ಇದರ ಬೆಲೆ ಹೆಚ್ಚಿದೆ.

**ಕುಲಪತಿಯ ಭಾಷಣಗಳು ಭಾಗ-೨. :** ಇದು ಪ್ರೊ. ಜವರೇಗೌಡರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಅಧಿಕಾರ ವಹಿಸಿಕೊಂಡ ಮೇಲೆ ತಮ್ಮ ಅಧಿಕಾರಾವಧಿಯ ಎರಡನೆಯ ವರ್ಷದಲ್ಲಿ ಹಲವು ಕಡೆಗಳಲ್ಲಿ ಮಾಡಿದ ಲಿಖಿತ ರೂಪದ ಭಾಷಣಗಳ ಒಂದು ಕಟ್ಟು. ವೈವಿಧ್ಯಪೂರ್ಣ ವಿಷಯಗಳ ಮೇಲಿನ ಅಧಿಕಾರ ಯುತ ವಿವರಣೆಯನ್ನು ನಾವಿಲ್ಲಿ ಕಾಣುತ್ತೇವೆ. ಇದರಲ್ಲಿ ಪ್ರವಾಸ ಕಥನವಿದೆ, ವಿಶ್ವ ವಿದ್ಯಾನಿಲಯದ ಏಳ್ಗೆಯ ಬಗ್ಗೆ ಚಿಂತನೆಯಿದೆ, ಕನ್ನಡದಿಂದಲೇ ಕನ್ನಡಿಗರಿಗೆ ಮುಕ್ತಿ ಎಂಬ ಅಮೂಲ್ಯ ಸಿದ್ಧಾಂತದ ವಿವರಣೆಯಿದೆ, ವ್ಯಕ್ತಿಪರಿಚಯವಿದೆ. ತೆಲುಗು ಕನ್ನಡ ಗಳ ಮಧುರ ಬಾಂಧವ್ಯದ ತಿಳುವಳಿಕೆಯಿದೆ. ಶಿಕ್ಷಣಕ್ಕೆ ಸಂಬಂಧಿಸಿದ ವಿಚಾರಗಳಿವೆ. ಹೀಗೆ ಹಲವಾರು ವಿಷಯಗಳ ಮೇಲಿನ ವಿಚಾರಲಹರಿಯನ್ನು ನಾವಿಲ್ಲಿ ಕಾಣುತ್ತೇವೆ.

ಪ್ರೊ. ದೇ. ಜ. ಗೌ.ರವರು ಬಿಡುವಿಲ್ಲದ ತಮ್ಮ ದುಡಿದದಲ್ಲಿ ಭಾಷಣ ಮಾಡು ವಂತೆ ಆಹ್ವಾನಿಸಿದ ಮಿತ್ರರ ಮನಮುರಿಯಲಾಗದೆ, ವಿಷಯಕ್ಕೆ ಲೋಪಬರದ ರೀತಿ ಯಲ್ಲಿ ವಿಚಾರಗಳಿಗೆ ಒಂದು ಖಚಿತತೆಯನ್ನು ಕೊಡಲು ಭಾಷಣವನ್ನು ಲಿಖಿತರೂಪಕ್ಕಿ ಳಿಸಿ. ಕನ್ನಡಿಗರಿಗೆ ತಮ್ಮ ಅನಿಸಿಕೆಗಳನ್ನು, ವೈಚಾರಿಕ ನಿಲುವನ್ನು ತಿಳಿಸಿರುವರು.

**ಎಚ್. ವಿ. ನಂಜುಂಡಯ್ಯ:** (ಜೀವನ ಮತ್ತು ಕಾರ್ಯ) ಕನ್ನಡ ಸಾಹಿತ್ಯ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಪುಸ್ತಕ ಮಾಲೆಯಲ್ಲಿ ಜೀವನಚರಿತ್ರೆಯ ಸಾಲಿ ನಲ್ಲಿ ಬಂದ ಐದನೆಯ ಪುಸ್ತಕವಿದು. ಎಚ್. ವಿ. ನಂಜುಂಡಯ್ಯನವರ ಜೀವನ ಚರಿತ್ರೆ ಯನ್ನು ಅವರ ಚಿರಸ್ಮರಣೀಯ ಕಾರ್ಯಗಳ ಪರಿಚಯವನ್ನು ಎಚ್. ವಿ. ಸಾವಿತ್ರಮ್ಮ ನವರು ಈ ಪುಸ್ತಕದಲ್ಲಿ ಮಾಡಿಕೊಟ್ಟಿರುವರು.

ಹೆಬ್ಬೆಳಲು ವೇಲ್ಪನೂರು ನಂಜುಂಡಯ್ಯನವರು ಹುಟ್ಟಿನಲ್ಲಿ ಆಂಧ್ರದವರಾದರೂ ಮನೆಮಾತು ತೆಲುಗಾದರೂ ಅವರು ಕನ್ನಡನಾಡಿನಲ್ಲಿ ವಿದ್ಯಾರ್ಜನೆ ಮಾಡಿದವರು, ಉದ್ಯೋಗ ಮಾಡಿದವರು. ಯಾವ ಕನ್ನಡಿಗನಿಗೂ ಕಡಿಮೆಯಿಲ್ಲದ ಕನ್ನಡ ಪ್ರೇಮಿಗಳ ವರು. ಸ್ವಸಾಮರ್ಥ್ಯದಿಂದ ಮೆಟ್ಟಿಲು ಮೆಟ್ಟಿಲಾಗಿ ಉನ್ನತ ಹುದ್ದೆಗಳಿಗೆ ಏರಿದ ಅವರ ಜೀವನ, ಬದುಕಿನಲ್ಲುಂಡ ಸಿಹಿ—ಕಹಿಗಳು. ಕಂಡ ಸಾವು, ಪಡೆದ ಅಗಲಿಕೆ, ವಿಧಿಯ ಆಣಕ— ಇವೆಲ್ಲವೂ ಈ ಕಿರು ಹೊತ್ತಗೆಯಲ್ಲಿ ಚೆನ್ನಾಗಿ ಚಿತ್ರಿತವಾಗಿದೆ. ನಂಜುಂಡಯ್ಯ ನವರ ಕನ್ನಡ ಭಾಷಾ—ಸಾಹಿತ್ಯಪ್ರೇಮ. ಅಭಿಮಾನಗಳು; ಇವುಗಳಿಂದ ಪ್ರೇರಿತವಾಗಿ ರಚಿತವಾದ ಕೃತಿಗಳು: ದೇಶ ಉದ್ಧಾರವಾಗಬೇಕಾದರೆ ವಿದ್ಯಾಭ್ಯಾಸದಿಂದಲೇ,ಮೈಸೂರು ಈ ವಿಚಾರದಲ್ಲಿ ಮಾದರಿಯಾಗಬೇಕು. ಹುಡುಗ—ಹುಡುಗಿಯರೆಲ್ಲಾ ವಿದ್ಯಾವಂತ ರಾಗಬೇಕು—ಎನ್ನುವ ಅವರ ಕನಸು, ಆ ಕನಸು ನನಸಾಗುವ ಹಂಬಲ. ಇವುಗಳ ನೆರ ವೇರಿಕೆಗಾಗಿ ಯೋಚನೆ, ಯೋಜನೆಗಳು: ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ ಗಾಗಿ ಪಟ್ಟ ಅಪಾರ ಶ್ರಮ. ಪ್ರಪಂಚದ ಖ್ಯಾತ ವಿಜ್ಞಾನಿಗಳು, ವಿದ್ವಾಂಸರುಗಳು ತಾವು ಹುಟ್ಟುಹಾಕಿದ ಕಟ್ಟಿದ ಜ್ಞಾನದೇಗುಲಕ್ಕೆ ಬರಬೇಕು' ನಮ್ಮ ಎಳೆಯರಿಗೆ ಅವರು

ಬೋಧಿಸಬೇಕು, ಆದರಿಂದ ನಾಡು ಫಲ ಪಡೆಯಬೇಕು ಎನ್ನುವ ಹಂಬಲ. ಇದರ ನೆರವೇರಿಕೆಗಾಗಿ ದೇಶ, ವಿದೇಶಗಳ ವಿಜ್ಞಾನಿಗಳಿಗೆ, ವಿದ್ವಾಂಸರುಗಳಿಗೆ ಒಡ್ಡಿದ ಆಕರ್ಷಣೆಗಳು: ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಗೆ ಒಂದು ಸಂಸ್ಥೆಯ ಅವಶ್ಯಕತೆಯನ್ನರಿತು ಸಾಹಿತ್ಯ ಪರಿಷತ್ತನ್ನು ಕಟ್ಟಿದುದು, ಇದರ ಪುರೋಭಿವೃದ್ಧಿಗಾಗಿ ಕೊಟ್ಟ ಸಲಹೆ ಸೂಚನೆಗಳು– ಹೀಗೆ ಸಂಜುಂಡಯ್ಯನವರು ಮಾಡಿದ ಪ್ರಾತಃಸ್ಮರಣೀಯ ಕಾರ್ಯಗಳ ವಿವರಣೆ ಈ ಕೃತಿಯಲ್ಲಿ ಮೂಡಿಬಂದಿದೆ.

**ತಿರುಳುಗನ್ನಡ ತಿರುಕ:** 'ತಿರುಳುಗನ್ನಡ ತಿರುಕ'ರೆಂದು ತಮ್ಮನ್ನು ಕರೆದುಕೊಂಡಿರುವ ಉತ್ತಂಗಿಯ ಚೆನ್ನಪ್ಪನವರು ಕನ್ನಡದ ಸುಪ್ರಸಿದ್ಧ ಜಾನಪದ ಕವಿಯಾದ ಸರ್ವಜ್ಞನ ಭಕ್ತರು. ಸರ್ವಜ್ಞನಿಗಾಗಿ, ಅವನ ವಚನಗಳನ್ನು ಪ್ರಕಟಿಸುವುದಕ್ಕಾಗಿ, ಅವನ ಅಮೂಲ್ಯ ವಚನ ಸಂಪತ್ತನ್ನು ಕನ್ನಡಿಗರಿಗೆ ಅರ್ಪಿಸಲಿಕ್ಕಾಗಿ ತಮ್ಮ ದೇಹವನ್ನು ತೇದವರು. ಧಾರವಾಡದ ಬಾಸೆಲ್ ಮಿಶನ್ ಸಂಸ್ಥೆಯ ಉಪದೇಶಕರಾಗಿ, ಏಸು ಸ್ವಾಮಿಯ ಬೋಧನೆಗಳನ್ನು ಜನಸಾಮಾನ್ಯರಿಗೆ ತಿಳಿಸುವವರಾಗಿ ಬದುಕನ್ನು ನಡೆಸಿದರೂ ಇವರ ಒಲವು ವೀರಶೈವಧರ್ಮದತ್ತ ವಿಶೇಷವಾಗಿದ್ದಿತು. ಅನುಭವ ಮಂಟಪ, ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳು, ಸಿದ್ಧರಾಮ ಸಾಹಿತ್ಯ ಸಂಗ್ರಹ, ಆದಯ್ಯನ ವಚನಗಳು – ಇವೇ ಮೊದಲಾದ ಕೃತಿಗಳು ಮೇಲಿನ ಮಾತಿಗೆ ಸಾಕ್ಷಿ. ಕನ್ನಡದಲ್ಲಷ್ಟೇ ಅಲ್ಲದೆ ಇಂಗ್ಲೀಷಿನಲ್ಲಿಯೂ ಹಲವು ವಿದ್ವತ್ಪೂರ್ಣ ಲೇಖನಗಳನ್ನು ಬರೆದು ಖ್ಯಾತನಾಮರಾಗಿರುವರು. ಇವರ ಕೊನೆಯ ಗ್ರಂಥ 'ಮತ್ಯುಂಜಯ' ಕ್ರಿಸ್ತನ ಜೀವನವನ್ನು ಕುರಿತು ಬರೆದದ್ದು. ಕ್ರೈಸ್ತ ಹಾಗೂ ವೀರಶೈವ ಧರ್ಮಗಳ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ಕೃತಿರಚನೆ ಮಾಡಿರುವ ಇವರ ಬದುಕು–ಬರಹಗಳ ಪರಿಚಯವನ್ನು ವರದರಾಜ ಹುಯಿಲಗೋಳರು ಮಾಡಿಕೊಟ್ಟು, ಹೊಸ ಪೀಳಿಗೆಯ ಯುವಜನಾಂಗ ಆದರ್ಶ ವ್ಯಕ್ತಿತ್ವವೊಂದರ ಬದುಕಿನಿಂದ ಸ್ಫೂರ್ತಿಹೊಂದುವಂತೆ ಮಾಡಿರುವರು.

ಕೃತಿಯ ಕೊನೆಯಲ್ಲಿ ಚೆನ್ನಪ್ಪ ಉತ್ತಂಗಿಯವರ ಕೃತಿಗಳ ಸಂಕ್ಷಿಪ್ತ ಪರಿಚಯ ಕೊಟ್ಟಿದ್ದರೆ ಓದುಗರಿಗೆ ಮತ್ತಷ್ಟು ಅನುಕೂಲವಾಗುತ್ತಿತ್ತು.

**ರಾ. ನರಸಿಂಹಾಚಾರ್ಯ:** (ಜೀವನ ಮತ್ತು ಕಾರ್ಯ) ಕನ್ನಡ ಸಾಹಿತ್ಯ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ 'ಜೀವನ ಚರಿತ್ರೆ'ಯ ಸಾಲಿನಲ್ಲಿ ಶ್ರೀ ಅನಂತರಂಗಾಚಾರ್ಯರು ಬರೆದ ಈ ಕೃತಿ ನಾಲ್ಕನೆಯದು. ಕನ್ನಡಕ್ಕೆ ಕವಿಚರಿತೆಯ ಮೂರು ಭಾಗಗಳನ್ನಿತ್ತ ಆರ್. ನರಸಿಂಹಾಚಾರ್ಯರ ಕೊಡುಗೆಯು ಅತ್ಯಮೂಲ್ಯವಾದುದು. ಆಚಾರ್ಯರ ವಿದ್ವತ್ತು ಅಸೀಮವಾದುದು. ಪ್ರಾಚ್ಯ ಸಂಶೋಧನಾಲಯದಲ್ಲಿ ಹದಿನಾಲ್ಕು ವರ್ಷಗಳ ದೀರ್ಘ ಸೇವಾವಧಿಯಲ್ಲಿ ಅವರು ಮಾಡಿದ ಸಂಶೋಧನೆ, ಪ್ರಕಟಿಸಿದ ಲೇಖನಗಳು ವಿದ್ವತ್ ಪ್ರಪಂಚದಲ್ಲಿ ತುಂಬಾ ಪ್ರಸಿದ್ಧಿಯನ್ನು ತಂದುಕೊಟ್ಟುವು. ಅವುಗಳನ್ನು ಮೆಚ್ಚಿ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ವಿದ್ವಾಂಸರು ಆಚಾರ್ಯರ ಗುಣಗಾನಮಾಡಿರುವರು.

ಆಚಾರ್ಯರ ಸಂಶೋಧನಾ ಲೇಖನಗಳ ಹಾಗೂ ಕೃತಿಗಳ ಪರಿಚಯುವನ್ನು ಎರಡು ಅಧ್ಯಾಯಗಳಲ್ಲಿ ತುಂಬಾ ಶ್ರಮವಹಿಸಿ ಮಾಡಿಕೊಡಲಾಗಿದೆ. ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ ಆಚಾರ್ಯರ ಕೃತಿಗಳ ಮತ್ತು ಸಂಶೋಧನಾಲೇಖನಗಳ ಪಟ್ಟಿ ಸಾಹಿತ್ಯ ವಿದ್ಯಾರ್ಥಿಗಳಿಗೆ ಪ್ರಯೋಜನಕಾರಿಯಾಗಿದೆ.

**ಮೋಕ್ಷಗುಂಡಂ:** ವಿಭೂತಿಪುರುಷ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ರಾಷ್ಟ್ರದ ಏಳ್ಗೆಗಾಗಿ ಅಹರ್ನಿಶಿ ದುಡಿದು ಮಾನವಜನ್ಮವನ್ನು ಸಾರ್ಥಕಗೊಳಿಸಿದ ಪವಿತ್ರ ಜೀವ. "ಮಕ್ಕಳು. ಬೆಳೆಯುವ ಮಕ್ಕಳು, ನಮ್ಮ ಮಧ್ಯೆಯೇ ಹುಟ್ಟಿ ಬೆಳೆದು, ಜ್ಞಾನಾರ್ಜನೆ ಮಾಡಿ, ದುಃಖಗಳಲ್ಲಿ ಪರಮ ದುಃಖವಾದ ದಾರಿದ್ರ್ಯದುಃಖದಿಂದ ಭಾರತಮಾತೆಯನ್ನು ನಿವೃತ್ತಿಗೊಳಿಸಬೇಕೆಂದು ಸಂಕಲ್ಪ ಮಾಡಿ, ಆ ಸಂಕಲ್ಪ ಸಾಧನೆಗಾಗಿ ಕಡೆಯ ಉಸಿರೆಳೆ ಯುವವರೆಗೂ ದುಡಿದ ಮಹಾ ವಿಭೂತಿಯ ಪರಿಚಯ ಮಾಡಿಕೊಳ್ಳಬೇಕೆಂಬ ಉತ್ಕಟವಾದ ಅಪೇಕ್ಷೆಯನ್ನು ಪೂರೈಸಲಿಕ್ಕೆಂದು" ಶ್ರೀ ತಿ. ತಾ. ಶರ್ಮರಂ ಈ ಜೀವನಚರಿತ್ರೆ ಬರೆಯುವ ಕೆಲಸಕ್ಕೆ ಕೈಹಾಕಿರುವರು.

ಹನ್ನೆರಡು ಅಧ್ಯಾಯಗಳಲ್ಲಿ ಬಂದಿರುವ ವಿಶ್ವೇಶ್ವರಯ್ಯನವರ ಜೀವನಚರಿತ್ರೆ ವಿಚಾರ ಪರಿಪ್ಲುತವಾಗಿದೆ. ವಿಶ್ವೇಶ್ವರಯ್ಯನವರ ಮೇಧಾಶಕ್ತಿ, ಕಾರ್ಯದಕ್ಷತೆ, ಸಮಯ ಪಾಲನೆಯಲ್ಲಿನ ಶಿಸ್ತು, ನಯ–ವಿನಯಗಳು, ಹೃದಯ ವೈಶಾಲ್ಯ– ಇವೆಲ್ಲವುಗಳ ಪರಿಚಯುವನ್ನಿಲ್ಲಿ ನಾವು ಮಾಡಿಕೊಳ್ಳಬಹುದಾಗಿದೆ. ವಿಶ್ವೇಶ್ವರಯ್ಯನವರ ಬದುಕು ಇಂದಿನ ಯುವಜನಾಂಗಕ್ಕೆ ಸ್ಫೂರ್ತಿಯನ್ನಿತ್ತು ಮುನ್ನಡೆಸಬೇಕಾಗಿದೆ. ಈ ದಿಸೆಯಲ್ಲಿ ತಿ. ತಾ. ಶರ್ಮರ ಕೃತಿ ಸ್ವಾಗತಾರ್ಹವಾಗಿದೆ

**ಸರ್ವೋದಯ ಸಾಧಕ ಸಾಹಿತಿ ಕಾ. ಸ. ಧರಣೇಂದ್ರಯ್ಯ** (ಸ್ಮರಣಸಂಪುಟ)

ಇದು. ಕಾ. ಸ. ಧರಣೇಂದ್ರಯ್ಯನವರ ಬದುಕು–ಬರಹಗಳನ್ನು ಕುರಿತು ಕಮಲಾ ಹಂಪನಾ ಅವರು ಸಂಪಾದಿಸಿದ ಕಿರುಗ್ರಂಥ. ಅರವತ್ತೇಳು ವರ್ಷ ತುಂಬುಜೀವನ ನಡೆಸಿ ಕನ್ನಡ ನಾಡು–ನುಡಿಗಳಿಗೆ ಸೇವೆಸಲ್ಲಿಸಿ ಕಳೆದ ಆಗಸ್ಟ್ ತಿಂಗಳ ೧೩ರಂದು ಪೂರ್ಣ ವಿಶ್ರಾಂತಿಗೆ ತೆರಳಿದ ಕಾ. ಸ. ಧರಣೇಂದ್ರಯ್ಯನವರ ಪುಣ್ಯ ಸ್ಮರಣೆಗಾಗಿ ಹೊರಬಂದ ಈ ಕೃತಿಯಲ್ಲಿ, ಅವರ ಆತ್ಮೀಯರು, ಗೆಳೆಯರು, ಬಂಧುಗಳು ಅರ್ಪಿಸಿದ ನುಡಿಕಾಣಿಕೆಗಳಿವೆ. ಮೊದಲ ಅಧ್ಯಾಯದಲ್ಲಿ ಸಂಪಾದಕರು ತಮ್ಮ 'ನೆನಪಿನ ಸುರುಳಿ' ಬಿಚ್ಚಿರುವರು. ಎರಡನೇ ಅಧ್ಯಾಯದಲ್ಲಿ ಸರ್ವಶ್ರೀಗಳಾದ ತ. ಕು. ತುಕೋಲ, ಆ. ನೇ. ಉಪಾಧ್ಯೆ, ಸ. ಸ. ಮಾಳವಾಡ, ಕೆ. ಭುಜಬಲಿಶಾಸ್ತ್ರಿ, ಬಿ. ಶಿವಮೂರ್ತಿಶಾಸ್ತ್ರಿ, ಮಿರ್ಜಿ ಅಣ್ಣಾರಾಯ, ಬಿ. ಎಸ್. ಕುಲಕರ್ಣಿ ಮೊದಲಾದ ವಿದ್ವಾಂಸರುಗಳು ಕಾ. ಸ. ಧರಣೇಂದ್ರಯ್ಯನವರ ಕಾರ್ಯೋತ್ಸಾಹ. ಶ್ರದ್ಧೆ, ಭಕ್ತಿಗಳನ್ನೂ ನಾಡು–ನುಡಿಗಳ ಪ್ರೇಮವನ್ನೂ, ಜೈನಸಮಾಜಕ್ಕೆ ಅವರಿಂದಾದ ಮಹೋಪಕಾರವನ್ನೂ ತುಂಬು ಮನದಿಂದ ನೆನೆದಿರುವರು.

ದಿ. ಕಾ. ಸ. ಧರಣೇಂದ್ರಯ್ಯನವರ ಬದುಕನ್ನು ಪರಿಚಯಿಸುವ ಈ ಸ್ಮರಣಸಂಪುಟ ತನ್ನ ಧ್ಯೇಯೋದ್ದೇಶವನ್ನು ಪೂರೈಸಿದ್ದರೂ, ದಿವಂಗತರ ಬರೆಹಗಳನ್ನು ಕುರಿತು ಒಂದೂ

ಪರಿಚಯ ಲೇಖನ ಇದರಲ್ಲಿ ಇಲ್ಲದಿರುವುದು ಒಂದು ಕೊರತೆ ಎನ್ನಿಸುತ್ತದೆ. ಕೇವಲ ಒಂದೇಒಂದು ತಿಂಗಳಲ್ಲಿ ಸ್ಮರಣ ಸಂಪುಟವನ್ನು ತಂದ ಸಂಪಾದಕರ ಶ್ರಮ ನಿಜವಾಗಿಯೂ ಸಾರ್ಥಕವಾಗಿದೆ.

**ಪಂಡಿತ ಭಾತಖಂಡೆ:** ಇದು ಭಾರತೀಯ ಸಂಗೀತ ಕ್ಷೇತ್ರದಲ್ಲಿ ಖ್ಯಾತನಾಮರಾಗಿರುವ ಪಂಡಿತ ವಿಷ್ಣು ನಾರಾಯಣ ಭಾತಖಂಡೆಯವರ ಜೀವನಚರಿತ್ರೆಯನ್ನು ಜನಸಾಮಾನ್ಯರಿಗೆ ಪರಿಚಯಿಸುವ ಕಿರುಕೃತಿ. ಪದ್ಮಭೂಷಣ ಡಾ. ಎಸ್. ಎನ್. ರತನಜಂಕಾರ್‌ರವರು ರಚಿಸಿದ ಈ ಕಿರುಕೃತಿಯನ್ನು ಎಮ್. ಕೃಷ್ಣಮೂರ್ತಿಯವರು ಕನ್ನಡಕ್ಕೆ ಅನುವಾದ ಮಾಡಿರುವರು.

ಭಾರತೀಯ ಸಂಗೀತ ಕ್ಷೇತ್ರದಲ್ಲಿ ಸುಧಾರಣೆಗಳಾಗುವುದು ತೀರ ಆವಶ್ಯಕವೆಂದು ಭಾವಿಸಿ ಆ ದಿಶೆಯಲ್ಲಿ ಸುಧಾರಣೆ ಮಾಡಹೊರಟವರಲ್ಲಿ ಪಂಡಿತ ಭಾತಖಂಡೆ ಎಂದು ಪ್ರಸಿದ್ಧರಾಗಿರುವ ವಿಷ್ಣುನಾರಾಯಣ ಭಾತಖಂಡೆ ಮತ್ತು ಪಂಡಿತ ವಿಷ್ಣು ದಿಗಂಬರ್ ಎಂದು ಪ್ರಸಿದ್ಧರಾಗಿರುವ ವಿಷ್ಣು ದಿಗಂಬರ ಪಾಲೂಸಕರ ಎಂಬುವವರು ಪ್ರಮುಖರು. ಪ್ರತಿಯೊಬ್ಬ ಸಂಗೀತಶಾಸ್ತ್ರದ ವಿದ್ಯಾರ್ಥಿಯೂ ಈ ಮಹನೀಯರ ಬದುಕು ಮತ್ತು ಕೃತಿಗಳ ಪರಿಚಯ ಮಾಡಿಕೊಳ್ಳುವುದು. ಅವುಗಳಿಂದ ಸ್ಫೂರ್ತಿ ಪಡೆಯುವುದು, ಅವರ ಬದುಕಿನ ಆದರ್ಶದ ಬೆಳಕಿನಲ್ಲಿ ನಡೆಯುವುದು ತೀರ ಮುಖ್ಯವೆನ್ನಿಸುತ್ತದೆ. ಸಂಗೀತ ಹಾಗೂ ಸಂಗೀತಗಾರರಿಗಾಗಿ ತಮ್ಮ ಜೀವನವನ್ನೇ ಮೀಸಲಿಟ್ಟು ಅಪೂರ್ವವಾಗಿ ಶ್ರಮಿಸಿ ತಮ್ಮ ಧ್ಯೇಯ ಉದ್ದೇಶಗಳು ಗುರಿಮುಟ್ಟಿದುದನ್ನು ಬದುಕಿರುವಾಗಲೇ ಕಂಡ ಪಂಡಿತ ಭಾತಖಂಡೆಯವರ– ಸಂತೃಪ್ತ ಜೀವದ ಹೋರಾಟವನ್ನು ಭಾರತೀಯರಿಗೆ ಪರಿಚಯಿಸುವ ಈ ಪ್ರಯತ್ನ ಸ್ತುತ್ಯರ್ಹವಾಗಿದೆ.

**ಸುಬ್ರಹ್ಮಣ್ಯ ಭಾರತಿ:** ಸುಬ್ರಹ್ಮಣ್ಯ ಭಾರತಿ ಭಾರತದ ಸ್ವಾತಂತ್ರ್ಯದ ಕನಸನ್ನು ಕಂಡ ದೇಶಪ್ರೇಮಿ. ಸ್ವಾತಂತ್ರ್ಯ ಸಂಗ್ರಾಮಕ್ಕೆ ಜನತೆಯನ್ನು ತಮ್ಮ ಕವನಗಳಿಂದ ಹುರಿದುಂಬಿಸಿದ. ಪ್ರೇರೇಪಿಸಿದ ಕ್ರಾಂತಿಕವಿ. ದೇಶಪ್ರೇಮ ಗೀತಗಳಿಂದ. ಪತ್ರಿಕೆಯ ಸಂಪಾದಕರಾಗಿ ಉಗ್ರ ಲೇಖನಗಳನ್ನು ಬರೆಯುವುದರಿಂದ ಬ್ರಿಟಿಷರ ಕೋಪಕ್ಕೆ ಗುರಿಯಾಗಿದ್ದವರು. ಉಜ್ವಲ ರಾಷ್ಟ್ರಪ್ರೇಮಿಯ ಬದುಕು ಹಾಗೂ ಕೃತಿ ಪರಿಚಯವನ್ನು ಈ ಪುಸ್ತಕದಲ್ಲಿ ಮನೋಜ್ಞವಾಗಿ ಮಾಡಿಕೊಡಲಾಗಿದೆ. ಜಾತಿ. ಮತ. ಪ್ರದೇಶಗಳ ಸಂಕುಚಿತ ಮನೋಭಾವವಿಲ್ಲದ ವಿಶಾಲ ಹೃದಯದ ಸುಬ್ರಹ್ಮಣ್ಯ ಭಾರತಿಯ ಬದುಕು –ಬರೆಹಗಳ ಪರಿಚಯ ಸಾಧಾರಣ ಶಿಕ್ಷಣಮಟ್ಟದ ಓದುಗನಿಗೆ ಆಗಲೆಂಬುದು ಈ ಕೃತಿ ರಚನೆಯ ಉದ್ದೇಶ. ತಮಿಳುನಾಡಿನ ಕೊಡುಗೆಯಾದ ಸುಬ್ರಹ್ಮಣ್ಯ ಭಾರತಿಯ ಉಜ್ವಲ ರಾಷ್ಟ್ರಪ್ರೇಮ ಹಾಗೂ ರಾಷ್ಟ್ರಕ್ಕೆ ಸಲ್ಲಿಸಿದ ಸೇವೆಯ ಪರಿಚಯ ಅನ್ಯಭಾಷೆಯವರಿಗೂ ಆಗಲೆಂದು ಭಾರತೀಯ ಭಾಷೆಗಳಿಗೆ ಈ ಕೃತಿಯ ಅನುವಾದ ಮಾಡಿಸಲಾಗಿದೆ. ಈ ಕೃತಿಯನ್ನು ಕನ್ನಡದ ಖ್ಯಾತ ಕವಿ ಕೆ. ಎಸ್. ನರಸಿಂಹಸ್ವಾಮಿ ಅವರು ಸೊಗಸಾಗಿ ಅನುವಾದಿಸಿದ್ದಾರೆ.

**ಎಡೆಯೂರು ತೋಂಟದ ಸಿದ್ಧಲಿಂಗಯತಿ:**

ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆಯಲ್ಲಿ ಬಂದ ಕಿರು ಹೊತ್ತಗೆಯಿದು. ವಚನವಾಙ್ಮಯದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರ ಸ್ಥಾನ ವಿಶಿಷ್ಟ ವಾದುದು. ಭುವನದ ಭಾಗ್ಯವೆಂಬಂತೆ ಮಹಿಮಾಪುರುಷರು ಭುವಿಯಲ್ಲಿ ಆಗಾಗ್ಗೆ ಜನಿಸಿ ಬಂದು ಜನರ ಬಾಳಿಗೊಂದು ಬೆಳಕನಿಟ್ಟು ಜನಮನವನ್ನು ಸಂಸ್ಕರಿಸಿ ಧರ್ಮೋದ್ಧಾರ ಮಾಡಿ ತಮ್ಮ ಮಣಿಹವನ್ನು ಪೂರೈಸಿ ಹೋಗಿರುವದುಂಟು. ಅಂತಹ ಮಹಿಮಾ ಪುರುಷರಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರೂ ಒಬ್ಬರು. ಪವಾಡ ಪುರುಷರೂ ವಿನೇಯ ನಿಧಿಗಳೂ ಜ್ಞಾನಸಂಪನ್ನರೂ ಅನುಭಾವಿಗಳೂ ಆದ ತೋಂಟದ ಸಿದ್ಧಲಿಂಗಯತಿಗಳು ಪರಮ ವಿರಾಗಿಗಳಾಗಿದ್ದು ತಮ್ಮ ಗುರುಪೀಠದಲ್ಲಿ ಹದಿನಾರನೆಯವರು. ಇವರು ವೀರ ಶೈವ ಸಾಹಿತ್ಯದಲ್ಲಿ ತಮ್ಮ 'ಷಟ್ಸ್ಥಲ ಜ್ಞಾನಾಮೃತಸಾರ' ದಿಂದ ವಿಶಿಷ್ಟ ಸ್ಥಾನ–ಮಾನ ವನ್ನು ಪಡೆದಿರುವರು. ಇವರನ್ನು ಕುರಿತು ವಿರಕ್ತ ತೋಂಟದಾರ್ಯ, ಶಾಂತೇಶ, ಹೇರಂಭ ಮೊದಲಾದ ವೀರಶೈವ ಕವಿಗಳು ಕೃತಿರಚನೆ ಮಾಡಿರುವರು. ಚೆನ್ನಬಸವ ಪುರಾಣ, ಗುರುರಾಜಚಾರಿತ್ರ ಮೊದಲಾದ ಕೃತಿಗಳಲ್ಲಿ ಇವರ ಚರಿತ್ರೆ ಉಲ್ಲೇಖಗೊಂಡಿದೆ. ಇವರ ಶಿಷ್ಯ ಪರಂಪರೆಯಿಂದಾಗಿ ಕನ್ನಡ ಸಾಹಿತ್ಯ ಅಮೂಲ್ಯ ಕೊಡುಗೆಗಳನ್ನು ಹೊಂದಿದೆ. ಇಂತಹ ಮಹಿಮಾಪುರುಷರ ಜೀವನ ಪರಿಚಯ ಮಾಡಿಕೊಡುವ ಉದ್ದೇಶ ದಿಂದ ಈ ಪುಟ್ಟ ಕೃತಿರಚನೆಯನ್ನು ಲೇಖಕರು ಮಾಡಿರುವರು. ತೋಂಟದ ಸಿದ್ಧ ಲಿಂಗರನ್ನು ಕುರಿತ ಪುರಾಣ, ಕಾವ್ಯಗಳು ಮತ್ತು ತೋಂಟದ ಸಿದ್ಧಲಿಂಗಯತಿಗಳ ವಚನ ಗಳನ್ನು ಆಳವಾಗಿ ಅಭ್ಯಾಸಮಾಡಿ ಇವರ ಜೀವನಚರಿತ್ರೆಯನ್ನು, ಪರಮ ವೈರಾಗ್ಯ ವನ್ನು, ಪರಮಾರ್ಥ ಜ್ಞಾನವನ್ನು, ವಚನಗಳಲ್ಲಿ ಅಡಗಿರುವ ನಿಗೂಢ ತತ್ವವನ್ನು ವಚನ ಗಳ ಕಾವ್ಯಗುಣವನ್ನು ಕನ್ನಡ ಸಾಹಿತ್ಯದಲ್ಲಿ ಅವರ ಪ್ರಭಾವ ಮುದ್ರೆಯನ್ನು –ಜನಸಾಮಾನ್ಯರಿಗೆ ಅರ್ಥವಾಗುವಂತೆ ಲೇಖಕರಾದ ಶ್ರೀ ಓ. ಎನ್. ಲಿಂಗಣ್ಣಯ್ಯನವರು ತಿಳಿಯ ಪಡಿಸಿರುವರು. ಪರಮಜ್ಞಾನಿಯ ಧೀಮಂತ ವ್ಯಕಿತ್ವದ ಕಿರುಪರಿಚಯ ಈ ಕಿರುಹೊತ್ತಿಗೆಯಿಂದ ಆಗಿದೆ ಎಂಬುದರಲ್ಲಿ ಅತಿಶಯೋಕ್ತಿಯಿಲ್ಲ.

**ಮಂಜೇಶ್ವರದ ಶ್ರೀ ಎಂ. ಗೋವಿಂದ ಪೈ ಅವರ ಕೆಲವು ಪತ್ರಗಳು:** ಮಂಜೇಶ್ವರದ ಶ್ರೀ ಎಂ. ಗೋವಿಂದ ಪೈಗಳು ಕನ್ನಡದ ಸುಪ್ರಸಿದ್ಧ ಸಂಶೋಧಕರು, ಕವಿಗಳು. ಮದರಾಸು ಸರಕಾರವು ಇವರ ಪ್ರತಿಭೆ, ವಿದ್ವತ್ತನ್ನು ಗೌರವಿಸಲು ತೀರ್ಮಾನಿಸಿ ಇವರನ್ನು ರಾಷ್ಟ್ರಕವಿ ಎಂದು ಕರೆದು ಕನ್ನಡವನ್ನು ಗೌರವಿಸಿತು. ಇವರ ಒಲವುಗಳನ್ನು, ಆಸಕ್ತಿಗಳನ್ನು, ಜೀವನದಲ್ಲಿನ ರುಚಿ, ಶುಚಿಗಳನ್ನು ಇವರ ಲೇಖನ ಗಳಿಂದಷ್ಟೇ ಅಲ್ಲದೆ ಇವರ ಪತ್ರಗಳಿಂದಲೂ ತಿಳಿಯಬಹುದು. ಈ ಹಿನ್ನೆಲೆಯಲ್ಲಿ ಜಿ. ಪಿ. ರಾಜರತ್ನಂರವರು ಪೈಗಳು ತಮಗೆ ಬರೆದ ಹಲವು ಪತ್ರಗಳಲ್ಲಿ ಅದೃಷ್ಟವಶಾತ್ ಉಳಿದುಕೊಂಡ ೪೨ ಪತ್ರಗಳನ್ನೂ ಮತ್ತು ಶ್ರೀಯುತರುಗಳಾದ ಬಿ. ಎಸ್. ಅಯ್ಯಂಗಾರ್, ಎ. ಆರ್. ಕೃಷ್ಣಶಾಸ್ತ್ರೀ, ಎಸ್. ವೆಂಕಟಾಚಲಪತಿ– ಇವರುಗಳಿಗೆ ಒಂದೊಂದ ರಂತೆ ಬರೆದ ಮೂರು ಪತ್ರಗಳನ್ನೂ ಒಂದೆಡೆ ಸೇರಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿರುವರು.

ಅನುಬಂಧದಲ್ಲಿ ಶ್ರೀ ಎಂ. ಗೋವಿಂದ ಪೈಗಳ ಪರಿಚಯ ಲೇಖನವನ್ನು ಕೊಟ್ಟಿರುವರು. ಪೈಗಳ ಆತಿಥ್ಯ, ಸರಸಸಜ್ಜನಿಕೆ, ಆಳವಾದ ವ್ಯಾಸಂಗ, ಸಮಯಪ್ರಜ್ಞೆ, ಔದಾರ್ಯಗಳ ಪರಿಚಯವನ್ನು ಈ ಲೇಖನದಿಂದ ಪಡೆಯಬಹುದಾಗಿದೆ.

**ವಧುವಿಗೆ ಕಿವಿಮಾತು**: ವೃತ್ತಿಯಲ್ಲಿ ವೈದ್ಯರಾಗಿ ಕಥೆ ಕಾದಂಬರಿಗಳ ಮೂಲಕ ಕನ್ನಡ ಸಾಹಿತ್ಯಲೋಕದಲ್ಲಿಜನಪ್ರಿಯ ಲೇಖಕಿಯಾಗಿ ಡಾ. ಅನುಪಮಾ ನಿರಂಜನರವರು ಹೆಸರು ಪಡೆದಿರುವರು. ವಿವಾಹಿತ, ಅವಿವಾಹಿತ ತರುಣಿಯರಿಗೆ ತಿಳುವಳಿಕೆಯನ್ನು ನೀಡಲು, ಅವರಲ್ಲಿರುವ ಅಜ್ಞಾನ ತಪ್ಪು ಗ್ರಹಿಕೆಗಳನ್ನು ನಿವಾರಿಸಲು 'ತಾಯಿ–ಮಗು'; 'ವಧುವಿಗೆ ಕಿವಿಮಾತು' 'ಕೇಳು ಕಿಶೋರಿ' ಮೊದಲಾದ ಕೃತಿಗಳನ್ನು ರಚಿಸಿ ಇತರರಿಗೆ ಮಾರ್ಗದರ್ಶಿಯಾಗಿರುವರು.

'ವಧುವಿಗೆ ಕಿವಿಮಾತು' ಎನ್ನುವ ಪ್ರಸ್ತುತ ಗ್ರಂಥದಲ್ಲಿ ಹನ್ನೆರಡು ಅಧ್ಯಾಯಗಳಿವೆ. ಲೌಕಿಕ ಜ್ಞಾನವೇ ಇಲ್ಲದ ಮುಗ್ಧ ತರುಣಿ, ಗೃಹಿಣಿಯಾದಾಗ ಅವಳ ಮುಗ್ಧ ಮನ ಎದುರಿಸಬೇಕಾದ ನೂರಾರು ಸಮಸ್ಯೆಗಳು; ನಡೆ–ನುಡಿ–ಆಚಾರ–ವಿಚಾರಗಳಲ್ಲಿ ಮಾಡಿಕೊಳ್ಳಬೇಕಾದ ತಿದ್ದುಪಾಟುಗಳು; ಕಲಿಯಬೇಕಾದ ನಯವಂತಿಕೆ, ತಾಳ್ಮೆಯ ಗುಣಗಳು–ಇವೆಲ್ಲವನ್ನೂ ಈ ಪುಟ್ಟ ಹೊತ್ತಿಗೆಯಲ್ಲಿ ಮನಂಬುಗುವಂತೆ ತಿಳಿಸಲು ಪ್ರಯತ್ನಿಸಲಾಗಿದೆ. ತನ್ನದೇ ಆದ ಒಂದು ಲೋಕದಿಂದ ತನ್ನದಕ್ಕೆ ಭಿನ್ನವಾದ ಅಪರಿಚಿತವಾದ ಲೋಕಕ್ಕೆ ಪ್ರವೇಶಿಸುವ ಹೆಣ್ಣಿನ ಮನದ ಭಯ, ಸಂಕೋಚಗಳನ್ನು ಅವಳಿಗೆ ಅವಶ್ಯಕವಾಗಿ ಇರಬೇಕಾದ ತಿಳುವಳಿಕೆಗಳನ್ನು ತುಂಬಾ ಆತ್ಮೀಯವಾಗಿ, ನವಿರಾಗಿ ಡಾ. ಅನುಪಮಾ ನಿರಂಜನವರು ತಿಳಿಯಹೇಳಿರುವರು. ಒಂದು ಅಧ್ಯಾಯದಲ್ಲಿ ಪ್ರೇಮ ವಿವಾಹದ ಒಳಿತು ಕೆಡುಕುಗಳನ್ನು ಸ್ಥೂಲವಾಗಿ ತಿಳಿಸಿ ಪ್ರೇಮ ವಿವಾಹವಾದವರನ್ನು ಸಮಾಜ ವಕ್ರದೃಷ್ಟಿಯಲ್ಲಿ ನೋಡುವುದನ್ನೂ ಮತ್ತು ಯೌವನದ ಭರದಲ್ಲಿ ಭವಿಷ್ಯವನ್ನು ಯೋಚಿಸದೆ ಪ್ರೇಮ ವಿವಾಹವಾಗಿ ಅದರಿಂದುದ್ಭವವಾದ ಅನೇಕ ಸಮಸ್ಯೆಗಳನ್ನು ಎದುರಿಸಲಾಗದೆ ವಿರಸ ತಲೆದೋರಿ ಕೋಮಲ ಮನ ಮುದುಡುವುದನ್ನೂ ಪ್ರಸ್ತಾಪಿಸಿ ಇವುಗಳನ್ನು ಧೈರ್ಯವಾಗಿ ಎದುರಿಸಿ ಬಾಳುವ ಛಲವನ್ನು ಹೊಂದುವಂತೆ ಹಿತ ನುಡಿದಿರುವರು. ಒಂದು ಅಧ್ಯಾಯದಲ್ಲಿ ಉದ್ಯೋಗದಲ್ಲಿರುವ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳ ಮೇಲೂ ಕ್ಷ–ಕಿರಣ ಬೀರಿರುವರು.

ಒಟ್ಟಿನಲ್ಲಿ ಮುಗ್ಧ ತರುಣಿಯರಿಗೆ, ಗೃಹಿಣಿಯರಿಗೆ ಡಾ. ಅನುಪಮ ನಿರಂಜನರ ಕಿವಿಮಾತು ಬೆಲೆಬಾಳುವಂತಹದು.

**ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ**: ಮಹಾತ್ಮಾ ಗಾಂಧೀಜಿಯವರ ಜನ್ಮಶತಾಬ್ದಿಯ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನಸಂಸ್ಥೆ ರಾಷ್ಟ್ರೀಯ ವಿಚಾರಗೋಷ್ಠಿಯೊಂದನ್ನು ೧೯೭೦ರ ಫೆಬ್ರವರಿ ೧೨ರಿಂದ ೧೫ರ ವರೆವಿಗೆ ನಡೆಸಿತು. 'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ' ಎಂಬ ಈ ವಿಚಾರಗೋಷ್ಠಿಗೆ ಅಸ್ಸಾಮಿ, ಬಂಗಾಳಿ, ಇಂಗ್ಲಿಷ್, ಗುಜರಾತಿ, ಹಿಂದಿ, ಕನ್ನಡ, ಕಾಶ್ಮೀರಿ,

ಮೈಥಿಲಿ, ಮಲೆಯಾಳಂ, ಮರಾಠಿ, ಒರಿಯ, ಪಂಜಾಬಿ, ಸಂಸ್ಕೃತ, ಸಿಂಧಿ, ತಮಿಳು, ತೆಲುಗು, ಉರ್ದು– ಈ ಭಾಷೆಗಳ ಗಣ್ಯ ವಿದ್ವಾಂಸರು ಆಗಮಿಸಿ ಪ್ರಬಂಧಗಳನ್ನು ಓದಿದರು. ಒಂದೊಂದು ಭಾಷೆಯ ಸಾಹಿತ್ಯದಲ್ಲೂ ಗಾಂಧೀಜಿಯ ಬಹುಮುಖವಾದ ವ್ಯಕ್ತಿತ್ವ, ಸಾಧನೆ–ಸಿದ್ಧಿಗಳು ಹೇಗೆ ಮೂಡಿಬಂದಿವೆ ಎಂಬುದರ ಪರಿಚಯ ಈ ಪ್ರಬಂಧಗಳ ಮೂಲಕ ಆಯಿತು. ಈ ರಾಷ್ಟ್ರೀಯ ವಿಚಾರ ಗೋಷ್ಠಿಯಲ್ಲಿ ಓದಿದ ಮಹನೀಯರ ಪ್ರಬಂಧಗಳು ಗಾಂಧೀಜಿಯ ಬದುಕು ಅನ್ಯಭಾಷಾ ಸಾಹಿತ್ಯದ ಮೇಲೆ ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ ಎಂಬುದನ್ನು ಅರಿಯಲು ತುಂಬಾ ಸಹಾಯಕಾರಿಯಾದುದರಿಂದ ಅವುಗಳನ್ನು ಮೂಲಕ್ಕೆ ಭಂಗ ಬರದ ರೀತಿಯಲ್ಲಿ ಕನ್ನಡಕ್ಕೆ ಅನುವಾದ ಮಾಡಿಸಿ ಪುಸ್ತಕ ರೂಪದಲ್ಲಿ ಪ್ರಕಟಪಡಿಸಲಾಗಿದೆ. ಈ ಕಷ್ಟದಾಯಕವಾದ ಕಾರ್ಯವನ್ನು ತುಂಬು ಶ್ರದ್ಧೆಯಿಂದ ಮಾಡಿ ರಾಷ್ಟ್ರೀಯ ಮಟ್ಟದಲ್ಲಿ ಗಾಂಧೀಜಿಯ ಬಗ್ಗೆ ವಿಚಾರಮಾಡುವವರಿಗೆ ಸಂಪಾದಕರಾದ ಡಾ. ಹಾ. ಮಾ. ನಾಯಕರು ಒಂದು ದೊಡ್ಡ ಉಪಕಾರವನ್ನು ಮಾಡಿದ್ದಾರೆ.

**ಮೈಸೂರು ದಿವಾನರುಗಳು:** "ಮೈಸೂರಿನ ದಿವಾನರುಗಳು" ಡಿ. ವಿ. ಜಿ. ಯವರ ಜ್ಞಾಪಕ ಚಿತ್ರಶಾಲೆಯ ನಾಲ್ಕನೆಯ ಸಂಪುಟ. ಸ್ವಾತಂತ್ರ್ಯಪೂರ್ವದ ಆರು ದಶಕಗಳಲ್ಲಿ ಮೈಸೂರಿನ ರಾಜ್ಯಾಡಳಿತವನ್ನು ನಡೆಸಿದ ಸಿ. ರಂಗಾಚಾರ್ಯ, ರಾಜ್ಯಧುರಂಧರ ಸರ್ ಕೆ. ಶೇಷಾದ್ರಿ ಅಯ್ಯರ್, ರಾಜಧರ್ಮಪ್ರವೀಣ ಟಿ. ಆರ್. ಎ. ತಂಬೂಚೆಟ್ಟಿ, ಸರ್. ಪಿ. ಎನ್. ಕೃಷ್ಣಮೂರ್ತಿ, ವಿ. ಪಿ. ಮಾಧವರಾಯ, ಪ್ರಧಾನ ಶಿರೋಮಣಿ ಟಿ. ಆನಂದರಾಯ, ಭಾರತರತ್ನ ಮೋಕ್ಷಗುಂಡಂ ವಿಶ್ವೇಶ್ವರಯ್ಯ, ರಾಜಸೇವಾಧುರೀಣ ಸರದಾರ್ ಎಂ. ಕಾಂತರಾಜ ಅರಸು, ರಾಜ ಮಂತ್ರಧುರೀಣ ಸರ್. ಎ. ಆರ್. ಬ್ಯಾನರ್ಜಿ, ಅಮೀನ್ ಉಲ್–ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮೆಯಿಲ್ ಸಾಹೇಬ್, ರಾಜಕಾರ್ಯಪ್ರಸಕ್ತ ದಿವಾನ್ ಬಹದೂರ್ ಸರ್. ಎಂ.ಎನ್. ಕೃಷ್ಣರಾಯ– ಇವರುಗಳ ವ್ಯಕ್ತಿಪರಿಚಯದ ಜೊತೆಗೆ ಅವರ ಆಡಳಿತ ವೈಖರಿಯ ಪರಿಚಯವನ್ನೂ ಮಾಡಿಕೊಟ್ಟಿರುವರು. ಇವರಲ್ಲಿ ಮೊದಲ ನಾಲ್ವರನ್ನುಳಿದು ಮಿಕ್ಕವರೆಲ್ಲರನ್ನೂ ಲೇಖಕರು ವ್ಯಕ್ತಿಶಃ ದೂರದಿಂದಲೋ ಹತ್ತಿರದಿಂದಲೋ ನೋಡಿರುವರು.

ಪ್ರಾರಂಭದಲ್ಲಿ 'ಸ್ವಾತಂತ್ರ್ಯಪೂರ್ವದ ರಾಜ್ಯವ್ಯವಸ್ಥೆ'ಯ ಬಗ್ಗೆ ಒಂದು ವಿಚಾರಪೂರ್ಣವಾದ ಲೇಖನವಿದೆ. ದಿವಾನರುಗಳನ್ನು ಪರಿಚಯಿಸಿಕೊಡುವ ಸಂದರ್ಭದಲ್ಲಿ ಲೇಖಕರು ಅವರ ಗುಣಶೀಲಗಳ, ಆಡಳಿತ ನೀತಿಗಳ ಬಗೆಗೆ ಹೆಚ್ಚಿನ ವಿವರಣೆ ನೀಡಿರುವರು. ವಿಶ್ವೇಶ್ವರಯ್ಯ ಮತ್ತು ಸರ್ ಮಿರ್ಜಾ ಎಂ. ಇಸ್ಮೆಯಿಲ್ ಸಾಹೆಬರವರನ್ನು ಕುರಿತ ಪರಿಚಯ ಲೇಖನಗಳು ವಿಸ್ತಾರವಾಗಿದ್ದು ಅವರ ವ್ಯಕ್ತಿತ್ವ, ಸಾಧನೆ–ಸಿದ್ಧಿಗಳನ್ನು ತಿಳಿಯುವಲ್ಲಿ ತುಂಬಾ ಸಹಾಯಕಾರಿಯಾಗಿವೆ. ಉಪಸಂಹಾರ ಭಾಗದಲ್ಲಿ 'ರಾಷ್ಟ್ರ ಸಂಸ್ಥಿತಿಯ ಮೂಲಸೂತ್ರಗಳು' ಎಂಬ ವಿಸ್ತಾರವಾದ ಲೇಖನವಿದೆ. ಕೊನೆಯ ಲೇಖನವಾದ 'ಸ್ವತಂತ್ರವೋ ಅತಂತ್ರವೋ' ಎಂಬುದರಲ್ಲಿ ನಾವು ರಶ್ಯದಂತೆ ಆಗಬೇಕೆಂಬ ಹುಮ್ಮಸ್ಸಿನಲ್ಲಿ ನಾನಾ ದೇಶಗಳಿಂದ ಪಡೆಯುತ್ತಿರುವ ಸಾಲ; ವೃತ್ತಿ ವಿಜ್ಞಾನದ ಬಗೆಗಿನ ನಮ್ಮ ಅಜ್ಞಾನ; ವ್ಯವಹಾರ ದಕ್ಷತೆಯ ಅಭಾವ; ಅನ್ಯಾಯದ ಹಣಕ್ಕೆ ಕೈಯೊಡ್ಡುವ ನಮ್ಮ

ಅನೀತಿ; ರಾಜಕೀಯ ಪಕ್ಷಗಳಲ್ಲಿನ ಪೋಟಾಪೋಟಿ: ಆತ್ಮಶಿಕ್ಷಣದ ಕೊರತೆ– ಇವುಗಳ ಬಗೆಗೆ ವಿವೇಚನೆ ನಡೆಸಿರುವರು.

ಒಟ್ಟಿನಲ್ಲಿ ಮೈಸೂರು ದೇಶದ ಚರಿತ್ರೆಯನ್ನು ಬರೆಯಹೊರಡುವ ಚರಿತ್ರಕಾರನಿಗೆ ಈ ಕೃತಿಯಿಂದ ಸಾಕಷ್ಟು ವಿವರಗಳು ಲಭ್ಯವಾಗುತ್ತದೆಂಬುದರಲ್ಲಿ ಸಂಶಯವಿಲ್ಲ.

**ಲೋಕಾಭಿರಾಮ;** ಇದು ಶ್ರೀ ಕು. ಶಿ. ಹರಿದಾಸಭಟ್ಟರು ಸಮಸಾಮಯಿಕ ಪ್ರಸಂಗಗಳ ಮೇಲೆ ಬರೆದ ಅರುವತ್ತು ಲೇಖನಗಳ ಸಂಕಲನ. ಇಲ್ಲಿ ಕನ್ನಡದ ಕೆಲಸವನ್ನು ಮಾಡಿದವರ, ಮಾಡುತ್ತಿರುವವರ ಬಗ್ಗೆ ಮೆಚ್ಚುಗೆಯ ಮಾತುಗಳಿವೆ. ಸಮಾಜಸೇವಾ ಕಾರ್ಯಗಳನ್ನು ಮಾಡುತ್ತಿರುವ ವ್ಯಕ್ತಿ ಸಂಸ್ಥೆಗಳ ಕಾರ್ಯೋದ್ದೇಶಗಳನ್ನು ಕುರಿತು ತುಂಬು ಹೃದಯದ ಪ್ರಶಂಸೆಯ ಮಾತುಗಳಿವೆ. ಹಲವು ಕನ್ನಡ ಕೃತಿಗಳ ಬಗೆಗೆ ಸಹೃದಯಪರ ವಿಮರ್ಶೆಯಿದೆ. ಇಂದಿನ ಪರೀಕ್ಷಾಪದ್ಧತಿ ಹಾಗೂ ಅದರಲ್ಲಿನ ದೋಷಗಳು ವಿದ್ಯಾರ್ಥಿಗಳನ್ನು ಹೇಗೆ ದುರಂತದ ಎಡೆಗೆ ಕೊಂಡೊಯ್ಯುತ್ತಿವೆ ಎಂಬುದರ ಪ್ರಸ್ತಾಪವಿದೆ. ಬ್ಯಾಂಕುಗಳನ್ನು ಆತುರಾತುರವಾಗಿ ರಾಷ್ಟ್ರೀಕರಣ ಮಾಡಿದ ಕೇಂದ್ರ ಸರಕಾರದ ಧೋರಣೆಯ ಬಗ್ಗೆ ಖಂಡನೆಯಿದೆ. ಹೀಗೆ ವೈವಿಧ್ಯಮಯವಾದ ವಿಚಾರ ಲಹರಿಗಳನ್ನಿಲ್ಲಿ ನಾವು ನೋಡಬಹುದಾಗಿದೆ. ಲೇಖಕರು ಸ್ವಾಭಿಪ್ರಾಯಕ್ಕೆ ಪೂರ್ತ ಸ್ವಾತಂತ್ರ್ಯವನ್ನು ಕೊಟ್ಟು, ತಮ್ಮದೇ ಧಾಟಿಯಲ್ಲಿ ತಮ್ಮ ಚಿತ್ತಲಹರಿಯನ್ನು ತೋಡಿಕೊಂಡಿರುವರು.

"ಸಾಹಿತ್ಯವಾಗಲಿ, ಶಿಕ್ಷಣವಾಗಲಿ, ರಾಜಕೀಯ ಪ್ರಸಂಗಗಳಾಗಲಿ ಎಲ್ಲವೂ ಸಾರ್ವಜನಿಕ ಅಭಿಪ್ರಾಯದ ವಿವಿಧ ಮುಖಗಳೆಂದು ಬಗೆದು, ಯಾವುದರಲ್ಲಿಯೂ ಪರಿಪೂರ್ಣ ಪರಿಣತಿ ಇದೆ ಎಂಬ ಅಹಮಿಕೆ ಇಲದೆ, ನನ್ನ ಆಲೋಚನೆ ಹರಿಯಿಸಿದ್ದೇನೆ" ಎಂದು ಲೇಖಕರು 'ಲೋಕಾಭಿರಾಮ'ದ ಲೇಖನಗಳ ಉದ್ದೇಶಗಳನ್ನು ಮತ್ತು ತಮ್ಮ ಅನಿಸಿಕೆಗಳ ಪ್ರಾಮಾಣಿಕತೆಯನ್ನು ಸ್ಪಷ್ಟಪಡಿಸಿರುವರು.

ಒಳ್ಳೆಯದನ್ನು ಮೆಚ್ಚುವ, ತಮಗೆ ಮೆಚ್ಚುಗೆಯಾದದ್ದನ್ನು ಬಾಯ್ತುಂಬ ಹೊಗಳಿರುವ ಲೇಖಕರು ತಮಗೆ ಅಪ್ರಿಯವೆನಿಸಿದ್ದನ್ನು ತೀರ ವ್ಯಂಗ್ಯವಾಗಿ, ಹರಿತವಾಗಿ ಹೇಳಿರುವರು.

**ವಿಶ್ವಮಾನವದೃಷ್ಟಿ:** ವಿ. ಕೃ. ಗೋಕಾಕರ ಈ ಕೃತಿಯಲ್ಲಿ ವಿಶ್ವಮಾನವ ದೃಷ್ಟಿಯನ್ನು ಕುರಿತು ಆರು ಪ್ರಬಂಧಗಳಿವೆ. 'ವಿಶ್ವಮಾನವನಾಗಬೇಕಾದ ಕನ್ನಡಿಗ' ಎಂಬ ಮೊದಲ ಪ್ರಬಂಧದಲ್ಲಿ" ಕನ್ನಡತನವೆಂಬ ಕ್ಷಿತಿಜ ವಿಶ್ವಮಾನವ ಕ್ಷಿತಿಜವಾಗಿ ಮಾರ್ಪಡುವಾಗ ಸಂಧಿಸುವ ಹಂತಗಳು ಯಾವುವು ಎಂಬುದನ್ನು ವಿವೇಚಿಸಲಾಗಿದೆ. 'ಕರ್ಣಾಟಕದ ಸರ್ವಜ್ಞ: ಜನತೆಯ ಕವಿ' ಎಂಬ ಎರಡನೆಯ ಪ್ರಬಂಧದಲ್ಲಿ ಕನ್ನಡದ ಜನಪದ ಕವಿಯಾದ ಸರ್ವಜ್ಞ ಸಾಮಾನ್ಯನಾದರೂ ನಾಡಾಡಿಯಾದರೂ ಆತನಲ್ಲಿ ವಿಶ್ವಮಾನವನಾಗುವ ಲಕ್ಷಣಗಳಿರುವುದನ್ನು ಲೇಖಕರು ಗಮನಿಸಿ, ಅವನ ಬದುಕು–ಸಾಹಿತ್ಯಗಳ ಮೂಲಕ ಅದನ್ನು ಪ್ರತಿಪಾದಿಸಿರುವರು. 'ವಿಶ್ವಮಾನವ ಬಸವೇಶ್ವರ' ಎಂಬ ಮೂರನೆಯ ಪ್ರಬಂಧದಲ್ಲಿ ವಿಶ್ವದ ಮಹಾ ಚೇತನಗಳಲ್ಲಿ ಒಂದಾದ ಬಸವಣ್ಣನವರು ತಮ್ಮ ಅಪ್ಪಟವಾದ ನಡೆ–ನುಡಿಗಳಿಂದ ಹೇಗೆ ವಿಶ್ವಮಾನವರಾದರೆಂಬುದರ ವಿವೇಚನೆ ಮಾಡಲಾಗಿದೆ.

ನಾಲ್ಕನೆಯ ಪ್ರಬಂಧದಲ್ಲಿ ವಿಶ್ವಮಾನವರಾದ ರವೀಂದ್ರರ 'ಕಾವ್ಯ ಹಾಗೂ ತತ್ವದರ್ಶನ'ದ ಪರಿಚಯ ಮಾಡಿಕೊಡಲಾಗಿದೆ. ಐದನೆಯ ಪ್ರಬಂಧದಲ್ಲಿ ಮಹರ್ಷಿ ಅರವಿಂದರ ಸೌಂದರ್ಯದ ವಿವರಣೆಯನ್ನು ಕೊಡಲಾಗಿದೆ. ಆರನೆಯ ಪ್ರಂಬಂಧವು ಹುಟ್ಟು ಕನ್ನಡಿಗರಾದ ಬಾಳೆಕುಂದ್ರಿಯ ಪಂತರ ದೃಷ್ಟಿ ಹೇಗೆ ವಿಶ್ವಮಾನವ ದೃಷ್ಟಿಯಾಗಿದೆ ಎಂಬುದನ್ನೂ ಅವರ ಜೀವನ ಹೇಗೆ ವಿಶ್ವಮಾನವನ ಜೀವನವಾಗಿದೆಯೆಂಬುದನ್ನೂ ತಿಳಿಸುತ್ತದೆ.

ಎರಡು, ಮೂರು ಮತ್ತು ಐದನೆಯ ಪ್ರಬಂಧಗಳು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಗೊಂಡು ಬಂದಿವೆ. ಮೂಲಕ್ಕೆ ಧಕ್ಕೆ ಬರದ ರೀತಿಯಲ್ಲಿ ಅನುವಾದ ಹದಗೊಂಡು ಬಂದಿರುವುದು ಮೆಚ್ಚಬೇಕಾದ ಅಂಶವಾಗಿದೆ.

**ವಿಚಾರ:** ಡಾ. ಮಾಸ್ತಿಯವರು ಈ ಪುಸ್ತಕದಲ್ಲಿ ತಮ್ಮ ಸಮಕಾಲೀನ ವಿಚಾರಗಳನ್ನೂ ನಾಡಿನ ರಾಷ್ಟ್ರದ ಹಲವು ಪ್ರಮುಖ ಸಮಸ್ಯೆಗಳನ್ನೂ ಕುರಿತು ಗಂಭೀರ ವಿವೇಚನೆ ನಡೆಸಿರುವರು. ಅವರು ಸತ್ಯಪಕ್ಷಪಾತಿಗಳಾಗಿರುವುದರಿಂದ ಸಮಸ್ಯೆಯ ಹಿಂದು ಮುಂದನ್ನು ಕೂಲಂಕಷವಾಗಿ ವಿವೇಚಿಸಿ ತಮ್ಮ ಪ್ರಾಮಾಣಿಕ ಅಭಿಪ್ರಾಯವನ್ನು ಇಲ್ಲಿ ಹಲವೆಡೆ ತಿಳಿಸಿರುವರು. ಈ ಪ್ರಾಮಾಣಿಕತೆ ಈ ಗ್ರಂಥದ ಮೌಲ್ಯವನ್ನು ಹೆಚ್ಚಿಸಿದೆ.

ಈ ಗ್ರಂಥ ಮೂರು ಭಾಗಗಳನ್ನು ಒಳಗೊಂಡಿದೆ. ಮೊದಲ ಭಾಗದಲ್ಲಿ ಸಾಹಿತ್ಯಕ್ಕೆ ಸನ್ಮಾನ ಮಾಡುವ ಭಾರತೀಯ ಜ್ಞಾನಪೀಠ ಹಾಗೂ ದಿಲ್ಲಿಯ ಸಾಹಿತ್ಯ ಅಕಡೆಮಿಗಳ ಕಾರ್ಯನಿರ್ವಹಣೆಯಲ್ಲಿನ ಕೆಲವು ಲೋಪದೋಷಗಳನ್ನು ಪ್ರಸ್ತಾಪಿಸಿ ಅವುಗಳು ಸುವ್ಯವಸ್ಥೆಯಿಂದ ಕೆಲಸ ಕೈಗೊಂಡು ಅರ್ಹವಾದ ಕೃತಿಗೆ,ಅರ್ಹನಾದ ಸಾಹಿತಿಗೆ ಪುರಸ್ಕಾರ ಮಾಡಲು ಕೆಲವು ಸೂಕ್ತವಾದ ಸಲಹೆಗಳನ್ನು ಕೊಟ್ಟಿರುವರು. ಎರಡನೆಯ ಭಾಗದಲ್ಲಿ ಸಮಕಾಲೀನ ವಿಚಾರಗಳ ನಾಡಿನ ರಾಷ್ಟ್ರದ ಹಲವು ಸಮಸ್ಯೆಗಳ ಪ್ರಾಮಾಣಿಕತೆ ವಿವೇಚನೆ ಮಾಡಿರುವರು. 'ಕನ್ನಡ ಪ್ರಾಂತವನ್ನು ಒಡೆಯಬೇಡಿ' ಎಂಬ ಲೇಖನದಲ್ಲಿ ಕನ್ನಡನಾಡು ಒಡೆದು ಇಬ್ಭಾಗವಾಗಬೇಕು ಎನ್ನುವ ಕೆಲವರು ರಾಜಕಾರಣಿಗಳ ವಿಚಾರದಿಂದ ನೊಂದ ಡಾ. ಮಾಸ್ತಿಯವರು "ಎಷ್ಟೋ ಕಷ್ಟದಿಂದ ಹಿರಿಯರು ಒಂದುಗೂಡಿಸಿದ ಕರ್ನಾಟಕವನ್ನು ಸರ್ವ ಪ್ರಯತ್ನದಿಂದ ಒಂದಾಗಿ ಉಳಿಸಬೇಕು" ಎಂದು ಕಳಕಳಿಯಿಂದ ಕನ್ನಡಿಗರನ್ನು ಪ್ರಾರ್ಥಿಸಿರುವರು. 'ಕಾಂಗ್ರೆಸ್ಸಿನಲ್ಲಿ ಅವ್ಯವಸ್ಥೆ', 'ಜಗಜೀವನರಾಮ್ ಅವರ ವರಮಾನದ ವರದಿ' 'ರಾಜವೇತನ' 'ಬ್ಯಾಂಕುಗಳ ರಾಷ್ಟ್ರೀಕರಣ' 'ಮಂತ್ರಿ ಜನರ ಶೀಲ'– ಇವೇ ಮೊದಲಾದ ಲೇಖನಗಳಲ್ಲಿ ವಿಷಯ ವಿಶ್ಲೇಷಣ ಮಾಡುವ ರೀತಿ; ಸಮದರ್ಶಿಯಾಗಿ ಕೊಡುವ ತೀರ್ಪು; ಪ್ರಾಂಜಲ ಮನದಿಂದ ತಪ್ಪನ್ನು ಎತ್ತಿತೋರಿಸಿ, ಪಣ್ತ ಮನದಿಂದ ಕೊಡುವ ಎಚ್ಚರಿಕೆ– ಇವನ್ನು ನಾವಿಲ್ಲಿ ನೋಡಬಹುದಾಗಿದೆ. ಮೂರನೆಯ ಭಾಗದಲ್ಲಿ ರವೀಂದ್ರರ ಸಮಾಜ ಸಿದ್ಧಾಂತವನ್ನು ಕುರಿತು ಮೂರು ಲೇಖನಗಳೂ ರವೀಂದ್ರರ ಕಲ್ಪನೆಯ ಪೂರ್ವ ಪಶ್ಚಿಮ ಸಂಯೋಗವೆಂಬ ಮತ್ತೊಂದು ಲೇಖನವೂ ಇದೆ. ಭಾಗ ನಾಲ್ಕರಲ್ಲಿ 'ಶ್ರೀರಾಮಾನುಜಾಚಾರ್ಯರ ತಿರುನಕ್ಷತ್ರ' ವನ್ನು ಕುರಿತು ಒಂದು ಲೇಖ

ನವೂ 'ಲಾಲ್‌ಬಹದ್ದೂರ್ ಶಾಸ್ತ್ರಿ'ಗಳ ಬಗ್ಗೆ ಒಂದು ಲೇಖನವೂ 'ವಿಶ್ವಮಾನ್ಯ ಸಾಹಿತ್ಯ'ದ ಬಗ್ಗೆ ಒಂದು ಲೇಖನವೂ ಇದೆ.

**ಪುರಂದದಾಸರ ಕೃತಿಗಳಲ್ಲಿ ಸತ್ಸಂಗದ ಮಹಿಮೆ:** ಅಥಣಿಯ ಶ್ರೀ ಕೃಷ್ಣಾಜಿ ದಾಸೋಪಂತ ಸಂಗೋರಾಮರ ಎಪ್ಪತ್ತೈದನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರ ಬದುಕು–ಬರಹಗಳನ್ನು ಪರಿಚಯಿಸುವ ಉದ್ದೇಶದಿಂದ ಅವರ ಅಭಿಮಾನಿಗಳು ಈ ಪುಸ್ತಕವನ್ನು ಪ್ರಕಟಪಡಿಸಿರುವರು.

ಸಂಗೋರಾಮರು ಸುಶಿಕ್ಷಿತರು. ಉತ್ತರ ಕರ್ಣಾಟಕದಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿದವರು. ಕನ್ನಡದ ಬದಲಿಗೆ ಮರಾಠಿ–ವ್ಯವಹಾರ ಭಾಷೆಯಾಗಿದ್ದಾಗ,ಅದೂ ಮೋಡಿ ಲಿಪಿಯಲ್ಲಿ ಲೆಕ್ಕ ಪತ್ರಗಳು ಬರೆಯಲ್ಪಡುತ್ತಿದ್ದಾಗ ಕನ್ನಡದ ಪರವಾಗಿ ಚಳುವಳಿ ಹೂಡಿದವರು. ಗುರುದೇವ ರಾನಡೆಯವರ ಭಕ್ತರಾಗಿ ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸಿದವರು. ಸರ್ವಜ್ಞ, ಪುರಂದರದಾಸರ ಆಧ್ಯಾತ್ಮ ಜೀವನದ ವಿಷಯದಲ್ಲಿ ಆಳವಾದ ಅಭ್ಯಾಸ ನಡೆಸಿದವರು. ಇವರ ಜೀವನ ಪರಿಚಯವನ್ನು ಸಂಪಾದಕರು ಈ ಪುಸ್ತಕದ ಪ್ರಾರಂಭದಲ್ಲೇ ಮಾಡಿಕೊಟ್ಟಿರುವರು.

ಸಂಗೋರಾಮರ 'ಹೊಸ ಹೊಳಪು', 'ನಿನ್ನ ಭಜನ' ಎಂಬ ಕವನಗಳೂ 'ಏಳಿರೇಳಿರೈ' ಎಂಬ ವೀರಗೀತೆಯೂ 'ಸಮಾಜ ಸೇವೆಯ ಗುರಿ', 'ಪುರಂದರದಾಸರ ಕೃತಿಗಳಲ್ಲಿ ಸತ್ಸಂಗದ ಮಹಿಮೆ' 'ಪುರಂದರದಾಸರ ನೀತಿಯ ಕಲ್ಪನೆ', 'ಪುರಂದರದಾಸರ ಆಧ್ಯಾತ್ಮ ಜೀವನ' ಎಂಬ ಲೇಖನಗಳೂ ಈ ಪುಸ್ತಕದಲ್ಲಿವೆ. ಅನುಬಂಧದಲ್ಲಿ ಸಂಗೋರಾಮರು ಉಮದಿಯ ಶ್ರೀ ಭಾವುಸಾಹೇಬ ಮಹಾರಾಜರವರ ಜೀವನ ಗಂಗೆ ಎಂಬ ಗ್ರಂಥಕ್ಕೆ ಬರೆದ ಮುನ್ನುಡಿಯ ಕೆಲವೊಂದು ಭಾಗ (ನಾಥ ಸಂಪ್ರದಾಯವನ್ನು ಕುರಿತು) ಕೊಟ್ಟಿರುವರು. ಪುರಂದರದಾಸರ ಕೃತಿಗಳ ಅಭ್ಯಾಸದಿಂದ ಮೂಡಿದ ಅವರ ಲೇಖನಗಳಲ್ಲಿ ಆಳವಾದ ಅಭ್ಯಾಸವನ್ನೂ ಸರಳ ರೂಪಣಾ ವಿಧಾನವನ್ನೂ ಕಾಣಬಹುದಾಗಿದೆ.

**ಪಾದಯಾತ್ರೆ ಮತ್ತು ಇತರ ಪ್ರಬಂಧಗಳು:** ಕನ್ನಡದ ಪ್ರಸಿದ್ಧ ಪ್ರಬಂಧಕಾರರಾದ ದಿವಂಗತ ಎಂ. ರಾಮರಾಯರ ಹನ್ನೆರಡು ಪ್ರಬಂಧಗಳ ಸಂಕಲನವಿದು. ಇಲ್ಲಿಯ ಪ್ರಬಂಧಗಳು ನಿರ್ದಿಷ್ಟ ವಿಷಯಗಳ ಚೌಕಟ್ಟಿಗೆ ಒಳಗಾಗಿಲ್ಲ. ಕೋಲು, ನಿದ್ದೆ, ಬಾಗಿಲು, ಪ್ರತಿಷ್ಠೆ, ಹಬ್ಬ–ಇದೇ ಮೊದಲಾದ ಪ್ರಬಂಧಗಳನ್ನು ಓದಿದಾಗ ಯಾವ ವಿಷಯವನ್ನೇ ಆರಿಸಿಕೊಂಡರೂ ತಮ್ಮ ನಿರೂಪಣಾ ವಿಧಾನದಿಂದ ಪರಿಣಾಮ ರಮಣೀಯತೆಯನ್ನು ಬೀರುವ ಪ್ರಬಂಧಕಾರರ ಮಾಂತ್ರಿಕತೆಗೆ ಓದುಗನ ಮನ ಮಾರುಹೋಗುತ್ತದೆ. 'ಉಪವನದ ಗೆಳೆಯ, 'ಹುಲಿಮುಖದ ಹಸು', 'ಹೀಗೂ ಉಂಟು ಹಿರಿತನ' ಇವು ಗೋಲ್ಡ್‌ಸ್ಮಿತ್ತನ ಪ್ರಬಂಧಗಳನ್ನು ಆಧರಿಸಿ ಬರೆಯಲಾಗಿದ್ದರೂ ಸ್ವತಂತ್ರವಾದ ಪ್ರಬಂಧಗಳೇ ಎನ್ನುವಷ್ಟರ ಮಟ್ಟಿಗೆ ಸೈಜವಾಗಿವೆ. ರಾಮರಾಯರ ಪ್ರಬಂಧಗಳ ವೈಶಿಷ್ಟ್ಯವೆಂದರೆ ಅವರ ಪ್ರಬಂಧಗಳಲ್ಲಿ ಅವರೇ ನಾಯಕರು. ಅವರ ಸ್ವಾನುಭವಗಳಿಗೇ ಅನಿಸಿಕೆಗಳಿಗೇ ಹೆಚ್ಚಿನ ಪ್ರಾಶಸ್ತ್ಯ. ಇದಕ್ಕೆ ಉದಾಹರಣೆಯಾಗಿ 'ಆಹ್ವಾನಪತ್ರಿಕೆಗಳು', 'ಪಾದಯಾತ್ರೆ' ಪ್ರಬಂಧಗಳನ್ನು ಹೆಸರಿ

ಸಬಹುದು. ಯಾವುದೋ ಅವಸರದ ಕಾಗದವನ್ನು ರೈಲ್ವೆ ಸ್ಟೇಷನ್ನಿನ ಹೊರವಲಯದಲ್ಲಿರುವ ಕೆಂಪುಪೆಟ್ಟಿಗೆಗೆ ಹಾಕಲು ಹೋಗಿ, ಬಂದ ಮಳೆಗೆ ಹೆದರಿ ರೈಲ್ವೆ ಸ್ಟೇಷನ್ನಿನಲ್ಲೇ ನಿಂತ ಪ್ರಬಂಧಕಾರರಿಗೆ ಅಲ್ಲಿ ಅನಿರೀಕ್ಷಿತವಾಗಿ ಹೊಸದೊಂದು ಅನುಭವ ವಿಸ್ತರಣ ಕ್ಷೇತ್ರ ದೊರೆತಂತಾಯಿತಂತೆ. ಈ ರೈಲ್ವೆ ನಿಲ್ದಾಣ ಅವರ ಪಾಲಿಗೆ ಒಂದು ಕಿರಿಯ ಜಗತ್ತು. ರೈಲ್ವೆ ನಿಲ್ದಾಣದಲ್ಲಿ ಒಂದು ಸಂಜೆಯ ಅನುಭವವನ್ನು ಅವರ ಪ್ರಬಂಧ ಓದಿಯೇ ಸವಿಯಬೇಕು.

ರಾಮರಾಯರ 'ಪಾದಯಾತ್ರೆ' ಪ್ರಬಂಧ ಸಂಕಲನಕ್ಕೆ ವಿಮರ್ಶಾತ್ಮಕವಾದ ಪರಿಚಯ ಲೇಖನವನ್ನು ಪ್ರಾರಂಭದಲ್ಲಿ ಎಚ್ಚೆಸ್ಕೆಯವರು ಬರೆದಿರುವರು. ರಾಮರಾಯರ ಮರಣಾನಂತರ ಪ್ರಕಟವಾದ ಈ ಪ್ರಬಂಧ ಸಂಕಲನದಲ್ಲಿ (ಅನುಬಂಧದಲ್ಲಿ) ಲೇಖಕರ ಪರಿಚಯ ಮಾಡಿಕೊಡುವ ಎರಡು ಲೇಖನಗಳಿವೆ.

**ಸ್ನೇಹಸೇತು:** ಅಣ್ಣ-ತಂಗಿಯರ ನಡುವೆ ನಡೆದ ಆತ್ಮೀಯವಾದ ಪತ್ರವ್ಯವಹಾರವೇ ಈ 'ಸ್ನೇಹಸೇತು'. ಇದು ಸಮಾನ ದುಃಖಿಗಳ ಹೃದಯಸಂವಾದದ ಕಥೆ. ಕುರುಡು ಸಮಾಜದ ನಿಂದೆಗೆ ಒಳಗಾದ ಮುಗ್ಧ, ನಿಷ್ಕಳಂಕ ಹೃದಯದ ಹೆಣ್ಣು, ರಕ್ತಸಂಬಂಧಿಯಲ್ಲದ ಜನ್ಮಾಂತರದ ಬಂಧುವಾದ ಅಣ್ಣನ ಪ್ರೀತಿಯ ಮಹಾಪೂರದಲ್ಲಿ ತನ್ನ ದುಃಖ, ವೇದನೆ, ಅಪಮಾನಗಳನ್ನು ನೀಗಿಕೊಳ್ಳುವಳು. ಅನಿರೀಕ್ಷಿತ ದುಃಖ ವೇದನೆಗಳ ಪರಾಕಾಷ್ಠೆಯಲ್ಲಿ ಒಲವಿನ ಅಣ್ಣ ದಿಕ್ಕೆಟ್ಟಿದ್ದಾಗ ತಂಗಿ ತನ್ನ ಪ್ರೀತಿಯ ಅಮೃತವನ್ನು ಊಡಿಸಿದಳು. ಸಮಾಜ ತನ್ನ ಮೇಲೆ ಹೊರಿಸಿದ ಅಪವಾದದ ಭಾರವನ್ನು ಸಹಿಸಲಾಗದೆ ಬದುಕೇ ಬೇಡವಾಗಿದ್ದವಳನ್ನು ರಕ್ಷಿಸಿದಂತೆ ಈ ಅಣ್ಣ ಹಾದಿ ತಪ್ಪಿದ ನವೀನನನ್ನೂ ಉದ್ಧಾರಮಾಡುತ್ತಾನೆ. ಮನೆಬಿಟ್ಟು ದೇಶಾಂತರ ಹೋಗಿದ್ದನವೀನನನ್ನು ಹುಡುಕಿ ಕರೆದು ತಂದು ಬೆಂದ ಅವನ ಮನಕ್ಕೆ ಸಾಂತ್ವನದ ತಂಪನ್ನೆರೆದು ಅವನ ಬಾಳನ್ನು ಮೇಲೆತ್ತುತ್ತಾನೆ. ಈ ತಂಗಿಯಾದರೋ ಅಣ್ಣನ ಬಾಳಿನ ಎಷ್ಟೋ ಅರೆಕೊರೆಗಳನ್ನು ತುಂಬಿದಳು. ಹೃದಯವನ್ನು ಹಸನಾಗಿಸಿದಳು. ಲೇಖಕರೇ ಹೇಳುವಂತೆ "ಇದು ವಿರಹದ ಕಥೆ. ಮಿಲನದ ಕಥೆ; ಸಮರಸದ ಕಥೆ. ಇದು ಕಣ್ಣೀರಿನ ಕಥೆ; ವ್ಯಥೆಯ ಕಥೆ. ಇದು ಹೃದಯ ಸಂವಾದದ ಕಥೆ; ಸ್ನೇಹಸೇತು ಬೆಸೆದ ಕಥೆ."

ಅಣ್ಣ-ತಂಗಿಯರ ಭಾವುಕ ಮನದ ಮಿಡಿತ ಈ ಪತ್ರಗಳುದ್ದಕ್ಕೂ ಕೇಳಿಬರುತ್ತದೆ. ವ್ಯಾಸಂಗದಿಂದ ಸಂಸ್ಕಾರಗೊಂಡ ಈ ಅಣ್ಣನ ಮಾತುಗಳಲ್ಲಿ ತೂಕವಿದೆ, ಗಾಂಭೀರ್ಯವಿದೆ, ಅನುಭವವಿದೆ. ತಂಗಿಯ ಪತ್ರಗಳಲ್ಲಿ ಅವಳ ಓದು, ಅನುಭವಗಳಿಗೆ ತಕ್ಕಂತೆ ಅನಿಸಿಕೆಗಳು ಪ್ರಕಟಗೊಂಡಿವೆ. ನೊಂದ ಹೆಣ್ಣಾದ ಆಕೆಯ ಕಣ್ಣೀರು, ವ್ಯಥೆಯ ಕಥೆಯ ನೋವಿನ ಎಳೆ ಉದ್ದಕ್ಕೂ ಹರಿದಿದೆ.

ಪ್ರೊ॥ ಎಸ್. ವಿ. ಪರಮೇಶ್ವರಭಟ್ಟರು ಈ ಕೃತಿಗೆ ಮುನ್ನುಡಿ ಬರೆದಿರುವರು. ಕೃತಿಯ ಸಹೃದಯಪರವಾದ ವಿಮರ್ಶೆಯನ್ನು ನಾವಲ್ಲಿ ನೋಡಬಹುದಾಗಿದೆ.

ಪತ್ರಸಾಹಿತ್ಯ ಕನ್ನಡದಲ್ಲಿ ಬೆರಳೆಣಿಕೆಯಷ್ಟಿರುವಾಗ ಏರ್ಯ ಲಕ್ಷ್ಮೀನಾರಾಯಣ ಆಳ್ವರ ಸ್ನೇಹಸೇತು ಈ ಪ್ರಕಾರಕ್ಕೆ ಒಂದು ಉತ್ತಮ ಕೊಡುಗೆ ಎಂದು ಹೇಳಬಹುದು.

**ಬದುಕು-ಬೆಳಕು:** ಎಚ್ಚೆಸ್ಕೆಯವರ 'ಬದುಕು–ಬೆಳಕು' ಪ್ರಧಾನವಾಗಿ ವ್ಯಕ್ತಿಚಿತ್ರಗಳ ಒಂದು ಸಂಕಲನ. ಇವುಗಳಲ್ಲಿ ಬಹುಪಾಲು ಕನ್ನಡಿಗರದು. ಈ ಸಂಕಲನದಲ್ಲಿ ಒಟ್ಟು ಐವತ್ತೈದು ವ್ಯಕ್ತಿಚಿತ್ರಗಳಿದ್ದು ಅವನ್ನು ತಮ್ಮ ಸಿದ್ಧ ಶೈಲಿಯಲ್ಲಿ ಚಿತ್ರಿಸಿರುವರು. ಪ್ರತಿಭಾವಂತ ರೂವಾರಿಯು ಕುಸುರಿಗೆಲಸದಂತೆ ಎಚ್ಚೆಸ್ಕೆಯವರು ವ್ಯಕ್ತಿಚಿತ್ರಗಳನ್ನು ನಿರ್ಮಿಸುವರು. ವ್ಯಕ್ತಿಯ ಸಾಧನೆ–ಸಿದ್ಧಿಗಳು, ಗುಣಾವಗುಣಗಳು, ಬದುಕಿನ ಹೋರಾಟದಲ್ಲಿನ ಸರಸ–ವಿರಸಗಳು, ಸೋಲು ಗೆಲುವುಗಳು – ಇವೆಲ್ಲವನ್ನೂ ಚಿತ್ತಾಕರ್ಷಕ ಶೈಲಿಯಲ್ಲಿ ಹಿತಮಿತ ಪದಪುಂಜದಲ್ಲಿ ಅಡಕಗೊಳಿಸಿ ಹೇಳುವ ಕಲೆ ಅವರದು. ಇವರು ಚಿತ್ರಿಸಿರುವ ವ್ಯಕ್ತಿಗಳಲ್ಲಿ ಕವಿಗಳು, ಕಥೆ–ಕಾದಂಬರಿಕಾರರು, ಕಲಾವಿದರು, ಕ್ರೀಡಾಪಟುಗಳು, ಸಾಹಸಿಗಳು, ವಿದ್ವಾಂಸರು, ರಾಜಕಾರಣಿಗಳು, ಅಂತರರಾಷ್ಟ್ರೀಯ ವ್ಯಕ್ತಿಗಳು – ಹೀಗೆ ಹಲವು ಪ್ರಕಾರಗಳ ಮಾನ್ಯರಿದ್ದು ಅವರೆಲ್ಲರ ಪರಿಚಯ ಮಾಡಿಕೊಡುವಾಗ ಅವರ ವ್ಯಕ್ತಿತ್ವದ ಒಂದು ಗೆರೆಯೂ ಮಾಸದ ರೀತಿಯಲ್ಲಿ ಹೇಳುವುದು ಕಷ್ಟಸಾಧ್ಯವಾದ ಕೆಲಸ.

ವ್ಯಕ್ತಿಚಿತ್ರಗಳ ಜೊತೆಗೆ ಗೌರೀಶಂಕರವೇರಿದ ವೀರರ ಸಾಹಸದ ವಿವರಣೆ, ಗುಣಗಾನ ಒಂದು ಲೇಖನದಲ್ಲಿದೆ. ಭಾರತದ ಶ್ರೀಸಾಮಾನ್ಯನ, ಕನ್ನಡ ಪುರುಷನ ಪರಿಚಯ ಒಂದೊಂದು ಲೇಖನದಲ್ಲಿ ಮಾಡಿಕೊಟ್ಟಿರುವರು. ತಮ್ಮ ಸಮಕಾಲೀನ ವಿದ್ಯಾರ್ಥಿಗಳ ಮತ್ತು ಪಕ್ಷಾಂತರ ಪ್ರಭೃತಿಯ ಬಗ್ಗೆ ಎರಡು ಲೇಖನಗಳಿವೆ.

**ಕನ್ನಡದ ಸೇತುವೆ:** ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಬರೆದ ಹಲವು ಲೇಖನಗಳನ್ನು ಒಂದೆಡೆ ಸೇರಿಸಿ ರಾಜರತ್ನಂ ಅವರು 'ಕನ್ನಡದ ಸೇತುವೆ' ಎಂಬ ಹೆಸರಿನಲ್ಲಿ ಪ್ರಕಟಪಡಿಸಿರುವರು.

ಮೊದಲ ಲೇಖನದಲ್ಲಿ ಲೇಖಕರು ತಮಗೂ ಪರಿಷತ್ತಿಗೂ ಇರುವ ಋಣಾನುಬಂಧವನ್ನೂ, ಅದರಿಂದ ತಮಗಾಗಿರುವ ಲಾಭವನ್ನೂ ಪ್ರಸ್ತಾಪಿಸಿರುವರು. 'ಅಪರಾಜಿತ' ಹಾಗೂ 'ಕಾರ್ಯಧೀರ' ಎಂಬ ಲೇಖನಗಳು ಜಿ. ಪಿ. ರಾಜರತ್ನಂರವರ ವ್ಯಕ್ತಿತ್ವದ ಪರಿಚಯಕ್ಕೆ ಮೀಸಲಾದವು. ಮೊದಲನೆಯದು ದೂರದ ಸ್ಥಳದಿಂದ ಪರಿಷತ್ತಿನ ಸ್ವರ್ಣ ಮಹೋತ್ಸವಕ್ಕೆ ಬಂದವರಿಗೆ ರಾಜರತ್ನಂರವರ ಪರಿಚಯವಾದ ಬಗೆ ಮತ್ತು ಕೆಲವೇ ನಿಮಿಷಗಳ ಒಡನಾಟದಲ್ಲಿ ಆದ ಅನುಭವಗಳ ವಿವರಣೆ. ಎರಡನೆಯದು ರಾಜರತ್ನಂರವರೊಡನೆ ಅವರ ಅಭಿಮಾನಿಗಳೊಬ್ಬರು ನಡೆಸಿದ ಸಂದರ್ಶನದ ವಿವರಣೆ. ಒಂದು ಲೇಖನದಲ್ಲಿ ಪರಿಷತ್ತಿನ ಜೊತೆಗೆ ಬಲಿದ ಬೆಸುಗೆಯ ಪ್ರಸ್ತಾಪವನ್ನು ಮಾಡಲಾಗಿದೆ. 'ಕೃತಂ ಸ್ಮರ ಕೃತೋಃ ಸ್ಮರ' ಎಂಬ ಲೇಖನದಲ್ಲಿ ಗೋವಿಂದ ಪೈ, ಕ. ವೆಂ. ರಾಘವಾಚಾರ್ಯ, ಎಲ್. ಗುಂಡಪ್ಪ– ಈ ಮೂವರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಟ್ಟಿರುವರು. 'ಕುವೆಂಪು ಪ್ರಗಾಥಾ'ವು ರಾಷ್ಟ್ರಕವಿ ಶ್ರೀ ಕುವೆಂಪು ಅವರ ಸಾಕ್ಷಿಚಿತ್ರವನ್ನು ನೋಡಿಯಾದ ಮೇಲೆ ಆ ಚಿತ್ರದ ಬಗ್ಗೆ ಕೊಟ್ಟ ವಿವರಣೆಯಾಗಿದೆ. ಒಂದು ಲೇಖನದಲ್ಲಿ ರಾಜಸೇವಾಸಕ್ತ ಶ್ರೀ ಸಿ. ಕೆ. ವೆಂಕಟರಾಮಯ್ಯನವರನ್ನು ಕುರಿತು ಪರಿಚಯವನ್ನು ಮಾಡಿಕೊಟ್ಟಿರುವರು. ಶ್ರೀ ಎನ್. ಅನಂತರಂಗಾಚಾರ್ಯರ 'ಸಾಹಿತ್ಯ ಭಾರತೀ' ಎಂಬ ಉದ್ಗ್ರಂಥದ ಕಿರು

ಪರಿಚಯ ಮಾಡಿಕೊಡುವ ಲೇಖನ ಒಂದಿದೆ. ಪುಸ್ತಕದ ಕೊನೆಯಲ್ಲಿ ಪ್ರೇಕ್ಷಣೀಯವಾದ ಕನ್ನಡ ಸಾಹಿತ್ಯ ಪರಿಷತ್ತಿನ ಚಿತ್ರಶಾಲೆಯ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ.

**ಬೆರಕೆ ಸೊಪ್ಪು:** ಪ್ರೊ. ದೇ. ಜವರೇಗೌಡರ 'ಬೆರಕೆ ಸೊಪ್ಪು' ಐವತ್ತು ಲೇಖನಗಳ ಸಂಗ್ರಹಕೃತಿ. ಇಲ್ಲಿ ವಿಷಯ ವೈವಿಧ್ಯತೆಯಿದ್ದು ಲೇಖನಗಳು ಪ್ರಬಂಧ ಹಾಗೂ ಹರಟೆಯ ರೂಪವನ್ನು ತಾಳಿವೆ. 'ಊರ ಹೆಸರುಗಳು', ಭಾರತೀಯ ಪ್ರಾಂತಗಳ ಮೇಲೆ ಕರ್ನಾಟಕದ ಪ್ರಭಾವ' ಕನ್ನಡ ಭಾಷೆ ಇಂದು' 'ಸಂಸ್ಕೃತ ಭಾಷೆಯ ವ್ಯಾಸಂಗ', ಕನ್ನಡ ನುಡಿಯ ಹಿರಿಮೆ' ಇತ್ಯಾದಿ ಸಂಶೋಧಿತ ಹಾಗೂ ವಿವರಣಾತ್ಮಕ ಬರಹಗಳೂ, ಶಿಕ್ಷಣ ಮಾಧ್ಯಮ ವನ್ನು ಕುರಿತ ವಿಚಾರಧಾರೆಗಳೂ, ವ್ಯಕ್ತಿ ಚಿತ್ರಗಳೂ 'ಸುಳ್ಳು ಅವಶ್ಯಕವೆ?' 'ನೀವು ಅಂದವಾಗಿಲ್ಲದಿರುವುದೇ ಕ್ಷೇಮ' 'ಬೊಜ್ಜು ಮೆಯ್' ಇತ್ಯಾದಿ ಲಘು ಹರಟೆಗಳೂ ಈ ಸಂಗ್ರಹದಲ್ಲಿ ಬಂದಿವೆ.

ಸಮ್ಮಿಶ್ರ ಲೇಖನಗಳ ಸಂಗ್ರಹವಾಗಿರುವ ಈ ಕೃತಿ ನಮ್ಮ ಜ್ಞಾನದ ಪರಿಧಿಯನ್ನು ವಿಸ್ತರಿಸಲು, ವಿಶ್ರಾಮವೇಳೆಯಲ್ಲಿ ಮೆಲುಕುಹಾಕಲು ಒಳ್ಳೆಯ ಕೃತಿಯಾಗಿದೆ.

**ಕಾಲೇಜ್ ದಿನಗಳು:** ಇದು ಸುಪ್ರಸಿದ್ಧ ಕವಿಗಳೂ ಪ್ರಬಂಧಕಾರರೂ ಆದ ಪ್ರೊ. ವಿ. ಸೀತಾರಾಮಯ್ಯನವರ ಕಾಲೇಜು ದಿನಗಳ ನೆನಪಿನ ಮಾಲಿಕೆ. "ಒಂದು ಕಾಲೇಜಿನಲ್ಲಿ ಕಳೆದ ದಿನಗಳುಎಂದಾಗ ಕಾಲೇಜಲ್ಲಿ ಏನು ಓದುತ್ತೇವೊ ಏನು ಹೇಳುತ್ತಾರೊ ಅಷ್ಟೇ ಮುಖ್ಯವಲ್ಲ. ಆವರಣ ಮುಖ್ಯ. ಬೆಳೆವ ಸ್ನೇಹಗಳು, ಕವಿವ ಉಲ್ಲಾಸ, ಕಿರುಕುಳಗಳು; ಕಷ್ಟದಲ್ಲಿ ಕೈಚಾಚುವ ನೆರವು: ಸಣ್ಣ ದೊಡ್ಡ ನಡವಳಿಕೆ: ಹುಟ್ಟಿಕೊಳ್ಳುವ ಬಾಂಧವ್ಯಗಳು– ಇವೆಲ್ಲ ಸೇರಿ ಹುಡುಗರ ಮನಸ್ಸನ್ನು ಒಲಿಸುತ್ತವೆ, ರೂಪಿಸುತ್ತವೆ; ಪಕ್ಷಪಾತಗಳನ್ನು, ರುಚಿಗಳನ್ನು ಬಿತ್ತುತ್ತವೆ: ಕೃಪಣತೆ, ವಿರಸ ವಿಷಗಳನ್ನು ಬೆರಸುತ್ತವೆ. ಅಲ್ಲಿ ರೂಪಿತವಾಗುತ್ತದೆ ವಿದ್ಯಾರ್ಥಿಯ ಶೀಲ ಸಂಪತ್ತಿ; ಸಂಸ್ಕಾರ. ಒಳಗೆ ಮನೆಗಳಲ್ಲಿ, ಹೊರಗೆ ಸಂಸ್ಥೆಗಳಲ್ಲಿ ಎಷ್ಟು ಬಗೆಯ ಜೀವನ ಸ್ಪಂದಿಸುತ್ತದೆ, ವಿದ್ಯಾರ್ಥಿಯ ಮನಃಸಂಸ್ಕಾರಕ್ಕೆ ಬೆಳಕು ಹಾಯಿಸುತ್ತದೆ, ಪುಷ್ಟಿ ತರುತ್ತದೆ ಎಂಬುದು ಆ ಕಾಲದಲ್ಲಿ ತಂಬ ದೊಡ್ಡ ಪ್ರಭಾವವಾಗುತ್ತದೆ. ಅದು ನಾಳಿನ ಬಾಳಿನ ಅಡಿಗಲ್ಲು."

ಪದವಿ ತರಗತಿಯಿಂದ ಎಂ. ಎ. ತರಗತಿಯ ವರೆಗಿನ ಐದು ವರ್ಷಗಳ ಜೀವನ ವಿದ್ಯಾರ್ಥಿಯ ಪಾಲಿಗೆ ಅದೊಂದು ಮರೆಯಲಾಗದ ಅಧ್ಯಾಯ; ಮಧುರಸ್ಮೃತಿ. ತುಂಬು ಯೌವನದ, ಕನಸುಗಾಣುವ, ಅಲೆಮಾರಿ ಮನದ ಆ ವಿದ್ಯಾರ್ಥಿ ಜೀವನದ ದಿನಗಳಲ್ಲಿ ವಿದ್ಯಾರ್ಥಿಯ ಬದುಕನ್ನು ರೂಪಿಸಿದ ವಿದ್ವನ್ಮೂರ್ತಿಗಳು, ಮನವನ್ನು ಅರಳಿಸಿದ ವಿಚಾರಧಾರೆಗಳು, ಜ್ಞಾನದ ಪರಿಧಿಯನ್ನು ವಿಸ್ತರಿಸಿದ ಅಂದಿನ ಪಾಠ ಪ್ರವಚನಗಳು, ಅನುಭವದ ಕೋಶವನ್ನು ವಿಸ್ತರಿಸಿದ ಪುಸ್ತಕಗಳು, ಪತ್ರಿಕೆಗಳು, ಉಪನ್ಯಾಸಗಳು– ಇವುಗಳನ್ನು ತೆರೆದ ಮನಸ್ಸಿನಿಂದ ಬದುಕಿನಲ್ಲಿ ಒಂದು ಘಟ್ಟ ತಲುಪಿದ ಮೇಲೆ ಹಿಂದಿನ ಮರುಕಳಿಸುವ ಸುಖದ ದಿನಗಳ ಸವಿಯನ್ನು, ಅನುಭವಗಳನ್ನು ನೆನಪಿಗೆ ತಂದುಕೊಳ್ಳುವುದರಲ್ಲಿ ಒಂದು ಸುಖವಿದೆ. ಆ ತನಿಸುಖ ಇತರರಿಗೂ ಆಗುವಂತೆ ಪ್ರೊ. ವಿ. ಸೀ.ಯವರು ನಿರೂಪಿಸಿರುವರು.

ಐದು ವರ್ಷಗಳ ಕಾಲೇಜು ಜೀವನದಲ್ಲಿ ತಮಗೆ ವಿದ್ಯಾದಾನ ಮಾಡಿದ ಖ್ಯಾತ ನಾಮರಾಗಿದ್ದ ಪ್ರಿನ್ಸಿಪಲ್ ಸಿ. ಆರ್. ರೆಡ್ಡಿ, ಅರ್ಥಶಾಸ್ತ್ರದ ಎನ್. ಎಸ್. ಸುಬ್ಬರಾವ್. ತತ್ವಶಾಸ್ತ್ರದ ಎ. ಆರ್. ವಾಡಿಯಾ, ಫಿಲಾಸಫಿಯ ಎಸ್. ರಾಧಾಕೃಷ್ಣನ್, ಇಂಗ್ಲಿಷ್ ಸಾಹಿತ್ಯದ ಬಿ. ಎಂ. ಶ್ರೀ. ಸಂಸ್ಕೃತದ ಎಂ. ಹಿರಿಯಣ್ಣ– ಇವರೇ ಮೊದಲಾದ ವಿದ್ವಾಂಸರ ಔದಾರ್ಯ, ವಿದ್ವತ್ತು. ವಿದ್ಯಾದಾನದಲ್ಲಿನ ಧಾರಾಳವಾದ ಮನಸ್ಸು, ಪಾಠಕ್ರಮ ರುಚಿ–ಶುಚಿ– ಇವುಗಳ ವಿವರಣೆಯನ್ನು ಲೇಖಕರು ಸ್ವಾರಸ್ಯಪೂರ್ಣವಾಗಿ ತಿಳಿಸಿರುವರು. ತಮ್ಮ ಅಂದಿನ ಕಷ್ಟದ ದಿನಗಳಲ್ಲಿ ಆಶ್ರಯವಿತ್ತು ಅನ್ನವಿಟ್ಟು ವಿದ್ಯಾಭ್ಯಾಸ ಮುಂದುವರಿವರಿಸಲು ಕಾರಣರಾದ ರಾಯರ ಹೃದಯ ವೈಶಾಲ್ಯ, ಸರಸ ಸಜ್ಜನಿಕೆ, ರಸಿಕತೆಗಳನ್ನೂ ರಾಯರ ಶ್ರೀಮತಿಯವರ ಹೃದಯ ಶ್ರೀಮಂತಿಕೆ, ತಾಯ ಮಮತೆ, ಭೂದೇವಿಯಂತಹ ಔದಾರ್ಯಗಳನ್ನೂ ಸೊಗಸಾಗಿ ನಿರೂಪಿಸಿರುವರು.

ಪ್ರೊ. ವಿ. ಸೀ. ಯವರ ವ್ಯಕ್ತಿ ಚಿತ್ರಣಗಳು. ವರ್ಣನೆಗಳು. ಅನುಭವಗಳು ಮನಮುಟ್ಟುವಂತಿದೆ. ಈ ಮಾತಿಗೆ ನಿದರ್ಶನವಾಗಿ ಪ್ರಿ. ಸಿ. ಆರ್. ರೆಡ್ಡಿ, ಎನ್. ಎಸ್. ಸುಬ್ಬರಾವ್, ಬಿ. ಎಂ. ಶ್ರೀ. ಎಂ. ಹಿರಿಯಣ್ಣ ಇವರ ನುಡಿಚಿತ್ರಗಳನ್ನೇ ನೋಡಬಹುದು. ರಾಧಾಕೃಷ್ಣನ್‌ರವರ ಬೀಳ್ಕೊಡಿಗೆಯ ವರ್ಣನೆಯನ್ನಾಗಲೀ, ವಿಶ್ವಕವಿ ರವೀಂದ್ರರು ಮೈಸೂರಿಗೆ ಬಂದಾಗ ವಿದ್ಯಾರ್ಥಿ ಮಿತ್ರರೊಂದಿಗೆ ಹೋಗಿ ಅವರನ್ನು ಸಂದರ್ಶಿಸಿದ ಭಾಗವನ್ನಾಗಲೀ, ಅಂದಿನ ಮೈಸೂರಿನ ಚೆಲುವನ್ನು ಭಾವಪರವಶರಾಗಿ ವರ್ಣಿಸುವ (ಪುಟ ೨೪೬–೨೪೯) ಭಾಗವನ್ನಾಗಲೀ ನೋಡಬಹುದು. ಕಾಶಿಗೆ ಹೊರಟಾಗಿನ ಪ್ರವಾಸಾನುಭವಗಳ ವಿವರಣೆಯನ್ನು ನೋಡಬಹುದು. ಇಲ್ಲೆಲ್ಲಾ ಪ್ರೊ. ವಿ. ಸೀ. ಯವರ ಚಿತ್ತಾಕರ್ಷಕ ಶೈಲಿ ಓದುಗನನ್ನು ಮೈಮರೆಸುತ್ತದೆ.

ಒಂದು ವ್ಯಕ್ತಿಯ ಬದುಕಿನ ಒಂದು ಘಟ್ಟದ ಅನುಭವಗಳ ನೆನಕೆ ವ್ಯಕ್ತಿಗೇ ಪರಿಮಿತವಾಗಬಾರದು. ಒಂದು ವ್ಯಕ್ತಿತ್ವ ರೂಪಗೊಂಡ ಬಗೆ, ಅದರ ಅರಳುವಿಕೆಗೆ ಪ್ರೇರಣೆ ನೀಡಿದ ಸನ್ನಿವೇಶಗಳು. ಸಂದರ್ಭಗಳು. ವ್ಯಕ್ತಿಗಳ ಪುಸ್ತಕಗಳು, ನೇಹಗಳು – ಇವೆಲ್ಲವುಗಳ ಮುಕ್ತಮನದ ನಿರೂಪಣೆಯನ್ನು ಇತರರೂ ಓದಿ ಪ್ರೇರಣೆಯನ್ನು ಪಡೆಯಬಹುದು. ಆ ಸವಿದಿನಗಳ ಮಧುರ ಸ್ಮೃತಿಯನ್ನು ಮೆಲುಕು ಹಾಕಬಹುದು. ಈ ದೃಷ್ಟಿಯಲ್ಲಿ ಪ್ರೊ. ವಿ. ಸೀ. ಯವರ 'ಕಾಲೇಜ್ ದಿನಗಳು' ಸ್ವಾಗತಾರ್ಹ ಕೃತಿ.

**ವಿಚಾರ ಕಿರಣ:** 'ವಿಚಾರಕಿರಣ' ಕನ್ನಡ ಲೇಖಕಿಯರ ಸಂಘದವರು ನಡೆಸಿದ 'ವಿಚಾರ ವಿನಿಮಯ'ದ ಗ್ರಂಥಸ್ಥರೂಪ. ಇದರಲ್ಲಿ 'ಚಲನಚಿತ್ರಗಳ ಪ್ರಭಾವ–ಮಹಿಳೆಯರು'. 'ವಿವಾಹ– ಮಹಿಳೆ'. 'ರಾಷ್ಟ್ರ–ಮಹಿಳೆ'. 'ರಾಜಕೀಯವೆಂದರೆ ಭೀತಿ ಏಕೆ?' ಎಂಬ ನಾಲ್ಕು ಪ್ರಬಂಧಗಳಿವೆ. ಮೊದಲ ಲೇಖನದಲ್ಲಿ ಅನುಕರಣಶೀಲ ಸ್ತ್ರೀಯರಲ್ಲಿ ಸಿನಿಮಾ ಫ್ಯಾಷನ್ನಿನ ಪ್ರಭಾವ ಪ್ರಬಲವಾಗುತ್ತಿರುವುದು. ವೇಷ ಭೂಷಣಗಳು ಔಚಿತ್ಯದ ಎಲ್ಲೆ ಮೀರುತ್ತಿರುತ್ತಿರುವುದು, ಮಕ್ಕಳ ಮುಗ್ಧ ಮನಸ್ಸಿನ ಮೇಲೆ ಚಲನಚಿತ್ರಗಳು ದುಷ್ಪರಿಣಾಮ ಬೀರುತ್ತಿರುವುದು ಇತ್ಯಾದಿ ವಿಷಯಗಳ ಮೇಲೆ ವಿಚಾರ ಮಾಡಿರುವರು. ಎರಡನೆಯ ಲೇಖನದಲ್ಲಿ ಬಾಲ್ಯವಿವಾಹ. ತಡವಾದ ಮದುವೆ Late Marria-

ges, ಎರಡನೆ ಮದುವೆ. ವಿಧವಾ ವಿವಾಹ – ಇವುಗಳಿಂದ ಉದ್ಭವವಾಗುವ ಸಮಸ್ಯೆಗಳನ್ನೂ; ಉದ್ಯೋಗಸ್ಥ ವಿವಾಹಿತೆ ಹಾಗೂ ಆವಳ ಸಮಸ್ಯೆಗಳನ್ನೂ ದಿಢೀರ್ ಮದುವೆ, ಅಂತರ್ಜಾತೀಯ ಅಂತರ್ಮತೀಯ ವಿವಾಹಗಳಿಂದಾಗುವ ಪರಿಣಾಮಗಳನ್ನೂ ಸ್ವಾರಸ್ಯಪೂರ್ಣವಾಗಿ ಚರ್ಚಿಸಿರುವರು. ಸಮಸ್ಯೆಗಳನ್ನು ವಿಶ್ಲೇಷಿಸುವಾಗ ನವಿರಾದ ಹಾಸ್ಯದ ಬಳಕೆಯಾಗಿರುವುದು ಈ ಲೇಖನದ ವೈಶಿಷ್ಟ್ಯಗಳಲ್ಲೊಂದು. ಮೂರನೆಯ ಲೇಖನದಲ್ಲಿ ಮಹಿಳೆ ರಾಷ್ಟ್ರಕ್ಕೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಲ್ಲಿಸಿದ, ಸಲ್ಲಿಸುತ್ತಿರುವ, ಸಲ್ಲಿಸಬಹುದಾದ ಸೇವೆಯನ್ನು ಕುರಿತು ಸುದೀರ್ಘವಾಗಿ ಪ್ರಸ್ತಾಪಿಸಲಾಗಿದೆ. ಕೊನೆಯ ಲೇಖನದಲ್ಲಿ ಸ್ತ್ರೀಯರಿಗೆ ರಾಜಕೀಯ ಪ್ರಜ್ಞೆಯ ಕೊರತೆ ಇರುವುದರ ಬಗೆಗೆ ಅದರ ನಿವಾರಣೆಯ ಬಗೆಗೆ ಒಂದು ಚಿಕಿತ್ಸಕ ನೋಟವಿದೆ.

ಸ್ತ್ರೀಯರಿಗೆ ತಮ್ಮದೇ ಆದ ಕೆಲವು ಸಮಸ್ಯೆಗಳಿರುವುದನ್ನು 'ವಿಚಾರಕಿರಣ' ಮೊದಲಿಗೆ ಪ್ರಸ್ತಾಪಿಸಿ ಆ ಸಮಸ್ಯೆಗಳ ವಿಶ್ಲೇಷಣೆ ನಡೆಸಿ ಕನ್ನಡ ಲೇಖಕಿಯರ ಸಂಘದವರು ಸ್ತುತ್ಯರ್ಹವಾದ ಕಾರ್ಯ ಮಾಡಿರುವರು.

# ಪ್ರವಾಸ ಸಾಹಿತ್ಯ

## ಸಿ. ವೀರಣ್ಣ

ಪ್ರವಾಸ ಸಾಹಿತ್ಯ, ಸಾಹಿತ್ಯದ ಒಂದು ಅಂಗವಾಗಿ ರಸಾನುಭವವನ್ನು ಕೊಡುವುವುದಕ್ಕೇ ಸೀಮಿತವಾಗದೆ, ಲೇಖಕರು ಪ್ರವಾಸ ಮಾಡಿದ ನಾಡಿನ ಜನಾಂಗ, ಸಂಸ್ಕೃತಿ ಭೌತಿಕಾಭಿವೃದ್ಧಿಗಳ ಮಾಹಿತಿಗಳನ್ನೂ ಒದಗಿಸುತ್ತದೆ. ಲೇಖಕರು ತಾವು ಕಂಡದ್ದನ್ನು ವಸ್ತುನಿಷ್ಠವಾಗಿ, ಅಂಕೆಸಂಖ್ಯೆಗಳಿಂದ ನಿರೂಪಿಸುತ್ತಾ ಹೊರಟರೆ ಅದು ಕೇವಲ ವರದಿ ರೂಪವನ್ನು ತಾಳಿ, ಪ್ರವಾಸಕಥಾನಕವಾಗದೆ ಹೋಗುತ್ತದೆ. ಪ್ರವಾಸಾನುಭವ ವ್ಯಕ್ತಿಯ ಆಲೋಚನೆಯ ಬೆಳವಣಿಗೆಯನ್ನೂ ಸೂಚಿಸುತ್ತದೆ. ಅಂದರೆ ಒಂದು ವಿಧದಲ್ಲಿ ಲೇಖಕನ ಆತ್ಮಚರಿತ್ರೆಯೂ ಆಗುತ್ತದೆ. ಇಂತಹ ಪ್ರವಾಸ ಸಾಹಿತ್ಯದ ಮೌಲ್ಯ ಹೆಚ್ಚುವುದು, ಲೇಖಕರ ಸಂವೇದನಾ ಶೀಲತೆ, ಪ್ರವಾಸ ಮಾಡಿದ ನಾಡಿನಲ್ಲಿದ್ದ ಅವಧಿ, ಅಲ್ಲಿನ ಜನತೆಯೊಂದಿಗೆ ಬೆರೆಯಲು ಬೇಕಾದ ಭಾಷೆಯ ಅನುಕೂಲ ಇವುಗಳನ್ನೂ ಅವಲಂಬಿಸಿರುತ್ತದೆ.

ಈ ದೃಷ್ಟಿಯಿಂದ ಈ ವರ್ಷದ ಪ್ರವಾಸ ಸಾಹಿತ್ಯವನ್ನು ಗಮನಿಸಿ ಆ ಕೃತಿಗಳ ಸ್ಥೂಲ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಲಾಗಿದೆ.

**ನೆನಪಿನ ಸುಳಿಯಲ್ಲಿ ಲಂಡನ್** : ಡಾ॥ ಎಸ್. ಪಿ. ಶಂಕರ್ ಅವರು ಸಾಕಷ್ಟು ದೀರ್ಘಕಾಲ ಲಂಡನ್ನಿನಲ್ಲಿ ವೈದ್ಯಕೀಯ ವ್ಯಾಸಂಗಕ್ಕಾಗಿ ಕಳೆದು, ಲಂಡನ್ ನಗರದಲ್ಲಿನ ತಮ್ಮ ಅನುಭವಗಳನ್ನು ಇಲ್ಲಿ ನಿರೂಪಿಸಿದ್ದಾರೆ. ಈ ಕೃತಿಗೆ ಮುನ್ನುಡಿಯನ್ನು ಬರೆದ ಕೆ. ಶಿವರಾಮ ಕಾರಂತರು "ಅಲ್ಲಿಗೆ ಹೋಗಿ ಇದ್ದು ತೆರೆದ ಕಣ್ಣಿನಿಂದ ಬಿಚ್ಚು ಮನಸ್ಸಿನಿಂದ ಆ ನಗರವನ್ನು, ಪ್ರಜೆಗಳನ್ನು, ಆ ಮೂಲಕವಾಗಿ ಇಂಗ್ಲೆಂಡಿನ ಜನರನ್ನು ಅವರ ಸಂಸ್ಕೃತಿ ಶಿಷ್ಟಾಚಾರಗಳನ್ನು ತಿಳಿಯಲೆತ್ನಿಸಿದ್ದಾರೆ. ಅವರ ಪೂರ್ವ ಹಿನ್ನೆಲೆಯನ್ನು ತಿಳಿಯಲೆತ್ನಿಸಿದ್ದಾರೆ. ಅಳೆಯಲೆತ್ನಿಸಿದ್ದಾರೆ. ಎಲ್ಲಿ ಮೆಚ್ಚುಗೆ ಸಲ್ಲಬೇಕೋ ಅದನ್ನು ಧಾರಾಳವಾಗಿ ಸಲ್ಲಿಸಿ, ಸಲ್ಲಬೇಕಿಲ್ಲದಲ್ಲಿ ಬಿಗಿಹಿಡಿದು–ಸರಳದೃಷ್ಟಿಯಿಂದ ನಮಗೆ, ಆ ಜನರ ಜೀವನದ ಚಿತ್ರವನ್ನು ಒದಗಿಸಿ ಕೊಟ್ಟಿದ್ದಾರೆ. ಬರವಣಿಗೆ ತಿಳಿಯಾಗಿದೆ. ಒದಗಿಸಿರುವ ಚಿತ್ರಗಳು ನಿಷ್ಪಕ್ಷಪಾತದ್ದಾಗಿವೆ" ಎಂದು ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಚಿತ್ರಗಳನ್ನು ನೀಡುವಲ್ಲಿ ಶಂಕರ್ ಅವರ ದೃಷ್ಟಿ ನಿಷ್ಪಕ್ಷಪಾತವಾಗಿದೆ ಎಂಬುದು ನಿಜ. ಆದರೆ ಅದನ್ನು ನಿರೂಪಿಸುವಲ್ಲಿ ಯಶಸ್ಸು ಗಳಿಸಲಿಲ್ಲವೆನ್ನಿಸುತ್ತದೆ.

ಲೇಖಕರು ಲಂಡನ್ ನಗರದ ವಿಚಾರದಲ್ಲಿ ದೊರೆಯಬಹುದಾದ ಎಲ್ಲ ಸಾಮಗ್ರಿಯನ್ನೂ ಶ್ರಮದಿಂದ ಸಂಗ್ರಹಿಸಿ, ಅದನ್ನು ಅಚ್ಚುಕಟ್ಟಾಗಿ ವಿಭಾಗ ಮಾಡಿಕೊಂಡು ನಿರೂಪಿಸಿದ್ದಾರೆ. ವಿಷಯ ಸಂಗ್ರಹಣೆಯಲ್ಲಿ ತೋರಿದ ಆಸಕ್ತಿಯನ್ನು, ಅದರ ನಿರೂಪಣೆಯಲ್ಲಿ ತೋರದಿರುವುದರಿಂದ ಜನಜೀವನ, ನಡವಳಿಕೆಗಳನ್ನು ಕುರಿತ ವಿಚಾರಗಳು ಇಲ್ಲವಾಗಿವೆ. ಇದಕ್ಕೆ ಲೇಖಕರು ತಮ್ಮ ಕೃತಿಯ ಅಧ್ಯಾಯಗಳನ್ನು ಭೂಗತ ರೈಲ್ವೆ,

ಪತ್ರಿಕೆಗಳು, ಉದ್ಯಾನವನಗಳು, ಶಿಕ್ಷಣ, ಆರೋಗ್ಯ, ಸಂಚಾರವ್ಯವಸ್ಥೆ ಹೀಗೆಂದು ವಿಭಾಗಿಸಿಕೊಂಡು, ಅವುಗಳ ಸ್ಥೂಲ ಚಿತ್ರವನ್ನು ಕೊಡುವ ಪ್ರಯತ್ನ ಮಾಡಿರುವುದೂ ಕಾರಣವಾಗಿದೆ.

ಓದುಗರ ಅನುಕೂಲಕ್ಕೆಂದು ಲಂಡನ್ ಭೂಪಟವನ್ನೂ, ನಗರ ಇತಿಹಾಸವನ್ನೂ ತಿಳಿಸಿದ್ದಾರೆ. 'ನಗರ ರಚನೆ ಮತ್ತು ಆಡಳಿತ' ಈ ಅಧ್ಯಾಯದಲ್ಲಿ ಲಂಡನ್ನಿನ ಮುನಿಸಿಪಲ್ ಆಡಳಿತ ವಿಧಾನ, ಮುಖ್ಯ ಕಟ್ಟಡಗಳು, ಜನಸಂಖ್ಯೆ, ಮುಖ್ಯ ಸ್ಥಳಗಳನ್ನು ಪಟ್ಟಿ ಮಾಡಿದ್ದಾರೆ. ಮುಂದಿನ ಪ್ರೇಕ್ಷಣೀಯ ಸ್ಥಳಗಳು ಎಂಬ ಅಧ್ಯಾಯದಲ್ಲೂ ಪ್ರಖ್ಯಾತ ಲಂಡನ್ ಬುರುಜು, ಅಗ್ನಿಸ್ಮಾರಕ, ಪೋಸ್ಟ್ ಆಫೀಸ್ ಗೋಪುರ ಮೊದಲಾದವುಗಳ ರಚನೆಯಕಾಲ, ಉದ್ದ–ಅಳತೆಗಳನ್ನು ಮಾತ್ರ ತಿಳಿಸಿ, ಅವುಗಳನ್ನು ನೋಡಿ ತಮಗಾದ ಅನುಭವ, ಅವುಗಳೊಂದಿಗೆ ಜನತೆಗಿರುವ ಸಂಬಂಧ ಇವುಗಳನ್ನು ಮರೆಯುತ್ತಾರೆ.

ಕುಟುಂಬ ಜೀವನವನ್ನು ಕುರಿತು ಹೇಳುವಾಗ ಕೆಲವು ಉಪಯುಕ್ತ ಅಂಶಗಳನ್ನು ಗುರ್ತಿಸಿದ್ದಾರೆ. ಮಕ್ಕಳು ಹದಿನೆಂಟು ವಯಸ್ಕರಾದ ಕೂಡಲೇ ತಂದೆತಾಯಿಗಳಿಂದ ಬೇರೆಯಾಗುವುದು. ವಯಸ್ಸಾದವರಿಗೆ ಎಲ್ಲ ಅನುಕೂಲಗಳಿದ್ದರೂ ಪ್ರೀತಿಯ ಅಭಾವಕ್ಕಾಗಿ ಕೊರಗುವ ಸಂಗತಿ ಇವೇ ಮೊದಲಾದ ಕೌಟುಂಬಿಕ ವಿಚಾರಗಳನ್ನು ತಿಳಿಸಿದರೂ, ಹೊರಗಿನವರನ್ನು ಅಲ್ಲಿನ ಕುಟುಂಬದವರು ಹೇಗೆ ನಡೆಸಿಕೊಳ್ಳುತ್ತಾರೆಂಬುದನ್ನು ತಿಳಿಸಿದ್ದರೆ ಚೆನ್ನಾಗಿರುತಿತ್ತು.

ನಾಲ್ಕೈದು ವರ್ಷಗಳ ಕಾಲ ಶಿಕ್ಷಣ ಕ್ಷೇತ್ರದ ಪರಿಚಯವನ್ನು ಪಡೆದಿದ್ದ ಶ್ರೀಯುತರು ಅಲ್ಲಿನ ಶಿಕ್ಷಣ ಸಮಸ್ಯೆಗಳನ್ನು ವಿವರಿಸಿದ್ದರೆ ಉತ್ತಮವಾಗುತ್ತಿತ್ತು. ಸ್ವತಃ ವೈದ್ಯರಾಗಿ ಆರೋಗ್ಯವ್ಯವಸ್ಥೆಯ ಬಗ್ಗೆ ಆಳವಾಗಿ ವಿವೇಚಿಸಲು ಸಾಧ್ಯವಾಗಬಹುದಾಗಿದ್ದರೂ, ಅಲ್ಲಿನಪ್ರಮುಖ ಆಸ್ಪತ್ರೆಗಳನ್ನು ಮಾತ್ರ ಹೆಸರಿಸಿ, ಲಂಡನ್ನಿನಲ್ಲಿ ಆರೋಗ್ಯವ್ಯವಸ್ಥೆ ರಾಷ್ಟ್ರೀಕರಣವಾಗಿರುವ ವಿಚಾರವೊಂದನ್ನು ಮಾತ್ರ ತಿಳಿಸುತ್ತಾರೆ.

ಈ ಕೃತಿಯಲ್ಲಿ ಲಂಡನ್ನನ್ನು ಕುರಿತು ವಿವರಗಳನ್ನು ತಿಳಿಯಬಯಸುವವರಿಗೆ ಅನುಕೂಲ ಒದಗಿಸಿದ್ದಾರೆ. ಆದರೆ ತಮ್ಮ ಅನುಭವದ ಸ್ವಂತಿಕೆಯ ಮುದ್ರೆಯನ್ನು ಬರವಣಿಗೆಯಲ್ಲಿ ಲೇಖಕರು ಮೂಡಿಸದೆ ಇರುವುದರಿಂದ ಸರಕಾರ ಹೊರತರುವ ಮಾರ್ಗದರ್ಶಿ ಕೃತಿಯಂತೆ ಇದು ನಮಗೆ ಕಾಣಿಸುತ್ತದೆ.

**ಇತಾಲಿಯಾ ನಾನು ಕಂಡಂತೆ** (ಕು. ಶಿ. ಹರಿದಾಸಭಟ್ಟ): ತಮ್ಮ ಪ್ರವಾಸ ಮುಗಿದು ಎಂಟು ವರ್ಷಗಳಾದ ನಂತರ ಬರೆದ ಈ ಪ್ರವಾಸ ಕಥನವನ್ನು ಕುರಿತು ಲೇಖಕರೇ "ಎಂಟು ವರ್ಷಗಳ ಬಳಿಕ ಬರೆಯುತ್ತಿರುವುದರಿಂದ ಮಂಜು ಮುಸುಕಿದ ನೆನಪಿನ ರಾಜ್ಯದಲ್ಲಿ ಅಲೆದಾಡಬೇಕಾಯಿತು. ಡೈರಿಯ ಚುಟುಕು ಚೂರುಗಳಿಗೆ ಜೀವದಾನ ಮಾಡಬೇಕಾಯಿತು" ಎಂದು ಹೇಳಿಕೊಂಡು, ತಾವು ಕಂಡ ಅಂದಿನ ಚಿತ್ರವನ್ನು ಬರೆದು ನಿಲ್ಲಿಸಿರುವ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ.

ತಮ್ಮ ಪ್ರವಾಸದ ಆರಂಭದಲ್ಲಿ ಹಿಂದಿರುಗಬೇಕೆಂದುಕೊಂಡವ್ದರ ಚಿತ್ರಣ ನಾಟಕೀಯವಾಗಿದೆ. ಕೈರೋದಲ್ಲಿ ಒಂಟೆಯ ಮೇಲೆ ಕುಳಿತದ್ದು, ಕಾಲುವೆಗಳಲ್ಲಿ ಬರುವ ಹಡಗುಗಳ ಚಿತ್ರ-ಇವನ್ನು ಉತ್ತಮವಾಗಿ ನೀಡಿದ್ದಾರೆ. ವಿದೇಶಗಳಲ್ಲಿ ಶಾಖಾಹಾರ ದೊರೆಯದೆ ತಮಗುಂಟಾದ ತೊಂದರೆಯನ್ನು ಬಹಳ ಸಲ ಒತ್ತಿಹೇಳುವ ಅವಶ್ಯಕತೆ ಇರಲಿಲ್ಲವೆನ್ನಿಸುತ್ತದೆ. ರೋಂ ನಗರದ ಪ್ರವಾಸದ ವರ್ಣನೆ ತೀರಾ ಸಪ್ಪೆಯಾಗಿದೆ.

ತಾವು ಅಧ್ಯಯನ ಮಾಡಲು ಹೋದ 'ಇಸ್ವೆ' ವಿದ್ಯಾಕೇಂದ್ರದ ಪಾಠ ವ್ಯವಸ್ಥೆ ಸಹಾಭ್ಯಾಸಿಗಳ ಹೆಸರು. ದೇಶ, ಸ್ವಭಾವಗಳ ವಿವರವನ್ನು ಕೊಡುತ್ತಾರೆ. ಇತಾಲಿಯಾ ಉತ್ತರ–ದಕ್ಷಿಣ ಪ್ರಾಂತಗಳಿಗಿರುವ ಆರ್ಥಿಕ ವ್ಯತ್ಯಾಸಗಳನ್ನು ಕುರಿತ ಸರಕಾರದ ಅಂಕಿ ಅಂಶಗಳನ್ನೂ, ಸರ್ಕಾರ ಅದರ ನಿವಾರಣೆಗೆ ಮಾಡಿದ ಯೋಜನಾ ವಿವರಗಳನ್ನೂ ಅನಗತ್ಯವಾಗಿ ಲಂಬಿಸಿದಂತೆ ಆಗಿದೆ. ಆದರೆ ಸರ್ಕಾರದ ಅಭಿವೃದ್ಧಿ ಯೋಜನೆಗಳಲ್ಲಿ ವಿಶ್ವವಿದ್ಯಾಲಯದ ಅಧ್ಯಾಪಕರ ಸಕ್ರಿಯ ಪಾತ್ರವನ್ನು ಗಮನಿಸಿ. ನಮ್ಮಲ್ಲೂ ವಿಶ್ವವಿದ್ಯಾಲಯದ ಅಧ್ಯಾಪಕರು ಸಮಕಾಲೀನವಾಗಿ ಬದುಕಬೇಕೆಂದು ಆಶಿಸುತ್ತಾರೆ.

ಇತಾಲಿಯಾದ ಆರ್ಥಿಕ ಪವಾಡ ಕ್ಷೇತ್ರಗಳಾದ 'ಈರಿ' ಮತ್ತು 'ಏನಿ' ಸಂಸ್ಥೆಗಳ ಆಡಳಿತ ಮತ್ತು ಉತ್ಪಾದನಾ ವಿವರಗಳನ್ನು ನೀಡುತ್ತಾರೆ. ಇಂತಹ ಸಾಧನೆಯ ಬಗ್ಗೆ "ಇಲ್ಲಿ ಅಮೆರಿಕದ ಸಂಘಟನೆಯ ಪ್ರಭಾವ ಪೂರ್ತ ಬಿದ್ದಿರುವುದರಿಂದಲೇ ಇಷ್ಟು ಕ್ಷಿಪ್ರ ಪ್ರಗತಿ ಸಾಧ್ಯವಾಯಿತು" ಎಂಬ ತೀರ್ಮಾನವನ್ನು ತೆಗೆದುಕೊಳ್ಳುವಾಗ. ಇತಾಲಿಯಾ ಜನತೆಯ ಕ್ರಿಯಾಶೀಲತೆಯನ್ನೂ ಪರಿಗಣಿಸಬೇಕಾಗಿತ್ತೆನ್ನಿಸುತ್ತದೆ. ಅರ್ಥಶಾಸ್ತ್ರದ ಅಧ್ಯಯನಕ್ಕಾಗಿ ಹೋದ ಲೇಖಕರಿಗೆ ಬಹುಪಾಲು ಕೈಗಾರಿಕಾ ಕ್ಷೇತ್ರಗಳನ್ನು ಸಂದರ್ಶಿಸುವುದರಲ್ಲೇ ಹೆಚ್ಚು ಸಮಯ ಮೀಸಲಾಗಿರುವುದರಿಂದ. ಪೀಸಾಗೋಪುರ. ಡವಿಂಚಿ ಕಲಾಕೃತಿಗಳಿಗೆ ಸಂಬಂಧಿಸಿದ ವಿವರಗಳ ಅನುಭವ ನೀರಸವಾಗಿದೆ.

ಅಮೆರಿಕಾ ವಿಶ್ವ ಆಹಾರ ಸಮ್ಮೇಳನದಲ್ಲಿ ಭಾಗವಹಿಸಿದ್ದ ಲೇಖಕರು ಅಲ್ಲಿನ ವಿದ್ಯಾಭ್ಯಾಸದ ಸಾಧನೆಯನ್ನು "ಕೈತುಂಬ ಸಂಬಳ ಕೊಡುವ ಈ ಉದ್ಯಮಕ್ಕೆ ಸೇರಿಕೊಂಡರೆ. ಐದು ಹತ್ತು ವರ್ಷಗಳಲ್ಲಿ ಸ್ವಂತ ಮನೆ ಕಟ್ಟಿ ಕೊಳ್ಳಬಹುದು. ಬ್ಯಾಂಕಿನಲ್ಲಿ ಸೊನ್ನೆಗಳ ಲೆಕ್ಕ ಇಡಬಹುದು" ಎಂದು ಹೇಳಿ "ವಿದ್ಯಾವಂತನಿಗೆ ಅಮೆರಿಕ ನಿರ್ವಿಘ್ನ ಪರಿಸರವನ್ನು ಒದಗಿಸಿದೆ" ಎಂದೂ. "ಜ್ಞಾನಮಂದಿರಗಳನ್ನು ಸ್ಯಮಂತಕ ಮಣಿಗಳಂತೆ ಕಾಪಾಡುತ್ತಿರುವ ದೃಶ್ಯಜಗತ್ತಿನ ಅದ್ಭುತಗಳಲ್ಲೊಂದು " ಎಂದೂ ವಿಸ್ಮಯ ಪಡುತ್ತಾರೆ. ಈ ಪ್ರಗತಿಯನ್ನು ಮುಟ್ಟುವಾಗ ನಮ್ಮ ಅಧ್ಯಾಪಕರನ್ನು ಹೀನಾಯವಾಗಿ ತೆಗಳುತ್ತಾರೆ. ಅರ್ಥಶಾಸ್ತ್ರಜ್ಞರಾಗಿ ಎರಡೂ ದೇಶಗಳ ಸಂಪನ್ಮೂಲಗಳು. ಅದರಿಂದ ವ್ಯಕ್ತಿಯ ಬೆಳವಣಿಗೆಯ ಮೇಲಿನ ಪ್ರಭಾವ ಇವುಗಳನ್ನು ಅರಿತೂ ಹೀಗೆ ಆಲೋಚಿಸಿದ್ದು ಆಶ್ಚರ್ಯವೆನ್ನಿಸುತ್ತದೆ.

ಪ್ರವಾಸದ ಅವಧಿಯಲ್ಲಿ ತಮ್ಮ ಜೇಬಿನಲ್ಲಿರುವ ಹಣವನ್ನು ಜೋಪಾನ ಮಾಡುವುದಕ್ಕೆ ತಾವು ಪಟ್ಟ ಶ್ರಮದ ವರ್ಣನೆಯು ಬಹಳ ಸಾರಿ ಬಾರದಂತೆ ನೋಡಿಕೊಳ್ಳ

ಬಹುದಾಗಿತ್ತು. ಲೇಖಕರಿಗೆ ಬದುಕಿನ ಇತರ ಕ್ಷೇತ್ರಗಳ ಪರಿಚಯವಾಗದೆ ಹೋಗಿ, ಜನಜೀವನಕ್ಕೆ ಸಂಬಂಧಿಸಿದ ವಿವರಗಳು ಗೌಣವಾಗಿ ಬಂದಿವೆ.

**ಗೋಳದ ಮೇಲೊಂದು ಸುತ್ತು** : (ಟಿ. ಕೆ. ರಾಮರಾವ್) ಲೇಖಕರ ಸುಮಾರು ಎರಡೂವರೆ ತಿಂಗಳ ಕಾಲದ ಪ್ರವಾಸಾನುಭವವನ್ನು ಕುರಿತದ್ದು. ಒಂದು ತಿಂಗಳಿಗೂ ಹೆಚ್ಚು ಕಾಲ ಅಮೆರಿಕಾದಲ್ಲಿ ಕಳೆದದ್ದರಿಂದ ಅಲ್ಲಿನ ವಿವರಗಳು ಹೆಚ್ಚಾಗಿವೆ. ಯೂರೋಪ್ ಮತ್ತು ಏಷ್ಯಾವನ್ನು ಕುರಿತ ವಿಚಾರಗಳು ಅಲ್ಲಿನ ರಾಜಧಾನಿಗಳ ವೀಕ್ಷಣೆಯ ಮೂಲಕ ದೊರೆತದ್ದೆಂದು ಲೇಖಕರೇ ತಿಳಿಸುತ್ತಾರೆ. ಈ ಮೂವತ್ತು ಪರಿಚ್ಛೇದಗಳೂ ಶ್ರೀಸಾಮಾನ್ಯನನ್ನು ವಿಶೇಷತಃ ಗಮನದಲ್ಲಿಟ್ಟುಕೊಂಡಿದೆ ಎಂದು ಭಾವಿಸಿ, ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿದವು. ಪರಿಚ್ಛೇದಗಳ ತಲೆಬರಹಗಳು ಮತ್ತು ನಿರೂಪಣೆಯಲ್ಲಿ ತೋರಿರುವ ಜಾಣ್ಮೆ ಉತ್ತಮವಾಗಿದೆ.

ಪ್ರವಾಸದ ಆರಂಭಕ್ಕೆ ವೀಸಾ, ಡಿಕ್ಲರೇಷನ್, ವಿನಿಮಯ ಇವುಗಳಿಂದುಂಟಾದ ತೊಂದರೆಯನ್ನು ಕುರಿತ ಕಹಿ ಉದ್ವೇಗಪೂರಿತವಾಗಿದೆ. ಅಥೆನ್ಸ್ ಮತ್ತು ರೋಂ ಗಳನ್ನು ಸಂದರ್ಶಿಸಿ ಅಲ್ಲಿನ ಜನಜೀವನದ ಕೆಲವು ಸಂಗತಿಗಳನ್ನು ಒದಗಿಸುತ್ತಾರೆ. ಅಲ್ಲಿನ ಜನ ಪೇಪರ್ ಭಿಕ್ಷುಕರು, ರೋಂಗೆ ಹಿಂತಿರುಗುತ್ತೇವೆಂದು ಫೌಂಟನ್ನಿಗೆ ಕಾಸುಗಳನ್ನೆಸೆಯುವ ನಂಬಿಕೆ, ಅಥೆನ್ಸಿನಲ್ಲಿ ರಾತ್ರಿ ಅಶ್ಲೀಲವಿಲ್ಲವಾದರೆ, ರೋಂನಲ್ಲಿರುವಷ್ಟು ರಸ್ತೆ ಪ್ರಣಯ ನಗ್ನನೃತ್ಯ ಮುಂತಾದ ವಿಚಾರಗಳನ್ನು ನಿರೂಪಿಸಿ, ಅಲ್ಲಿನ ಜನಕ್ಕೆ ಇಂಡಿಯಾದ ಬಗ್ಗೆ ಅನಾದರವಿದೆಯೆಂದೂ ಹೇಳುತ್ತಾರೆ.

ಹಾಗೆಯೇ ಸ್ವಿಟ್ಜರ್ಲೆಂಡಿನ ಚಿಕ್ಕ ನಾಡಿನ ದೊಡ್ಡ ಜನ. ನಾಲ್ಕು ರಾಷ್ಟ್ರಭಾಷೆಗಳಿದ್ದರೂ ಸಮಸ್ಯೆ ಇಲ್ಲದ ಬದುಕು. ಭಾರತೀಯ ರಾಯಭಾರ ಕಚೇರಿಯ ದುರವಸ್ಥೆ. ಜನರ ಜೀವನದಲ್ಲಿ ಕೆಂಪು ಹೂ ಪ್ರೀತಿಯ ಸಂಕೇತವಾಗಿದೆ ಎಂಬ ಅಂಶಗಳನ್ನು ಗಮನಿಸಿದ್ದಾರೆ.

ಪ್ಯಾರಿಸ್ ಜನತೆ ಭೋಗಜೀವಿಗಳಾದರೂ ರೋಂನ ಹಾಗೆ ರೋಡ್‌ರೋಮಾನ್ಸ್ ಬಯಸದವರು. ಕುಡುಕತನಕ್ಕೆ ಎತ್ತಿದಕೈ, ಹೂಗಳ ಮೇಲೆ ಅತಿಪ್ರೀತಿ, ಸಾರ್ವಜನಿಕ ಶೌಚಗೃಹವಿಲ್ಲ ಮೊದಲಾದ ಅಂಶಗಳನ್ನು ತಾವಿದ್ದ ಒಂದೆರಡು ದಿನಗಳಲ್ಲಿ ಸಂಗ್ರಹಿಸಿದ್ದಾರೆ.

ಇಟಲಿ ಫ್ರಾನ್ಸ್‌ಗಳಿಂದ ವಿದೇಶೀ ವಿನಿಮಯ ಪಡೆಯುವಾಗ ಉಂಟಾದ ಅನುಭವ ಭಾರತವೇ ಮೇಲು ಎನ್ನುವಂತೆ ಮಾಡಿದೆ.

ಲಂಡನ್ ನಗರ ಹೇಳಿಕೊಳ್ಳಲು ಅದರ ಗತೇತಿಹಾಸಕ್ಕೇ ಮೊರೆಹೋಗಬೇಕೆಂದು ಹೇಳಿ, ಅಲ್ಲಿನ ಆರ್ಥಿಕ ಮುಗ್ಗಟ್ಟು, ಅದರಿಂದಾದ ಜನರಲ್ಲಿ ಬೆಳೆದಿರುವ ಚೌಕಾಶಿ ವ್ಯವಹಾರದ ಬೆಳವಣಿಗೆ, ಜೇಬುಗಳ್ಳರು ಮೊದಲಾದ ವಿವರಗಳನ್ನು ನೀಡಿ. "ಕಂದಾಚಾರಗಳಿಗೆ ಜೋತುಬಿದ್ದಿರುವ ನಾಡು" ಎಂಬ ತೀರ್ಮಾನವನ್ನು ಪ್ರವಾಸದ ಅಲ್ಪಾವಧಿಯಲ್ಲಿ, ಯಾವ ಸಾಂದರ್ಭಿಕ ವಿವರವೂ ಇಲ್ಲದೆ ಕೊಡುವ ಸಾಹಸ ಮಾಡಿದ್ದಾರೆ.

ನ್ಯೂಯಾರ್ಕ್ ನಗರವನ್ನು ಕುರಿತು ಇಂತಹ ನಗರ ಮತ್ತೊಂದಿಲ್ಲ ಎಂದು ಹೊಗಳಿದರೆ, ಇಲ್ಲಿ ಸಮಸ್ತ ವರ್ಗದ ಪ್ರಜೆಗಳನ್ನೂ ತೃಪ್ತಿ ಪಡಿಸಿದ್ದಾರೆ ಎಂಬ ಆತುರದ ತೀರ್ಮಾನಕ್ಕೆ ಬರುತ್ತಾರೆ. ಅಲ್ಲಿನ ಸಾರಿಗೆ ವ್ಯವಸ್ಥೆ, ಕಾರುಗಳ ಬಾಹುಳ್ಯವನ್ನು ವರ್ಣಿಸಿ ನಮ್ಮ ರಸ್ತೆ ಸಾರಿಗೆಯನ್ನು ತೆಗಳಿ ಕೈತೊಳೆದುಕೊಂಡಿದ್ದಾರೆ.

ಅಮೆರಿಕದ ನೀಗ್ರೋಗಳನ್ನು ಕುರಿತು "ಅವರ ರೂಪ ಆಕಾರಗಳಿಗೆ ತಕ್ಕಂತೆ ಜನ ನಿಬಿಡ ಸ್ಥಳಗಳಲ್ಲಿ ಅವರು ಹಾಕುವ ಹಲ್ಲೆ, ಕೂಗು, ಅಸಭ್ಯ ನಡತೆಗಳನ್ನು ನೋಡಿ ನಮಗೆ ಅತೀವ ಜುಗುಪ್ಸೆಯಾಗುತ್ತದೆ. ಆದರೆ ಬಿಳಿಯ ಅಮೆರಿಕನ್ ಇವೆಲ್ಲವನ್ನೂ ಸಹಿಸುತ್ತಾನೆ. ನೀಗ್ರೋ ಮಕ್ಕಳು ನಗರದ ಗಾಂಭೀರ್ಯವನ್ನು ಕಲಕುವಂತೆ ಅರಚಾಡುವುದನ್ನು ನೋಡಿ ಮುಗುಳುನಗೆ ಬೀರುತ್ತಾನೆ. ಮುಂದುವರಿದ ರಾಷ್ಟ್ರದ ಪ್ರಜೆಯಾಗಿ ಮುಂದುವರಿದ ನಾಗರೀಕತೆಯನ್ನೇ ಪ್ರದರ್ಶಿಸುತ್ತಾನೆ". ಇಷ್ಟು ಮಾತ್ರವೇ ಅಲ್ಲದೆ "ಅವರು ಸೌಜನ್ಯರಹಿತರು, ಕಳ್ಳರು, ಕುಡುಕರು, ಇವರ ಹಕ್ಕುಗಳಿಗಾಗಿಯೇ ಇಬ್ಬರು ರಾಷ್ಟ್ರಾಧ್ಯಕ್ಷರು ಪ್ರಾಣ ಅರ್ಪಿಸಿದ್ದಾರೆ. ಇಷ್ಟಾಗಿ ಈ ಜನರಿಗೆ ಇನ್ನೇನು ಬೇಕೆಂಬುದು ನನಗೆ ಅರ್ಥವಾಗಿಲ್ಲ" ಎಂದು ಹೇಳಿ ಅವರನ್ನು ಕುರಿತು ನಮಗೆ ತಲಪಿರುವ ಸುದ್ದಿ ತಪ್ಪು, ಅವರಿಗೆ ನಮ್ಮ ಸಹಾನುಭೂತಿ ಅನಗತ್ಯವೆಂದು ಬುದ್ಧಿ ಹೇಳುತ್ತಾರೆ. ಈ ಮಾತುಗಳನ್ನು ಅಮೆರಿಕಾ ವರ್ಣ ವಿಭೇದ ಸಮಸ್ಯೆಯನ್ನು ಐತಿಹಾಸಿಕವಾಗಿ ಬಲ್ಲ ಯಾವನಾದರೊಬ್ಬ ನಿಜವಾದ ಅಮೆರಿಕನ್ನನಿಗೆ ಹೇಳಿದ್ದರೆ, ಭಾರತೀಯರು ಬಹಳ ಕಾಲ ದಾಸರಾಗಿದ್ದುದೇಕೆಂದು ಅರ್ಥಮಾಡಿಕೊಳ್ಳುತ್ತಿದ್ದನೆಂದೆನಿಸುತ್ತದೆ. ಅಮೆರಿಕದ ಬಿಳಿಯರನ್ನು ಸಂತೃಪ್ತಗೊಳಿಸಲು ಈ ಮಾತುಗಳನ್ನಾಡುವ ಆವಶ್ಯಕತೆ ಇರಲಿಲ್ಲ.

ಮುಂದುವರಿದ ನಾಗರಿಕ ಸಮಾಜದಲ್ಲೇ ಇರುವ ಅಶ್ಲೀಲ ಚಲನಚಿತ್ರ, ಅವುಗಳ ಕಾಮುಕ ಪ್ರೇಕ್ಷಕರು, ಲೈಂಗಿಕ ಸಾಹಿತ್ಯದ ಅಂಗಡಿಗಳು, 'ನನ್ನ ಸೇವೆ ಬೇಕೆ?' ಎಂದು ಕೇಳುವ ಹುಡುಗಿಯರು, ಜೇಬುಗಳ್ಳರು ಇವುಗಳ ವಿವರ ನೀಡಿ, ಇದು ಇಲ್ಲಿ ಸಹಜವೆನ್ನುತ್ತಾರೆಂದು ತಪ್ಪಿಸಿಕೊಳ್ಳುತ್ತಾರೆ. ನೆವಾಡ ಪ್ರಾಂತದ ರಿನೊ ನಗರ ಮತ್ತು ಲಾಸ್‌ವೇಗಸ್‌ಗಳನ್ನು ಅಮೆರಿಕಾದ ಕ್ಯಾನ್ಸರ್ ಎಂದು ಅಲ್ಲಿನ ಸಮಾಜಶಾಸ್ತ್ರಜ್ಞರು ಭಾವಿಸಿದ್ದರೆ, ಇವರು ಮೆತುವಾಗಿ ಅಮೆರಿಕನ್ನರು ಇದು ಕ್ಷುದ್ರವೆಂದು ಭಾವಿಸಿಲ್ಲ ಎನ್ನುತ್ತಾರೆ. ಇವರ ಅಮೆರಿಕ ಪ್ರವಾಸದ ಕೊನೆಯಲ್ಲಿ ಅಲ್ಲಿಯೇ ಇರುವ ತಮ್ಮ "ಪ್ರವಾಸ ಕಥನದಲ್ಲಿ ಅಮೆರಿಕವನ್ನು ಅಲ್ಲಗಳೆಯುವುದು ಬೇಡ..." ಎಂಬ ಸೂಚನೆ ಇತ್ತದ್ದನ್ನು ಪಾಲಿಸಿಕೊಂಡು ಬಂದಿದ್ದಾರೆ.

ಜಪಾನಿನ ರಾಜಧಾನಿ ಟೋಕಿಯೋನಲ್ಲಿ ಕಂಡ ಜನಜೀವನವನ್ನು ಮೆಚ್ಚಿಕೊಂಡು. ಜನ ಸೌಜನ್ಯಶೀಲರು. ತಾಳ್ಮೆ ಉಳ್ಳವರು. ಬಡವರೂ ವಂಚಿಸರು. ಹಳೆಯದರ ಪ್ರೀತಿಯುಳ್ಳವರು ಎಂದು ಹೇಳಿ ಭಾರತ ಜಪಾನನ್ನು ಸರ್ವವಿಧದಲ್ಲೂ ಅನುಕರಿಸುವುದು ಕ್ಷೇಮ ಎಂಬ ಸಂದೇಶವನ್ನು ನೀಡುತ್ತಾರೆ. ಜಗತ್ತಿನ ಸ್ವೇಚ್ಛಾ ಮಾರುಕಟ್ಟೆಗಳಾದ ಹಾಂಕಾಂಗ್ ಮತ್ತು ಸಿಂಗಪುರಗಳಲ್ಲಿನ ವ್ಯವಹಾರವನ್ನು ಕಂಡು "ಯೂರೋಪ್ ಮತ್ತು ಅಮೆರಿಕಾದಲ್ಲಿ ನಿಸ್ಪೃಹತೆ, ಕ್ರಮಬದ್ಧತೆ, ಸತ್ಯಸಂಧತೆ ಕಾಣಬರುತ್ತದೆ... ಏಷ್ಯಾಕ್ಕೆ

ಅಡಿಯಿಟ್ಟು ಜಪಾನ್ ಹೊಕ್ಕರೆ ಪ್ರಾಮಾಣಿಕತೆಯನ್ನು ಸಜೀವವಾಗಿ ಕಾಣುತ್ತೇವೆ ಅಲ್ಲಿಂದ ಬಂದು ಹಾಂಕಾಂಗ್‌ನಲ್ಲಿಳಿದರೆ ಸುಳ್ಳು, ಮೋಸ, ಕಳ್ಳತನ ಇವುಗಳ ಅನುಭವ ಪಡೆಯುತ್ತೇವೆ. ಈ ದುರ್ಗುಣಗಳು ಸಿಂಗಪುರದಲ್ಲಿ ಮತ್ತಷ್ಟು ಅಧಿಕವಾಗಿ ಬೆಳೆದಿರುವು ದನ್ನು ಕಾಣುತ್ತೇವೆ" ಎಂಬ ಸಾಧಾರಣೀಕರಣ ಸಾಧುವಲ್ಲವೆನ್ನಿಸುತ್ತದೆ.

ಸಿಂಹಳ ದ್ವೀಪವನ್ನು ಕುರಿತು 'ನೋಡಲು ಅರ್ಹವಾದ ದ್ವೀಪವೆಂದು ಯಾರಿಗೂ ಹೇಳುವುದಿಲ್ಲ', 'ಜನ ಸ್ವಾರ್ಥಿಗಳು–ಜನರ ಮುಖದಲ್ಲಿ ತೃಪ್ತಿ ಕಾಣಿಸುವುದಿಲ್ಲ' ಈ ಬಗೆಯ ತೀರ್ಮಾನಗಳು ವಿನಿಮಯದಲ್ಲಿ ಅವರಿಗಾದ ನಷ್ಟದ ಪ್ರಭಾವದಿಂದ ಬಂದಿರ ಬೇಕೆನ್ನಿಸುತ್ತದೆ.

ಭಾರತದಲ್ಲಿ ವಿದೇಶೀಯರಿಗೆ ತೋರಿಸಲು ಆಧುನಿಕ ಉನ್ನತ ಗೋಪುರಗಳನ್ನು ದೆಹಲಿ. ಬೊಂಬಾಯಿಗಳಲ್ಲಿ ಅಗತ್ಯವಾಗಿ ರಚಿಸಬೇಕೆಂದು ಹಾರ್ದಿಕವಾದ ಅಭಿಪ್ರಾಯ ವನ್ನು ನೀಡಿ. "ನನ್ನಲ್ಲಿ ಸೇರಿ ಹೋಗಿರುವ ವಿದೇಶೀ ವಸ್ತುಗಳನ್ನು ತನಿಖೆ ಮಾಡಲು ಕಾದಿರುವ ಕಸ್ಟಮ್ಸ್ ಅಧಿಕಾರಿಗಳನ್ನು ನೆನೆದುಕೊಂಡರೆ ಭೀತಿ ಮೂಡುತ್ತದೆ" ಎಂಬ ಸಂಕಟವನ್ನೂ ತೋಡಿಕೊಳ್ಳುತ್ತಾರೆ. ಬರವಣಿಗೆಯಲ್ಲಿ ಪಳಗಿರುವ ಲೇಖಕರು ಅನೇಕ ಕಡೆ ವಸ್ತುನಿಷ್ಠರಾಗಿದ್ದಿದ್ದರೆ ಕೃತಿಯ ಯಶಸ್ಸು ಹೆಚ್ಚುತ್ತಿತ್ತು ಎನ್ನಿಸುವುದು.

**ಗೆಜ್ಜೆಯ ಹೆಜ್ಜೆನುಡಿ**: (ಶ್ರೀಮತಿ ಚಂದ್ರಭಾಗಾದೇವಿ) ದಂಪತಿಗಳೀರ್ವರ ಕಲಾಯಾತ್ರೆಯನ್ನು ಕುರಿತ ಈ ಕೃತಿ ತಮ್ಮ ಮಕ್ಕಳಿಗೆ ಮತ್ತು ತಂದೆ ತಾಯಿಗಳಿಗೆ ಲೇಖಕಿಯರು ಬರೆದ ಪತ್ರಗಳ ಸಂಕಲನವಾಗಿದೆ.

ವಿದೇಶೀ ಪ್ರವಾಸವನ್ನು ಕುರಿತು "ಪರದೇಶಗಳ ಪ್ರವಾಸ ನಮ್ಮ ಎಷ್ಟು ವರ್ಷ ಗಳ ತಪಸ್ಸಿನ ಫಲ– ಶೂನ್ಯ ಹಂಬಲದ ಅಂತ್ಯ, ಉದಾತ್ತ ಧ್ಯೇಯಗಳ ಪರಿಣಾಮ" ಎಂದು ಹೇಳುವ ಮಾತುಗಳು ಓದುಗರು ಸಹಾನುಭೂತಿಯನ್ನು ಸೂಚಿಸುವಂತಿವೆ.

ಜಿನೀವಾದಿಂದ ಬರೆದ ಪತ್ರಗಳಲ್ಲಿ "ಇಲ್ಲಿ ನಾಯಿಗಳು ಬೊಗಳುವುದಿಲ್ಲ, ಮಕ್ಕಳು ಅಳುವುದಿಲ್ಲ. ಜನರು ಒಬ್ಬರೊಡನೊಬ್ಬರು ಮಾತನಾಡುವುದಿಲ್ಲ" ಈ ರೀತಿಯಾದ ಮಾತುಗಳಿಗೆ ಅರ್ಥವೇನೋ ಗೊತ್ತಾಗುವುದಿಲ್ಲ. ಜಿನೀವಾದಲ್ಲಿ ಹತ್ತು ದಿನಗಳ ಕಾಲ ವಿದ್ದರೂ ಅಲ್ಲಿನ ಕಲಾಭಿರುಚಿ ನೃತ್ಯ ಪ್ರದರ್ಶನಗಳನ್ನು ಕುರಿತ ವಿವರಗಳಿಲ್ಲ. ಫ್ರಾನ್ಸಿನ ಜನತೆ ಬೆರೆಯುವುದು ಸುಲಭ. ಕಲೆ ಅವರ ಜೀವನದ ಉಸಿರು. ಕಲಾವಿದರನ್ನು ಕಂಡರೆ ಅವರಿಗೆ ಅಪಾರ ಗೌರವ ಮೊದಲಾದುವನ್ನು ಗಮನಿಸಿದ್ದಾರೆ.

ಪ್ರವಾಸದ ಅವಧಿಯ ಬಹುಕಾಲ ಲಂಡನ್ನಿನಲ್ಲಿ ಕಳೆದದ್ದರಿಂದ. ಅಲ್ಲಿನ ಜನಜೀವ ನದ ವಿವರಗಳನ್ನು ಕೊಡುತ್ತಾರೆ. ಭಾರತೀಯ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನಗಳು ಅನುಪಮವಾದುವೆಂಬುದು ಲೇಖಕಿಯರ ಅಭಿಮಾನ. ಎಲ್ಲ ಭಾರತೀಯರ ಬಂಡವಾಳ ವಾದ ಧರ್ಮ. ಶಾಂತಿಪ್ರಿಯತೆ. ವೇದಾಂತಗಳನ್ನು ಬಾಯ್ತುಂಬ ಹೊಗಳುವುದನ್ನು ಅನೇಕ ಬಾರಿ ಮಾಡಿ ಋಣ ತೀರಿಸಿದ್ದಾರೆ.

ತಮ್ಮ ಪ್ರವಾಸಕಾಲದಲ್ಲಿ ನೃತ್ಯ ಪ್ರದರ್ಶನ–ಉಪನ್ಯಾಸಗಳು ಹೇಗೆ ಅಲ್ಲಿನ ಜನರ ಮೆಚ್ಚುಗೆಗೆ ಪಾತ್ರವಾದುವೆಂಬುದರ ವಿವರಕ್ಕೆ ಅಲ್ಲಿನ ಪತ್ರಿಕಾ ವಿಮರ್ಶಕರ ಮೆಚ್ಚುಗೆಯ ಮಾತುಗಳನ್ನು ಉದ್ಧರಿಸುವುದು, ಯಾವ ವೈವಿಧ್ಯ ಹೇಳಿಕೆಗಳೂ ಇಲ್ಲದೆ ಒಂದೇ ರೀತಿಯಾಗಿ ಬ್ಯಾಲೆಯನ್ನು "ಶ್ರೀಮಂತಿಕೆಯ ಕೃತಕರೂಪದ ಕಲೆ" ಎಂಬ ವಿವಾದಾಸ್ಪದವಾದ ಹೇಳಿಕೆಯೂ ಇಲ್ಲಿದೆ.

ತಮ್ಮ ಪ್ರವಾಸದ ಅವಧಿಯಲ್ಲಿ ಪ್ರದರ್ಶಿಸಿದ ಬುದ್ಧೋದಯ, ರಾಣಿ ಶಾಂತಲಾ, ಗೀತಗೋವಿಂದ, ಕಾಮದಹನ, ಈ ನೃತ್ಯ ನಾಟಕಗಳನ್ನು ಸಿದ್ಧಪಡಿಸಲು ತಾವು ನಡೆಸಿದ ಅಭ್ಯಾಸ, ಪಾತ್ರ ವರ್ಗದ ತರಬೇತು, ಅಮೆರಿಕನ್ ಕಲಾವಿದರ ಒಗ್ಗಟ್ಟಿನಿಂದ ಪಡುವ ಶ್ರಮ, ಮೊದಲಾದ ಅನುಭವಗಳ ವಿವರಗಳನ್ನು ಒದಗಿಸುತ್ತಾರೆ.

ಭಾರತದ ಬಗೆಗಿನ ಅವರ ಅಭಿಮಾನ ವಿಶಿಷ್ಟವಾಗಿದೆ. ಭಾರತೀಯ ಕಲಾವಿದರು ಅಮಲುವಸ್ತುಗಳನ್ನು ತೆಗೆದುಕೊಳ್ಳುತ್ತಾರೆಯೇ ಎಂಬ ಪ್ರಶ್ನೆಗೆ "ಬಹುಭಾಗ ಭಾರತೀಯ ಯುವಕರಲ್ಲಿ ಒಂದು ಲೋಟ ಹೆಚ್ಚಾಗಿ ಕಾಫಿ ಕೂಡ ತೆಗೆದುಕೊಳ್ಳುವುದಿಲ್ಲ", ಎಂದೂ, ಇನ್ನೊಂದು ಪ್ರಶ್ನೆಗೆ "ಭಾರತದಲ್ಲಿನ ವೈವಿಧ್ಯ – ಐಕ್ಯತೆ ಇನ್ನಾವ ದೇಶದಲ್ಲೂ ಇಲ್ಲ" ಎಂದೂ ಹೇಳುತ್ತಾರೆ. ಜಪಾನಿನ ಆಹಾರದ ವಿಷಯದಲ್ಲಿ ಅಸಹ್ಯಪಟ್ಟುಕೊಳ್ಳುತ್ತಾರೆ. ಹಾಂಕಾಂಗಿನಲ್ಲಿ ಬೇಡುವವರನ್ನು ನೋಡಿ ಅಸಹ್ಯಪಟ್ಟುಕೊಂಡು "ಸಮಾಜದಲ್ಲಿ ಈ ತರಹ ಜನ ಏತಕ್ಕಿರಬೇಕು ಅನ್ನಿಸಿತು" ಎಂಬ ಸಹಾನುಭೂತಿಯನ್ನು ತೋರಿಸಿದ್ದಾರೆ.

ಥಾಯ್‌ಲೆಂಡಿನ ಜನಜೀವನದ ಕೆಲವು ಪ್ರಮುಖ ಅಂಶಗಳಾದ, ಕೋರ್ಟು ವಕೀಲರಿಲ್ಲದ ಸಂಗತಿ, ಗಂಡ–ಹೆಂಡತಿಯರಿಗೆ ಯಾವಾಗ ಬೇಕಾದರೂ ಸ್ವತಂತ್ರವಾಗಿ ಬದುಕುವ ಅವಕಾಶ ಇವುಗಳನ್ನು ಮೆಚ್ಚಿದ್ದಾರೆ. ಜನತೆ ಮನರಂಜನೆಯ ಸಾಧನಗಳನ್ನಾಗಿ ಮೀನಿನ ಜಗಳ, ಮಲ್ಲಯುದ್ಧ ಮತ್ತು ಹುಂಜದ ಪಂದ್ಯಗಳನ್ನು ಹೊಂದಿದ್ದಾರೆಂದು, ತಿಳಿಸಿ ತಮ್ಮ ಪತ್ರಗಳಲ್ಲಿ ಮೊದಲಬಾರಿಗೆ ಜನಜೀವನಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾರೆ.

ಈ ಕೃತಿಯ ಅನೇಕ ಪತ್ರಗಳು ಕಳೆದ ಬದುಕನ್ನು ಪತ್ರವನ್ನು ಬರೆದವರಿಗೆ ನೆನಪು ಮಾಡುವ ನೆನಪಿನ ಸುರುಳಿಯಾಗಿಯೋ, ತಾಯಿಮಕ್ಕಳ, ಮಗಳು– ತಂದೆ ತಾಯಿಯರ ವೈಯಕ್ತಿಕ ವಿಚಾರಗಳಿಗೆ ಸೀಮಿತವಾಗಿಯೋ ಇರುವುದರಿಂದ ಅವುಗಳನ್ನು ಸೇರಿಸುವಾಗ ಎಚ್ಚರ ವಹಿಸಬಹುದಾಗಿತ್ತು. ಈ ಪತ್ರಗಳಲ್ಲಿನ ಖಾಸಗಿ ಪ್ರೀತಿಯ ಭಾವೋದ್ವೇಗ ಅಚ್ಚಿಗೆ ಬರುತ್ತದೆಂದು ಲೇಖಕಿಯರು ಭಾವಿಸಿರಲಿಲ್ಲವೆಂದು ತೋರುತ್ತದೆ. ತಮ್ಮ ಪ್ರವಾಸದ ಕಾಲದಲ್ಲಿ ತಮಗುಂಟಾದ ಸಂತೋಷವನ್ನು ಎಲ್ಲ ಪತ್ರಗಳಲ್ಲಿ ಸಂತೃಪ್ತಿಯಿಂದ ಲೇಖಕಿಯರು ಅನುಭವಿಸಿದ್ದಾರೆ.

ಪ್ರವಾಸ ಸಾಹಿತ್ಯವನ್ನು ನಿರ್ಮಾಣ ಮಾಡುವವರು ತಾವು ಕಂಡ ಬದುಕನ್ನು ನಿರೂಪಿಸುವಾಗ, ಓದುಗರನ್ನು ತಾವು ಚಿತ್ರಿಸುತ್ತಿರುವ ನಾಡಿನ ಪರಿಸರದಲ್ಲಿರುವಂತೆ ಮಾಡಿದಾಗ, ಆ ಚಿತ್ರಣ ಯಶಗಳಿಸುತ್ತದೆ. ಪ್ರವಾಸ ಮಾಡುವ ಕಾಲದ ಅವಧಿ ಸೀಮಿತ

ಗೊಂಡು, ಒಂದು ದೇಶದ ರಾಜಧಾನಿಯನ್ನೋ, ಪ್ರಮುಖ ನಗರವನ್ನೋ ನೋಡಿ, ಆ ಜನಾಂಗದ ಬಗ್ಗೆ ಸಾಮಾನ್ಯ ಹೇಳಿಕೆಗಳನ್ನು ಹೇಳುವಾಗ ಎಚ್ಚರಿರಬೇಕಾಗುತ್ತದೆ. ತಾವು ನೋಡುವ ಜಗತ್ತಿನ ಬಗ್ಗೆ ಪೂರ್ವಗ್ರಹ ಅಭಿಪ್ರಾಯ ಇಟ್ಟುಕೊಳ್ಳದೆ, ಪ್ರವಾಸ ತಮ್ಮ ಬದುಕಿನ ಭಾಗ್ಯನಿಧಿ ಎಂಬ ಮೋಹಕ್ಕೆ ಸಿಕ್ಕದೆ, ತಾವು ಕಂಡದ್ದು ಸೀಮಿತ ಅನುಭವವೆಂದು ಗಮನಿಸಬೇಕು. ಪಾಶ್ಚಾತ್ಯ ದೇಶಗಳ ಆರ್ಥಿಕ ಅಭಿವೃದ್ಧಿ ವ್ಯಕ್ತಿಯ ಸಾಮಾಜಿಕ ಜೀವನವನ್ನು ರೂಪಿಸಿದೆ ಎಂಬುದನ್ನು, ಭಾರತೀಯರ ದೋಷಗಳನ್ನು ಕುರಿತು ಹಳಿಯುವಾಗ ತಿಳಿದಿದ್ದರೆ ಆರೋಗ್ಯಕರವಾದ ನಿಲುವು ಸಾಧ್ಯ. ಹೀಗೆ ಹಳಿಯು ವವರೂ ಹಿಂದಕ್ಕೆ ಬರುವಾಗ ವಿದೇಶೀ ಸಾಮಾನುಗಳನ್ನು ತುಂಬಿಕೊಂಡು ತರುವುದೂ ಮೆಚ್ಚತಕ್ಕ ಸಂಗತಿ. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗಿದ್ದೆವೆಂದೇ 'ಪ್ರವಾಸ ಸಾಹಿತ್ಯ' ನಿರ್ಮಾಣಮಾಡುವ ಚಟಕ್ಕಿಂತ, ತಮ್ಮ ಅಭಿಪ್ರಾಯ–ನಂಬಿಕೆ ಗಳು ಹೇಗೆ ಹೊಸ ಬದುಕಿನ ಆವರಣದಲ್ಲಿ ಪುನರ್ಮೌಲ್ಯಕ್ಕೆ ಒಳಗಾಗಿ ಬೆಳೆದವು – ತಿಳಿ ದವು ಎಂಬುದನ್ನು ತೋರಿಸಿಕೊಳ್ಳುವುದು ಪ್ರವಾಸ ಕಥನದ ಉದ್ದೇಶಿತ ಗುರಿಯಾಗ ಬೇಕು.

# ನಗೆಬರಹಗಳು ಮತ್ತು ಹರಟೆಗಳು

## ಸಿ. ವೀರಣ್ಣ

ಈ ವರ್ಷದ ನಗೆಬರಹಗಳು ಮತ್ತು ಹರಟೆಗಳ ಸಂಕಲನ ನಮ್ಮ ಗಮನಕ್ಕೆ ಬಂದವು ಹನ್ನೊಂದು. ಇವುಗಳನ್ನು ಗಮನಿಸಿದಾಗ ಕಂಡುಬರುವ ಪ್ರಮುಖ ಅಂಶವೆಂದರೆ ಈ ಸಾಹಿತ್ಯವನ್ನು ಸೃಷ್ಟಿಸಿದವರು ನಗೆಬರಹಗಳಿಗೂ, ಹರಟೆಗೂ ವ್ಯತ್ಯಾಸವಿದೆಯೆಂದು ಕಾಣದಿರುವುದು; ಹಾಗೆ ವರ್ಗೀಕರಿಸಲು ಸಾಧ್ಯವಾಗದಂತೆ ಸಂಕಲನಗಳನ್ನು ಪ್ರಕಟಿಸಿರುವುದು. ಈ ಕಾರಣದಿಂದ ಈ ಲೇಖನದಲ್ಲಿ ಈ ಎರಡೂ ಬಗೆಯ ಸಂಕಲನಗಳನ್ನು ಅಳವಡಿಸಿಕೊಳ್ಳಲಾಯಿತು. ಈ ಸಾಹಿತ್ಯ ಪ್ರಮುಖವಾಗಿ ಪತ್ರಿಕಾರಂಗವನ್ನು ಅವಲಂಬಿಸಿಕೊಂಡು ಬೆಳೆದು ಬಂದಿರುವುದರಿಂದ, ಅನೇಕ ಬರಹಗಳು ಸಂತೆಹೊತ್ತಿಗೆ ನೇದ ಮೂರು ಮೊಳವಾದದ್ದೂ ಉಂಟು. ಬರಹಗಾರರು ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಆಲೋಚಿಸಿ, ವ್ಯವಸ್ಥೆಯನ್ನು ವ್ಯಂಗ್ಯಕ್ಕೆ ಈಡುಮಾಡಿ ನಗೆ ಚಿಮ್ಮಿಸುವ ಮಟ್ಟಕ್ಕೆ ಹೋಗದೆ, ಆ ವ್ಯವಸ್ಥೆಯನ್ನು ಒಪ್ಪಿಕೊಂಡು ಅದರಲ್ಲಿನ ಓರೆಕೋರೆಗಳನ್ನು ಒಮ್ಮೆನಗೆಯ ಚಾಟಿಯಲ್ಲಿ ಮತ್ತೊಮ್ಮೆ ನೀರಸವಾದ ಉದ್ದನೆಯ ಬರಹದಲ್ಲಿ ಹೇಳುತ್ತಾ ಹೋಗುವುದು ನಗೆಬರಹ–ಹರಟೆಗಳ ರೀತಿ ಎನ್ನುವಂತಾಗಿದೆ. ಈ ಹಿನ್ನೆಲೆಯಲ್ಲಿ ಈ ವರ್ಷ ಪ್ರಕಟವಾದ ಸಂಕಲನಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶ.

ಈ ಬಗೆಯ ಸಾಹಿತ್ಯರಚನೆಯನ್ನು ಮಾಡುತ್ತಾ ಬಂದಿರುವ ಬೀಚಿಯವರ **ಗರತಿಯ ಗುಟ್ಟು** ಸಂಕಲನದಲ್ಲಿ, 'ಗರತಿಯ ಗುಟ್ಟು,' 'ಗೋವಿಂದಾ! ಗೋವಿಂದಾ!' ಮೊದಲಾದುವು ಹರಟೆ–ನಗೆಬರಹಗಳಾಗದೆ, ಗಂಭೀರ ವಸ್ತುವಿನ ನೀರಸ ನಿರೂಪಣೆಯಾಗುತ್ತವೆ. 'ಎಲ್ಲರೂ ಬದುಕಬೇಕು,' 'ನಾನೊಂದು ತಪ್ಪು ಮಾಡಿದೆ', 'ಪ್ರಭಾವಶಾಲಿ,' ಈ ಬರಹಗಳು ನಯವಾದ ಹಾಸ್ಯವನ್ನು ಮಿಡಿಯುತ್ತವೆ. 'ಥೂ ಸ್ವರ್ಗ'ದಂಥ ಬರಹ ನಮ್ಮ ಪೌರಾಣಿಕ ನಂಬಿಕೆಗಳನ್ನು ವಿಡಂಬಿಸುತ್ತದೆ. ರಾಜಕಾರಣಿಗಳ ಸರ್ವಜ್ಞತ್ವದ ಅಣಕ ಮಾಡುವ ಅನೇಕ ಬರಹಗಳು ಇದರಲ್ಲಿದ್ದರೂ, ಹಳೆಯದಾಗಿರುವ ಈ ಬಗೆಯ ಜೋಕುಗಳು ಮತ್ತೆ ಪುನರಾವರ್ತನೆಗೊಂಡಿವೆ.

ಬೀಚಿಯವರ ಮತ್ತೊಂದು ಸಂಕಲನ **ಸಂಪನ್ನರಿದ್ದಾರೆ ಎಚ್ಚರಿಕೆ.** ಈ ಸಂಕಲನದ ಮೊದಲ ಮಾತುಗಳಲ್ಲಿ ಲೇಖಕರು "ಸಂಪನ್ನ ಕಳ್ಳರು ಎಲ್ಲಿರುತ್ತಾರೆ? ಎಲ್ಲಿರುವುದಿಲ್ಲ? ಜೇಲೊಂದನ್ನು ಬಿಟ್ಟು ಬೇರೆ ಎಲ್ಲೆಲ್ಲಿಯೂ ಅವರೇ ಇರುತ್ತಾರೆ" ಎಂಬ ಉದ್ದೇಶವನ್ನು ಸ್ಪಷ್ಟ ಮಾಡಿದ್ದಾರೆ. ಆದರೆ ಈ ಸಂಕಲನದಲ್ಲಿನ ಬಹುಪಾಲು ಬರಹಗಳು ಗಂಡು–ಹೆಣ್ಣಿನ ಸಂಬಂಧಗಳಿಗೇ ಮೀಸಲಾಗಿದ್ದು, ಅನೇಕ ಬರಹಗಳು ಘಟನಾವಳಿಗಳ ನೀರಸ ನಿರೂಪಣೆಯಾಗುತ್ತವೆ. 'ಶಿವಧನುಸ್ಸನ್ನು ಯಾರು ಮುರಿದರು?' 'ದೇವನು ದಯಾಮಯ,' 'ಪಾಪಿ ಸಮುದ್ರಕ್ಕೆ ಹೋದರೂ.' ಈ ಬರಹಗಳು ಕೆಲಮಟ್ಟಿಗೆ

ಪೋಜನ್ನುಂಟುಮಾಡುತ್ತವೆ. 'ತಲೆ ಇದೆಯೇ,' 'ಎಲ್ಸಿ ಗಳಾಸು ಹಾಲು,' 'ಐದು ಪೈಸೆ' ಮುಂತಾದುವು ಸಣ್ಣಕತೆಯ ಸಡಿಲಗೊಂಡ ರೂಪಗಳಾಗಿವೆ.

ಈ ಎರಡೂ ಸಂಕಲನಗಳನ್ನು ಪರಿಶೀಲಿಸಿದಾಗ ಅವುಗಳ ಸಾಹಿತ್ಯಮೌಲ್ಯ ಅಷ್ಟೇನೂ ಉತ್ತಮವಲ್ಲ ಎನ್ನಿಸಿದರೂ, ಬೀಚಿಯವರಲ್ಲಿರುವ ಸಾಮಾಜಿಕ ಹೊಣೆಗಾರಿಕೆಯ ತುಡಿತವನ್ನು ಮೆಚ್ಚಿಕೊಳ್ಳಬೇಕಾಗುತ್ತದೆ. ನಮ್ಮ ಅನೇಕ ಲೇಖಕರಿಗೆ ಬೇಡವಾದ ಈ ಚಟ ಅಭಿವ್ಯಕ್ತಿಯಲ್ಲಿ ಬಹಳ ಸಡಿಲ ಸ್ವರೂಪವನ್ನು ಪಡೆದು, ಆಡಿಕೈತೊಳೆದುಕೊಳ್ಳುವ ಮಟ್ಟದಲ್ಲೇ ಉಳಿಯಿತು. ಇದಕ್ಕೆ ಬೀಚಿಯವರು ಅಂಟಿಸಿಕೊಂಡ ಹಣೆಪಟ್ಟಿ, ಶೈಲಿಯ ಬಗ್ಗೆ ತೋರಿದ ಸಂತೃಪ್ತಿಯೂ ಸಹಾಯಮಾಡಿವೆ.

ಬೀಚಿಯವರ ಪರಂಪರೆಯಲ್ಲಿ ಬಂದ ದಾಶರಥಿ ದೀಕ್ಷಿತರ **ದಸರಾ ಬೊಂಬೆ** ಎಂಬ ಸಂಕಲನ ಓದುವವರಿಗೆ ನಗೆತರಿಸಲೇಬೇಕೆಂಬ ಹಟದಿಂದ ಬರೆದ ಹಾಗಿದೆ. ಹಿಗ್ಗಾ ಮುಗ್ಗಾ ಎಳೆದ, ಅನೇಕ ಬರಹಗಳು ಇಲ್ಲಿದ್ದು, 'ಸೊಕ್ಕಿನ ಸರೋಜ,' 'ಏರಿದರು ಗುರು ರಾಯರು,' ಮುಂತಾದುವು ಚುರುಕಾದ ಬರಹಗಳೆನ್ನಿಸುತ್ತವೆ. ಎಲ್ಲ ನಗೆಬರಹಗಾರರು ಬಳಸುವ ಭಾಷಣಕಾರರ ಫಜೀತಿಯನ್ನು ಕುರಿತ ಬರಹಗಳು ಬೇಸರ ತರುವಷ್ಟು ದೀರ್ಘ ವಾಗಿದ್ದು, ಒಟ್ಟಿನಲ್ಲಿ ಕೃತಿ ಸಫಲವಾಗಿಲ್ಲವೆನ್ನಬಹುದು.

ದೀಕ್ಷಿತರ ಮತ್ತೊಂದು ಸಂಕಲನ **ಇಂದ್ರಿ–ಸುಂದ್ರಿ** ಈ ಕೃತಿಯಲ್ಲಿ ಅನೇಕ ಸಮ ಕಾಲೀನ ರಾಜಕೀಯ ಬೆಳವಣಿಗೆಗಳನ್ನು ಬಳಸಿಕೊಂಡಿದ್ದರೂ ಪರಿಣಾಮದಲ್ಲಿ ಅವುಗಳೆಲ್ಲ ಸಪ್ಪೆಯಾಗಿವೆ. ಹೆಂಡತಿಗೆ ಅಧೀನರಾದ ಗಂಡಂದಿರ ಬವಣೆ ಕೆಲವು ಬರಹಗಳಲ್ಲಿ ಹರಟೆ ಯಾಗಿದ್ದರೆ, 'ಕೈಚಾಚಿದಾಗ,' 'ರಂಗಪ್ಪನ ರೇಡಿಯೊ ಕಾರ್ಯಕ್ರಮ,' ಉತ್ತಮ ಬರಹ ಗಳಾಗಿವೆ.

**ಕಾಮುರ್ಸ್ ಕತೆಗಳು:** ಎ. ಪಿ. ಲಕ್ಷ್ಮೀನಾರಾಯಣ್ ಅವರ ಈ ಸಂಕಲನದಲ್ಲಿ, ಕಾಮರ್ಸ್ ಮನೋಧರ್ಮ ಎಲ್ಲವನ್ನೂ ತನ್ನ ದೃಷ್ಟಿಯಲ್ಲೇ ನೋಡುತ್ತದೆ ಎಂದು ತೋರಿಸುವುದಕ್ಕಾಗಿ ಬರೆದಿರುವ ಕತೆಗಳಲ್ಲಿ 'ಲಕ್ಸ್ಮಿ,' ಉತ್ತಮ ಎನ್ನಿಸಿದರೆ ಉಳಿದವು ಅತಿರೇಕದ ದಾರಿಯನ್ನು ಹಿಡಿದವು. 'ಬಿಡುಗಡೆ,' 'ನನ್ನ ಸತ್ಯಶೋಧನೆ,' ಈ ಬರಹ ಗಳು ಹರಟೆಗಳಂತೆ ಓದಿಸಿಕೊಂಡು ಹೋಗಬಲ್ಲವು. 'ಒಂದು ಯಂತ್ರದ ಕಥೆ,' ಲೇಖಕರ ಆತ್ಮಕಥೆಯನ್ನು ಹೇಳಿಕೊಳ್ಳುವಂತೆ ಕಾಣುವ ಈ ಬರಹ ಬಡ ವಿದ್ಯಾರ್ಥಿಯ ಜೀವನಚಿತ್ರವಾಗಿದೆ. ಈ ಕೃತಿಯ ಮಧ್ಯೆ ಒಂಬತ್ತು ಪುಟಗಳು ನಾಪತ್ತೆಯಾಗಿರುವು ದಲ್ಲದೆ, ದಸರಾಬೊಂಬೆ, ಪಚಡಿ, ಸಂಗ್ರಹಗಳಲ್ಲಿ ಬಳಸಿರುವ ರೇಖಾ ಚಿತ್ರಗಳೇ ಇಲ್ಲಿಯೂ ಇವೆ. ಲೇಖಕರು ಭಾಷೆಯ ಬಗ್ಗೆ ನೀಡಿರುವ ಆಸಕ್ತಿ ಗಮನಾರ್ಹವಾದ ಅಂಶ.

ಟಿ. ಸುನಂದಮ್ಮನವರ **ಜಂಬದ ಚೀಲ:** ಈ ಸಂಕಲನವನ್ನು ನಗೆಬರುವ ಕವನ ದಿಂದ ಲೇಖಕಿಯರು ಪರಿಚಯ ಮಾಡಿಸಿದ್ದಾರೆ. ನಾಗರಿಕ ಸಮಾಜದಲ್ಲಿ ಅಂತಸ್ತುಗಳಿ ಗಾಗಿ ಪರೆದಾಡುವ ಮಧ್ಯಮವರ್ಗದ ಹೆಂಗಸರನ್ನು ಕುರಿತ ಬರಹಗಳೇ ಈ ಸಂಕಲನದಲ್ಲಿ

ತುಂಬಿವೆ. ಸರಸುವಿನ ಸಿಂಡಿಕೇಟ್‌ನಂತಹ ಅವಾಸ್ತವಿಕ ಬರಹವೂ ಇದ್ದು. ಸರ್ಕಸ್ಸಿನ ಸವಿ, ಕಲಾವಿದನ ಸಂಸಾರ, ಇವು ತೀರಾ ನೀರಸವಾದ ಬರಹಗಳು. ಅನೇಕ ಬರಹಗಳಿಗೆ ಲೇಖಕಿಯರ ಅನುಭವದ ಬೆಂಬಲವಿದೆ ಎನ್ನುವುದಕ್ಕೆ ಕೆಲವು ಕಡೆ ಸ್ವಾರಸ್ಯಕರವಾದ ಚಿತ್ರ ಗಳು ಮೂಡಿವೆ. ಅನೇಕ ಬರಹಗಳು ಓದಿಸಿಕೊಳ್ಳಲಾರದಷ್ಟು ಬೇಸರವನ್ನು ತರಿಸುತ್ತವೆ.

ಸ್ಕಂದರ **ನಾಲ್ಕನೆಯವನ ತಲೆ.** ಈ ಸಂಕಲನದ ಅನೇಕ ಬರಹಗಳಿಗೆ ಚುರುಕು ಮುಟ್ಟಿಸುವ ಶಕ್ತಿ ಸಾಲದೆ, ಸವಕಲಾದ 'ಗಂಡ ಹೆಂಡಿರ ಜಗಳ'. 'ಪುಢಾರಿಯ ಭಾಷಣ.' ಮುಂತಾದುವು ಯಶಗಳಿಸಲಾಗದೆ ಹೋಗಿವೆ. 'ಗೊಸಕ್'. 'ನಕ್ಕಳ್ ಆ ಅತ್ತೆ.' ಈ ಪ್ರಬಂಧಗಳು ಓದುಗರ ಮನವನ್ನು ರಂಜಿಸಬಲ್ಲವು.

ಈ ಸಂಕಲನದಲ್ಲಿ ಅಲ್ಲಲ್ಲಿ ಸಿದ್ದು ಎಂಬ ತಲೆಬರಹದ ವಿವಿಧ ಭಾಗಗಳು ಬುದ್ಧಿ ವಂತಿಕೆಯಿಂದ ಕೂಡಿ, ಆರೋಗ್ಯಕರವಾದ ತಿಳಿಹಾಸ್ಯಕ್ಕೆ ಉತ್ತಮ ಮಾದರಿಗಳಾಗಿವೆ.

**ತಾವರೆಕೆರೆ ತೇರು.** ಕೊರವಂಜಿ ಬಳಗದ ಲೇಖಕರಾದ ರಾಮಸ್ವಾಮಿಯವರ ಈ ಸಂಕಲನದಲ್ಲಿ 'ತಾವರೆಕೆರೆ ತೇರು', ಮೊದಲಾದ ಬರಹಗಳು ಸಣ್ಣಕತೆಯಂತೆ ಮಾರ್ಪಟ್ಟು ನಗೆಯ ಪರಿಸರದಿಂದ ದೂರವಾಗಿವೆ. ಭಾರತೀಕರಣದಂತಹ ರಾಜಕೀಯ ವಸ್ತುವನ್ನು ಬಳಸಿಕೊಂಡ ಬರಹವೂ ಚುರುಕುಮುಟ್ಟಿಸುವುದಿಲ್ಲ. ಲೇಖಕರಿಗೆ ನಗೆಯನ್ನು ಮೂಡಿಸುವ ನಯವಾದ ಕಲೆಗಾರಿಕೆಯಿದೆ ಎಂಬ ಸೂಚನೆಯಾಗಿ 'ಶ್ರಾವಣ ಶುಕ್ರ ವಾರ'. 'ಬುಳ್ಳಪ್ಪನಿಗೆ ಕೊಟ್ಟ ಬೇಸ್ತು.' 'ರಂಗಣ್ಣನ ರಾದ್ಧಾಂತ,' ಮೊದಲಾದವು ಕಂಡು ಬರುತ್ತವೆ.

**ಪಚಡಿ**. ಡಾ|| ಸೂರ್ಯನಾಥ ಕಾಮತರ ಈ ಸಂಕಲನದ ಆರಂಭದಲ್ಲಿ ಲೇಖಕರು "ಇತಿಹಾಸ ಲೇಖಕನೆಂದೋ, ಕಾದಂಬರಿ ಬರೆವವನೆಂದೋ. ಪರಿಚಿತನಾಗಿರಬಹುದಾದ ನಾನು, ನಗೆಬರಹಗಳ ಬಗ್ಗೆ ಪಡೆದಿರಬಹುದಾದ ಅರೆಬರೆ ಪರಿಣತಿಯ ವಿಚಾರ ಕನ್ನಡ ಓದುಗರಿಗೆ ಮರೆತುಹೋಗದಿರಲೆಂಬ 'ಇತಿಹಾಸ' ಪ್ರಜ್ಞೆಯೇ ಈ ಬರಹಗಳ ಪ್ರಕಟಣೆಗೆ ಕಾರಣ" ಎಂದು ತಮ್ಮ ನಗೆಲೇಖನದ ವ್ಯವಸಾಯದ ಬಗ್ಗೆ ಹೇಳಿಕೊಂಡಿದ್ದಾರೆ. ಈ ಸಂಕಲನದಲ್ಲಿ ಬೇರೆ ನಗೆ ಬರಹಗಾರರು ತೆಗೆದುಕೊಳ್ಳದಿರುವ 'ನೊಬೆಲ್ ಬಹುಮಾನ,' 'ಅಕಾಡೆಮಿ' ಮೊದಲಾದ ಹೊಸ ವಿಷಯಗಳನ್ನು ಕುರಿತು ಬರೆದಿರುವುದು, ಧಾರವಾಡ ಮತ್ತು ದಕ್ಷಿಣ ಕನ್ನಡಗಳ ಭಾಷಾ ವೈವಿಧ್ಯವನ್ನು ಒಂದೆರಡು ಬರಹಗಳಲ್ಲಿ ಬಳಸಿರುವುದೇ ವಿಶೇಷ. ಓದಿಸಿಕೊಂಡು ಹೋಗಲಾರದಷ್ಟು ನೀರಸ ಬರಹಗಳ ನಡುವೆ, 'ಅಟೆಂಡೆನ್ಸ್ ಅವಾಂತರ,' 'ಮೂಷಕಪರ್ವ' ಇವು ಸ್ವಲ್ಪ ಮಟ್ಟಿನ ಬೇಸರವನ್ನು ಕಳೆಯುತ್ತವೆ.

ಎಂ. ಪಿ. ಮನೋಹರಚಂದ್ರನ್ ಅವರ **ಗಣಪತಿ ನೋರಿಯಾ** ಸಂಕಲನ ದಲ್ಲಿ ಲೋಕೋಪಯೋಗಿ ಇಲಾಖೆಯನ್ನು ವಿಡಂಬಿಸುವ ಒಂದೆರಡು ಬರಹಗಳಲ್ಲಿ ನಗೆ ತರಿಸುವ ಪ್ರಯತ್ನವಿದೆ. ವಿದ್ಯಾ ಇಲಾಖೆಯಲ್ಲಿ ಅಧಿಕಾರಿ ಮತ್ತು ಅಧ್ಯಾಪಕರ ಸಂಬಂಧ ವನ್ನು ಕುರಿತ ಬರಹವು ವಾಸ್ತವ ಚಿತ್ರವಾಗಿ ಮನಸ್ಸನ್ನು ರಂಜಿಸುವ ಶಕ್ತಿ ಪಡೆದಿದೆ. 'ಕಲ್ಲೇಶಿಯ ಪರೀಕ್ಷಾ ಪ್ರಸಂಗ.' 'ಎಲ್ಲ ರೂಲೆಸ್ ಪ್ರಕಾರ.' ಇವು ಇಂದಿನ ಅಧ್ಯಾಪಕರ-

ವಿದ್ಯಾರ್ಥಿಗಳ ಬಾಂಧವ್ಯದ ವಾಸ್ತವ ಸ್ಥಿತಿಯನ್ನು ಗಂಭೀರವಾಗಿ ಚಿತ್ರಿಸಿದರೂ, ಅವು ಗಳಲ್ಲಿನ ಘಟನಾವಳಿಗಳೇ ನಗೆಯ ಚಿಲುಮೆಗಳಾಗುತ್ತವೆ. ಲೇಖಕರಿಗೆ ತಾವು ಆಯ್ದು ಕೊಂಡ ವಸ್ತುವಿನ ನೇರ ಪರಿಚಯದ ಸೊಗಡಿನಿಂದ ಬರಹಗಳಿಗೆ ಜೀವ ತುಂಬಲು ಸಾಧ್ಯ ವಾಗುತ್ತದೆಂಬುದು ಇವರ ಅನೇಕ ಬರಹಗಳಲ್ಲಿ ಕಾಣುತ್ತದೆ.

**ಸುಳುಹು-ಹೊಳಹು** ಅಲ್ಲಾಭಕ್ಷ ಲಾಡಸಾಬ ಪಿಂಜಾರ ಇವರ ಈ ಸಂಕ ಲನದ ನಗೆಹನಿಗಳು ಅನರ್ಥಕೋಶದ ಚಿಕ್ಕರೂಪವಾಗಿದ್ದು, ಅಷ್ಟೇನೂ ಹೇಳಿಕೊಳ್ಳು ವಂತಹ ರಚನೆಗಳಾಗಿಲ್ಲ.

ಪ್ರಗತಿಶೀಲ ಸಾಹಿತ್ಯದ ಪ್ರಭಾವ ವಲಯದಲ್ಲಿ ಬೆಳೆದ ಈ ಪ್ರಕಾರದ ಸಾಹಿತ್ಯ ತನ್ನ ಮೊದಲಿನ ರೊಚ್ಚನ್ನು ಕಳೆದುಕೊಂಡು ಓದುಗರನ್ನು ನಗಿಸಬೇಕೆಂಬುವಷ್ಟಕ್ಕೆ ಮಾತ್ರ ನಿಲ್ಲುವಂತೆ ಆಗಿದೆ ಈಗ. ವಿನೂತನ ದೃಷ್ಟಿಯಿಂದ ನಗೆಯನ್ನು ಸೃಷ್ಟಿಸ ಬೇಕೆಂಬ ಚಿಂತನ ಬಹುಪಾಲು ಲೇಖಕರಲ್ಲಿ ಕಾಣುತ್ತಿಲ್ಲ. ಈ ಬಗೆಯ ಬರವಣಿಗೆಗೆ ಬೇಕಾಗುವ ಸ್ವಾನುಭವಕ್ಕೆ ಬದ್ಧರಾಗದೆ, ವಸ್ತುವಿನ ಬಳಕೆಯಲ್ಲಿ ಕಾಪಿಬುಕ್ ಮಾದರಿ ಯನ್ನು ಅನುಸರಿಸಿರುವುದೂ ಕಾಣಿಸುತ್ತದೆ. ತಾವು ಬರೆಯುವ ಬರಹಕ್ಕೆ ರಂಜಕತೆಯನ್ನು ಮೂಡಿಸಲು ಬೌದ್ಧಿಕ ಪ್ರಬುದ್ಧತೆಯ ಅವಶ್ಯಕತೆಯನ್ನೂ, ಅದನ್ನು ಅಭಿವ್ಯಕ್ತಿ ಗೊಳಿಸಲು ಬೇಕಾಗುವ ಮಾತಿನ ಚುರುಕನ್ನೂ ಈ ಲೇಖಕರು ನಿರ್ಲಕ್ಷಿಸಿದ್ದೂ ಈ ಬರಹಗಳು ಸಪ್ಪೆಯಾಗಲು ಕಾರಣವಾದುವು. ನಯವಾದ ಗಂಭೀರ ಹಾಸ್ಯಸೃಷ್ಟಿ ಕೊರವಂಜಿಗೆ ಕೊನೆಯಾಯಿತೇನೋ ಎನ್ನಿಸದಿರದು.

ಈ ಸಾಹಿತ್ಯದ ಪ್ರಕಾಶಕರು ಮತ್ತು ಲೇಖಕರು ಇದೂ ಒಂದು ಬಗೆಯ ಸಾಹಿತ್ಯ. ಇದಕ್ಕೂ ಮುದ್ರಣ, ಅಚ್ಚುಕಟ್ಟಿನ ಅಂದಚಂದ ಇವುಗಳಿಗೂ ಗಮನ ಕೊಡಬೇಕೆಂದು ಅನಿಸಿಯೇ ಇಲ್ಲ. ಅಪಾರವಾದ ಮುದ್ರಣದೋಷಗಳು, ಒಂದು ಕೃತಿಯಲ್ಲಿ ಬಳಸಿದ ರೇಖಾಚಿತ್ರಗಳು ಬೇರೆ ಕೃತಿಗಳಲ್ಲಿ ಅಗತ್ಯವಿಲ್ಲದೆ ಅಚ್ಚಾಗಿರುವುದು, ಪುಟಗಳ ನಾಪತ್ತೆ — ಇವುಗಳೆನ್ನೆಲ್ಲ ಗಮನಿಸಿದರೆ ಈ ಸಾಹಿತ್ಯ ವ್ಯಾಪಾರದೃಷ್ಟಿಯೊಂದಕ್ಕಾಗಿಯೇ ಹೊರ ಬರುತ್ತಿದೆಯೇನೋ ಎಂದು ಅನ್ನಿಸದಿರದು.

ಆದರೆ ಸಮಕಾಲೀನ ಸಮಾಜದ ಸಮಸ್ಯೆಗಳಿಗೆ ಪ್ರತಿಕ್ರಿಯಾತ್ಮಕವಾದ ಸಾಹಿತ್ಯ ಸೃಷ್ಟಿಯನ್ನು ಮಾಡುವ ಈ ಲೇಖಕರು ಹೆಚ್ಚು ವಾಚಕ ವರ್ಗವನ್ನು ಪಡೆದಿರುವುದು, ಗಂಭೀರ ಸಾಹಿತ್ಯದ ಹೆಸರಿನಲ್ಲಿ ಸಮಕಾಲೀನ ಸಮಾಜವನ್ನು ಕೈಬಿಟ್ಟು ಸಾಹಿತ್ಯವನ್ನು ಸೃಷ್ಟಿಸುವವರಿಗೆ, ಸಾಮಾಜಿಕ ಹೊಣೆಯೂ ಉಂಟು ಎಂಬುದನ್ನು ಅರಿವು ಮಾಡಿ ಕೊಳ್ಳಲು ಅವಕಾಶ ಮಾಡಿಕೊಡುವಂತಿದೆ.

## ಗ್ರಂಥ ಸಂಪಾದನೆ, ಸಂಪಾದಿತ ಕೃತಿಗಳು

**ಎಸ್. ಶಿವಣ್ಣ**

**ಹಂಪೆಯ ಹರಿಹರದೇವರ ಎಂಟು ರಗಳೆಗಳು.** ಹಂಪೆಯ ವಿರೂಪಾಕ್ಷನ ಸುಪುತ್ರನೆನಿಸಿದ ಹರಿಹರ ಕನ್ನಡದ ಮಹಾಕವಿಗಳಲ್ಲೊಬ್ಬನಾಗಿದ್ದಾನೆ. ಈತ ಮಹಾದೇವ–ಶರ್ವಾಣಿಯರ ಪುತ್ರ; ಹಂಪೆಯ ಮಾಯಿದೇವನ ಶಿಷ್ಯ. ಈತನ ಸೋದರಳಿಯ ರಾಘವಾಂಕ. ಹರಿಹರನು ರಗಳೆಗಳೊಡನೆ ಚಂಪುವಿನಲ್ಲಿನ ಗಿರಿಜಾಕಲ್ಯಾಣ, ವೃತ್ತರೂಪದಲ್ಲಿನ ಪಂಪಾಶತಕ, ರಕ್ಷಾಶತಕ ಮತ್ತು ಮುಡಿಗೆಯ ಅಷ್ಟಕಗಳನ್ನು ರಚಿಸಿದ್ದಾನೆ. ರಗಳೆಗಳು ಇನ್ನೂ ಪೂರ್ಣವಾಗಿ ಬೆಳಕಿಗೆ ಬಂದಿಲ್ಲ. ಉಳಿದ ಕೃತಿಗಳು ಪ್ರಕಟವಾಗಿವೆ. ತನ್ನ ಜೀವಿತದ ಬಹುಭಾಗವನ್ನು ಪಂಪಾವಿರೂಪಾಕ್ಷನ ಸೇವೆಗೂ, ಶಿವಶರಣರ ಕೃತಿ ರಚನೆಗೂ ವಿನಿಯೋಗಿಸಿದಂತೆ ಕಾಣುತ್ತದೆ. 'ಶರಣರಂ ಪಾಡುವ' ಮಾರ್ಗಕ್ಕೆ ನೇತಾರನಾಗಿ ಮುಂದಿನ ವೀರಶೈವ ಕವಿಗಳಿಗೆಲ್ಲ ಮಾರ್ಗದರ್ಶಿಯಾದನು. ಈತನ ಸಮಕಾಲೀನರು ಕೆರೆಯ ಪದ್ಮರಸ, ಕುಮಾರ ಪದ್ಮರಸ, ರಾಘವಾಂಕ ಮೊದಲಾದವರು. ಇವರೆಲ್ಲರೂ ಹನ್ನೆರಡು–ಹದಿಮೂರನೆಯ ಶತಮಾನದ ಅವಧಿಯಲ್ಲಿ ಬಾಳಿ ಬದುಕಿದವರು. ಹರಿಹರನ ಕಾಲದ ಬಗೆಗೆ ಪ್ರಸ್ತುತ ಕೃತಿಯ ಸಂಪಾದಕರು ಡಾ॥ ಶಿ. ಚಿ. ನಂದೀಮಠರು ಸೂಚಿಸಿರುವ ಕ್ರಿ.ಶ. 1180–1250 ಅನ್ನೇ ಒಪ್ಪಿದ್ದಾರೆ.

ಈ ಕೃತಿಯಲ್ಲಿ ೮ ರಗಳೆಗಳಿವೆ. ಅವುಗಳಲ್ಲಿ 7 ತಮಿಳುನಾಡಿನ ಶೈವ ಪುರಾತನರಾದ (1) ತಿರುನೀಲಕಂಠ (2) ಇಳೆಯಾಂಡ ಗುಡಿಮಾರರು (3) ಸೇದಿರಾಜ (4) ಕಣ್ಣಪ್ಪ (5) ರುದ್ರಪಶುಪತಿ (6) ತಿರುಕುಯಿಪ್ಪೆಯ ತೊಂಡ (7) ಮಾದರಚೆನ್ನರಿಗೆ ಸಂಬಂಧಿಸಿವೆ. 8ನೆಯ ರಗಳೆ ಕುಂಬಾರಗುಂಡಯ್ಯನನ್ನು ಕುರಿತದ್ದು. ಪೀಠಿಕೆಯಲ್ಲಿ ಹರಿಹರದೇವನ ಜೀವನ, ರಗಳೆಗಳ ಕಥಾಸರಣಿ ಹಾಗು ಆಯಾ ಕಥೆಯ ಸನ್ನಿವೇಶ–ಸೌಂದರ್ಯ ಪಾತ್ರ ನಿರ್ಮಾಣ ಕೌಶಲ್ಯಗಳ ಬಗೆಗೆ ಕೆಲವು ಮಾತುಗಳಿವೆ. ಅನಂತರ ಹರಿಹರನ ವಸ್ತುವಿನ್ಯಾಸ, ವರ್ಣನೆ, ಛಂದಸ್ಸುಗಳ ಬಗೆಗೆ ತಿಳಿಸಿದೆ. ಕೊನೆಯಲ್ಲಿ ಹರಿಹರನ ವ್ಯಕ್ತಿತ್ವ, ಪ್ರಭಾವಮುದ್ರೆಗಳ ಬಗೆಗೆ ವಿವೇಚಿಸಿದೆ. ಕೃತಿಯ ಕೊನೆಯಲ್ಲಿ ಟಿಪ್ಪಣಿ, ಅರ್ಥಕೋಶಗಳಿವೆ.

**ಶೂನ್ಯಸಂಪಾದನೆ.** ಶೂನ್ಯಸಂಪಾದನೆಯ ಕರ್ತೃ ಶಿವಗಣ ಪ್ರಸಾದಿ ಮಹಾದೇವಯ್ಯ. ಈತನ ಕೃತಿ ಬಸವಾದಿ ಪ್ರಮಥರ ಸಂಭಾಷಣಾರೂಪದ ಸಂಕಲಿತ ಕೃತಿ. ಇದರಲ್ಲಿ 17 ಮಂದಿ ವಚನಕಾರರ ಹಾಗು ವಚನಕಾರ್ತಿಯರ 959ವಚನಗಳು ಮತ್ತು 12 ಹಾಡುಗಳಿವೆ.

ಶಿವಗಣ ಪ್ರಸಾದಿ ಕೃತಿಯಲ್ಲಿ ತನ್ನ ದೇಶ, ಕಾಲ ಇತ್ಯಾದಿ ಯಾವ ವಿಷಯವನ್ನೂ ತಿಳಿಸಿಲ್ಲ. ಈತನನ್ನು ಮುಂದಿನ ಶೂನ್ಯಸಂಪಾದನೆಕಾರರಾದ, ಗುಮ್ಮಳಾಪುರದ ಸಿದ್ಧಲಿಂಗಯತಿ, ಗೂಳೂರ ಸಿದ್ಧವೀರಣಾಚಾರ್ಯ, ಮತ್ತು ಹಲಗೆಯ ದೇವರು (ಕೆಂಚ

ವೀರಣ್ಣೊಡೆಯ?) ಸ್ಮರಿಸಿರುವರು. ರಾಘವಾಂಕ ಚಾರಿತ್ರದ ಕರ್ತೃ ಸಿದ್ಧನಂಜೇಶ ಇತರ ಶರಣ ಕವಿಗಳೊಡನೆ 'ಶುದ್ಧ ಪ್ರಸಾದ್ಯರು ಮಹಾದೇವಯ್ಯ' ಎಂದು ಸ್ಮರಿಸಿದ್ದಾನೆ. ಕ್ರಿ.ಶ. 1474ರ ಗುಮ್ಮಳಾಪುರದ ದಾನಶಾಸನದಲ್ಲಿನ ಹೆಸರುಗಳಲ್ಲಿ ಪ್ರಸಾದಿದೇವರು – ಎಂಬ ಶರಣನ ಉಲ್ಲೇಖವಿದೆ. ಇದು ಮಹಾದೇವಯ್ಯನಿಗೆ ಸಂಬಂಧಿಸಿದುದೋ ಅಲ್ಲವೋ? ಎಂಬುದನ್ನು ಹೇಳಲಾಗುವುದಿಲ್ಲ. ಪ್ರಸ್ತುತ ಕೃತಿಯ ಸಂಪಾದಕರ ಅಭಿಪ್ರಾಯದಂತೆ ಕೃತಿಯ ಕಾಲ 1420; ಹಾಗೂ 'ಮಹಾದೇವಯ್ಯ ಗುಮ್ಮಳಾಪುರ, ಗೂಳೂರುಗಳ ಸಮಿಹದಲ್ಲಿಯೆ ಇದ್ದು ಮುಂದಿನ ಶೂನ್ಯಸಂಪಾದನೆಕಾರರ ಮೇಲೆ ಪ್ರಭಾವ ಬೀರಲು ಸಮರ್ಥರಾಗಿರುವರು' ಎಂದಿದ್ದಾರೆ.

ಪ್ರಸ್ತುತ ಕೃತಿ 1 ಓಲೆ ಹಾಗು 5 ಕಾಗದ ಪ್ರತಿಗಳಿಂದ ಅಚ್ಚಾದಂತೆ ಸಂಪಾದಕರು ತಿಳಿಸಿದ್ದಾರೆ. ಆದರೆ ಪಾಠಾಂತರಗಳಲ್ಲಿನ ಕೃತಿಗಳ ಸಂಕೇತಗಳನ್ನು ಗಮನಿಸಿದಾಗ, ಸಂಪಾದಕರು ಹೆಸರಿಸದ 'ಠ', 'ಡ' ಎಂಬ ಸಂಕೇತಗಳನ್ನುಳ್ಳ ಪ್ರತಿಗಳನ್ನು ಪಾಠ ಪರಿಶೋಧನೆಗೆ ಬಳಸಿಕೊಂಡ ಸಂಗತಿ ತಿಳಿಯುತ್ತದೆ. ಹೀಗಾಗಿ ಪ್ರಸ್ತುತ ಕೃತಿಯ ಸಂಪಾದನೆಗೆ ಬಳಸಿಕೊಂಡ ಒಟ್ಟು ಪ್ರತಿಗಳು 6 + 2 = 8 ಆಗುತ್ತವೆ.

ಸಂಪಾದಕರು ಶಿವಗಣ ಪ್ರಸಾದಿ, ಕೆಂಚವೀರಣ್ಣೊಡೆಯ, ಗುಮ್ಮಳಾಪುರದ ಸಿದ್ಧಲಿಂಗದೇವರು, ಗೂಳೂರ ಸಿದ್ಧವೀರಣಾರ್ಯ, ಹಲಗೆಯ ದೇವರ ಶೂನ್ಯಸಂಪಾದನೆಗಳ ಕಾಲ ವಿಚಾರ ಮತ್ತು ಶೂನ್ಯಸಂಪಾದನೆಕಾರರ ಬಗೆಗೆ ಉಪಲಬ್ಧ ಸಾಮಗ್ರಿಯನ್ನು ಕ್ರೋಢೀಕರಿಸಿ ವಿವೇಚಿಸಿದ್ದಾರೆ. ಅಲ್ಲದೆ, ಉಪಲಬ್ಧ ವಚನ ಸಾಹಿತ್ಯ ಕೃತಿಗಳನ್ನು ಆಧರಿಸಿ ವಚನ ಸಾಹಿತ್ಯದ ವಂಶವೃಕ್ಷವನ್ನು ಸಿದ್ಧಪಡಿಸಿಕೊಟ್ಟಿದ್ದಾರೆ.

ಶೂನ್ಯ ಸಂಪಾದನೆಗಳ ತೌಲನಿಕ ದರ್ಶನ ಎಂಬ ವಿಭಾಗದಲ್ಲಿ 4 ಶೂನ್ಯಸಂಪಾದನೆಗಳಲ್ಲಿನ (ಕೆಂಚವೀರಣ್ಣೊಡೆಯರ ಸಂಪಾದನೆ ಬಿಟ್ಟು) ವಿಶಿಷ್ಟ ಸಂಗತಿಗಳು (ಪು. 22–33), ಶಿವಶರಣ ಶರಣೆಯರ ವಚನಗಳ ಕೋಷ್ಟಕ (ಪು. 34–5), ನಾಲ್ಕು ಸಂಪಾದನೆಗಳಲ್ಲಿರುವ ಶರಣ ಶರಣೆಯರ ಪದಸಂಖ್ಯಾಸೂಚಿ (ಪು. 35), ನಾಲ್ಕು ಶೂನ್ಯ ಸಂಪಾದನೆಗಳಲ್ಲಿನ ವಚನ ಹಾಗು ಪದಗಳ ಅಕಾರಾದಿ ವಿವರ (ಪು. 36–94) ಗಳನ್ನು ಕೊಟ್ಟಿದ್ದಾರೆ. ಕೊನೆಗೆ ಶೂನ್ಯತತ್ತ್ವ ವಿವೇಚನೆಯ ಬಗೆಗೆ ಸಂಕ್ಷೇಪ ವಿವರಣೆ ಇದೆ.

ಇಲ್ಲಿನ ವಚನ 853–54 (ಪು. 353–54) ರಲ್ಲಿ 'ಏಕಾಂತವೀರ ಸೊಡ್ಡಳಾ' ಎಂಬ ಅಂಕಿತ ಏಕಾಂತರಾಮ (ಮಿ) ತಂದೆಯದೆಂದಿದೆ. ಕವಿಚರಿತೆಯಂತೆ ಏಕಾಂತ ರಾಮಯ್ಯನ ಅಂಕಿತ 'ಎನ್ನಯ್ಯ ಚೆನ್ನರಾಮ' ಮತ್ತು 'ಚೆನ್ನರಾಮೇಶ್ವರ ಲಿಂಗ' (I. 221) ಡಾ॥ ಡಿ. ಎಲ್. ನರಸಿಂಹಾಚಾರ್ಯರ ಪ್ರಕಾರ ಏಕಾಂತರಾಮಯ್ಯನ ಅಂಕಿತ 'ಚೆನ್ನರಾಮೇಶ್ವರಲಿಂಗ' (ಕವಿಚರಿತೆ, ಅನುಬಂಧ II ಸಂಖ್ಯೆ 35). ಹೀಗೆಯೇ ಶಂಕರದಾಸಿಮಯ್ಯನ ಅಂಕಿತ 'ನಿಜಗುರು ಶಂಕರದೇವಾ' (ವಚನಸಂಖ್ಯೆ 855–56, ಪು.354–55). ಭೈರವೇಶ್ವರಕಾವ್ಯ ಕಥಾಮಣಿ ಸೂತ್ರ ರತ್ನಾಕರ (ಸಂಪುಟ 1 ಪು. 349. ಸಂ. ಆರ್. ಸಿ. ಹಿರೇ. ಮತ್ತು ಎಂ. ಎಸ್. ಸುಂ. 1964) ದಲ್ಲಿ ಶಂಕರದಾಸಿಮಯ್ಯನ ಅಂಕಿತ

'ಗುರುಶಂಕರೇಶ್ವರಾ' ಎಂದಿದೆ. ಇವೆರಡು ಅಂಕಿತಗಳು ಭಿನ್ನವೋ? ಅಭಿನ್ನವೋ? ಪರಿಶೀಲಿ ನಾರ್ಹ.

ನಾಲ್ಕು ಶೂನ್ಯಸಂಪಾದನೆಗಳಲ್ಲಿ ಬರುವ ಶರಣ–ಶರಣೆಯರ ವಚನಗಳ ತುಲನಾತ್ಮಕ ಕೋಷ್ಟಕ (II. ಪು. 34–5)ದಲ್ಲಿ ಶಿವಗಣ ಪ್ರಸಾದಿಗಳ ಶೂನ್ಯಸಂಪಾದನೆಯಲ್ಲಿನ ವಚನಸಂಖ್ಯೆ 956 ಎಂದಿದೆ. ಆದರೆ ಅಲ್ಲಿರುವ ಸಂಖ್ಯೆಗಳನ್ನು ಕೂಡಿದಾಗ 957 ಬರುತ್ತದೆ. ಇದರಂತೆ ಅದೇ ಕೋಷ್ಟಕದಲ್ಲಿನ ಗೂಳೂರ ಸಿದ್ಧವೀರಣಾಚಾರ್ಯರ ಕೃತಿಯಲ್ಲಿನ ವಚನ ಸಂಖ್ಯೆ 1430 ಎಂದಿದ್ದು ಕೂಡಿದಾಗ 1423 ಬರುತ್ತದೆ.

ಪುಟ. 35 (III) ರಲ್ಲಿನ ಪದಗಳ ಬಗೆಗೆ ಇರುವ ಕೋಷ್ಟಕದಲ್ಲಿ ಮಹಾದೇವಯ್ಯಗಳ ಕೃತಿಯಲ್ಲಿನ ಪದಗಳ ಸಂಖ್ಯೆ 11 ಎಂದಿದೆ. ಆದರೆ ಕೂಡಿದಾಗ 12 ಆಗುವುದು. ಇದರಂತೆ ಗೂಳೂರ ಅವರ ಸಂಪಾದನೆಯಲ್ಲಿನ ಪದಗಳ ಸಂಖ್ಯೆ 21 ಎಂದಿರುವುದಾದರೂ ಅಲ್ಲಿರುವ ಪದಗಳ ಮೊತ್ತ 20 ಆಗುವುದು.

ವಚನ 121ರಲ್ಲಿನ ಆರವಟ್ಟಿಗೆ ಎಂದಿರುವಲ್ಲಿ ಶಕಟರೇಫವಿರಬೇಕು. ವಚನ 122ರಲ್ಲಿ ಏಱು ಎಂದಿರುವಲ್ಲಿ ರೇಫವಿರಬೇಕು. ಗ್ರಂಥದ ಕೊನೆಯಲ್ಲಿ ಕಠಿಣ ಶಬ್ದಕೋಶ, ಪಾರಿಭಾಷಿಕ ಶಬ್ದಕೋಶ, ಹಾಗು ವಚನ ಮತ್ತು ಪದಗಳ ವರ್ಣಾನುಕ್ರಮಗಳಿವೆ.

**ಅರಿವಿನ ಮಾರಿತಂದೆಗಳ ವಚನಗಳು.** 'ಸದಾಶಿವಮೂರ್ತಿ ಲಿಂಗ' ಅಂಕಿತದ ವಚನ ಕರ್ತೃ ಅರಿವಿನ ಮಾರಿತಂದೆ. ಈತ ಬಸವಾದಿಗಳ ಕಾಲದ ಅನಂತರ ಜೀವಿಸಿದ್ದಂತೆ ತಿಳಿದುಬರುತ್ತದೆ. ಈತನ 301 ವಚನಗಳನ್ನು 14 ಓಲೆ ಹಾಗು ಹಸ್ತಪ್ರತಿಗಳಿಂದ ಪರಿಷ್ಕರಿಸಿ ಪ್ರಕಟಿಸಲಾಗಿದೆ. ಇದರಲ್ಲಿನ ಕ್ರಮಾಂಕ 251ರಿಂದ 301ನೆಯ ವಚನಗಳು ಬೆಡಗಿನ ವಚನಗಳಾಗಿದ್ದು ಸಿಂಗಳದ ಸಿದ್ಧಬಸವದೇವನ ಟೀಕಾಸಹಿತವಾಗಿ ಮುದ್ರಣಗೊಂಡಿವೆ.

ಪೀಠಿಕೆಯಲ್ಲಿ ಸಂಪಾದಕರು ಅರಿವಿನ ಮಾರಿತಂದೆಯ ಕಾಲದ ಬಗೆಗೆ ವಿಚಾರ ಮಾಡಿ ಗುಬ್ಬಿಯ ಮಲ್ಲಣ್ಣನ ಗಣಭಾಷ್ಯ ರತ್ನಮಾಲೆಯಲ್ಲಿ ಈತನ ವಚನಗಳಿರುವುದರಿಂದ "ಸದ್ಯಕ್ಕೆ ಈತನು 1160ಕ್ಕಿಂತ ಈಚೆಗೆ ಗುಬ್ಬಿಯ ಮಲ್ಲಣ್ಣನಿಗಿಂತ ಪೂರ್ವಕ್ಕೆ ಎಂದರೆ ಸು. 1475ಕ್ಕಿಂತ ಹಿಂದಕ್ಕೆ ಇದ್ದವನೆಂದು ಹೇಳಬಹುದಾಗಿದೆ" ಎಂದಿದ್ದಾರೆ. ಇವನ ವಚನ ಸಂಖ್ಯೆ 131ರಲ್ಲಿ ಮದ್ದು ತುಂಬಿದ ನಾಳಿಯ ಉಲ್ಲೇಖವಿದೆ. ದಕ್ಷಿಣ ಭಾರತದಲ್ಲಿ ಮದ್ದನ್ನು ಪ್ರಥಮಬಾರಿಗೆ ಉಪಯೋಗಿಸಿದುದು ಕ್ರಿ.ಶ. 1368ರಲ್ಲಿ ಎಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಆ ಕಾರಣವಾಗಿ ಅರಿವಿನ ಮಾರಿತಂದೆ ಕ್ರಿ.ಶ. 1368ರಿಂದ ಈಚಿನವನಾಗುತ್ತಾನೆ. ಹಾಗೆಯೇ ಈತನ ವಚನಗಳನ್ನು ಉಲ್ಲೇಖಿಸಿದ ಗುಬ್ಬಿಯ ಮಲ್ಲಣನನ್ನು 'ಶಿವತತ್ವ ಚಿಂತಾಮಣಿ'ಯಲ್ಲಿ ಲಕ್ಕಣದಂಡೇಶ ಉಲ್ಲೇಖಿಸಿದ್ದಾನೆ. ಎಚ್. ದೇವೀರಪ್ಪನವರು ತಮ್ಮ ಲೇಖನವೊಂದರಲ್ಲಿ (ಪ್ರ.ಕ. 30–4) ಇವರ ಕಾಲ 1440 ಆಗಬಹುದು ಎಂದಿದ್ದಾರೆ. ಹೀಗಾಗಿ ಅರಿವಿನ ಮಾರಿತಂದೆಯ ಕಾಲ ಕ್ರಿ.ಶ. 1368–1440ರ ನಡುವೆ ಆಗುವುದು. ಸುಮಾರು 1400ರಲ್ಲಿ ಇದ್ದಿರಬಹುದು.

ಈತನ ವಚನಗಳಲ್ಲಿ ವಿವಿಧ ಶೈವಗಳು (ವಚನಸಂಖ್ಯೆ 44, 45), ಶೈವ, ವೈಷ್ಣವ, ಬೌದ್ಧ (140), ಯೋಗಿ, ಜೋಗಿ, ಶ್ರಾವಕ, ಸನ್ಯಾಸಿ, ಪಾಸ್ಪತಿ, ಕಾಳಾಮುಖಿ (197, 199) ತ್ರಿದಂಡಿ (199) ಗಳ ಉಲ್ಲೇಖವಿದೆ. ಕೃತಿಯ ಕೊನೆಯಲ್ಲಿ ಅರ್ಥಕೋಶ, ವಚನಗಳ ಅಕಾರಾದಿಗಳಿವೆ. ಕೆಲವು ಅಚ್ಚಿನ ದೋಷಗಳನ್ನು ಹೆಸರಿಸಿದೆ:

ಮಟಿದ/ ಱಿ (46) **ಕಂ**ಡೆಯು/ ಖಂ (151) ನಜಿವು**ವ**ಕ್ಕೆ/ದ (155) ಕಪೋತರ್ಣ/ ವರ್ಣ (253– ಟೀಕೆ) ಮಂತ್ರೋ**ಚ್ಚಾ**ರಣೆ/ ಚ್ಚಾ (47) ಸ**ವ**ದು/ವೆ (48) ತೋಟಿ/ಱಿ (195).

**ಶಿವಲೆಂಕ ಮಂಚಣ್ಣ** 'ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗ' ಅಂಕಿತದ ವಚನಕಾರ ಶಿವಲೆಂಕ ಮಂಚಣ್ಣ ಪಂಡಿತತ್ರಯರಲ್ಲೊಬ್ಬ. ಅಜ್ಜ ಸೋಮಶಂಭು ದೇಶಿಕ. ತಂದೆ ಕಾಮಿಕಾದಿ ಆಗಮಗಳಿಗೆ ವೃತ್ತಿದೀಪಿಕೆಗಳನ್ನು ರಚಿಸಿದ ಸಕಲಾಗಮಾಚಾರ್ಯ. ಈತ ಬಸವಾದಿಗಳ ಸಮಕಾಲೀನ. ಕಾಲ ಕ್ರಿ.ಶ. 12ನೆಯ ಶತಮಾನ. ಈತ ಕನ್ನಡದಲ್ಲಿ ವಚನಗಳನ್ನು ರಚಿಸಿದುದಲ್ಲದೆ ಸಂಸ್ಕೃತದಲ್ಲಿ 'ಗುಹಾಧಿಕರಣ' ಎಂಬ ಕೃತಿಯನ್ನು ಬರೆದಿದ್ದಾನೆ.

ಪ್ರಸ್ತುತ ಕೃತಿಯಲ್ಲಿ ಮಂಚಣ್ಣನ 135 ವಚನಗಳಿವೆ. ಇವುಗಳನ್ನು 10 ಓಲೆ ಹಾಗು ಕಾಗದದ ಪ್ರತಿಗಳಿಂದ ಸಂಪಾದಿಸಲಾಗಿದೆ. ಇದರಲ್ಲಿ ಕ್ರಮಾಂಕ 128ರಿಂದ 135ನೆಯ ವಚನಗಳು ಬೆಡಗಿನ ವಚನಗಳಾಗಿದ್ದು ಟೀಕಾಸಹಿತ ಮುದ್ರಣವಾಗಿವೆ. ಸಂಪಾದಕರು ಪೀಠಿಕೆಯಲ್ಲಿ ಶಿವಲೆಂಕ ಮಂಚಣ್ಣನ ಬಗೆಗೆ ತೆಲುಗು ಮತ್ತು ಕನ್ನಡ ಸಾಹಿತ್ಯಗಳಲ್ಲಿ ದೊರಕುವ ಸಾಮಗ್ರಿಯನ್ನು ಉಪಯೋಗಿಸಿಕೊಂಡು ಅವನಿಗೆ ಸಂಬಂಧಿಸಿದ ಪವಾಡಗಳ ಬಗೆಗೆ ವಿವೇಚಿಸಿದ್ದಾರೆ. ಆದರೆ ಇಲ್ಲಿರುವ ಬೆಡಗಿನ ವಚನಗಳ ಟೀಕಾಕಾರನ ಬಗೆಗೆ ಏನನ್ನೂ ತಿಳಿಸಿಲ್ಲ.

ಸಿಂಗಳದ ಸಿದ್ಧ ಬಸವನ ಟೀಕೆಯುಳ್ಳ **ಬೆಡಗಿನ ವಚನಗಳು** ಎಂಬ ಕೃತಿ ಎಂ. ಜೀವನ ಅವರಿಂದ ಪ್ರಕಾಶಗೊಂಡಿದೆ. ಆ ಕೃತಿಯಲ್ಲಿ ಇಲ್ಲಿನ ಬೆಡಗಿನ ವಚನಗಳೆಲ್ಲ ಇದೇ ಕ್ರಮದಲ್ಲಿ ಟೀಕೆಯೊಡನೆ ದೊರೆಯುತ್ತವೆ. ಆ ಕಾರಣವಾಗಿ ಬೆಡಗಿನ ವಚನಗಳ ಟೀಕಾಕಾರ ಸಿಂಗಳದ ಸಿದ್ಧಬಸವನೆಂಬುದರಲ್ಲಿ ಸಂಶಯವಿಲ್ಲ. ಇಲ್ಲಿನ ಕ್ರಮಾಂಕ 12–ರ ವಚನದಲ್ಲಿ ಈಶ್ವರನ ಪಂಚಮುಖಗಳ ನಿರೂಪಣೆಯಲ್ಲಿ ವಾಮದೇವ ಮುಖದ ನಿರೂಪಣೆ ಲೋಪಹೊಂದಿದೆ. ಅಚ್ಚಾಗಿರುವ 'ಅಪ್ಪು ರೂಪಾದಲ್ಲಿ ಅಘೋರನಾದ' ಎಂದಿರುವ ಪಂಕ್ತಿಯ ಕ್ರಮಬದ್ಧವಾದ ಪಾಠ "ಅಪ್ಪು ರೂಪಾದಲ್ಲಿ ವಾಮದೇವನಾದ ಅಗ್ನಿರೂಪಾದಲ್ಲಿ ಅಘೋರನಾದ" ಎಂದಿರಬೇಕು.

ಕೃತಿಯಲ್ಲಿನ ಕೆಲವು ಮುದ್ರಣದೋಷಗಳು– **ಪು**ರುಷರಸ/ಪರುಷರಸ (16), **ಪಾ**ರಪಾಕ/ ಪರಪಾಕ (34). ನಟಿ/ ನಱಿ (43) ಮಱಿ /ಮಱೆ (43), ಸರ್ವಮಯುದ/ಸಮಯುದ (52), ಆತ್ಮವು**ಳ**ನ್ನಕ್ಕ/ ಆತ್ಮವುಳ್ಳನ್ನಕ್ಕ (55). ಬಳಲಿ **ಸಿ**ವೆ/ಬಳಲಿ ಸದೆ (123) ಇತ್ಯಾದಿ. ಕೃತಿಯ ಕೊನೆಯಲ್ಲಿ ವಚನಗಳ ಅಕಾರಾದಿ ಹಾಗು ಅರ್ಥಕೋಶಗಳಿವೆ.

**ಡಕ್ಕೆಯ ಬೊಮ್ಮಣ್ಣ**. ಬಸವಪೂರ್ವ ಯುಗದ ವಚನಕಾರರಲ್ಲೊಬ್ಬನಾದ ಡಕ್ಕೆಯ ಬೊಮ್ಮಣ್ಣನ ವಚನಾಂಕಿತ 'ಕಾಲಾಂತಕ ಭೀಮೇಶ್ವರಲಿಂಗ'. ಈತನ 89 ವಚನಗಳು ಪ್ರಥಮಬಾರಿಗೆ ಸಂಪೂರ್ಣವಾಗಿ ಬೆಳಕಿಗೆ ಬಂದಿವೆ. ಈತನ ವಚನ ಸಂಪಾದನೆಗೆ 9 ಓಲೆ ಹಾಗು ಕಾಗದದ ಪ್ರತಿಗಳನ್ನು ಬಳಸಿಕೊಂಡಿದೆ. ಈ ವಚನಗಳಲ್ಲಿನ ಕ್ರಮಾಂಕ 86–89ನೆಯ ವಚನಗಳು ಬೆಡಗಿನ ವಚನಗಳಾಗಿದ್ದು ಟೀಕಾಸಹಿತ ಅಚ್ಚಾಗಿವೆ.

ಕೃತಿಯ ಮುನ್ನುಡಿಯಲ್ಲಿ ಸಂಪಾದಕರು ಡಕ್ಕೆಯ ಮಾರಯ್ಯ ಹಾಗು ಡಕ್ಕೆಯ ಬೊಮ್ಮಣ್ಣ ಎಂಬ ಎರಡು ಹೆಸರುಗಳ ಬಗೆಗೆ ಕನ್ನಡ ಕೃತಿಗಳಲ್ಲಿ ಉಕ್ತವಾಗಿರುವ ಸಾಮಗ್ರಿಯನ್ನು ವಿಶ್ಲೇಷಿಸಿ ಆ ಹೆಸರುಗಳೆರಡೂ ಪರಸ್ಪರ ಅಭಿನ್ನವೆಂಬ ತೀರ್ಮಾನಕ್ಕೆ ಬಂದಿದ್ದಾರೆ. ಇಲ್ಲಿರುವ ಟೀಕಾ ವಚನಗಳ ಕೃತಿಕಾರನ ಬಗೆಗೆ ಏನನ್ನೂ ತಿಳಿಸಿಲ್ಲ.

ಸಿಂಗಳದ ಸಿದ್ಧಬಸವನ 'ಬೆಡಗಿನ ವಚನಗಳು' ಎಂಬ ಟೀಕಾಕೃತಿಯೊಂದಿದ್ದು ಅದರಲ್ಲಿ ಇಲ್ಲಿರುವಂತೆಯೇ ಬೆಡಗಿನ ವಚನಗಳೆಲ್ಲ ಟೀಕಾಸಹಿತ ದೊರಕುತ್ತವೆ. ಆ ಕಾರಣ ಬೆಡಗಿನ ವಚನಗಳ ಟೀಕಾಕಾರ ಸಿದ್ಧಬಸವನೆಂಬುದರಲ್ಲಿ ಸಂಶಯವಿಲ್ಲ.

ವಚನ 12ರಲ್ಲಿ 'ಆತ ಮಾಡುವುದಕ್ಕೆ ಮುನ್ನವೆ ಬೇಡದಿಪ್ಪುದೆ ವಸ್ತುಗುಣ' ಎಂಬ ಭಾಗ ಪುನರುಕ್ತವಾಗಿ ಅಚ್ಚಾಗಿದೆ. ಪ್ರಕಟವಾಗಿರುವಂತೆ ವಚನ 52ರಲ್ಲಿ ಸ್ಥೂಲ, ಸೂಕ್ಷ್ಮ, ಕಾರಣಗಳಲ್ಲಿ ಇಷ್ಟ, ಪ್ರಾಣಗಳನ್ನು ಕೂಡುವುದೇ ಯೋಗ ಎಂದಾಗುತ್ತದೆ. ಇಲ್ಲಿ ಅನ್ವಯಕ್ರಮಾನುಸಾರಿಯಾದ ಅರ್ಥ ಅಸ್ಪಷ್ಟವಾಗಿದೆ. ಆದರೆ ಈ ವಚನಕ್ಕಿರುವ 'ಗ' ಪ್ರತಿಯ ಪಾಠಾಂತರ ಈ ಕ್ಲೇಶವನ್ನು ಸಮರ್ಪಕವಾಗಿ ಬಗೆಹರಿಸುತ್ತದೆ. ಆ ಕಾರಣ 'ಗ' ಪಾಠ ಅಂಗೀಕಾರಾರ್ಹ. ಅದರಂತೆ ಇಲ್ಲಿನ ಪಾಠ 'ಇಷ್ಟಪ್ರಾಣ ಭಾವಂಗಳಲ್ಲಿ' ಎಂಬುದೇ ಸೂಕ್ತ.

ಕೆಲವೆಡೆ ಮುದ್ರಣ ದೋಷಗಳಿವೆ: ಸಂಬಂಧ**ನಾ**ಹಲ್ಲಿ/ವ (38), ಶಿ**ದ**ಲಿಂಗಾರ್ಚನೆ/ವ (62), ಲಿಂಗನ**ವ**ಜಿಯಲಾಗಿ/ವನ (66).

ಕೃತಿಯ ಕೊನೆಯಲ್ಲಿ ವಚನಗಳ ಅಕಾರಾದಿ ಮತ್ತು ಅರ್ಥಕೋಶಗಳಿವೆ.

**ಬಿಬ್ಬಿ ಬಾಚಯ್ಯ**. ಕ್ರಿ.ಶ. 12ನೆಯ ಶತಮಾನದ ಬಸವಾದಿ ಪ್ರಮಥರ ಸಮಕಾಲೀನ ಬಿಬ್ಬಿಬಾಚಯ್ಯ. ಈತನ ಸ್ಥಳ ಕಲುಬುರ್ಗಿ ಜಿಲ್ಲೆ ಗೊಬ್ಬೂರು. ತಂದೆ ಆದಿತ್ಯದೇವ. ಈತ 'ಏಣಾಂಕಧರ ಸೋಮೇಶ್ವರಲಿಂಗ' ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾನೆ. ಪ್ರಸ್ತುತ ಕೃತಿಯಲ್ಲಿ ಈತನ 100 ವಚನಗಳಿವೆ. ಇವುಗಳಲ್ಲಿ ಕ್ರಮಾಂಕ 78–100ರ ಸಂಖ್ಯೆಯ ವಚನಗಳು ಬೆಡಗಿನ ವಚನಗಳಾಗಿದ್ದು ಟೀಕೆ ಇದೆ. ಸಂಪಾದಕರು ಈ ಟೀಕಾಕಾರನ ಬಗೆಗೆ ಏನನ್ನೂ ಸೂಚಿಸಿಲ್ಲ.

ಸಿಂಗಳದ ಸಿದ್ಧಬಸವನ 'ಬೆಡಗಿನ ವಚನಗಳು' ಎಂಬ ಕೃತಿ ಎಂ. ಜೀವನರಿಂದ ಪ್ರಕಾಶಿತವಾಗಿದೆ. ಇದರಲ್ಲಿ ಸಿದ್ಧಬಸವನು ಬೆಡಗಿನ ವಚನಗಳಿಗೆಲ್ಲ ಟೀಕೆ ಬರೆದಿದ್ದಾನೆ. ಪ್ರಸ್ತುತ ಕೃತಿಯ ಬೆಡಗಿನ ವಚನ ಮತ್ತು ಟೀಕೆ ಅಲ್ಲಿನದಾಗಿದೆ. ಆ ಕಾರಣ ಬೆಡಗಿನ ವಚನಗಳ ಟೀಕಾಕಾರ ಸಿಂಗಳದ ಸಿದ್ಧಬಸವನೆಂಬುದರಲ್ಲಿ ಸಂಶಯವಿಲ್ಲ.

ಪ್ರಸ್ತುತ ಕೃತಿ 8 ಓಲೆ ಹಾಗು ಕಾಗದದ ಹಸ್ತಪ್ರತಿಗಳ ಸಹಾಯದಿಂದ ಸಂಪಾದಿತವಾಗಿದೆ.

ಟೀಕಿಕೆಯಲ್ಲಿ ಬಿಬ್ಬಿಬಾಚಯ್ಯನ ಹೆಸರು ಮತ್ತು ಸ್ಥಳದ ಬಗೆಗೆ ಚರ್ಚಿಸಿದ್ದಾರೆ. ಸಂಪಾದಕರು ತಿಳಿಸದ ಬಿಬ್ಬಿಬಾಚಯ್ಯನನ್ನು ಕುರಿತ ಕೆಲವು ಪ್ರಾಚೀನೋಲ್ಲೇಖಗಳು ಹೀಗಿವೆ:

ಹರಿಹರನು 'ಲಿಂಗಾರ್ಚನೆ ರಗಳೆ' ಯಲ್ಲಿ ಹೆಸರಿಸಿದ್ದಾನೆ. ಬಸವನ ಹಿರಿಯ ಸಮಕಾಲೀನನಾದ ಸಕಲೇಶ ಮಾದರಸ ಬಿಬ್ಬಿಬಾಚಯ್ಯನ 'ಪ್ರಸಾದದ ಪವಾಡ'ವನ್ನು ತನ ವಚನವೊಂದರಲ್ಲಿ ಉಲ್ಲೇಖಿಸಿದ್ದಾನೆ (ಕರ್ನಾಟಕ ಭಾರತಿ, 3.4. ಪು. 29). ಸತ್ಯಕ್ಕ, ಅಂಬಿಗರ ಚೌಡಯ್ಯ ಬಿಬ್ಬಿಬಾಚಯ್ಯನನ್ನು ತಮ್ಮ ವಚನಗಳಲ್ಲಿ ಹೆಸರಿಸಿದ್ದಾರೆ. ಟೀಕಿಕೆ ಪು. x ರಲ್ಲಿ ಲಕ್ಕಣ ದಂಡೇಶನ ಕಾಲ 1460 ಎಂದಿದೆ. ಇದು 1430 ಆಗಬೇಕು.

ಕೃತಿಯ ಕೊನೆಯಲ್ಲಿ ಬಿಬ್ಬಿಬಾಚಯ್ಯನ ವಚನಗಳ ಅಕಾರಾದಿ ಹಾಗು ಅರ್ಥಕೋಶಗಳಿವೆ

**ಮೆರೆ ಮಿಂಡಯ್ಯ.** 'ಐಘಟದೂರ ರಾಮೇಶ್ವರ ಲಿಂಗ' ಅಂಕಿತದ ಮೆರೆಮಿಂಡಯ್ಯನ 101 ವಚನಗಳು ಉಪಲಬ್ಧವಿದ್ದು ಪ್ರಸ್ತುತ ಕೃತಿಯಲ್ಲಿ ಪ್ರಕಟವಾಗಿವೆ. ಈ ವಚನಗಳ ಪರಿಷ್ಕರಣಕ್ಕೆ 3 ಓಲೆ ಹಾಗು 1 ಕಾಗದ ಪ್ರತಿಯನ್ನು ಸಂಪಾದಕರು ಉಪಯೋಗಿಸಿಕೊಂಡಿದ್ದಾರೆ.

ಮೆರೆಮಿಂಡಯ್ಯ ತನ್ನ ವಚನಗಳಲ್ಲಿ ಯಾವ ಶಿವಶರಣರನ್ನಾಗಲಿ ಹೆಸರಿಸಿಲ್ಲ. ಅಲ್ಲದೆ ತನ್ನ ವೈಯಕ್ತಿಕ ಸಂಗತಿಗಳ ಬಗೆಗೆ ಏನನ್ನೂ ತಿಳಿಸಿಲ್ಲ. ಹೀಗಾಗಿ ಈತನ ಕಾಲ ನಿರ್ಣಯ ಒಂದು ಕ್ಲಿಷ್ಟ ಸಮಸ್ಯೆಯಾಗಿದೆ.

ಡಾ॥ ಫ. ಗು. ಹಳಕಟ್ಟಿ ಮತ್ತು ಶ್ರೀ ಸಿದ್ದಯ್ಯ ಪುರಾಣಿಕರ ಅಭಿಮತದಂತೆ ಮೆರೆಮಿಂಡಯ್ಯ ಕ್ರಿ.ಶ. 8ನೆಯ ಶತಮಾನದಲ್ಲಿದ್ದ ತಮಿಳುನಾಡಿನ 63 ಶೈವ ಪುರಾತನರಲ್ಲೊಬ್ಬ. ಆದರೆ ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರು ವಚನಕಾರ ಮೆರೆಮಿಂಡಯ್ಯ–63 ಪುರಾತನರಲ್ಲಿನ ಮೆರೆಮಿಂಡಯ್ಯನಿಗಿಂತ ಭಿನ್ನ ವ್ಯಕ್ತಿಯಾಗಿದ್ದು ಆತನ ಕಾಲ ಸುಮಾರು 1100 ಎಂದಿದ್ದಾರೆ. ಈತನ ವಚನಗಳು ಗುಮ್ಮಳಾಪುರದ ಸಿದ್ಧಲಿಂಗಯತಿ ಹಾಗು ಗೂಳೂರ ಸಿದ್ಧವೀರಣಾರ್ಯರ ಶೂನ್ಯಸಂಪಾದನೆಗಳಲ್ಲಿ ದೊರಕುವುದರಿಂದ ಇವನು ಬಸವಾದಿಗಳ ಸಮಕಾಲೀನನಾಗಿರಬಹುದಾದ ಸಾಧ್ಯತೆ ಇದೆ. ವೀರಶೈವ ಸಂಸ್ಕೃತಿಯ ನಿರೂಪಣೆ ಇವನ ವಚನಗಳಲ್ಲಿ ಪ್ರತಿಪಾದಿತವಾದ ವಿಷಯ.

ಕೃತಿಯ ಕೊನೆಯಲ್ಲಿ ವಚನಗಳ ಅಕಾರಾದಿ ಮತ್ತು ಅರ್ಥಕೋಶಗಳಿವೆ.

**ವೀರಶೈವ ಚಿಂತಾಮಣಿ.** ವೀರಶೈವ ಚಿಂತಾಮಣಿ ವಚನ ಮತ್ತು ಹಾಡುಗಳ ಸಂಕಲನ. ಈ ಸಂಕಲನದ ಕರ್ತೃ ಮಹದ್ದೇವಯೋಗಿ. ಇದರಲ್ಲಿ 243 ವಚನಗಳು ಮತ್ತು 8 ಹಾಡುಗಳಿವೆ. ಇಲ್ಲಿನ ಹಾಡುಗಳೆಲ್ಲ ಮಹಲಿಂಗದೇವ, ಜಕ್ಕಣರ 'ಏಕೋತ್ತರ ಶತಸ್ಥಲ' ಗಳಲ್ಲಿ ದೊರೆಯುತ್ತವೆ. 2 ಪ್ರತಿಗಳ ಸಹಾಯದಿಂದ ಈ ಕೃತಿಯನ್ನು ಸಿದ್ಧಪಡಿಸಿರುವುದಾಗಿ ಸಂಪಾದಕರು ತಿಳಿಸಿದ್ದಾರೆ.

ವೀರಶೈವ ಚಿಂತಾಮಣಿಯಲ್ಲಿ ಮಹದ್ದೇವಯೋಗಿ ತನ್ನ ಹೆಸರನ್ನಲ್ಲದೆ ಮತ್ತೆ ಯಾವ ಸಂಗತಿಯನ್ನೂ ತಿಳಿಸಿಲ್ಲ. ಇವನನ್ನಾಗಲಿ ಇವನ ಕೃತಿಯನ್ನಾಗಲಿ ಕನ್ನಡದ ಯಾವ ಕೃತಿಕರ್ತರೂ ಹೆಸರಿಸಿದಂತಿಲ್ಲ. ಆದ್ದರಿಂದ ಇವನ ಕಾಲನಿರ್ಣಯ ಕ್ಲಿಷ್ಟವೇ ಸರಿ. ಪ್ರಸ್ತುತ ಸಂಪಾದಕರು ಗ್ರಂಥರಚನಾ ರೀತಿಯನ್ನು ಅನುಲಕ್ಷಿಸಿ ಈ ಕೃತಿ '16 ಅಥವಾ 17ನೆಯ ಶತಮಾನದಲ್ಲಿ ಹುಟ್ಟಿದಂತೆ ತೋರುತ್ತದೆ' ಎಂದಿದ್ದಾರೆ. (ಪು. xi)

ಮಹದ್ದೇವಯೋಗಿ ತನ್ನ ಕೃತಿಯನ್ನು ವೀರಶೈವಧರ್ಮದ ಲಕ್ಷಣಗಳಲ್ಲೊಂದಾದ ಅಷ್ಟಾವರಣದ ಕ್ರಮದಲ್ಲಿ ಗುರುಮಹಾತ್ಮ್ಯದಿಂದ ಮಂತ್ರ ಮಾಹಾತ್ಮ್ಯದ ವರೆಗಿನ 8 ವಿಭಾಗಗಳಲ್ಲಿ ಸಂಕಲನ ಮಾಡಿದ್ದಾನೆ. ಕೃತಿ ಉಮಾಮಹೇಶ್ವರ ಸಂವಾದ ರೂಪ ದಲ್ಲಿದೆ. ಪ್ರತಿ ಮಾಹಾತ್ಮ್ಯದ ಮೊದಲು ಗದ್ಯ ಭಾಗವಿದೆ. ಅನಂತರ ಸಂಸ್ಕೃತದ ಆಗಮ, ಉಪನಿಷತ್ತು. ಇತಿಹಾಸ. ಪುರಾಣ ಮೊದಲಾದವುಗಳಿಂದ ಆರಿಸಿದ ಭಾಗ ಗಳ ಉಲ್ಲೇಖಗಳಿವೆ. ಅನಂತರ ಆ ಆ ಸ್ಥಲಮಹಾತ್ಮೆಗೆ ಸಂಬಂಧಿಸಿದ ಒಂದೊಂದು ಹಾಡು ಹಾಗು ವಚನಗಳಿವೆ. ಸಂಸ್ಕೃತದ ಉಲ್ಲೇಖಿತ ಭಾಗಗಳಿಗೆ ಅಲ್ಲಲ್ಲಿ ಆಕರಗಳನ್ನು ಸೂಚಿಸಿದೆ. ಕೃತಿಯ ಅಂತ್ಯದಲ್ಲಿ ಗ್ರಂಥದಲ್ಲಿ ಉದ್ಧೃತವಾದ ಗ್ರಂಥ, ವಚನ. ಪದಗಳಲ್ಲಿನ ನುಡಿಗಳ ಸಂಖ್ಯೆಗಳನ್ನು ತಿಳಿಸಿದ್ದರೂ ಅದು ತಪ್ಪಾಗಿದೆ.

ಪ್ರಸ್ತುತ ಸಂಪಾದನೆಯಲ್ಲಿ ಹಾಡಿನ ಚರಣಗಳು ವಚನಗಳಾಗಿ ಅಚ್ಚಾಗಿವೆ. ಪುಟ 44–46 ರಲ್ಲಿನ ಹಾಡು ಗುರುಪುರದ ಮಲ್ಲಯ್ಯನದು. ಪು. 46ರಲ್ಲಿನ ಪುರದ ಮಲ್ಲಯ್ಯ ಅಂಕಿತದ ಚರಣ ಹಾಡಿಗೆ ಸೇರಬೇಕಾದ್ದು ಇಲ್ಲಿ ವಚನವಾಗಿ ತಪ್ಪಾಗಿ ಅಚ್ಚಾ ಗಿದೆ. ಇದರಂತೆಯೆ ಪು. 114–116ರಲ್ಲಿನ ಹಾಡು 'ಸದ್ಗುರು ಶಂಭು ಸೋಮೇಶ್ವರ' ಅಂಕಿತದ ಕರ್ತೃವಿನದು. ಪು. 116ರಲ್ಲಿ ಅಲ್ಲಿನ ಕೊನೆಯ ಚರಣ ವಚನವಾಗಿ ಮುದ್ರಣ ಗೊಂಡಿದೆ. ಪು. 136–137ರಲ್ಲಿ 'ಕೂಡಲ ಸಂಗಮದೇವ' ಅಂಕಿತದ ಬಸವಣ್ಣನವರ ಹಾಡು 5 ಚರಣಗಳಲ್ಲಿದ್ದು 5 ಪ್ರತ್ಯೇಕ ವಚನಗಳೆಂಬಂತೆ ಅಚ್ಚಾಗಿದೆ. ಇದು ಒಂದೇ ಹಾಡಿನ ವಿವಿಧ ಚರಣಗಳು. ಹೀಗಾಗಿ ಇದರಲ್ಲಿನ 243 ವಚನಗಳ ವಿಭಜನೆ 8 ಮಾಹಾತ್ಮ್ಯಗಳಲ್ಲಿ ಅನುಕ್ರಮವಾಗಿ 46+47+32+24+21+22+17+ 34 ಆಗುವುದು. ಇವುಗಳಲ್ಲಿ 2 ವಚನಗಳಿಗೆ (ಪು. 31–2 ಮತ್ತು ಪು. 86) ವಚ ನಾಂಕಿತಗಳಿಲ್ಲ. ಇಲ್ಲಿರುವ 8 ಹಾಡುಗಳು 5 ಜನರ ರಚನೆಗಳಾಗಿವೆ.

| | |
|---|---|
| 1) ಕೂಡಲಸಂಗಯ್ಯ– | ಪು. 64–5 |
| | ಪು. 94–5 |
| | ಪು. 136–137 |
| 2) ಗುರುಪುರದ ಮಲ್ಲ– | ಪು. 44–46 |
| | ಪು. 195–198 |
| 3) ಸದ್ಗುರು ಶಂಭು ಸೋಮೇಶ್ವರ– | ಪು. 114–116 |
| 4) ಸಂಗ– | ಪು. 155–156 |
| 5) ಸಿದ್ಧ ಸೋಮೇಶ– | ಪು. 14. |

ಪ್ರಸ್ತಾವನೆ (ಪು. xi – xii ) ಯಲ್ಲಿ ಕೊಟ್ಟಿರುವ ಹಲವರು ವಚನಕಾರರ ವಚನ ಸಂಖ್ಯೆಗಳಲ್ಲಿ ತಪ್ಪುಗಳಿವೆ. ಅವುಗಳ ಸಮರ್ಪಕ ಸಂಖ್ಯೆ ಈ ರೀತಿ ಇದೆ:

ಅಕ್ಕ ಮಹಾದೇವಿ–6
ಉರಿಲಿಂಗಪೆದ್ದಿ–21
ಚೆನ್ನಬಸವ–40
ಹ. ಅಪ್ಪಣ್ಣ–7
ಬಸವಣ್ಣ–41
ಮೋಳಿಗೆ ಮಾರಯ್ಯ–2
ಸಿದ್ಧರಾಮ–13
ಸ್ವತಂತ್ರ ಸಿದ್ಧಲಿಂಗೇಶ್ವರಾ–8

ಅಮುಗಿದೇವ ಮತ್ತು ಪುರದ ಮಲ್ಲಯ್ಯಗಳ ವಚನಗಳಿಲ್ಲ.
ಮೇಲಿನ ಪಟ್ಟಿಗೆ ಈ ಕೆಳಗಿನ ಅಂಕಿತಗಳ ವಚನಕಾರರನ್ನು ಸೇರಿಸಬೇಕಾಗಿದೆ.

ನಿಜಗುರು ಸ್ವತಂತ್ರ ಕಪಿಲಸಿದ್ಧಮಲ್ಲಿಕಾರ್ಜುನ–1
ಶ್ರೀ ಮಲ್ಲಿಕಾರ್ಜುನ–1
ಅಂಕಿತವಿಲ್ಲದ ವಚನಗಳು–2.

ಕೃತಿಯ ಕೊನೆಯಲ್ಲಿ ಕಠಿಣ ಶಬ್ದಕೋಶ. ಪಾರಿಭಾಷಿಕ ಶಬ್ದಕೋಶ, ಶ್ಲೋಕಗಳ ಅಕಾರಾದಿ. ವಚನಗಳ ವರ್ಣಾನುಕ್ರಮ. ಪದಗಳಲ್ಲಿಯ ನುಡಿಯ ಅಕಾರಾದಿಗಳಿವೆ.

**ಮುಕ್ತಿಕಂಠಾಭರಣ.** ಮುಕ್ತಿ ಕಂಠಾಭರಣ ಒಂದು ವಚನ ಸಂಕಲನ. ಕೃತಿ ಅಸಮಗ್ರವಾಗಿ ದೊರೆತಿರುವ ಕಾರಣವಾಗಿ ಕರ್ತೃವಿನ ಹೆಸರಾಗಲಿ. ಅವನ ದೇಶ ಕಾಲಗಳ ಬಗೆಗೆ ಆಗಲಿ ಕೃತಿಯಿಂದ ಯಾವ ಸಂಗತಿಯೂ ತಿಳಿದುಬರುವುದಿಲ್ಲ. ಈಗ ಲಭಿಸಿರುವ ಕೃತಿ ಭಾಗದಲ್ಲಿ (1) ಗುರುಪ್ರಶಂಸೆ (2) ಗುರು ಪಾದೋದಕ ಪ್ರಶಂಸೆ (3) ಲಿಂಗಧಾರಣಾ ಪ್ರಶಂಸೆ (4) ಆಚಾರ ಪ್ರಶಂಸೆ ಎಂಬ 4 ಪ್ರಶಂಸೆಗಳಿವೆ. ಇದರಲ್ಲಿ ಒಟ್ಟು 42 (437) ಮಂದಿ ವಚನಕಾರರು ಹಾಗು ವಚನಕಾರ್ತಿಯರ 726 ವಚನಗಳಿವೆ. ಕೃತಿ ಏಕೈಕ ಹಸ್ತಪ್ರತಿಯ ಸಹಾಯದಿಂದ ಅಚ್ಚಾಗಿದೆ.

ಕೃತಿಯ ಕಾಲವನ್ನು ಡಾ॥ ಆರ್. ಸಿ. ಹಿರೇಮಠರು 16–17ನೆಯ ಶತಮಾನವೆಂದು (ಪ್ರಸ್ತಾವನೆ, ಪು. 6) ಸೂಚಿಸಿದ್ದಾರೆ. ಆದರೆ ಈ ಕೃತಿ 18ನೆಯ ಶತಮಾನದಲ್ಲಿ ಸಂಕಲಿತವಾದಂತೆ ನಿರ್ಧರಿಸಬಹುದಾಗಿದೆ.

ಮುಕ್ತಿಕಂಠಾಭರಣದಲ್ಲಿ 'ಶಂಕರಪ್ರಿಯ ಚನ್ನಕದಂಬಲಿಂಗ' ಅಂಕಿತದ 2 ವಚನಗಳಿವೆ (ಪು. 50–1) ಸಂಪಾದಕರಂತೆ ಈ ಅಂಕಿತದ ಕರ್ತೃ ಮರುಳಶಂಕರದೇವ. ಶೂನ್ಯಸಂಪಾದನೆಗಳ ಪ್ರಕಾರ ಮರುಳಶಂಕರದೇವನ ಅಂಕಿತ 'ಶುದ್ಧಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಚೆನ್ನ ಮಲ್ಲಿಕಾರ್ಜುನಾ'. ಮೇಲೆ ಉಕ್ತವಾದ ಶಂಕರಪ್ರಿಯ ಚನ್ನಕದಂಬ

ಲಿಂಗ ಅಂಕಿತ ಹ್ರಸ್ವರೂಪದಲ್ಲಿದ್ದು ಈ ವಚನಾಂಕಿತ ಪೂರ್ಣರೂಪ 'ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬಲಿಂಗ ನಿರ್ಮಾಯ ಪ್ರಭುವೇ" ಎಂಬುದಾಗಿದೆ. ಈ ಅಂಕಿತದ ವಚನಕಾರ ಕಾಡಸಿದ್ಧೇಶ. ಈತನ ಕಾಲ ಸು. 1725 ಎಂದು ಕವಿಚರಿತೆಕಾರರ ಅಭಿಪ್ರಾಯ (359–60). ಇಲ್ಲಿನ 'ಅಯ್ಯಾ, ಕೇಳಯ್ಯಾ ಮತ್ತ್ರಾಣನಾಥ ಬಸವಣ್ಣ ಲಿಂಗತಂದೆ...' ಎಂಬ ವಚನ ಪಾಠಭೇದಗಳೊಡನೆ ಕಾಡಸಿದ್ಧೇಶ್ವರನ ವಚನಗಳಲ್ಲಿ (ಪ್ರಸಾದಿಯ ಭಕ್ತಸ್ಥಲ, 9. ಪು. 159; ಹುಬ್ಬಳ್ಳಿ ಪ್ರಕಟಣೆ 1938) ದೊರೆಯುತ್ತದೆ. ಆ ಕಾರಣವಾಗಿ ಮುಕ್ತಿಕಂಠಾಭರಣದ ಕಾಲ ಸುಮಾರು 1750 ಆಗಬಹುದು. ಇಲ್ಲಿ ನಕೆಲವು ವಚನಗಳಿಗೆ ಟೀಕೆ ಇದೆ.

ವಚನಗಳನ್ನು ಉಲ್ಲೇಖಿಸುವ ಮೊದಲು ವಚನಕಾರರ ಹೆಸರುಗಳನ್ನು ನಮೂದಿಸುವುದು ಇಲ್ಲಿನ ಸಂಪ್ರದಾಯ. ಪು. 33ರಲ್ಲಿ (92) ಮಡಿವಾಳಯ್ಯ ಎಂದಿರುವುದು ತಪ್ಪಾಗಿದ್ದು ಅಲ್ಲಿ ಹಾವಿನಹಾಳ ಕಲ್ಲಿದೇವ ಎಂದಾಗಬೇಕು. 'ಆಚಾರ ಪ್ರಶಂಸೆ' ಯಲ್ಲಿ ವಚನ ಸಂಖ್ಯೆ 235, 236. 237, 271. 272ರ ವಚನಕಾರರ ಹೆಸರಿನ ಉಲ್ಲೇಖಗಳಿಲ್ಲ. ಇವು ಕ್ರಮವಾಗಿ ಬಸವಣ್ಣ. ಚನ್ನಬಸವಣ್ಣ, ಬಸವಣ್ಣ, ಪ್ರಭುದೇವ. ಸಿದ್ಧರಾಮಯ್ಯ ಎಂದಿರಬೇಕು.

ಆಚಾರ ಪ್ರಶಂಸೆಯ 238ನೆಯ ವಚನದ ಮೊದಲಿನ ಗದ್ಯಭಾಗದಲ್ಲಿ ಬಂದಿರುವ 'ಚನ್ನಬಸವೇಶ್ವರ ಸ್ವಾಮಿಗಳು' ಎಂದಿರುವುದು 'ಬಸವೇಶ್ವರ ಸ್ವಾಮಿಗಳು' ಎಂದಾಗಬೇಕು. ಏಕೆಂದರೆ ಹಿಂದಿನ 237ನೆಯ ವಚನ ಬಸವಣ್ಣನ ನಿರೂಪಣೆಯಾಗಿದೆ.

ಮುಕ್ತಿಕಂಠಾಭರಣದಲ್ಲಿ ಉಲ್ಲೇಖಿತವಾದ ಹಲವು ವಚನಕಾರರ ಅಂಕಿತಗಳಿಗೂ ಕವಿಚರಿತೆ ಇತ್ಯಾದಿ ಗ್ರಂಥಗಳಲ್ಲಿ ಉಕ್ತವಾದ ಅಂಕಿತಗಳಿಗೂ ವ್ಯತ್ಯಾಸಗಳಿವೆ.

ಅಕ್ಕನಾಗಮ್ಮ– 900ರ ಕಟ್ಟಿನಂತೆ 'ಬಸವಣ್ಣ ಪ್ರಿಯ ಕೂಡಲ ಚೆನ್ನಸಂಗ'. ಮುಕ್ತಿಕಂ. ದಂತೆ ಕೂಡಲ ಚೆನ್ನಸಂಗ (ಕವಿಚರಿತೆ ಪ್ರಕಾರ ಈ ಅಂಕಿತ ಚೆನ್ನಬಸವನದು). ಚೆನ್ನಮಲ್ಲಿಕಾರ್ಜುನರು ಪ್ರಕಟಿಸಿದ ಸರ್ವ ಪುರಾತನರ ವಚನ (900–ರ ಕಟ್ಟು)ದಲ್ಲಿ ಅಕ್ಕನಾಗಮ್ಮನ 10 ವಚನಗಳಿವೆ. ಇವುಗಳಲ್ಲಿ 3 ಮುಕ್ತಿಕಂಠಾಭರಣದಲ್ಲಿನ ವಚನಗಳಾಗಿದ್ದು (ಪು. 101–102, ಸಂ. 205–07 ) 'ಬಸವಣ್ಣ ಪ್ರಿಯ ಕೂಡಲ ಚೆನ್ನಸಂಗಮದೇವಾ' ಎಂಬ ಅಂಕಿತವಿರುವುದು ಗಮನಾರ್ಹ. ಪಚಪದಪ್ಪಣ್ಣ–ಕವಿಚರಿತೆಯಂತೆ 'ಬಸವ ಪ್ರಿಯ ಕೂಡಲ ಚೆನ್ನಸಂಗಮದೇವಾ' (I. 199) ಮುಕ್ತಿ ಕಂ. ಅಪ್ಪಣ್ಣಪ್ರಿಯ ಕೂಡಲ ಚೆನ್ನಬಸವಣ್ಣ (ಸಂ. 22. ಪು. 52) ಏಕ ಕೇತಯ್ಯ– ಮುಕ್ತಿ ಕಂ.ದಂತೆ ಈತನ ವಚನಾಂಕಿತಗಳು 'ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ' (ಪು. 12) ಮತ್ತು ರಾಮೇಶ್ವರ ಲಿಂಗ (ಪು. 44). ಕವಿಚರಿತೆಯಂತೆ ರೆಮ್ಮವ್ವೆಯ ಅಂಕಿತ 'ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ' (I. 235) ಏ. ಕೇತಯ್ಯನ ಅಂಕಿತ 'ರಾಮೇಶ್ವರಲಿಂಗ' (I. 207) ಕಿನ್ನರಿ ಬ್ರಹ್ಮಯ್ಯ – 'ಮಹಾಲಿಂಗತ್ರಿಪುರಾಂತಕ' ಕವಿಚರಿತೆ (I. 223–24) ಮುಕ್ತಿಕಂ. – 'ತ್ರಿಪುರಾಂತಕಲಿಂಗ' (538, 540 ಇತ್ಯಾದಿ) ಸಗರದ ಬೊಮ್ಮಣ್ಣ– 'ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರ' ಕವಿಚರಿತೆ (I. 214) 'ಸಗರದ

ಲಿಂಗ' – ಮುಕ್ತಿಕಂ. (ಪು. 188: 544) ಕಿರಾತ ಸಂಗಯ್ಯ – 'ಕಿರಾತೇಶ್ವರಲಿಂಗ' ಕವಿಚರಿತೆ (I. 513) 'ಕಿರಾತಸಂಗಲಿಂಗ'–ಮುಕ್ತಿಕಂ. (ಪು. 188: 543)

ಮುಕ್ತಿ ಕಂ.ದ ಗುರುಪಾದೋದಕ ಪ್ರಶಂಸೆಯ ಕ್ರಮಾಂಕ 11 (ಪು. 11)ರಲ್ಲಿ ಮಾರಯ್ಯ ಎಂಬ ವಚನಕಾರನ ಅಂಕಿತ ಮನಸಂದ ಮಾರೇಶ್ವರಾ ಎಂದಿದೆ. ಕವಿಚರಿತೆ ಪ್ರಕಾರ ಮೇಲಿನ ಅಂಕಿತದ ವಚನಕಾರ ಮನಸಂದ ಮಾರಿತಂದೆ. (I. 212) ಬಾಲ ಸಂಗಯ್ಯನ ವಚನಾಂಕಿತ ಇಲ್ಲಿ 3 ರೂಪಗಳಲ್ಲಿದೆ:

1) ಅಪ್ರಮಾಣ ಅಗಮ್ಯ ಅಗೋಚರ ಕೂಡಲಸಂಗಮದೇವಾ (ವಚನಸಂಖ್ಯೆ 305, 306, ಪು. 125–26)

2) ಅಗಮ್ಯ ಅಗೋಚರ ಅಪ್ರಮಾಣ ಕೂಡಲಸಂಗಮದೇವಾ (ವಚನಸಂಖ್ಯೆ307, 309, 311. ಪು. 126–127)

3) ಅಗಮ್ಯ ಅಪ್ರ[ಮಾಣ ಕೂಡಲ ಸಂಗಮದೇವಾ] (ವಚನಸಂಖ್ಯೆ 308, 310, ಪು. 126–127).

ಕವಿಚರಿತೆಕಾರರು ಶಿವಪೂಜೆಯ ಭೀಮ (I. 514) ಮತ್ತು ಕಿರಾತ ಸಂಗಯ್ಯ (I. 513)ನ ಹೆಸರು ಹಾಗು ಅಂಕಿತಗಳನ್ನು ಮಾತ್ರ ತಿಳಿಸಿರುವರು. ವಚನಗಳಿಲ್ಲ. ಮುಕ್ತಿ ಕಂ. ದಲ್ಲಿ ಇವರ ವಚನಗಳಿವೆ ( 21, ಪು. 13 ಹಾಗು 543. ಪು. 188). ಮುಕ್ತಿಕಂ. ದಲ್ಲಿನ ಪು. 32ರಲ್ಲಿನ 89ನೆಯ 'ಮಹಾಘನ ಸೋಮೇಶ್ವರಾ' ಅಂಕಿತದ ವಚನ ವನ್ನು ಸೊಡ್ಡಳ ಬಾಚರಸನದೆಂದಿದೆ. ಈ ಸಂಗತಿ ಪರಿಶೀಲನಾರ್ಹ.

ಪ್ರಸ್ತಾವನೆಯಲ್ಲಿ ಬಾಲಸಂಗಯ್ಯನ ವಚನಸಂಖ್ಯೆ (ಪು. 5) 22 ಎಂದಿದೆ. ಆದರೆ ಪ್ರಸ್ತುತ ಕೃತಿಯಲ್ಲಿರುವ ವಚನ ಸಂಖ್ಯೆ 21.

ಮುಕ್ತಿ ಕಂ. ದಲ್ಲಿ ಕವಿಚರಿತೆಕಾರರಿಗೆ ದೊರಕದ '8' ಹೊಸ ವಚನಕಾರ ಮತ್ತು ವಚನಕಾರ್ತಿಯರ ವಚನಗಳಿವೆ.

1) ನಿರಾಳದೇವ (ಪು. 23)
2) ನಿಜಲಿಂಗದೇವ (ಪು. 24)
3) ವೇದಕಂಚುಕಿ (ಪು. 103)
4) ಸೌಂದರದೇವಿ (ಪು. 104)
5) ಆಗಮಮೋಹಿನಿ (ಪು. 104)
6) ಶಾಂಭವಿ (ಪು. 104, 105. 108)
7) ರೇವಣಸಿದ್ಧ (ಪು. 108)
8) ಪ್ರಸಾದಿ ಬಂಕಣ್ಣ (ಪು. 141. 142)

ಬಸವೇಶ್ವರನ 957 ಷಟ್ಸ್ಥಲ ವಚನದ ಕಟ್ಟಿಗೆ ಹುಮನಾಬಾದಿನ ವಿರಕ್ತ ಮಠದ ನಿರಂಜನಸ್ವಾಮಿ ವ್ಯಾಖ್ಯಾನವನ್ನು ಬರೆದ ಸಂಗತಿ ಮುಕ್ತಿಕಂ. ದ ಆಚಾರ ಪ್ರಶಂಸೆಯ ಕ್ರಮಾಂಕ 462 ಮತ್ತು 463ನೆಯ ವಚನಗಳ ಟೀಕಿನಿಂದ ತಿಳಿದುಬರುತ್ತದೆ. ಈ ಟೀಕಾ ವಿಚಾರ ಕವಿಚರಿತೆಯಲ್ಲಿಲ್ಲ.

ಶಿವಯೋಗ ಪ್ರಸಂಗದಲ್ಲಿ 'ಚನ್ನಬಸವ ಸಿದ್ಧರಾಮನಿಗೆ ಪೇಳಿದ ವಚನ ಮೂಱು ಲಕ್ಷ' ಎಂಬ ಮಡಿವಾಳಯ್ಯನ ಹೇಳಿಕೆ (ವಚನಸಂಖ್ಯೆ 504, ಪು. 181) ಪ್ರಭುದೇವನ 'ಲಿಂಗಾಂಗ ಸಮರಸದಲ್ಲಿ ಹಾಡಿರ್ಪ ನಾನು ಆಱೈದು ಕೋಟಿ ವಚನಗಳ' (48, ಪು. 20) ಮತ್ತು 'ಶಾಂಭವಿ ಕೋಣೆ ನಿಮಿತ್ತ ಹಾಡಿದೆನಯ್ಯಾ ಪನ್ನೊಂದು ಲಕ್ಷ ವಚನಗಳ' (246, ಪು. 212) ಎಂಬ ಉಲ್ಲೇಖಗಳು ವಚನರಚನೆಯ ಬೃಹತ್ಪ್ರಮಾಣ ಸೂಚಕ ಗಳಾಗಿವೆ. ಮುಕ್ತಿಕಂ. ಅನೇಕ ವಚನಗಳು ಪುನರಾವೃತ್ತಿಗೊಂಡಿವೆ. ಕೆಲವು ವಚನಗಳು ಎರಡು ಬಾರಿ ಬಂದಿವೆ:

ನಂ. 24 (ಪು. 6) +ನಂ. 338 (ಪು. 138)
ನಂ. 267 (ಪು. 116) +ನಂ. 395 (ಪು. 152)
ನಂ. 138 (ಪು. 82) +ನಂ. 466 (ಪು. 169)
ಇತ್ಯಾದಿ.

'ತೊಱೆಯ ಮೀವ ಅಣ್ಣಗಳಿರಾ' ಎಂಬ ಬಸವಣ್ಣನವರ ವಚನ 3 ಬಾರಿ ಪುನ ರುಕ್ತವಾಗಿದೆ: ನಂ. 102 (ಪು. 74), 377 (ಪು. 147), 548 (ಪು. 189).

ಕೆಲವು ಅಚ್ಚಿನ ತಪ್ಪುಗಳು:

ಭಾವ**ವ**ದಲ್ಲಿ/ವಾ 71 (ಪು. 25), ಒಡ**ದ**/ವ 30 (ಪು. 41), ಅಧ**ರ**ಲ್ಲಿ/ರದ 32 (ಪು. 56), ನಿರೀಕ್ಷ**ಣೆ**ಮಾಳ್ಪ/ಣ 48 (ಪು. 61) **ಯೆ**ಳೆ/ಎ 159 (ಪು. 88) ಖ**ಟ್ವಾ**ಂಗಧರ / ಟ್ವಾಂ 311 (ಪು. 127), ಒಂ**ನು**/ದು 334 (ಪು. 136) ಪ**ರ**ಷಲಿಂಗ/ರು 343 (ಪು. 140), ಮ**ಲೆ**ಯಲ್ಲಿ/ಮಱೆಯಲ್ಲಿರ್ದ್ದ 379 (ಪು. 148) ತಂಗ**ಟೋ**ರ/ ಟೂ 461 (ಪು. 168), **ಕೊ**ಶ/ ಕೋ 508 (ಪು. 176), ಜೀ**ಳ**ಗೆಡ ಹದಿರಾ/ಳು 52 (ಪು. 182).

**ಬಸವಪುರಾಣ**. ಕನ್ನಡದಲ್ಲಿನ ಜನಪ್ರಿಯ ಪುರಾಣಗಳಲ್ಲೊಂದಾದ ಬಸವ ಪುರಾಣದ ಕರ್ತೃ ಶಿವಕವಿದೇವಸುತ ಭೀಮಕವಿ. ಭೀಮಕವಿ ಕ್ರಿ.ಶ. 1369ರಲ್ಲಿ ಬಸವ ಪುರಾಣವನ್ನು ಪೂರ್ಣಗೊಳಿಸಿದನು. ಕವಿಯೆ ಬಸವಪುರಾಣದ ಆಕರದ ಬಗೆಗೆ ಪಾಲ್ಕುರಿಕೆ ಸೋಮನಾಥನ ಬಸವಪುರಾಣವನ್ನು ಕನ್ನಡಿಸಿರುವುದಾಗಿ (ಪೀಠಿಕಾ ಸಂಧಿ. 16) ಹೇಳಿದ್ದಾನೆ. ಬಸವಪುರಾಣವನ್ನಲ್ಲದೆ ಭೀಮಕವಿ ಭೀಮಕವೀಶ್ವರ ರಗಳೆ ಮತ್ತು ಭೃಂಗಿ ದಂಡಕಗಳನ್ನು ರಚಿಸಿದ್ದಾನೆ. ರಗಳೆ ಪ್ರಕಟವಾಗಿದೆ. ದಂಡಕ ಉಪಲಬ್ಧವಿದೆ. ಆದರೆ ಪ್ರಕಟವಾಗಿಲ್ಲ. ಈತನ ಸಮಾಧಿ ಆಂಧ್ರ ಪ್ರದೇಶದ ಗಡೇಕಲ್ಲಿನಲ್ಲಿದೆ.

ಬಸವಪುರಾಣದ ಕಥಾವಸ್ತು ಬಸವಣ್ಣನವರ ಚರಿತ್ರೆ. ಇದರೊಡನೆ ಅವರ ಪೂರ್ವಕಾಲೀನ ಹಾಗು ಸಮಕಾಲೀನ ಶರಣರ ಚರಿತೆಗಳು ಸಮಾವೇಶಗೊಂಡಿವೆ. ತಮಿಳು ನಾಡಿನ ಶೈವ ಪುರಾತನರ ಕಥೆಗೂ ಇಲ್ಲಿ ಎಡೆ ದೊರೆತಿದೆ.

ಪ್ರಸ್ತುತ ಬಸವಪುರಾಣದ ಪರಿಷ್ಕರಣವನ್ನು 10 ಓಲೆ ಹಾಗು ಕಾಗದ (ಅಚ್ಚಿನ ಪ್ರತಿಯೂ ಸೇರಿ)ದ ಪ್ರತಿಗಳ ಸಹಾಯದಿಂದ ಮಾಡಿರುವುದಾಗಿ ಸಂಪಾದಕರು ತಿಳಿಸಿ

ದ್ದಾರೆ. ಆದರೆ ಕೃತಿಯ ಅಡಿಟಿಪ್ಪಣಿಗಳಲ್ಲಿನ ಪ್ರತಿಗಳ ಸಂಕೇತಗಳನ್ನು ಗಮನಿಸಿದಾಗ ಅಲ್ಲಿ ತ, ಸ, ದ ಎಂಬ ಸಂಕೇತಗಳ ಮೂರು ಹೊಸ ಪ್ರತಿಗಳಿವೆ. ಈ ಪ್ರತಿಗಳ ಬಗೆಗೆ ಯಾವ ವಿವರಗಳೂ ಕೃತಿಯ ಪ್ರಸ್ತಾವನೆಯಲ್ಲಿ ನಿರೂಪಿತವಾಗಿಲ್ಲ. ಹೀಗಾಗಿ ಬಸವ ಪುರಾಣ 10 + 3 = 13 ಪ್ರತಿಗಳ ಸಹಾಯದಿಂದ ಮುದ್ರಣವಾಗಿದೆ.

ಗ್ರಂಥಸಂಪಾದನಾ ಶಾಸ್ತ್ರದ ನಿಯಮಗಳಂತೆ ಇಲ್ಲಿನ ಪ್ರತಿಗಳ ಪರಸ್ಪರ ಸಂಬಂಧವನ್ನು ಕುರಿತ ಪೀಳಿಗೆಯನ್ನು ರಚಿಸಿ ಯಾವ ಪ್ರತಿಯನ್ನು ಅಧಿಕೃತವಾಗಿ ಆಧ ರಿಸಲಾಗಿದೆ ಎಂಬುದನ್ನು ತಿಳಿಸಬಹುದಾಗಿತ್ತು. ಹೀಗೆ ಮಾಡಿದ್ದರೆ ಈ ಕೃತಿಯ ಪರಿ ಷ್ಕರಣ ಮೌಲ್ಯಕ್ಕೆ ಇನ್ನೂ ಹೆಚ್ಚಿನ ಬೆಲೆ ಲಭಿಸುತ್ತಿತ್ತು.

ಕೃತಿಯ ಪ್ರಸ್ತಾವನೆಯಲ್ಲಿ ಸಂಪಾದಕರು ಈ ಕೆಳಕಂಡ ವಿಷಯಗಳ ಬಗೆಗೆ ವಿವೇ ಚಿಸಿದ್ದಾರೆ: ಭೀಮಕವಿಯ ಚರಿತ್ರೆ, ಪುರಾಣಗಳ ವಿಶೇಷ ಲಕ್ಷಣ ಇತ್ಯಾದಿ; ವೀರಶೈವ ಪುರಾಣಗಳ ವಿಷಯ ವಿಭಜನೆ; ಉದಾ. – ಬಸವಪುರಾಣ, ವೀರಶೈವಾಮೃತ ಪುರಾಣ ಇತ್ಯಾದಿ; ವೀರಶೈವ ಪುರಾಣ ಲಕ್ಷಣಗಳು. ಬಸವ ಪುರಾಣದ ವಿಮರ್ಶೆ. ಬಸವಪುರಾಣದ ಪಾಠಸಮಸ್ಯೆ.

ಪ್ರಸ್ತಾವನೆ ಪು. 114ರಿಂದ 180ರ ವರೆಗೂ ಬಸವಪುರಾಣ ಕಥಾಸಾರವಿದೆ. ಕೃತಿಯ ಕೊನೆಯಲ್ಲಿ –

1) ಕಠಿಣ ಶಬ್ದಕೋಶ
2) ಬಸವಪುರಾಣದಲ್ಲಿ ಬರುವ ವಿಶಿಷ್ಟ ಪದಗಳ ಸೂಚಿ.
3) ಬಸವಪುರಾಣದಲ್ಲಿ ಬರುವ ವ್ಯಕ್ತಿವಾಚಕ ಪದಗಳ ಸೂಚಿ
4) ಬಸವಪುರಾಣದಲ್ಲಿ ಬರುವ ಸ್ಥಳವಾಚಕ ಪದಗಳ ಸೂಚಿ
5) ಬಸವಪುರಾಣದಲ್ಲಿ ಬರುವ ಉಪಕಥೆಗಳ ಸೂಚಿ – ಗಳಿವೆ.

**ಮಹಾಲಿಂಗೇಂದ್ರ ವಿಜಯ.** ಮಹಾದೇವ ವಿರಚಿತ ಮಹಾಲಿಂಗೇಂದ್ರವಿಜಯದ ಕಥಾವಸ್ತು ಚಿತ್ರದುರ್ಗದ ಬೃಹನ್ಮಠದ ಪರಂಪರೆಯ ವಿವರಣೆ. ಮಹಾದೇವನ ತಂದೆ ಸೋಮೇಶ. ಗುರು ಅಸಿಪುರೀಶ ಶಿವಲಿಂಗದೇಶಿಕ. ಮಹಾಲಿಂಗೇಂದ್ರನ ಆಜ್ಞಾನುಸಾರ ವಾಗಿ ಕವಿ ಕ್ರಿ.ಶ. 1870ರಲ್ಲಿ ಪ್ರಸ್ತುತ ಕೃತಿಯನ್ನು ಸಮಾಪ್ತಿಗೊಳಿಸಿದನು. ಕೃತಿ ವಾರ್ಧಕ ಷಟ್ಪದಿಯಲ್ಲಿದ್ದು 30 ಅಧ್ಯಾಯ ಹಾಗು 2064 ಪದ್ಯಗಳಿವೆ. ಇದರಲ್ಲಿ ಚೆನ್ನಬಸವಣ್ಣನಿಂದ ಪ್ರಾರಂಭಿಸಿ ಮಹಾಲಿಂಗಸ್ವಾಮಿಗಳ ವರೆಗೆ 21 ಜಗದ್ಗುರುಗಳ ಚರಿತೆ ಇದೆ. ಮೊದಲ 12 ಹಾಗು ಕಡೆಯ 6 ಒಟ್ಟು 18 ಸಂಧಿಗಳಲ್ಲಿ ಮಹಾಲಿಂಗನ ಚರಿತೆ ಇದೆ. ಉಳಿದ 12 ಸಂಧಿಗಳಲ್ಲಿ 20 ಜಗದ್ಗುರುಗಳ ಚರಿತೆ ಸಂಕ್ಷೇಪವಾಗಿ ವಿವರಿಸಿದೆ. ಇದಲ್ಲದೆ ಶಿವಶರಣರ ಕಥೆಗಳು, ವೀರಶೈವ ಧರ್ಮಬೋಧೆಗಳು ಅಲ್ಲಲ್ಲಿ ಉಚಿತವಾಗಿ ಪಡಿಮೂಡಿವೆ. ಮಹಾಲಿಂಗೇಂದ್ರ ವಿಜಯವನ್ನು ಪ್ರಸ್ತುತ ಸಂಪಾದಕರು ಏಕೈಕ ಉಪಲಬ್ಧ ಕಾಗದದ ಹಸ್ತಪ್ರತಿಯ ಸಹಾಯದಿಂದ ಸಂಪಾದಿಸಿದ್ದಾರೆ. ಕೃತಿಯ ನಡುವೆ ಅಲ್ಲಲ್ಲಿ ಗ್ರಂಥಪಾತಗಳಿವೆ. ಕೃತಿಗೆ ಸಂಪಾದಕರು ವಿಸ್ತಾರವಾದ ಪೀಠಿಕೆಯನ್ನು ರಚಿಸಿ

ಅದರಲ್ಲಿ ಗ್ರಂಥೋಕ್ತ ಸ್ವಾಮಿಗಳ ಚರಿತೆಗಳನ್ನು ತಿಳಿಸಿರುವುದಲ್ಲದೆ ಅವುಗಳನ್ನು ವಿಮರ್ಶಿಸಿರುವುದು ತುಂಬ ಮೆಚ್ಚತಕ್ಕ ಅಂಶ. ಕೃತಿಯಲ್ಲಿ ಕ್ರಿ.ಶ. 1870 ರ ವರೆಗಿನ ಮಠದ ಇತಿಹಾಸ ಮಾತ್ರ ದೊರಕುವುದು. ಸಂಪಾದಕರು ಅಲ್ಲಿಂದ ಮುಂದುವರಿಸಿ ಇಂದಿನ ವರೆಗಿನ ಮಠದ ಚರಿತ್ರೆಯನ್ನು ಸಂಗ್ರಹಿಸಿಕೊಟ್ಟು ಮಠದ ಚರಿತ್ರೆ ಅಧ್ಯಾವತ್ತಾಗಿ ಒಂದೆಡೆ ದೊರಕುವಂತೆ ಮಾಡಿದ್ದಾರೆ. ಮಹಾಲಿಂಗೇಂದ್ರ ವಿಜಯದಲ್ಲಿ ವೀರಶೈವ ಧರ್ಮದಲ್ಲುಂಟಾದ ವಿರಸ ತಿಕ್ಕಾಟಗಳ ಚಿತ್ರಣ ಅಲ್ಲಲ್ಲಿ ಬಂದಿದೆ. ಉದಾಹರಣೆಗಾಗಿ 16ನೆಯ ಸಂಧಿಯಲ್ಲಿನ ಸಂಪಾದನೆ ಸಿದ್ಧವೀರನ ಪ್ರಸಂಗ, 18ನೆಯ ಸಂಧಿಯಲ್ಲಿನ ಹದಿನಾರು ಸಮಯಭೇದ, ಚೇಲಾಳ ಸಮಯ ಇತ್ಯಾದಿಗಳನ್ನು ಹೆಸರಿಸಬಹುದಾಗಿದೆ. ಇಲ್ಲಿನ ವಿಷಯ ಸಾಮಗ್ರಿ ವೀರಶೈವ ಧಾರ್ಮಿಕ ಇತಿಹಾಸ ರಚನೆಗೆ ಉಪಯುಕ್ತವಾದು ದೆಂಬುದರಲ್ಲಿ ಸಂದೇಹವಿಲ್ಲ.

ಕೃತಿಯ ಕೊನೆಯಲ್ಲಿ 'ಗಮನಾರ್ಹ ಪದ ಸೂಚಿ' ಇದೆ.

**ಶೃಂಗಾರ ನಿದರ್ಶನ** (ಚಿಕ್ಕದೇವರಾಯ ಸಪ್ತಪದಿ) ತಿರುಮಲಾರ್ಯನ ಚಿಕ್ಕದೇವರಾಯ ಸಪ್ತಪದಿ ಹಾಡುಗಳಿಂದ ರಚಿತವಾದ ಗೀತ ಪ್ರಬಂಧ. ಕೃತಿ 7 ಸಪ್ತಪದಿಗಳಲ್ಲಿದ್ದು ಅವುಗಳು ಈ ರೀತಿ ಇವೆ.

1) ಬಿರುದಾವಳಿ ಸಪ್ತಪದಿ
2) ವಿರಹಿಣೀ ವಚನ ಪ್ರಕಾರ ಸಪ್ತಪದಿ
3) ದೂತಿಕಾ " "
4) ಚಿಕ್ಕದೇವ ಮಹಾರಾಯನ ವೃತ್ತಾಂತ ಸಪ್ತಪದಿ
5) ಶೃಂಗಾರ ಭಾವ ದಶಪದಿ
6) ಕಾಂತೆ ಸಮ್ಮೊಗದೊಳ್ ನುಡಿದ ಬಗೆಗಳ ಸಪ್ತಪದಿ
7) ಸ್ವಾಧೀನ ವಲ್ಲಭೆಯರ ವೃತ್ತಾಂತ ಸಪ್ತಪದಿ.

ಇವುಗಳಲ್ಲಿ ಕ್ರಮಾಂಕ 1, 2, 3, 4, 6, 7 ನೆಯ ಸಪ್ತಪದಿಗಳಲ್ಲಿ ಒಂದೊಂದರಲ್ಲಿ ಏಳೇಳು ಹಾಡುಗಳಿವೆ. 5ನೆಯ ದಶಪದಿಯಲ್ಲಿ ಮಾತ್ರ 10 ಹಾಡುಗಳಿವೆ. ಕೊನೆಯಲ್ಲಿ ಮಂಗಳವೆಂಬ ಹೆಸರಿನಲ್ಲಿ ಹಾಡೊಂದಿದೆ. ಒಟ್ಟು ಇಲ್ಲಿರುವ ಹಾಡುಗಳ ಸಂಖ್ಯೆ 53 (ಪೀಠಿಕೆಯಲ್ಲಿ [ಪು. 36] ಹಾಡುಗಳ ಸಂಖ್ಯೆ 59 ಎಂದಿದೆ). ಇವುಗಳಲ್ಲಿ 4 ತೆಲುಗು ಭಾಷೆಯ ಹಾಡುಗಳಾಗಿದ್ದು, ಉಳಿದವೆಲ್ಲ ಕನ್ನಡದಲ್ಲಿವೆ.

ಸಂಪಾದಕರ ಮಾತಿನಂತೆ "ಸಪ್ತಪದಿಯ ವಸ್ತು ಶೃಂಗಾರ ರಸ ಸಂಬಂಧವಾದ ಹಲವಾರು ಪ್ರಕ್ರಿಯೆಗಳಿಗೆ ನಿದರ್ಶನ ರೂಪವಾಗಿ ಚಿಕ್ಕದೇವರಾಜ ಒಡೆಯರ ಅಂತಃಪುರ ಜೀವನವನ್ನು ಕುರಿತ ಹಾಡುಗಳ ಜೋಡಣೆಯಿಂದ ನಿರೂಪಿತವಾದ ಒಂದು ಅಪೂರ್ವ ಕೃತಿ ಚಿಕ್ಕದೇವರಾಯ ಸಪ್ತಪದಿ" ಎಂದಾಗುತ್ತದೆ.

ಪ್ರಸ್ತುತ ಕೃತಿಯನ್ನು ಸಂಪಾದಕರು 1 ಓಲೆ ಮತ್ತು 1 ಕಾಗದದ ಪ್ರತಿಯ ಸಹಾಯದಿಂದ ಪರಿಷ್ಕರಿಸಿ ಪ್ರಕಟಿಸಿದ್ದಾರೆ.

ಪೀಠಿಕೆಯಲ್ಲಿ ಚಿಕ್ಕದೇವರಾಜ (1672–1704) ನ ಕಾಲದ ಸಾಹಿತ್ಯದ ವೈಶಿಷ್ಟ್ಯಗಳನ್ನು 11 ಪ್ರಕಾರಗಳಲ್ಲಿ ವಿಶ್ಲೇಷಿಸಿದೆ. ಚಂಪು ಪ್ರಕಾರವನ್ನು ವಿವೇಚಿಸುವಲ್ಲಿ ಕ್ರಿ. ಶ. 5ನೆಯ ಶತಮಾನದ ವೇಳೆಗೆ ಕನ್ನಡದಲ್ಲಿ ಕವಿರಾಜಮಾರ್ಗೋಕ್ತ ವಿಮಲ ಚಂಪುವಿನಲ್ಲಿ ಬರೆದು, ಆ ಪ್ರಕಾರವನ್ನು ಪ್ರವರ್ತನಗೊಳಿಸಿ ಚಂಪು ಪ್ರಕಾರ ಪರಂಪರೆಯ ಮೂಲ ಪುರುಷನಾದ ಸಂಗತಿಯನ್ನು ಗುರುತಿಸಿದ್ದಾರೆ. ಪದ ಅಥವಾ ಹಾಡು ಮತ್ತು ಅವುಗಳಿಂದಾಗುವ ಪ್ರಬಂಧ ವಿಶೇಷ ಎಂಬ ಪ್ರಕಾರವನ್ನು ವಿವೇಚಿಸುವಲ್ಲಿ ಕವಿರಾಜಮಾರ್ಗದ (1–34)ನೆಯ ಪದ್ಯದಲ್ಲಿನ 'ಜಾತಿ' ಪದ ಹಾಡು ಎಂಬುದಕ್ಕೆ ಸಂವಾದಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅಲ್ಲದೆ 'ಬೆದಂಡೆಯಲ್ಲಿರುವುದೆಲ್ಲ ಕಂದ ವೃತ್ತಗಳೇ ಅಲ್ಲ, ಅದರಲ್ಲಿ ಹಾಡುಗಳು ವೃಂದ ವೃಂದವಾಗಿ ಬರುವುವು. ಹಾಡುಗಳ ಒಂದೊಂದು ವೃಂದದ ಆದಿ ಅಂತ್ಯಗಳಲ್ಲಿ ಕಂದ ವೃತ್ತಗಳಿರುವುವು' ಎಂದು ಬೆದಂಡೆಯ ಲಕ್ಷಣವನ್ನು ತಿಳಿಸಿದ್ದಾರೆ (ಪೀಠಿಕೆ, ಪು. 26–31). ಪು. 32–3ರಲ್ಲಿ ಭಾರತೀ ತಿರುಮಲಾರ್ಯ ಮುಂತಾದವರ ಕೆಲವು ಬಿಡಿ ಹಾಡುಗಳನ್ನು ಉದ್ಧರಿಸಿ ಚಿಕ್ಕದೇವರಾಯನ ಕಾಲದಲ್ಲಿ ರಚಿತವಾದ ಹಾಡುಗಳ ವಸ್ತು ವೈವಿಧ್ಯತೆಯ ಬಗೆಗೆ ವಾಚಕರ ಗಮನ ಸೆಳೆದಿದ್ದಾರೆ. ಪೀಠಿಕೆಯ ಕೊನೆಯಲ್ಲಿ ಸಪ್ತಪದಿ–ಕೀರ್ತನೆ–ಬಣ್ಣವಾಡುಗಳ ಬಗೆಗೆ ವಿವರವಿದೆ.

ಅನುಬಂಧ 1–ರಲ್ಲಿ ಚಿಕ್ಕದೇವರಾಯ ಸಪ್ತಪದಿಯ ಪೀಠಿಕಾ ಭಾಗವಿದೆ. ಅದರಲ್ಲಿ 57 ಕಂದ, ವೃತ್ತಗಳಿವೆ. ಇಲ್ಲಿನ ಪದ್ಯಗಳ ಬಹುಭಾಗ ಚಿಕ್ಕದೇವರಾಜ ವಿಜಯದಲ್ಲಿ ದೊರೆಯುತ್ತವೆ. ಚಿಕ್ಕದೇವರಾಯನ ವಂಶಾವಳಿ ವಿವರ ಪೀಠಿಕಾ ಭಾಗದ ವಸ್ತು. ಕೃತಿಯ ಕೊನೆಯಲ್ಲಿ ಅರ್ಥಕೋಶ ಮತ್ತು ಗಮನಾರ್ಹ ಪದಗಳ ಪಟ್ಟಿ ಇದೆ.

ಈ ಕೆಳಗಿನ ಪದಗಳಲ್ಲಿ ಶಕಟರೇಫವಿರಬೇಕು: ಏಚ್ಚ**ರಿ**ಸಿ/ಱಿ (1–6 ವ). ಅ**ರು**ಹು/ಱು (2–3–ವ) ಕಾಣದಿರಲಾ**ರೆ**ನೆ/ಱೆ (2–3–ಪಲ್ಲವಿ) ಡೋ**ರು**ಗೊಱೆ/ಱು (2–6–1) ಬಾಯ್ದೆ**ರೆ**/ಱೆ (4–3–2: 4–4–5: 4–5–1: 4–7–2: 6–3–2) ಮುಪ್ಪುರಿಯೇ**ರು**/ ಱು (**ಮಂಗಳ**–2)

ಕೆಲವು ಅಚ್ಚಿನ ತಪ್ಪುಗಳು: ಶುಭಚ**ರ**ತದಿ/ರಿ (1–2–3), ಅಳ್ಳಿಟಿ/ಱಿ (2–7–2), **ಭಿ**ನ್ನವಿಸು/ಬಿ (3–3–ವಚನ) ಕಡೆಗಣೆನಿ/ಸಿ (5-3-2), ಕೂ**ರ್ತ**/ರ್ತು (5-5-3) ಧೈ**ರ್ಯಾಂ**ಶ/ರ್ಯಾಂ (6–2–3 ವಚನ). ಬಗೆಗಾತಿಯೊಳು**ವ**ಲ್ಲ/ನ (6-3-2) 5–1 ವಚನದಲ್ಲಿನ ಶೃಂಗಾರವಂಗಳಂ ಎಂಬುದು ಶೃಂಗಾರ ಭಾವಂಗಳಂ ಎಂದಾಗಬೇಕು.

**ಅರ್ಚನೆ.** ತಿಮ್ಮಪ್ಪದಾಸರ ಅರ್ಚನ 108 ಕೀರ್ತನೆಗಳ ಸಂಕಲನಕೃತಿ. ಇಲ್ಲಿನ ಕೀರ್ತನೆಗಳ ವಸ್ತು ಪೂಜಾವಿಧಾನ ನಿರೂಪಣೆ. ಕೀರ್ತನೆಗಳ ಅಂಕಿತ 'ತಿರುಪತಿಯ ವೆಂಕಟರಮಣ' ಕೀರ್ತನೆಗಳಿಗೆ ರಾಗ, ತಾಳಗಳನ್ನು ಸೂಚಿಸಿದೆ. ಇಲ್ಲಿನ 16 ನೆಯ ಕೀರ್ತನೆ ಮತ್ತೇಭ ಮತ್ತು ಶಾರ್ದೂಲ ವೃತ್ತಗಳಲ್ಲೂ 32 ನೆಯ ಕೀರ್ತನೆ ಭಾಮಿನಿ ಷಟ್ಪದಿಯಲ್ಲೂ. 89 ನೆಯ ಕೀರ್ತನೆ ಪೂರ್ಣವಾಗಿ ಕಂದದಲ್ಲೂ ರಚಿತವಾಗಿವೆ. ಕ್ರಮಸಂಖ್ಯೆ 14.

67, 86, 87ನೆಯ ಕೀರ್ತನೆಗಳ ಆದಿಯಲ್ಲಿ ಒಂದೊಂದು ಕಂದವಿದೆ. ಇದರಂತೆ 51, 54, 55, 58, 60, 63, 90, 92, 94, 95, 96, 98, 99, 104, 105, 108ನೆಯ ಕೀರ್ತನೆಗಳ ಅಂತ್ಯದಲ್ಲಿ ಒಂದೊಂದು ಕಂದವಿದೆ. ಅಲ್ಲದೆ 23, 91ನೆಯ ಕೀರ್ತನೆಗಳ ಕೊನೆಯಲ್ಲಿ ಎರಡೆರಡು ಕಂದಗಳಿವೆ. ಪ್ರತಿ ಕೀರ್ತನೆಯ ಕೊನೆಯಲ್ಲಿ ಸಂಸ್ಕೃತದ ಕೃಷ್ಣ ನಾಮಾಷ್ಟೋತ್ತರದ ಒಂದೊಂದು ನಾಮಾವಳಿಗಳಿವೆ. 108ನೆಯ ಕೀರ್ತನೆಯ ಕೊನೆಯಲ್ಲಿ 'ಅಂತೂ ಪೂಜಾವಿಧಾನ ಕೀರ್ತನೆಗಳು 108ಕ್ಕೆ ಪದನು, ಕಂದ ಪದ್ಯ, ವೃತ್ತಪದ್ಯ, ಕೀರ್ತನೆ ಪದಗಳು ಸಹ 587ಕ್ಕಂ ಮಂಗಳ ಮಹಾ ಶ್ರೀ' ಎಂದು ಸಂಖ್ಯಾನಿರ್ದೇಶವಿದೆ.

ಓಲೆ ಪ್ರತಿ 'ಕ' ಹಾಗು ಕಾಗದ ಪ್ರತಿ 'ಗ'ಗಳಿಂದ 'ಅರ್ಜನ' ಸಂಪಾದಿತವಾಗಿದೆ. 'ಕ' ಪ್ರತಿಯಲ್ಲಿ ಅಲ್ಲಲ್ಲಿ ಓಲೆಗಳಿಲ್ಲ (ಉದಾ. 10ನೆಯ ಗರಿ ಇತ್ಯಾದಿ). ಅಲ್ಲದೆ 'ಕ' 'ಗ'ಗಳಲ್ಲಿನ ಕೀರ್ತನೆಗಳ ಕ್ರಮ ಒಂದೇ ರೀತಿ ಇಲ್ಲ. ಸಂಪಾದಕರು 'ಗ' ಪ್ರತಿಯ ಕ್ರಮವನ್ನು ಸಂಪಾದನೆಯಲ್ಲಿ ಅನುಸರಿಸಿದ್ದಾರೆ. ಇವೆರಡು ಪ್ರತಿಗಳಲ್ಲದೆ ಶ್ರೀಮತಿ ಡಿ. ಪಿ. ಕಮಲಮ್ಮನವರಿಂದ ದೊರೆತ ಹಸ್ತಪ್ರತಿಯಲ್ಲಿನ ಕೀರ್ತನೆಯೊಂದನ್ನು ಅನುಬಂಧ 2ರಲ್ಲಿ ಕೊಟ್ಟಿದೆ.

ಪೀಠಿಕೆಯಲ್ಲಿ ತಿಮ್ಮಪ್ಪದಾಸರ ಹೆಸರು, ಸ್ಥಳ, ಕಾಲ, ಕುಲಪರಂಪರೆ, ಗುರು ಪರಂಪರೆ, ವಿದ್ಯಾ ವ್ಯಾಸಂಗ, ಮತ–ಧರ್ಮ ಮತ್ತು ದಾಸರ ಭಾಗವತ ದೃಷ್ಟಿಗಳ ಬಗೆಗೆ ವಿವರವಾಗಿ ಚರ್ಚಿಸಿದೆ. ಅನಂತರ ದಾಸರ ವಿವಿಧ ರಚನೆಗಳ ಬಗೆಗೆ ತಿಳಿಸಿ ಕೊನೆಗೆ ಪ್ರಸ್ತುತ ಕೃತಿಯ ಕೀರ್ತನೆಗಳ ಬಗೆಗೆ ವಿಮರ್ಶಿಸಿದೆ.

ತಿಮ್ಮಪ್ಪದಾಸರು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯವರು. ಇವರು ಮುಮ್ಮಡಿ ಕೃಷ್ಣರಾಜ ಒಡೆಯರ (1794–1868) ಸಮಕಾಲೀನರು. ಇವರ ದೀಕ್ಷಾ ಗುರು ವಾಸುದೇವಾಚಾರ್ಯ (1725–1790) ರು. ಇವರಲ್ಲದೆ ದಾಸರಿಗೆ ರಾಮಕೃಷ್ಣಾಚಾರ್ಯ ಮತ್ತು ನೀಲಕಂಠಾಚಾರ್ಯರು ಸಹ ಗುರುಗಳಾಗಿದ್ದರಂತೆ. ತಂದೆ ನಾರಾಯಣ (ನಾರಾಯಣಾಚಾರ್ಯ), ತಾಯಿ ಚೆನ್ನಮ್ಮ (ಚೆನ್ನಾಂಬೆ), ತಮ್ಮಂದಿರು ವೆಂಕಟದಾಸಪ್ಪ ಮತ್ತು ಸೀತಾರಾಮ. ಮಾತುಳ ವೆಂಕಟದಾಸ. ಹೆಂಡತಿ ವೆಂಕಮ್ಮ. ಮಕ್ಕಳು ನಾರಾಯಣದಾಸ (1823–?) ಹಾಗು ವೆಂಕಟರಮಣದಾಸ (?–1916).

ಇವರ 9 ಕೃತಿಗಳನ್ನು ಪ್ರಸ್ತುತ ಸಂಪಾದಕರು ಗುರುತಿಸಿದ್ದಾರೆ:

1) ಪೂಜಾ ವಿಧಾನ ಕೀರ್ತನೆಗಳು (108)
2) ಗುರುಸ್ತುತಿ ಪರ ಕೀರ್ತನೆಗಳು
3) ಸದ್ಗುರು ಬೋಧಾನುವಾದ ಸುಧೆ (ಕೀರ್ತನೆಗಳು)
4) ಸಂಕೀರ್ಣ ವಿಷಯದ ಕೀರ್ತನೆಗಳು
5) ಶ್ರೀಕೃಷ್ಣ ಬಾಲಲೀಲೆ ಮತ್ತು ಅಕ್ರೂರ ಪ್ರಕರಣ (ಕೀರ್ತನೆಗಳು)
6) ಜೀವಕಾಯ ಸಂವಾದ (ಕೀರ್ತನೆ, ಕಂದ) – ಅಪೂರ್ಣ
7) ಧ್ರುವಚರಿತ್ರೆ (ಸಾಂಗತ್ಯ)

8) ಪರಬ್ರಹ್ಮ ಪ್ರಕಾಶಿಕೆ (ಗದ್ಯ)
9) ಭಗವದ್ವಿಲಾಸದಾಟ (ಗದ್ಯ) – ಅಪೂರ್ಣ

ಕೃತಿಯ ಕೊನೆಯಲ್ಲಿ 9 ಅನುಬಂಧ ಹಾಗು ಪರಿಶಿಷ್ಟಗಳಿವೆ.

ತಿಮ್ಮಪ್ಪದಾಸರ ಮತ್ತು ಅವರ ಕೃತಿಗಳ ಬಗೆಗೆ ಕರ್ಣಾಟಕ ಕವಿಚರಿತೆಯಲ್ಲಾಗಲಿ ದಾಸರ ಚರಿತೆಗಳನ್ನೊಳಗೊಂಡ ಕೃತಿಗಳಲ್ಲಾಗಲಿ ಯಾವ ಉಲ್ಲೇಖವೂ ಇಲ್ಲ. ಇದಕ್ಕೆ ಕಾರಣ ಅವರ ಕೃತಿಗಳ ಹಸ್ತಪ್ರತಿಗಳ ವಿರಳತೆ ಹಾಗು ಇದ್ದ ಹಸ್ತಪ್ರತಿಗಳು ಅವರ ವಂಶಸ್ಥರ ಸಂಗ್ರಹದಲ್ಲಿ ಉಳಿದು ಪ್ರಚಾರಕ್ಕೆ ಬರದೇ ಇದ್ದದ್ದೇ ಎಂದು ಕಾಣುತ್ತದೆ. ಶ್ರೀ ಎಂ. ವಿ. ಸೀತಾರಾಮಯ್ಯನವರ ಅವಿಶ್ರಾಂತ ಶ್ರದ್ಧೆ, ಆಸಕ್ತಿ, ದುಡಿಮೆಗಳ ಕಾರಣ ವಾಗಿ 19ನೆಯ ಶತಮಾನದ ತಿಮ್ಮಪ್ಪದಾಸನ ಕೃತಿಗಳಲ್ಲೊಂದು ಬೆಳಕಿಗೆ ಬಂದಿದೆ. ಹೀಗೆಯೆ ಅವರ ಇತರ ಕೃತಿಗಳೆಲ್ಲ ಶೀಘ್ರವಾಗಿ ಬೆಳಕಿಗೆ ಬರಲೆಂದು ಹಾರೈಸುತ್ತೇವೆ.

**ಪೌಲೋಮ-ಆಸ್ತೀಕ ಪರ್ವಗಳು.** ಸದಾನಂದ ಯೋಗೀಂದ್ರ ಪೌಲೋಮ–ಆಸ್ತೀಕ ಪರ್ವಗಳ ಕರ್ತೃ. ಕಾಲ ಸುಮಾರು 1500. ಕೃತಿ ಭಾಮಿನಿ ಷಟ್ಪದಿಯಲ್ಲಿದೆ. ಪೌಲೋಮ ಪರ್ವದಲ್ಲಿ 4 ಸಂಧಿ 145 ಪದ್ಯಗಳಿದ್ದರೆ ಆಸ್ತೀಕ ಪರ್ವದಲ್ಲಿ 13 ಸಂಧಿ 551 ಪದ್ಯಗಳಿವೆ. ಕೃತಿಯನ್ನು 3 ಓಲೆ ಹಾಗು 1 ಮುದ್ರಿತ ಪ್ರತಿಯ ಸಹಾಯದಿಂದ ಪರಿಷ್ಕರಿಸಲಾಗಿದೆ.

ಪೌಲೋಮ ಪರ್ವದಲ್ಲಿ ಭೃಗು ವಂಶಜ ಚ್ಯವನನ ವೃತ್ತಾಂತ, ರುರು–ಪ್ರಮದ್ವರೆಯರ ಕತೆ ಮತ್ತು ದುಂಡುಭನ ಶಾಪ ವಿಮೋಚನೆಯ ಕಥನಗಳಿವೆ. ಆಸ್ತೀಕ ಪರ್ವದಲ್ಲಿ ಕದ್ರು–ವಿನತೆಯರ ಮಾತ್ಸರ್ಯ, ಸರ್ಪಗಳ ಹಾಗು ಅರುಣನ ಜನನ, ವಿನತೆಯ ದಾಸ್ಯತ್ವ, ಗರುಡನ ಜನನ, ಗಜ–ಕಚ್ಛಪ ವೃತ್ತಾಂತ, ಗರುಡನ ಅಮೃತಕಲಶ ಪ್ರಾಪ್ತಿ, ವಿಷ್ಣುವಿನ ಸಖ್ಯ, ಇಂದ್ರ–ಗರುಡರ ಮಿತ್ರತ್ವ, ವಿನತೆಯ ದಾಸ್ಯವಿಮೋಚನೆ, ವಾಲಖಿಲ್ಯರಿಂದ ಇಂದ್ರನಿಗುಂಟಾದ ಶಾಪ ಕಥನ, ಶೇಷನ ಭೂಧಾರಣಾ ಸಾಮರ್ಥ್ಯ ಪ್ರಾಪ್ತಿ ವಿವರ, ಆಸ್ತೀಕ ಜನನ, ಪರೀಕ್ಷಿತನ ಶಾಪ ಕಾರಣ ಹಾಗು ಅವಸಾನ, ಉದಂಕ–ತಕ್ಷಕರ ವೈರ ಕಥನ, ಜನಮೇಜಯನ ಸರ್ಪಯಾಗ, ಆಸ್ತಿಕನಿಂದ ಸರ್ಪಗಳ ರಕ್ಷಣೆ–ಇವುಗಳ ಬಗೆಗೆ ವಿವರಗಳಿವೆ.

ಸಂಪಾದಕರು ಮುನ್ನುಡಿಯಲ್ಲಿ ಕವಿ–ಕಾವ್ಯ ವಿಚಾರ, ಪೌಲೋಮಾಸ್ತೀಕ ಪರ್ವಗಳ ಕಥಾಸಾರ, ಸಂಸ್ಕೃತ–ಕನ್ನಡ ಕೃತಿ ನಿರೂಪಣೆಯಲ್ಲಿನ ವ್ಯತ್ಯಾಸ, ಕಾವ್ಯ ಶೈಲಿ, ಪಾತ್ರ ಸೃಷ್ಟಿ ಮತ್ತು ಕವಿದರ್ಶನಗಳ ಬಗ್ಗೆ ವಿವೇಚಿಸಿದ್ದಾರೆ.

ಕೃತಿಯ ಕೊನೆಯಲ್ಲಿ ಮೂರು ಪರಿಶಿಷ್ಟಗಳಿವೆ. ಪರಿಶಿಷ್ಟ 1ರಲ್ಲಿ ಮುದ್ರಿತ ಪ್ರತಿಯಲ್ಲಿನ ಅಧಿಕ ಪದ್ಯಗಳಿವೆ. ಪರಿಶಿಷ್ಟ 2ರಲ್ಲಿ ಪ್ರತ್ಯೇಕ ಪ್ರತ್ಯೇಕವಾದ ಪೌಲೋಮಾಸ್ತೀಕ ಪರ್ವಗಳಲ್ಲಿನ ಪದ್ಯಗಳ ಅಕ್ಷರಾನುಕ್ರಮಣಿಕೆಗಳಿವೆ. ಪರಿಶಿಷ್ಟ 3ರಲ್ಲಿ ಪ್ರತ್ಯೇಕಗಳಾದ ಅಕಾರಾದಿಕ್ರಮದ ಶಬ್ದ ಸೂಚಿಗಳಿವೆ.

ಅಲಭ್ಯವಾಗಿದ್ದ ಪ್ರಕಟಿತ ಕೃತಿಯನ್ನು ಪರಿಷ್ಕೃತ ರೂಪದಲ್ಲಿ ವಾಚಕರಿಗೆ ಒದಗಿಸಿದ ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ–ಧಾರವಾಡದ ಕಾರ್ಯ ಸ್ತುತ್ಯರ್ಹ.

**ವಿಶೇಷಾನುಭವ ಷಟ್‌ಸ್ಥಲ.** ವಚನ ಸಂಕಲನ ರೂಪದಲ್ಲಿನ ವಿಶೇಷಾನುಭವ ಷಟ್‌ಸ್ಥಲದ ಸಂಕಲನಕಾರ ಚೆನ್ನವೀರದೇವ. ಕೃತಿಯ ಆರಂಭದಲ್ಲಿನ ಪೀಠಿಕೆಯಿಂದ ಶಿವಲಿಂಗದೇವನೆಂಬ ಶಿಷ್ಯನ ಕೋರಿಕೆಯಂತೆ 'ಅಖಿಲ ಪುರಾತನ ವಚನಗಳೂ ಸ್ಥಲ ಪರ್ಯಾಯಂಗಳಿಂ ಸೂತ್ರವಿಟ್ಟು ಸಂಗ್ರಹಿಸಿ ... ಸುಲಲಿತ ವಾಕ್ಯಂಗಳಿಂದರ್ಥೈಸಿ'ದಂತೆ ತಿಳಿಯುತ್ತದೆ. ಈತನ ಕೃತಿಯಲ್ಲಿ ವಸ್ತು ನಿರ್ದೇಶಕ ಸ್ಥಲದಿಂದ ಆರಂಭವಾಗಿ ಶೂನ್ಯ ಸ್ಥಲದವರೆಗೆ 16 ಸ್ಥಲಗಳಿದ್ದು 49 ಮಂದಿ ವಚನಕಾರರು ಹಾಗು ವಚನಕಾರ್ತಿಯರ 742 ವಚನಗಳಿವೆ. ಪ್ರತಿವಚನಕ್ಕೆ ಟೀಕೆ ಇದೆ.

ಪ್ರಸ್ತುತ ಕೃತಿಯನ್ನು ಡಾ॥ ಆರ್. ಸಿ. ಹಿರೇಮಠ ಅವರು ಕರ್ನಾಟಕ ವಿಶ್ವವಿದ್ಯಾಲಯದ ವಚನಭಂಡಾರದಲ್ಲಿನ 2 ಓಲೆ ಪ್ರತಿಗಳ ಸಹಾಯದಿಂದ ಪ್ರಕಟಿಸಿದ್ದಾರೆ. ಚೆನ್ನವೀರಾಚಾರ್ಯ ಕೃತಿಯಲ್ಲಿ ತನ್ನ ವೈಯಕ್ತಿಕ ವಿಷಯವನ್ನಾಗಲಿ, ಅಥವಾ ದೇಶ, ಕಾಲಗಳ ಬಗೆಗಾಗಲಿ ಏನನ್ನೂ ತಿಳಿಸಿಲ್ಲ. ಕೃತಿಯಲ್ಲಿ ಉದ್ಧೃತವಾದ ವಚನಕಾರರನ್ನು ಆಧರಿಸಿ ಸಂಪಾದಕರು ಕೃತಿ '16ನೆಯ ಶತಮಾನದ ಆರಂಭದಲ್ಲಿ ಬಂದಿರುವುದು ಹೆಚ್ಚು ಸಂಭವನೀಯವಾಗಿದೆ' ಎಂದಿದ್ದಾರೆ (ಪ್ರಸ್ತಾವನೆ, ಪು. 30).

ಪ್ರಸ್ತಾವನೆಯಲ್ಲಿ ಸಂಪಾದಕರು ಷಟ್ಸ್ಥಲ ಸಿದ್ಧಾಂತ ಮತ್ತು ಸ್ಥಲವಿಭಾಗಗಳ ಬಗೆಗೆ ವಿವೇಚಿಸಿದ್ದಾರೆ. ಸ್ಥಲ ಕಟ್ಟುಗಳಲ್ಲಿನ ವಿಭಜನೆಯನ್ನು ಪಟ್ಟಿಗಳ ಮೂಲಕ ನಿರೂಪಿಸಿರುವರು. ಇದಲ್ಲದೆ ಕನ್ನಡದ ವಚನ ಸಂಕಲನಗಳು ಮತ್ತು ಕ್ಷೇತ್ರಜ್ಞಸುಮನೋವಾದ ಎಂಬ ಕೃತಿಯಲ್ಲಿ ಮಾಡಿಕೊಂಡಿರುವ ಭಿನ್ನ ಭಿನ್ನ ತೆರನಾದ ಸ್ಥಲವಿಭಜನೆಗಳನ್ನು ಪೂರ್ಣವಾಗಿ ಉದ್ಧರಿಸಿಕೊಟ್ಟಿದ್ದಾರೆ.

ಕೃತಿಯ ಕೊನೆಯಲ್ಲಿನ 'ಆಯಾ ವಚನಕಾರರ ವಚನಸೂಚಿ' ವಿಭಾಗದಲ್ಲಿ (ಪು. viii–xiv) ಕೆಲವು ತಪ್ಪುಗಳಿದ್ದು ಅದನ್ನಿಲ್ಲಿ ಸೂಚಿಸಿದೆ:

ಕೂಡಲ ಚನ್ನಸಂಗಮದೇವ ಅಂಕಿತದ ವಚನಗಳಲ್ಲಿ ಬಸವಪ್ರಿಯ ಕೂಡಲ ಚನ್ನಸಂಗಮದೇವ ಅಂಕಿತದ (ಸಂಖ್ಯೆ 19, ಪು. 103) (ಸಂಖ್ಯೆ 2, ಪು. 104), (ಸಂಖ್ಯೆ 35, ಪು. 148–49) ವಚನಗಳು ಸೇರಿಹೋಗಿವೆ.

ಇದೇ ರೀತಿಯಲ್ಲಿಯೆ ನಿಷ್ಕಳಂಕ ಮಲ್ಲಿಕಾರ್ಜುನ ಅಂಕಿತದಲ್ಲಿ 'ಎನ್ನಯ್ಯ ಪ್ರಿಯ ಇಮ್ಮಡಿ ನಿಷ್ಕಳಂಕ ಮಲ್ಲಿಕಾರ್ಜುನಾ' ಎಂಬ ರಾಣಿ ಮಹಾದೇವಿಯ ವಚನವೊಂದು (ಸಂಖ್ಯೆ 2, ಪು. 45) ಕೂಡಿಕೊಂಡಿದೆ. ಗಜೇಶ್ವರ (ಸಂಖ್ಯೆ 42, ಪು. 65) ಮತ್ತು ಮಹಾಲಿಂಗ ಗಜೇಶ್ವರಾ (ಸಂಖ್ಯೆ 21, ಪು. 282) ಅಂಕಿತದ ವಚನಗಳನ್ನು ಗಜೇಶ ಮಸಣಯ್ಯಗಳದೆಂದು ತಿಳಿಸಿದೆ. ಇವರಿಬ್ಬರೂ ಬೇರೆ ಬೇರೆ ಅಲ್ಲವೆ?

ನಿಷ್ಕಳಂಕ ಚನ್ನಮಲ್ಲಿಕಾರ್ಜುನ ಅಂಕಿತದ ವಚನ (ವಚನಸಂಖ್ಯೆ 94, ಪು. 313) ನಿಷ್ಕಳಂಕ ಮಲ್ಲಿಕಾರ್ಜುನ ಅಂಕಿತದೊಡನೆ ಸೇರಿದೆ.

ಉರಿಲಿಂಗಪೆದ್ದಿಯ ವಚನಗಳಲ್ಲಿ ಅವನ ಗುರುವಾದ ಉರಿಲಿಂಗದೇವನ ವಚನ (ಸಂಖ್ಯೆ 15, ಪು. 139) ಪೊಂದಿದೆ. ಗೊಪೇಶ್ವರನಲ್ಲಯ್ಯ (ಸಂಖ್ಯೆ 33, ಪು. 287) ಹಾಗು ಗುಹೇಶ್ವರಲ್ಲಮ (ಸಂಖ್ಯೆ 52, ಪು. 393)ನ ಅಂಕಿತದ ವಚನಗಳನ್ನು ಗುಹೇಶ್ವರ ಅಂಕಿತ ದಲ್ಲಿ ಕೊಟ್ಟಿದೆ. ಇವು ಬೇರೆಯಲ್ಲವೆ? ಗುಹೇಶ್ವರನ ಅಲ್ಲಯ್ಯ–ಗಾಣದ ಕನ್ನಪ್ಪನ ವಚನಾಂಕಿತ.

ರಾಮೇಶ್ವರಲಿಂಗ ಎಂಬ ಅಂಕಿತವನ್ನು ಕೊಟ್ಟು ಅದರ ಕರ್ತೃ ಮೆಚಿಮಿಂಡ ದೇವನೆಂದಿವೆ. (ವಚನಸಂಖ್ಯೆ 32, ಪು. 378). ಆದರೆ ಈ ವಚನದಲ್ಲಿರುವ ಅಂಕಿತ ಆನಂದ ಸಿಂಧುರಾಮೇಶ್ವರ.

ವಿಶೇಷಾನುಭವ ಷಟ್‌ಸ್ಥಲದಿಂದ ಈ ಕೆಳಕಂಡ 5 ಹೊಸ ವಚನಾಂಕಿತಗಳು ತಿಳಿದುಬಂದಿವೆ:

1) ಆನಂದ ಸಿಂಧುರಾಮೇಶ್ವರ (ವಚನಸಂಖ್ಯೆ 32, ಪು. 378)
2) ಈಶ್ವರಿಯ ವರದ ಚೆನ್ನರಾಮ (ವಚನಸಂಖ್ಯೆ 16, ಪು. 42)
3) ಕಲ್ಲಯ್ಯದೇವರು (ವಚನಸಂಖ್ಯೆ 11, ಪು. 138)
4) ಮಹಾಲಿಂಗ ವೀರರಾಮೇಶ್ವರ (ವಚನಸಂಖ್ಯೆ 49, ಪು. 69)
5) ಹಾಟಕೇಶ್ವರ ಲಿಂಗ (ವಚನಸಂಖ್ಯೆ 7, ಪು. 7)

ಆಯಾ ವಚನಕಾರರ ವಚನಗಳ ಸೂಚಿಗೆ ಈ ಕೆಳಗಿನ ಅಂಕಿತದ ಕರ್ತೃಗಳನ್ನು ಸೇರಿಸಬೇಕಾಗಿದೆ.

1) ಆನಂದ ಸಿಂಧು ರಾಮೇಶ್ವರ
2) ಉರಿಲಿಂಗದೇವ
3) ಎನ್ನಯ್ಯ ಪ್ರಿಯ ಇಮ್ಮಡಿ ನಿಷ್ಕಳಂಕ ಮಲ್ಲಿಕಾರ್ಜುನ
4) ಗೊಹೇಶ್ವರಾಲ್ಲಮ
5) ನಿಷ್ಕಳಂಕ ಚನ್ನಮಲ್ಲಿಕಾರ್ಜುನ.

ಕೃತಿಯ ಕೊನೆಯಲ್ಲಿ–

1) ಕಠಿಣ ಶಬ್ದಗಳ ಅರ್ಥ
2) ಆಯಾ ವಚನಕಾರರ ವಚನಸೂಚಿ
3) ವಚನಗಳ ವರ್ಣಾನುಕ್ರಮ – ಇವೆ.

**ವಿಷ್ಣು ಪುರಾಣ** (ಪೂರ್ವಾರ್ಧ) ಚಿಕ್ಕುಪಾಧ್ಯಾಯ ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಪ್ರಸಿದ್ಧಕವಿ. ಈತನ ಪೂರ್ವಜರು ಕಂಚೀನಗರ ನಿವಾಸಿಗಳು. ಈತ ಯಜುರ್ವೇದಿ. ಪ್ರರುಕುತ್ಸ ಗೋತ್ರ. ಆಪಸ್ತಂಭ ಸೂತ್ರದಲ್ಲಿ ಹುಟ್ಟಿದವ. ತಂದೆ ರಂಗಾ

ಚಾರ್ಯ. ತಾಯಿ ನಾಚ್ಚಾರಮ್ಮ. ತಮ್ಮ ದೇವರಾಜ. ಚಿಕ್ಕುಪಾಧ್ಯಾಯನಿಗೆ ಲಕ್ಷ್ಮೀಪತಿ ಎಂಬ ಹೆಸರು ಸಹ ಇತ್ತು. ಈತ ಚಿಕ್ಕದೇವರಾಯನ ಆಸ್ಥಾನದಲ್ಲಿ ಪ್ರಧಾನಾಮಾತ್ಯ ಹಾಗು ಕರಣಿಕಾಗ್ರೇಸರ. ಕನ್ನಡ–ಸಂಸ್ಕೃತಗಳಲ್ಲಿ ಅಸಾಧಾರಣ ಪಾಂಡಿತ್ಯವನ್ನು ಗಳಿಸಿದ್ದನು.

ಚಿಕ್ಕುಪಾಧ್ಯಾಯನ ವಿಷ್ಣುಪುರಾಣ ಚಂಪು 5 ಓಲೆ ಮತ್ತು ಕಾಗದ ಪ್ರತಿಗಳಿಂದ ಪರಿಷ್ಕೃತಗೊಂಡು ಅಚ್ಚಾಗಿದೆ. ಪ್ರಸ್ತುತ ಕೃತಿಯಲ್ಲಿ ವಿಷ್ಣುಪುರಾಣದ ಪೂರ್ವಾರ್ಧ ಅಂದರೆ ಮೊದಲ ಮೂರು ಅಂಶಗಳು ಅಚ್ಚಾಗಿವೆ. ಇಲ್ಲಿನ ಮೂರು ಅಂಶಗಳಲ್ಲಿ 12 ಅಧ್ಯಾಯಗಳಿದ್ದು, ಬಳಕೆಯಾಗಿರುವ ಕಂದ, ವೃತ್ತಗಳ ಒಟ್ಟು ಸಂಖ್ಯೆ 2644. ಇಲ್ಲಿನ ಮೂರು ಅಂಶಗಳ ಕಥಾವಸ್ತು ಹೀಗಿದೆ:

ಪ್ರಥಮಾಂಶದಲ್ಲಿ ಸೃಷ್ಟಿಪೂರ್ವಸ್ಥಿತಿ, ಚತುರ್ವಿಂಶತಿ ತತ್ವ ವಿಚಾರ, ಜಗದುತ್ಪತ್ತಿ, ಬ್ರಹ್ಮ ವಿಷ್ಣ್ವಾದಿಗಳ ಆಯುರ್ಮಾನ, ಕಾಲಸ್ವರೂಪ, ಬ್ರಹ್ಮೋತ್ಪತ್ತಿ. ಹಿರಣ್ಯಾಕ್ಷ ವಧೆ, ಲೋಕನಿರ್ಮಾಣ, ಚಾತುರ್ವರ್ಣ್ಯ ವ್ಯವಸ್ಥೆ, ಸ್ವಾಯಂಭುವೋತ್ಪತ್ತಿ, ರುದ್ರಸೃಷ್ಟಿ, ಸಪ್ತ ರುದ್ರರ ಸ್ಥಾನ, ಲಕ್ಷ್ಮೀನಾರಾಯಣ ಸರ್ವವ್ಯಾಪಕತ್ವ, ಕ್ಷೀರಾಬ್ಧಿಮಥನ, ಧ್ರುವೋಪಾಖ್ಯಾನ, ಕಂಡೂಪಾಖ್ಯಾನ, ದಕ್ಷೋತ್ಪತ್ತಿ. ಪ್ರಹ್ಲಾದ ಚರಿತ್ರೆ, ಕಶ್ಯಪ ಸಂತತಿ ಇತ್ಯಾದಿ ವಿವರಗಳಿವೆ.

ದ್ವಿತೀಯಾಂಶದಲ್ಲಿ ಪ್ರಿಯವ್ರತ ಸಂತತಿ ವಿವರ, ಭೂವಿಸ್ತಾರ, ಪಾತಾಳ ನರಕಾದಿ ವರ್ಣನೆ, ಭುವನಗೋಳ, ಸೂರ್ಯಾದಿ ಜ್ಯೋತಿರ್ಗೋಳ. ಗಂಗೋತ್ಪತ್ತಿ, ಜಡಭರತೋಪಾಖ್ಯಾನ ಇತ್ಯಾದಿಗಳಿವೆ.

ತೃತೀಯಾಂಶದಲ್ಲಿ ಮನ್ವಂತರ ವಿವರಣೆ, ಯುಗ ಕಲ್ಪ ನಿರ್ಣಯ, ವ್ಯಾಸಾವತಾರ ಕಥನ, ವೇದಶಾಖಾಭೇದಾದಿ ವರ್ಣನೆ, ವಿಷ್ಣುಭಕ್ತ ನಿರ್ಣಯ, ವರ್ಣಾಶ್ರಮ ಧರ್ಮ ಮತ್ತು ಆಹ್ನಿಕ ಕರ್ಮ ವಿವರಣೆ, ಸಂಸ್ಕಾರ ವಿಧಿ. ಶ್ರಾದ್ಧ ಪ್ರಕ್ರಿಯೆ. ನಗ್ನ ಮತ್ತು ಪಾಷಂಡ ಸ್ವರೂಪಾದಿ ವಿವರಗಳಿವೆ.

ಕೃತಿಯ ಪೀಠಿಕೆಯಲ್ಲಿ ಸಂಪಾದಕರು ಚಿಕ್ಕುಪಾಧ್ಯಾಯನ ಜೀವನ ವೃತ್ತಾಂತವನ್ನು ತಿಳಿಸಿ ಅನಂತರ ಅವನ 37 ಕೃತಿಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಅನಂತರ ಕವಿಯ ಕಾಲ ಹಾಗು ಸ್ಥಾನಗಳನ್ನು ಕವಿಯ ಕೃತಿಗಳ ಉಲ್ಲೇಖಗಳನ್ನು ಉದ್ಧರಿಸಿ ನಿರ್ಧರಿಸಿರುವರು. ಇದರ ಅನಂತರ ಸಂಸ್ಕೃತ ಪುರಾಣಗಳ ಇತಿಹಾಸವನ್ನು ಸಂಗ್ರಹವಾಗಿ ನಿರೂಪಿಸಿ ಚಿಕ್ಕುಪಾಧ್ಯಾಯನ ಭಾಷಾಂತರದ ರೀತಿಯನ್ನು ಸೋದಾಹರಣ ಪೂರ್ವಕವಾಗಿ ವಿವರಿಸಿದ್ದಾರೆ. ಕೊನೆಯಲ್ಲಿ ಇಲ್ಲಿನ ಮೂರು ಅಂಶಗಳ ಛಂದೋವಿವರಗಳನ್ನು ತಿಳಿಸಿದೆ.

**ಸರ್ವಜ್ಞ ವಚನ ಸಂಗ್ರಹ.** ಕನ್ನಡದ ಕ್ರಾಂತಿಕವಿಗಳಲ್ಲೊಬ್ಬನಾದ ಸರ್ವಜ್ಞ, ಪಂಡಿತ ಹಾಗು ಪಾಮರರ ಮೆಚ್ಚುಗೆಯ ಕವಿ. ಈತ ತ್ರಿಪದಿ ಛಂದಸ್ಸಿನ ರೂಪದಲ್ಲಿ ಲೋಕದ ಅಂಕು–ಡೊಂಕುಗಳನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದಿದ್ದಾನೆ. ಸರ್ವಜ್ಞ ತನ್ನ ಸ್ವವಿಷಯವನ್ನಾಗಲಿ, ಕಾಲ ದೇಶಗಳ ಬಗೆಗಾಗಲಿ. ಏನನ್ನೂ ಸ್ಪಷ್ಟವಾಗಿ ತಿಳಿಸಿಲ್ಲ.

ಆದರೆ ಸರ್ವಜ್ಞನ ಬಗೆಗೆ ಕೆಲವು ದಂತಕಥೆಗಳು ಪ್ರಚಾರದಲ್ಲಿವೆ. ಅವುಗಳ ಪ್ರಕಾರ ಧಾರವಾಡ ಜಿಲ್ಲೆಯ ಮಾಸೂರು ಸರ್ವಜ್ಞನ ಹುಟ್ಟೂರು. ತಂದೆ–ತಾಯಿಗಳು ಬಸವರಸ ಮತ್ತು ಕುಂಬಾರ ಮಾಳಿ. ಇವನು ಬಹು ಸಂಖ್ಯಾತ ತ್ರಿಪದಿಗಳನ್ನು ರಚಿಸಿದ್ದು ಇವರಲ್ಲಿನ 275 ತ್ರಿಪದಿಗಳನ್ನು ಕ್ರಿ.ಶ. 1600ರ ಕಾಲದ ಸಂಪಾದನೆಯ ಸಿದ್ಧವೀರಣಾಚಾರ್ಯ ಸಂಗ್ರಹಿಸಿದ್ದಾನೆ. ಹಾಗಾಗಿ ಸರ್ವಜ್ಞನ ಕಾಲ '1600ಕ್ಕಿಂತ ಸ್ವಲ್ಪ ಹಿಂದೆ ಇದ್ದಿರಬೇಕು'.

ಈತನ ವಚನಗಳ ಸಂಕಲಿತ ಪ್ರತಿಗಳು ಸಾಮಾನ್ಯವಾಗಿ 27 ಅಥವಾ 29 ಪದ್ಧತಿಗಳಲ್ಲಿ ವಿಭಾಗಗೊಂಡಿವೆ. ಶ್ರೀ ಉತ್ತಂಗಿ ಚನ್ನಪ್ಪನವರು ಈತನ ಪ್ರತಿಗಳಲ್ಲಿ 34 ಪದ್ಧತಿಗಳನ್ನು ಗುರುತಿಸಿದ್ದಾರೆ. ಪ್ರಸ್ತುತ ಸಂಕಲನದಲ್ಲಿ ಪದ್ಧತಿಯ ವಿಭಜನಾ ಕ್ರಮವನ್ನುಳಿದು ಪೀಠಿಕೆ. ಗುರುಮಹಿಮೆ, ಶಿವ–ಲಿಂಗ ಶರಣರ ಮಹಿಮೆ, ದಾನದ ಹಿರಿಮೆ. ಕುಲ–ಡಂಭಾಚಾರ, ಸಂಕೀರ್ಣ ಇತ್ಯಾದಿ 12 ವಿಭಾಗಗಳನ್ನಾಗಿ ಮಾಡಿಕೊಂಡಿದೆ. ಇಲ್ಲಿರುವ ಒಟ್ಟು ತ್ರಿಪದಿಗಳ ಮೊತ್ತ 1020.

ಸರ್ವಜ್ಞನ ತ್ರಿಪದಿಗಳಲ್ಲಿ ಅವನ ವಿಶಾಲದೃಷ್ಟಿ, ನೈತಿಕ ಮೌಲ್ಯಗಳ ಬಗೆಗಿನ ಮನೋಭಾವ, ಸರ್ವಜನಾನುಕಂಪೆ ಮೊದಲಾದ ಗುಣಗಳನ್ನು ಕಾಣಬಹುದಾಗಿದೆ.

ಮುನ್ನುಡಿಯಲ್ಲಿ ಸಂಪಾದಕರು ಕೆಲವೆಡೆ ಸರ್ವಜ್ಞನ ಸೂಕ್ತಿಗಳಿಗೂ ತಮಿಳಿನ ತಿರುಕ್ಕುರಳಿನ ಮಾತುಗಳಿಗೂ ಇರುವ ಸಮಾನತೆಯನ್ನು ಗುರುತಿಸಿದ್ದಾರೆ. ಅಲ್ಲದೆ ಸರ್ವಜ್ಞನ ವ್ಯಕ್ತಿತ್ವವನ್ನು ಅವನ ತ್ರಿಪದಿಗಳ ಉದಾಹರಣೆಗಳ ಮೂಲಕ ಗುರುತಿಸಿದ್ದಾರೆ.

ಕೃತಿಯ ಕೊನೆಯಲ್ಲಿ ಸರ್ವಜ್ಞನ ವಚನಗಳ ಅಕಾರಾದಿ ಇದೆ. ಸಂಪಾದಕರು ಸ್ವಲ್ಪ ಶ್ರಮವಹಿಸಿ ಶಬ್ದಕೋಶವನ್ನು ಕೊಟ್ಟಿದ್ದರೆ ಈ ಕೃತಿಯ ಓದುಗರಿಗೆ ಇನ್ನೂ ಹೆಚ್ಚಿನ ಪ್ರಯೋಜನವಾಗುತ್ತಿತ್ತೆಂಬ ವಿಷಯದಲ್ಲಿ ಸಂದೇಹವಿಲ್ಲ.

# ಲಕ್ಷಣ ಗ್ರಂಥಗಳು

**ಹೆಚ್. ಪಿ. ನಾಗರಾಜಯ್ಯ**

ಲಕ್ಷಣ ಗ್ರಂಥಗಳನ್ನು ಕುರಿತ ಈ ಸಮೀಕ್ಷೆಯಲ್ಲಿ ಒಟ್ಟು ಹನ್ನೊಂದು ಪುಸ್ತಕಗಳು ಸೇರಿವೆ. ಇವುಗಳಲ್ಲಿ ನಿಘಂಟು, ಭಾಷಾವಿಜ್ಞಾನ, ಛಂದಸ್ಸು, ವ್ಯಾಕರಣ. ವ್ಯಾಖ್ಯಾನ– ಹೀಗೆ ವಿವಿಧ ವಿಷಯಗಳಿಗೆ ಸೇರಿದ ಪುಸ್ತಕಗಳಿವೆ.

ವಿವರ: ನಿಘಂಟಿಗೆ ಸೇರಿದ ಪುಸ್ತಕಗಳು ಮೂರು, ಭಾಷಾವಿಜ್ಞಾನಕ್ಕೆ ಸಂಬಂಧಿಸಿದವು ಮೂರು, ಛಂದಸ್ಸಿಗೆ ಸೇರಿದವು ಎರಡು, ವ್ಯಾಕರಣಕ್ಕೆ ಒಂದು, ವ್ಯಾಖ್ಯಾನ ಒಂದು, ಸಂಶೋಧನೆಗೆ ಸೇರಿದ್ದು ಒಂದು.

ಕಡೆಯ ಎರಡು ಗ್ರಂಥಗಳು ಸ್ಥೂಲವಾಗಿ ಈ ವಿಭಾಗಕ್ಕೆ ಸೇರುತ್ತವೆ. ವಾಸ್ತವವಾಗಿ ಅವೆರಡೂ ಪ್ರತ್ಯೇಕ ವಿಭಾಗವಾಗಿ ನಿಲ್ಲುತ್ತವೆಂಬುದೇ ಸಮಂಜಸ. ಆದರೆ ಅವೆರಡನ್ನೂ ಬೇರೆಯಾಗಿ ವಿಭಜಿಸುವುದಕ್ಕಿಂತ ಈ ಅಧ್ಯಾಯದಲ್ಲೇ ಅಳವಡಿಸಬಹುದೆಂದು ಭಾವಿಸಿ 'ಇತ್ಯಾದಿ' ಎಂದು ತಿಳಿಸಿ ಸೇರಿಸಿದ್ದೇವೆ. ಕಡೆಯಲ್ಲಿ ಹೆಸರಿಸಿದ ಆ ಗ್ರಂಥಗಳು: ಪಂಪಭಾರತ ದೀಪಿಕೆ, ಹರಿಹರನ ಕೃತಿಗಳು.

ಈ ವಿಭಾಗದ ವಿಮರ್ಶೆಯ ಒರೆಗಲ್ಲಿನಲ್ಲಿ ಮಿನುಗುವ ಶ್ರೇಷ್ಠಕೃತಿ **ಪಂಪಭಾರತ ದೀಪಿಕೆ.** ಈ ವರ್ಷ ರಚಿತವಾಗಿರುವ ಕನ್ನಡ ಗ್ರಂಥಗಳಲ್ಲೆಲ್ಲಾ ಈ ವ್ಯಾಖ್ಯಾನ ಅಪೂರ್ವ ಸ್ಥಾನ ಗಳಿಸುತ್ತದೆ. ಸಂಸ್ಕೃತ ಸಾಹಿತ್ಯದಲ್ಲಷ್ಟೇ ಹೆಚ್ಚಾಗಿ ಕಂಡುಬರುವ ಮಲ್ಲಿನಾಥ ಮಾದರಿಯ ಮೇಲ್ಪಂಕ್ತಿಗೆ ಹೆಗಲೆಣೆಯಾಗಿ ನಿಲ್ಲುವ ಕನ್ನಡ ವ್ಯಾಖ್ಯಾನ ಗ್ರಂಥವಿದು. ಉಳಿದ ಹಳಗನ್ನಡ ಕಾವ್ಯಗಳಿಗೂ ಈ ತೆರನಾದ ದೀಪಿಕೆಗಳ ಅಗತ್ಯ ಬಹಳವಾಗಿದೆಯಾದರೂ ಇಂಥ ಕೃತಿರಚನೆಗೆ ಬೇಕಾದ ಸಿದ್ಧತೆ ಹೊಂದಿರುವ ಬಲ್ಲಿದರು ಬಹಳಿಲ್ಲ. ಶಾಸ್ತ್ರ ಹಾಗೂ ಸಾಹಿತ್ಯ ಕೃತಿಗಳ ಸತತಾಭ್ಯಾಸದಿಂದ ಬಂದ ಪ್ರಜ್ಞೆ, ಪ್ರತಿಭೆ, ಲೋಕಾನುಭವ, ಸಹೃದಯತೆ – ಮೊದಲಾದ ಗುಣಗಳನ್ನುಳ್ಳ ವಿದ್ವಾಂಸರೊಬ್ಬರ ಕೌಶಲ್ಯವನ್ನು ಈ ವ್ಯಾಖ್ಯಾನದಲ್ಲಿ ಕಾಣುತ್ತೇವೆ.

ಇನ್ನುಳಿದ ಲಕ್ಷಣಗ್ರಂಥಗಳು ಒಟ್ಟಾರೆ ಸಂಖ್ಯೆಯಂತೆ ಸತ್ವವೂ ಕಡಮೆ. ಇದೇ ಬಗೆಯ ಇದೇ ಮಟ್ಟದ ಕೃತಿರಚನೆ ಮುಂದುವರಿದರೆ ಕನ್ನಡ ಭಾಷೆಯ ಭಂಡಾರಕ್ಕೆ ಯಾವ ಹೊಸ ಕೊಡುಗೆಯೂ ಬಂದಂತಾಗದು. ನಮ್ಮ ಭಾಷೆಯ ಬೆಳವಣಿಗೆ ದೃಷ್ಟಿಯಿಂದ ಕೂಡ ಇನ್ನೂ ಉತ್ತಮೋತ್ತಮ ಕೃತಿಗಳು ರಚನೆಯಾಗಬೇಕು.

ಸಾಹಿತ್ಯ ಸಂಶೋಧನೆಗೆ ಸೇರಿದ ಹರಿಹರನ ಕೃತಿಗಳ ಗ್ರಂಥ ಸಾಧಾರಣ ಮಟ್ಟಕ್ಕೂ ಮೇಲೆ ಹೋಗುವುದಿಲ್ಲ.

**ಕುಮಾರವ್ಯಾಸ ನಿಘಂಟು:** ಇದರ ಸಂಪಾದಕ 'ಎನ್ಕೆ' ಅವರು ಸಿದ್ಧಪಡಿಸಿರುವ 'ಕುಮಾರವ್ಯಾಸ ಭಾರತ'ದಲ್ಲಿ ಕೊಟ್ಟಿರುವ ಶಬ್ದಕೋಶವನ್ನೇ ಇಲ್ಲಿಯೂ ಕೊಟ್ಟಿದ್ದಾರೆ,

–"ಕುಮಾರವ್ಯಾಸನ ಕಾವ್ಯವನ್ನು ಅಭ್ಯಸಿಸುವವರಿಗೆ ಹೆಚ್ಚಿನ ಅನುಕೂಲವಾಗಲೆಂದು ಇಲ್ಲಿ ಇದನ್ನು ಪ್ರತ್ಯೇಕವಾಗಿ ಅಲ್ಪ ವಸೌಲ್ಯದಲ್ಲಿ ಸಾಮಾನ್ಯರಿಗೆ ದೊರಕುವಂತಾಗಬೇಕು ಎಂಬ ಉದ್ದೇಶದಿಂದ ಪ್ರತ್ಯೇಕವಾಗಿ ಈ ಹೊತ್ತಿಗೆಯನ್ನು ತರಲಾಗಿದೆ" ಎಂಬ ಸಮರ್ಥನೆಯ ನ್ನಿತ್ತು. ಆದರೆ ಸಂಪಾದಕರ ಅಶ್ರದ್ಧೆಯಿಂದಾಗಿ ಈ ಪ್ರಯತ್ನ ಅನವಶ್ಯಕ ಪುನರಾವರ್ತನೆಯೆಂದೇ ತೋರುತ್ತದೆ. ಇದರಲ್ಲಿ ಕುಮಾರವ್ಯಾಸನ ಜಾಣ್ನುಡಿ ನಾಣ್ಣುಡಿ ಪಡೆನುಡಿ ಗಾದೆನುಡಿಗಳನ್ನು ವಿವರಣೆಗಳೊಡನೆ ಅಳವಡಿಸಿದ್ದಾರೆ, ನಿಜ. ಹಾಗಿದ್ದೂ ಮೇಲಿನ ವಿಮರ್ಶೆಯ ಮಾತು ಅನ್ವಯಿಸುತ್ತದೆಂಬುದನ್ನು ನಿದರ್ಶನಗಳೊಡನೆ ತೋರಿಸಬಹುದು.

ಸಂಪಾದಕರು ಮುನ್ನುಡಿಯಲ್ಲಿ "ಕುಮಾರವ್ಯಾಸನ ಅಭ್ಯಾಸಿಗಳಿಗೆ ಆತನ ಭಾಷಾ ಶೈಲಿಯನ್ನೂ, ಆತನ ಪದಪ್ರಯೋಗಗಳನ್ನೂ ಅರಿತುಕೊಳ್ಳುವುದು ಬಹಳ ಅಗತ್ಯ. ಆದರೆ ಬರಿ ಡಿಕ್ಶನರಿಯಿಂದ ಕುಮಾರವ್ಯಾಸನ ಬಳಕೆಮಾತುಗಳನ್ನೂ ಪಡೆನುಡಿಗಳನ್ನೂ ಅರ್ಥಯಿಸುವುದು ಸಾಧ್ಯವಾಗಲಿಕ್ಕಿಲ್ಲ. ಕುಮಾರವ್ಯಾಸ ಕವಿ ತನ್ನದೇ ಆದ ಶಬ್ದ ಸಂಪತ್ತಿಯುಳ್ಳವನು. ಸಂದರ್ಭಕ್ಕೆ ಸರಿಯಾಗಿ ಹೊಸ ಹೊಸ ಪ್ರಯೋಗಗಳನ್ನು ತನ್ನ ಕಲ್ಪನಾಶಕ್ತಿಯಿಂದ, ರೂಪಕ ಸಾಮರ್ಥ್ಯದಿಂದ ನಿರ್ಮಿಸುತ್ತಾನೆ, ಚಲಾವಣೆಯಲ್ಲಿ ತಂದುಬಿಡುತ್ತಾನೆ. ಹೊಸ ನಾಣ್ಯಗಳಂತೆ. ಇದಕ್ಕಾಗಿ ಕುಮಾರವ್ಯಾಸನ ಮನೋಭಾವ ವನ್ನರಿತುಕೊಂಡು ಆತನ ಪ್ರಯೋಗಗಳಿಗೆ ಅರ್ಥ ಹಚ್ಚಬೇಕಾಗುತ್ತದೆ" ಎಂಬುದಾಗಿ ತಿಳಿಸಿದ್ದಾರೆ. ಅವರ ಗ್ರಹಿಕೆಯನ್ನು ಸಂಪೂರ್ಣವಾಗಿ ಅನುಮೋದಿಸಬಹುದಲ್ಲದೆ ಈ ಗ್ರಹಿಕೆಯ ಹಿನ್ನೆಲೆಯಲ್ಲೇ ಅವರ ವಿಫಲ ಪ್ರಯತ್ನವನ್ನೂ ಪರಿಶೀಲಿಸಬಹುದು.

ಈ ನಿಘಂಟಿನಲ್ಲಿ ಮೂರು ಭಾಗಗಳಿವೆ – ನಿಘಂಟು, ಪದಪ್ರಯೋಗಗಳು, ಪಾರಿಭಾಷಿಕ ಪದಗಳು.

ಮೊದಲ ಭಾಗದ ಎಪ್ಪತ್ತು ಪುಟಗಳ ಸಂಕ್ಷಿಪ್ತ ನಿಘಂಟು ಸ್ಥೂಲವಾಗಿ ಆಕಾರಾದಿಯಲ್ಲಿದೆಯೆಂದು ಭಾವಿಸಬಹುದೇ ಹೊರತು ವಾಸ್ತವವಾಗಿ ಅದರಲ್ಲಿ ಕ್ರಮಪ್ರಾಪ್ತ ಅಕಾರಾದಿಯಿಲ್ಲ. ಅಲ್ಲದೆ ಬರಿಯ ಶಬ್ದ ಮತ್ತು ಅದಕ್ಕಿರುವ ಅರ್ಥ ವನ್ನಷ್ಟೇ ಕೊಡುವ ಶಬ್ದಕೋಶ ಸಂಪ್ರದಾಯಕ್ಕೆ ವಿಪುಲವಾಗಿ ಪೆಟ್ಟು ಬಿದ್ದಿದೆ: 'ಅವದಿರ ಮಡದಿ ಮಕ್ಕಳ ಕಣ್ಣ ನೀರಿನ್ನಾರ ತಾಗುವುದು' ಎಂಬ ರೂಪವನ್ನು (ಪುಟ 1) ಕೊಟ್ಟು ಅದರ ಅರ್ಥ ಹೇಳ ಹೊರಟಿರುವುದು ನಿಘಂಟು ಸಿದ್ಧತೆಯ ಕ್ರಮಕ್ಕೆ ಹೊರತು. ಹೀಗೆಯೇ ಅಟಮಟಿಸಿ ಚುಕ್ಕಿಗಿಕ್ಕುವ ಲೆಕ್ಕ ಲೇಸಾಯ್ತು, ಅಧ್ವರಕೆ ಸನ್ಯಾಸ, ಅರಲು ಬಾರೆವು, ಅಚ್ಚುಗಳ ಹೆರೆ, ಅಘಾಟದ ನಾಯಕರು, ಅಸುಗಳ ತೋಡಿದನು, ಉಂಗುರ ವಿಡಿಯ ನಡುವಿನ ನೀರೆ, ಇವನುಬ್ಬಟೆಗೆ ಮದ್ದೆರೆವೆನು, ಇಂದಿನಲಿ ಮಹನವಮಿ ತಲೆಗಳಿಗೆ – ಇತ್ಯಾದಿ ರೂಪಗಳನ್ನು 'ನಿಘಂಟು' ಭಾಗದಲ್ಲಿ ಕೊಟ್ಟು ಅರ್ಥ ನೀಡಿದ್ದಾರೆ.

ಅನವಧಾನದಿಂದ ಮೇಲಿನ ರೂಪಗಳು ಮೊದಲ ಭಾಗದಲ್ಲಿ ಸೇರಿರಬಹುದೆಂದು ಅನುಮಾನಿಸಲಿರುವ ಅವಕಾಶವನ್ನು ತಳ್ಳಿಹಾಕುವ ಇನ್ನಿತರ ಉದಾಹರಣೆಗಳಿವು : ಕರಿಯ ಸೊಗಡಿನ, ಕುಸಿದಲೆಯ ಬಿಟ್ಟಿಯ ಭಾರವೊ, ಕೈ ಪತ್ತುಗೆಯ

ಮೋರೆಯು, ಖುರಕೆ ರತುನವ ಸುರಿದು, ನಿರ್ನಾಮ ಭಾವದಲಿ. ನುಡಿದರಂಗೈತಳದ ಬಾಯ್ಗಳಲಿ, ಬಾಯೊಳಗೆ ಬೆರಳನಿಳುಹಿ. ಬಿಂದುಧ್ವನಿ ಕಳಾಪರಿಲುಳಿತನು, ಸೆರಗನು ಅಳವಡೆ ಸಿಕ್ಕಿ, ಸರಿಮಿಗಿಲು ಕಾದಿದರು – ಇತ್ಯಾದಿ. ಇವು ಶಬ್ದಕೋಶದ ಭಾಗದಲ್ಲಿ ಹೇಗೆ ತಾನೆ ಬಂದಾವು? ಜೊತೆಗೆ ವಿಭಕ್ತಿ ಪ್ರತ್ಯಯಾಂತ ರೂಪವನ್ನು ಬೇರೆ ಕೊಡುತ್ತಾರೆ. ಸೊಗಡಿನ, ಮೋರೆಯು ಮುಂತಾದ ಷಷ್ಠ್ಯಂತ ರೂಪಗಳಾಗಲಿ, ಮೋರೆಯೊಣಗಿದುದಮರರಿಗೆ ಎಂಬಂಥ ಚತುರ್ಥಿ ಪ್ರತ್ಯಯಾಂತ ರೂಪಗಳಾಗಲಿ ಯಾವ ನಿಘಂಟಿನಲ್ಲಿ ಕಾಣಿಸಿಕೊಂಡಾವು?

ಮಿಾಟು = ವೈಭವ, ಮಿಾಟು = ಶ್ರೇಷ್ಠ, ಮಿಾಂಟು = ಹೊಡೆತ. ಮಿಾರುವಿಕೆ (ಇತ್ಯಾದಿ) – ಇವಿಷ್ಟನ್ನೂ ಒಂದೇ ಮೂಲಶಬ್ದದ ಅಡಿ ಕೊಡಬಹುದಿತ್ತು. ಮೊಗಸು = ಕಾದಾಡು, ಮೊಗಸು = ಏರಿಹೋಗು, ಮೊಗಸು = ಯತ್ನಮಾಡು; ದಂಡಿ = ರೀತಿ, ಜಗಳ, ದಂಡಿ = ತಡಿ, ಸೀಮೆ, ದಂಡಿ = ಶೌರ್ಯ ಸಮಾನತೆ, ಘನತೆ, ದಂಡಿ = ಸೆಣಸಾಟ, ದಂಡಿ = ವರ್ತನೆ; ಲಾವಣಿಗೆ = ಹೊಂದಿಕೆ, ಲಾವಣಿಗೆ = ಕುದುರೆಯ ಪಾಗೆ(?), ಲಾವಣಿಗೆ = ಸಮೂಹ, ಲಾವಣಿಗೆ = ಸಂಬಂಧ, ಲಾವಣಿಗೆ = ಪ್ರಾಕಾರ – ಇವೆಲ್ಲಾ ಪುನರುಕ್ತಿ ಗೊಂದಲ ಗ್ರಂಥದ ಮೌಲ್ಯಕ್ಕೆ ಮಸಿ ಹಚ್ಚುತ್ತವೆ. ಇಂಥ ಕಡೆಗಳಲ್ಲೆಲ್ಲಾ ಒಂದೇ ಶಬ್ದರೂಪ ಕೊಟ್ಟು, ಅದಕ್ಕಿರುವ ಅರ್ಥಗಳನ್ನು ಬರೆಯಬಹುದಿತ್ತು ಮತ್ತು ಉಲ್ಲೇಖಗಳ ದುಂದುಗಾರಿಕೆಯನ್ನು ತಪ್ಪಿಸಬಹುದಿತ್ತು.

ಬೇರೆ ಬೇರೆ ಬರಬೇಕಾದ ಎರಡು ಮೂರು ಶಬ್ದಗಳನ್ನು ಒಟ್ಟಿಗೆ ಕಾಣಿಸಿರುವುದೂ ಸರಿಯಿಲ್ಲ. ಅಳವಿಗಿಟ್ಟಣಿಸು – ಎಂಬ ಉದಾಹರಣೆಯಲ್ಲಿ ಅಳವಿ + ಇಟ್ಟಣಿಸು ಪ್ರತ್ಯೇಕ ಬರಬೇಕು. ಈ ನಾನಾ ನ್ಯೂನತೆಗಳು ಉದ್ಭವಿಸಲು ಅಕಾರಾದಿಯ ಅಭಾವವಲ್ಲದೆ ಬೇರೆ ಕಾರಣಗಳೂ ಇವೆ. ಕುಮಾರವ್ಯಾಸ ಭಾರತದ ಪದ್ಯಗಳನ್ನು ಓದುತ್ತಾ ಹೊರಟ ಸಂಪಾದಕರು ಆಯಾ ಪದ್ಯದ ಕಠಿಣ ಶಬ್ದಗಳನ್ನೂ, ಸ್ವಾರಸ್ಯಕರ ಪ್ರಯೋಗಗಳನ್ನೂ ಗುರುತುಮಾಡುತ್ತಾ ಬಂದು ಅವನ್ನು ಮುದ್ರಣಕ್ಕೆ ಹಾಗೆಯೇ ಕೊಟ್ಟಿರಬಹುದೆಂಬ ಊಹೆಗೂ ಗ್ರಾಸವಿದೆ. ಹಾಗಿದ್ದಲ್ಲಿ ಅವರು ಗುರುತಿಸಿದ ಶಬ್ದಾದಿಗಳನ್ನು ಪಟ್ಟಿಕೆಗಳಿಗೆ ಎತ್ತಿಕೊಂಡು ಅವನ್ನು ಅಕಾರಾದಿಗೆ ಜೋಡಿಸಿ ಗ್ರಂಥರಚನೆಗೆ ಅಳವಡಿಸಿದ್ದರೆ ಲೇಸಾಗುತ್ತಿತ್ತು.

ನಿಘಂಟು ಅಕಾರಾದಿಯಾಗದೆ ಇರುವುದು ಅಶಾಸ್ತ್ರೀಯ. ಆದರಿಂದ ಈ ಕೋಶ ಹೆಚ್ಚು ದೋಷಪೂರಿತವಾಗಲೆಡೆಯುಂಟಾಗಿದೆ. 'ಅಂಗವಣೆ' ಶಬ್ದ ಬಂದು ನಲವತ್ತು ಶಬ್ದಗಳಾದ ಮೇಲೆ 'ಅಂಗಚಿತ್ತ' ಬರುತ್ತದೆ. 'ಆಲವಟ್ಟ'ವಾದ ಮೇಲೆ ಆದರ ಕೆಳಗೇ 'ಅಡಿತು' ಶಬ್ದವಿದೆ. ಅಳುವಾಸಿ, ಅಣಿಗಳೆ, ಆಗಮು, ಅಪ್ಯಾಯಿತ, ಅನೆವರಿ, ಅಪ್ಯಾಯಮಾನ, ಅಳವಿಸು, ಆಕೆ, ಆರ್, ಅಯುತ – ಈ ಕ್ರಮದಲ್ಲಿ ಶಬ್ದಗಳು ಬರುವುದು ನಿಘಂಟಿಗೆ ಭೂಷಣವಲ್ಲ. ಅವಗಡಿಸು ಎಂಬ ಶಬ್ದ ಎರಡನೆಯ ಪುಟದಲ್ಲೂ ಇದೆ, ಮೂರನೆಯ ಪುಟದಲ್ಲೂ ಇದೆ – ಒಂದೇ ಬಗೆಯ ಅರ್ಥಗಳಲ್ಲಿ.

ಆನೆವರಿ (ಪುಟ 6) ಶಬ್ದಕ್ಕೆ 'ಆನೆಯಂತೆ ಹರಿ' ಎಂದು ಅರ್ಥೈಸಿ ಮತ್ತೆ ಆನೆ ವರಿದು (ಪುಟ 5) ಶಬ್ದಕ್ಕೆ 'ಆನೆಯ ಮರಿಯಂತೆ ಹರಿದು' ಎಂದು ಹೇಳಿರುವುದು ಆಭಾಸ. ಬಹುಶಃ ಅದು 'ಆನೆವ (ಮ)ರಿವರಿದು' ಎಂಬುದಕ್ಕೆ ಹೇಳಿದ ಅರ್ಥವಿರಬೇಕು. ಹಾಗಿದ್ದಲ್ಲಿ ಇದನ್ನು ಮುದ್ರಣದೋಷವೆಂದಾದರೂ ತೋರಿಸಬೇಕಿತ್ತು. ಇದೇ ರೀತಿ 'ಹೊಂಗು' ಶಬ್ದ (ಪುಟ 69) ನಾಲ್ಕು ಶಬ್ದಗಳಂತರದಲ್ಲಿ ಎರಡು ಸಲ ಬಂದಿದೆ. ಒಂದು ಕಡೆ ಉತ್ಸಾಹಪಡು. ಇನ್ನೊಂದು ಕಡೆ ಹಿಗ್ಗು ಎಂಬರ್ಥವಿದೆ ಅಷ್ಟೆ, ಇದರಲ್ಲಿ ಏನು ವ್ಯತ್ಯಾಸವಿದೆ?

ಆದುದರಿಂದ ಒಂದು ಶಬ್ದದ ರೂಪಾಂತರಗಳನ್ನೆಲ್ಲ ಒಂದೇ ಶಬ್ದದ ಕೆಳಗೆ ಕೊಟ್ಟಿಲ್ಲ ವೆಂಬುದು ಗಟ್ಟಿಯಾಯಿತು. ಮುಖ್ಯ ಉಲ್ಲೇಖ ಮೊದಲಿತ್ತು ಅದರಡಿಯಲ್ಲಿ ತತ್ಸಂ ಬಂಧಿಯಾದ ರೂಪಾಂತರಗಳನ್ನು ತೋರಿಸುವುದು ವೈಜ್ಞಾನಿಕ ಪದ್ಧತಿ. ಇದರಿಂದ ಶಬ್ದಗಳ ಪುನರಾವೃತ್ತಿಗೆ ಅವಕಾಶವಿರದು. ಇಲ್ಲಿ ಅಕಾರಾದಿ ಸರಿಯಿಲ್ಲದಿರುವುದರ ಫಲ ವಾಗಿ ಆದ ಏರುಪೇರಿನ ಜೊತೆಗೆ ಕರಿವೊಳೆ. ಕರಿವೊಳೆವೋಯ್ತು ಸಂವರಿಸು–ಮೊದ ಲಾದ ಶಬ್ದರೂಪಾವಳಿಯನ್ನೆಲ್ಲಾ ಕೊಡುತ್ತಾ ಹೊರಟ ಶ್ರಮವೂ ತಲೆದೋರಿತು. ಶಬ್ದರೂಪಗಳ ಆಯ್ಕೆಯಲ್ಲಿ ಅಕ್ರಮವಿರುವಂತೆ ಮೂಲರೂಪ. ನಿಷ್ಪನ್ನರೂಪಗಳ ಅಂತರವನ್ನು ಗುರುತಿಸುವಲ್ಲೂ ದೋಷವಿದೆ. ಅರ್ಥವನ್ನು ನಿರ್ಣಯಿಸುವಾಗಲೂ ಇನ್ನೂ ಮಿಗಿಲಾದ ಎಚ್ಚರದ ಅಗತ್ಯವಿತ್ತು.

ಅರ್ಥಿ (ಪುಟ 5) ಶಬ್ದಕ್ಕೆ ಅಳ್ತಿ, ಪ್ರೀತಿ ಎಂದು ಕೊಟ್ಟಿದ್ದಾರೆ. ಅಳುಹು= ಅಳುಪು(?) ಎಂದು ಸೂಚಿಸಿದ್ದಾರೆ. ಅಣಸು= ಅನಿಯೋಗ್ಯ ಎಂಬರ್ಥವಿದೆ. ಅಳ್ಳಿರಿ (ಪುಟ 4) ಶಬ್ದ ಒಂದೇ ಪುಟದಲ್ಲಿ ನಾಲ್ಕು ಕಡೆ ಬಂದಿದೆ. ಅದರ ಹಿಂದಿನ ಪುಟ ದಲ್ಲೊಮ್ಮೆ ಆಗಲೇ ಬಂದಿರುವುದು ಸಾಲದೆಂಬಂತೆ: ಈ ಶಬ್ದಕ್ಕೆ ಒಟ್ಟು ಹೆದರಿಸು. ಹಬ್ಬು. ಬಾರಿಸು. ಗರ್ಜಿಸು. ಎದುರಿಗೆ ಬಂದು ಅಪ್ಪಳಿಸು ಎಂದರ್ಥ ಹೇಳುತ್ತಾರೆ. ಇದರ ಮೂಲ ಎಂತು? ಇದು 'ಅಳ್ಳೆಗಳನ್ನು ಇರಿ' ಎಂಬ ಶಬ್ದಗಳಿಂದಾದ ಸಮಾಸವೆ? ಇದರಲ್ಲಿ ಇಟ್ಟುಕೊಳ್ಳಬೇಕಾದುದೆಷ್ಟು? – ಹೀಗೆ ವಿವೇಚಿಸಬಹುದಿತ್ತು. ರವಣ= ಸಾಧನ. ರವಣ=ರೆಂಬೆ. ರಪಣ=ಆಯುಧ, ರಪಣ=ಸಾಧನ– ಇಷ್ಟೊಂದು ಉಲ್ಲೇಖ ಹಾಗೂ ಅರ್ಥ ಉಚಿತವೆ? ಈ ಶಬ್ದಗಳಲ್ಲಿ 'ರಪಣ' ಮೂಲ. ಅದಕ್ಕೆ ರೆಂಬೆ ಎಂಬರ್ಥ ಅಸಮಂಜಸವಲ್ಲವೆ? ಕೆಲವು ಶಬ್ದಗಳಿಗಾದರೂ ಮೂಲರೂಪ ಸೂಚಿಸಬಹುದಿತ್ತು: ಉದಾ: ಅಕ್ಕಡು. ಅಕ್ಕಾಡು – ಇವೆರಡೂ 'ಅಟ್ಟೂಕಡು' ರೂಪದಿಂದ ಬಂದಿವೆ. ಹುದು= ಸ್ನೇಹ ಎನ್ನುತ್ತಾರೆ. ಹುದುವು=ಪಾಲು ಎನ್ನುತ್ತಾರೆ. ಇಲ್ಲಿ 'ಹುದು' ಕೂಡ 'ಹುದುವು' ಇರಲಾರದೆ? ಚಿಂತನೀಯ. ಅಲ್ಲದೆ ಇಂಥ ಕಡೆಗಳಲ್ಲಿ ಈಗಾಗಲೇ ಹೊರ ಬಂದಿರುವ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಮೊದಲ ಸಂಪುಟ (ಸ್ವರಗಳ ಸಂಪುಟ) ದಲ್ಲಿ ಅನುಸರಿಸುವ ಶಾಸ್ತ್ರೀಯ ಶುದ್ಧ ಪದ್ಧತಿಯ ನೆರವನ್ನು ಈ ಸಂಪಾದಕರು ಅವಶ್ಯ ಪಡೆಯಬೇಕಿತ್ತು.

ಶಬ್ದಗಳನ್ನು ಕೊಡುವಾಗ ನಿಘಂಟಿನ ಭಾಗದಲ್ಲಿ ಅವುಗಳ ಆಕರಗಳನ್ನು ಸೂಚಿಸದಿರುವುದು ಮತ್ತೊಂದು ಕೊರತೆ. ಇದರಿಂದ ನಿಘಂಟಿನ ಪ್ರಯೋಜನ ಕುಂದಿದೆ. ಕೆಲವಾದರೂ ಅಪಶಬ್ದಗಳು (Ghost words) ಇರಬಹುದೆನ್ನಿಸಿದರೂ ಪ್ರಯೋಗದ ಕೊರತೆ, ಖಚಿತ ಉಲ್ಲೇಖ- ಪುಟ ಪದ್ಯ ಪರ್ವಾದಿಗಳೊಡನೆ ಇಲ್ಲದಿರುವುದು – ಇವುಗಳಿಂದಾಗಿ ಪತ್ತೆ ಹಚ್ಚುವುದು ಕಷ್ಟ. ಒಂದು ರೂಪ ಮುದ್ರಣಸ್ಖಾಲಿತ್ಯವೇ ಎಂಬ ಸಂದೇಹ ಬಂದಾಗ ಆಕರಗಳ ಅಭಾವದಿಂದಾಗಿ ಅನಿವಾರಿತವಾಗೇ ನಿಲ್ಲುತ್ತದೆ. ಒಂದು ನಿದರ್ಶನ: 'ನೂರು ಪಳು ಕೆಡಹಿ'ಗೆ ಎಂಬುದನ್ನಿತ್ತು 'ಇಂದ್ರ' ಎಂಬರ್ಥವಿತ್ತಿದ್ದಾರೆ. ಆದರೆ ಇಲ್ಲಿ 'ನೂರು ಪಶು ಕೆಡಹಿಗೆ' ಎಂಬ ಪ್ರಯೋಗವಿದ್ದಿರಬೇಕು. ಹಾಗಾದರೂ, ಕೊಟ್ಟಿರುವ ಅರ್ಥ ಘಟಿಸುವುದಿಲ್ಲ. ಅಂತೆಯೇ ತೀರ ಸಾಧಾರಣ ಶಬ್ದಗಳಿಗೂ ಇಲ್ಲಿ ಸ್ಥಾನವಿದ್ದು ಕೆಲವಾರು ಕಠಿಣ ಶಬ್ದಗಳನ್ನು ಕೈಬಿಟ್ಟಿರುವುದು ನ್ಯಾಯವಲ್ಲ.

ಎರಡನೆಯ ಭಾಗದಲ್ಲಿ ಆದಿಪರ್ವದಿಂದ ಹಿಡಿದು ಕೊನೆಯ ಪರ್ವದ ವರೆಗಿನ ಭಾಗಗಳಲ್ಲಿ ಒಂದೊಂದು ಪರ್ವದಲ್ಲೂ ಬರುವ ಶಬ್ದಗಳನ್ನೂ, ನುಡಿಗಟ್ಟುಗಳನ್ನೂ ಶಬ್ದಸಮೂಹಗಳನ್ನೂ ಕೊಟ್ಟು ಅರ್ಥಹೇಳಲು ಪ್ರಯತ್ನ ಪಟ್ಟಿದ್ದಾರೆ. ನಿಜವಾಗಿ ಮೊದಲ ಭಾಗದಲ್ಲಿ ಸೇರಲು ಅರ್ಹವಲ್ಲ ಎಂದು ನಾವು ಆಗಲೇ ಸೂಚಿಸಿದ ಆ 'ಶಬ್ದಗಳು' ಇಲ್ಲಿ ಬರಬೇಕಿತ್ತು. ಇಲ್ಲಿಯೂ ಸಂದೇಹಗಳು ಸಾಕಷ್ಟಿವೆ. 'ಕುರುಬಿದರೆ ತರುಬಿದರು' ಪ್ರಯೋಗದ ಅರ್ಥ ಪುನರ್ ಪರಿಶೀಲನಾರ್ಹ. ತೀರ ಸಾಮಾನ್ಯ ನುಡಿಗಟ್ಟುಗಳಿಗೂ ಪದಸಮೂಹಗಳಿಗೂ ಕೂಡ ಅರ್ಥಕೊಡಲು ಹೊರಟಿರುವುದು ಶಾಸ್ತ್ರೀಯ ವಿಧಾನಕ್ಕೆ ಬಾಹಿರ. ಕಾವನಾತನೆ ಕೊಲುವನಾತನೆ, ಸಾವೆನಾತನ ಕೈಯಲಿ (–'ಕೈಯ ಬಾಯಲಿ' ಎಂದಿರಬಹುದೆ. ಮೂಲಪಾಠದಲ್ಲಿ?). ತನುವ ಮರೆದನು ಪುಳಕ ಜಲದಲಿ. ರಾಜ್ಯದ ಸಿರಿಗೆ ಸೋಲುವವನಲ್ಲ -- ಇಂಥವು ಕುಮಾರವ್ಯಾಸನ ಹಿರಿಮೆಯನ್ನು ಎತ್ತಿ ತೋರವು. ಅವನಿಗಷ್ಟೇ ವಿಶಿಷ್ಟವಾದ ಪ್ರಯೋಗಗಳಲ್ಲಿ ಮಡುಗಟ್ಟಿನಿಂತ ಅರ್ಥ. ಭಾವ. ನಾದ. ಧ್ವನಿಕೋಶಗಳ ಹರಹನ್ನು ಗುರುತಿಸಬೇಕು.

ಅಲ್ಲದೆ ಇಂಥಲ್ಲಿ ಪೂರ್ಣಪಾಠ ಕೊಡುವ ಅಗತ್ಯವೂ ಇಲ್ಲ. ಆದರೆ ಮರಾಠಿ ಮೂಲರೂಪಗಳನ್ನು ಪಟ್ಟಿ ಮಾಡಿಕೊಟ್ಟಿರುವುದು ಓದುಗರಿಗೆ ತುಂಬ ಪ್ರಯೋಜನವಾಗಿದೆ. ಉದಾ: ಚಾವಟಿಯರು = ಕೇಡಿಗಳು. ಮರಾಠಿ ಚಾವಟ್: ಚೌರಾಸಿ = 84. ಮರಾಠಿ ಚೌರಾಂಶಿ.

ಮೂರನೆಯ ಭಾಗದಲ್ಲಿ ಹೆಚ್ಚು ತಪ್ಪುಗಳು ತಲೆಹಾಕಿಲ್ಲವಾದರೂ ಅಕಾರಾದಿಯ ಅಭಾವದಿಂದ ಇಲ್ಲಿನ ಉಪಯುಕ್ತತೆ ತಗ್ಗಿದೆ. ಆಯುಧಗಳನ್ನು ವಿವರಿಸುವಲ್ಲಿ ತೋಮರ (ಪುಟ 147) ಎರಡು ಸಲ ನುಸುಳಿಬಿಟ್ಟಿದೆ: ಒಂದು ಕಡೆ ಅದಕ್ಕೆ 'ಕಬ್ಬಿಣದ ಗದೆ' ಎಂಬರ್ಥ, ಇನ್ನೊಂದು ಕಡೆ 'ಗದೆ' ಎಂಬರ್ಥವನ್ನು (ಒಂದೇ ಪುಟದಲ್ಲಿ) ಹೇಳಿರುವುದು ಸರಿಕಾಣದು. ಕುಮಾರವ್ಯಾಸ ವರ್ಣಿಸಿರುವ ವಿವಿಧ ದೇಶಗಳನ್ನು ಕುರಿತು ಹೇಳುವಾಗ 'ಸಿಂಧುದೇಶವೆಂದರೆ ಜಲಪ್ರದೇಶವೆಂದಾಗಬಹುದು' ಎಂಬ ಮಾತು ಅಸ್ಪಷ್ಟ (ಪುಟ 154).

ಈ ನಿಘಂಟಿನ ಮೊದಲ ಪುಟದಲ್ಲೇ ಜಾಹೀರು ಪಡಿಸಿರುವ 'ಕುಮಾರವ್ಯಾಸನ ಶಬ್ದಭಂಡಾರ ಮುದ್ರೆಯನ್ನೊಡೆದು ಸೂರೆಗೆಯುವ ಪ್ರಪ್ರಥಮ ಶಬ್ದಕೋಶ' 'ಕವಿ ಕುಮಾರವ್ಯಾಸನ ಕುರಿತು ಅಭ್ಯಾಸಕ್ಕೆ ಪರಿಪೂರ್ಣ ಸಹಾಯಕ ಗ್ರಂಥ', 'ಕುಮಾರ ವ್ಯಾಸ ಭಾರತದ ಅಭ್ಯಾಸಕ್ಕೆ ಅತ್ಯವಶ್ಯಕವಾದ ಏಕೈಕ ಕೈಗನ್ನಡಿ', 'ಕನ್ನಡ ವಿದ್ಯಾರ್ಥಿ ಗಳಿಗೆ ಅತ್ಯಂತ ಉಪಯುಕ್ತ ನಿಘಂಟು' – ಎಂಬೆಲ್ಲ ಹೊಗಳಿಕೆ ಬಹಳ ಹೆಚ್ಚಾಯಿತು. ಇದುವರೆಗೆ ಬಂದಿರುವ ಹತ್ತಾರು ಕುಮಾರವ್ಯಾಸ ಭಾರತದ ಸಂಗ್ರಹಗಳ ಶಬ್ದಕೋಶ ಗಳನ್ನಷ್ಟೇ ಕಲೆ ಹಾಕಿದರೂ ಇದಕ್ಕಿಂತ ಉತ್ತಮ ಕೋಶ ತಯಾರಾದೀತು.

ಅಕಾರಾದಿ ಕ್ರಮ, ಪೂರ್ವ ನಿಯೋಜಿತ ವ್ಯವಸ್ಥೆ, ಖಚಿತವಾದ ಯೋಜನೆ–ಯೋಚನೆ–ಇವುಗಳ ಅಭಾವದಿಂದಾಗಿ ನಿಘಂಟು ಓದುಗರಿಗೆ ನೆರವು ನೀಡುವುದರಲ್ಲಿ ಸೋತಿದೆ. ಹೀಗಾಗಿ ಕುಮಾರವ್ಯಾಸ ಭಾರತಕ್ಕೆ ಒಂದು ಉಪಯುಕ್ತ ಶಬ್ದಕೋಶ ಸಿದ್ಧ ಪಡಿಸುವ ಸಾರ್ಥಕ ಪ್ರಯತ್ನದಲ್ಲಿ ಸಂಪಾದಕರು ಸಂಪೂರ್ಣ ವಿಫಲರಾಗಿದ್ದಾರೆ. ಕುಮಾರ ವ್ಯಾಸ ಭಾರತಕ್ಕೊಂದು ಉತ್ತಮ ಶಬ್ದಕೋಶದ ಅಗತ್ಯ ಈಗ ಹೆಚ್ಚಾಗಿ ಕಂಡುಬರು ತ್ತದೆ.

**ಶ್ರೀವತ್ಸ ನಿಘಂಟು:** ಟಿ. ವಿ. ವೆಂಕಟಾಚಲ ಶಾಸ್ತ್ರೀ. ಇದೊಂದು ವಿಶಿಷ್ಟ ಮಾದರಿಯ ನಿಘಂಟು. ಪ್ರಾಚೀನ ಕೃತಿಗಳನ್ನು, ಅದರಲ್ಲಿಯೂ ಶಾಸ್ತ್ರಗ್ರಂಥಗಳನ್ನು ಅಭ್ಯಾಸ ಮಾಡುವವರಿಗೆ ಎದುರಾಗುವ ಸಂಖ್ಯಾವಿಶಿಷ್ಟ ಶಬ್ದಗಳಿಗೆ ಇಲ್ಲಿ ವಿವರಣೆ ಇದೆ. ಮಿತವ್ಯಯಾಕಾಂಕ್ಷೆ, ಖಚಿತತೆ, ಪರಂಪರೆ ಹಾಗೂ ಸೂತ್ರೀಕರಣ ವಿಧಾನ–ಮೊದಲಾದವುಗಳ ಫಲವಾಗಿ ಸಾಹಿತ್ಯ ಮತ್ತು ಸಾಹಿತ್ಯೇತರ ಶಾಸ್ತ್ರಗ್ರಂಥಗಳಲ್ಲಿ ಸಂಖ್ಯಾ ವಿಶಿಷ್ಟವಾದ ಶಬ್ದಗಳು ಪಾರಿಭಾಷಿಕವೆಂಬಂತೆ ಪ್ರಯೋಗವಾಗಿರುತ್ತವೆ.

ಹಲವೊಮ್ಮೆ ಕೆಲವು ಕರ್ತೃಗಳು ಆಯಾ ಸಂಖ್ಯಾವಿಶಿಷ್ಟ ಶಬ್ದಗಳನ್ನು ಅವುಗಳ ವಿವರಣೆಯೊಡನೆಯೇ ಪ್ರಯೋಗಿಸಿರುವುದುಂಟು. ಇದಕ್ಕೆ ಕನ್ನಡ ಗದ್ಯ ಗ್ರಂಥವಾದ ವಡ್ಡಾರಾಧನೆಯನ್ನು ಉದಾಹರಿಸಬಹುದು. ಆದರೆ ಅನೇಕ ವೇಳೆ ವಿವರಣೆಯಿಲ್ಲದೆ ಕೇವಲ ಸಂಜ್ಞೆಯಾಗಿ ಬಳಕೆಯಾಗಿರುತ್ತವೆ. ಅಂಥ ಪ್ರಸಂಗದಲ್ಲಿ ಓದುಗ ಸಂದರ್ಭ ಬಲದಿಂದಲೊ, ಅಭ್ಯಾಸದಿಂದ ದತ್ತವಾದ ಜ್ಞಾನದ ನೆರವಿನಿಂದಲೊ ಅವುಗಳನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ. ಇಲ್ಲವೇ ಇತರ ಸಂವಾದಿಯಾದ ಶಾಸ್ತ್ರ ಕೃತಿಗಳಿಂದ ತಿಳಿದುಕೊಳ್ಳಬೇಕಾಗುತ್ತದೆ.

ಆದರೂ ಅದೆಲ್ಲಾ ಪ್ರಯಾಸದ ಕೆಲಸ. ಅದಕ್ಕೆ ಶ್ರಮವೊಂದೇ ಅಲ್ಲದೆ ತಕ್ಕ ಶಿಕ್ಷಣವೂ ಬೇಕಾಗುತ್ತದೆ. ಹೆಚ್ಚಿನ ಸಮಯಾಭಾವದಿಂದ ಈಗಿನ ದಿನಗಳಲ್ಲಂತೂ ಬೇರೆ ಮೂಲಗಳಿಂದ ವಿವರ ಸಂಗ್ರಹಿಸುವುದು ಸುಲಭಸಾಧ್ಯವಲ್ಲ. ಮೂಲ ಆಕರಗಳು ದೊರೆ ಯುವುದೂ ಕಷ್ಟ. ಅಲ್ಲದೆ ಒಮ್ಮೊಮ್ಮೆ ಒಂದು ಸಂಖ್ಯಾವಿಶಿಷ್ಟ ಶಬ್ದಕ್ಕೆ ಜೈನ, ವೈದಿಕ, ಶೈವ – ಹೀಗೆ ಒಂದೊಂದು ಧರ್ಮದ ಗ್ರಂಥಗಳ ವಿವರಣೆ ಒಂದೊಂದು ರೀತಿಯಲ್ಲಿರು ತ್ತದೆ. ಅಷ್ಟೇಕೆ ಒಂದೇ ಶಬ್ದಕ್ಕೆ ಸೂಚಿತವಾಗಿರುವ ವಿವರ ಕೂಡ ಗ್ರಂಥದಿಂದ ಗ್ರಂಥಕ್ಕೆ

ಬೇರೆಯಾಗುವುದೂ ಉಂಟು. ಸಾಂದರ್ಭಿಕ ಭೇದಗಳೂ, ಅಭಿಪ್ರಾಯ ಭೇದಗಳೂ, ಅಂತರ್ಭೇದಗಳೂ ತಲೆದೋರುತ್ತವೆ.

ಶ್ರೀವತ್ಸ ನಿಘಂಟು ಸುಮಾರು ನಾಲ್ಕು ಸಾವಿರ ಸಂಖ್ಯಾವಿಶಿಷ್ಟ ಶಬ್ದಗಳಿಗೆ ನೂರು ಆಕರ ಗ್ರಂಥಗಳಿಂದ ಸಂಗ್ರಹಿಸಿದ ವಿವರಣೆಗಳನ್ನೊಳಗೊಂಡಿದೆ. ಕಾವ್ಯ, ಇತಿಹಾಸ, ಶಾಸ್ತ್ರ, ಪುರಾಣಾದಿ ನಾನಾ ವಿಧವಾದ ಕೃತಿಗಳ ಪರಿಶೀಲನೆಯಿಂದ ಸಿದ್ಧವಾದ ಈ ನಿಘಂಟು ಬಹುದಿನಗಳ ಅಗತ್ಯವನ್ನು ಪೂರೈಸಿದೆ. ಇದರ ಸಿದ್ಧತೆ, ಸಂಗ್ರಹವಿಧಾನ, ಜೋಡಣೆಕ್ರಮ, ವಿಷಯ ನಿರ್ವಹಣೆ – ಎಲ್ಲ ಕ್ರಮಬದ್ಧವಾಗಿ ನಿಯೋಜಿತವಾಗಿದೆ ಯೆಂದು ಧಾರಾಳವಾಗಿ ಹೇಳಬಹುದು. ಕನ್ನಡ ಭಾಷೆ ಹಾಗೂ ಸಾಹಿತ್ಯ ಅಭ್ಯಾಸ ಮಾಡುವವರಿಗೆ ಇದು ಉಪಯುಕ್ತವಾಗಿದೆ. ಆದರೂ ಸಂಸ್ಕೃತ ಭಾಷಾಭ್ಯಾಸಿಗಳಿಗೇ ಇದು ಹೆಚ್ಚು ನೆರವಾಗಿ ಒದಗಿಬರುತ್ತದೆ.

ಇನ್ನೂ ಕೆಲವು ಕನ್ನಡ ಗ್ರಂಥಗಳನ್ನು ಅವಲೋಕಿಸಿದ್ದರೆ ಇದರ ಮೌಲ್ಯ ಅಧಿಕ ವಾಗುತ್ತಿತ್ತಲ್ಲದೆ ಕನ್ನಡ ಕಲಿತವರಿಗೆ, ಕಲಿಸುವವರಿಗೆ ಉತ್ತಮ ಕೈಪಿಡಿಯಾಗಲು ಸಾಧ್ಯ ವಿತ್ತು. ಅಕ್ಷೌಹಿಣಿ ಎಂಬ ಶಬ್ದಕ್ಕೆ ವಚನಭಾರತ ಹಾಗೂ ಕುಮಾರವ್ಯಾಸ ಭಾರತದ ವಿವರಣೆಯನ್ನೇ ಅವಲಂಬಿಸಿದ್ದಾರೆ. ಆದರೆ ಪಂಪಭಾರತದ ಪ್ರಯೋಗಕ್ಕೆ ಅದೇ ಸಂಖ್ಯೆಯನ್ನು ಅನ್ವಯಿಸಬೇಕೇ ಅಥವಾ ಜೈನಪರವಾದ ಇನ್ನೊಂದು ಸಂಖ್ಯೆಯನ್ನು ಹೇಳಬೇಕೆ ಎಂಬುದನ್ನೂ ಗಮನಿಸಬೇಕಾಗುತ್ತದೆ. ಇಂಥ ಕೆಲವು ಸಂದೇಹಗಳು ಅಲ್ಲಲ್ಲಿ ಇಣಿಕಿ ನೋಡುತ್ತವೆ. ಅಲ್ಲದೆ ಈ ಬಗೆಯ ಕೋಶಗಳ ಪ್ರಯೋಜನ ಕೂಡ ಸೀಮಿತ. ಉಳಿದ ನಿಘಂಟುಗಳಂತೆ ಎಲ್ಲರೂ ಬಳಸುವಂತಹುದಲ್ಲ.

**ಕನ್ನಡಕ್ಕೆ ಕಿಟೆಲ್ಲರ ಕೊಡುಗೆ** (ವಿವಿಧ ಲೇಖಕರು): ಕನ್ನಡ ಸಾಹಿತ್ಯ ಹಾಗೂ ಭಾಷೆಗಾಗಿ ದುಡಿದ ಪಾಶ್ಚಾತ್ಯರಲ್ಲಿ ರೆ॥ ಕಿಟೆಲ್ಲರ ಹೆಸರು ದೊಡ್ಡದು. ಸ್ವತಂತ್ರ ರಚನೆ, ಅನುವಾದ, ಗ್ರಂಥಸಂಪಾದನೆ, ಕನ್ನಡ ಸಾಹಿತ್ಯ ಚರಿತ್ರೆ ಮತ್ತು ನಿಘಂಟು – ಹೀಗೆ ನಾನಾ ವಿಧವಾಗಿ ಅವರು ಕನ್ನಡಕ್ಕೆ ವಿಪುಲವಾದ ಸೇವೆ ಸಲ್ಲಿಸಿದ್ದಾರೆ. ಇಂತಹ ಮಹನೀಯರ ಬದುಕು ಬರೆಹಗಳನ್ನು ಕುರಿತ ಕೃತಿ ಇದು.

ಧಾರವಾಡದ ಕಿಟೆಲ್ ಕಾಲೇಜಿನಿಂದ ಪ್ರಕಟವಾಗಿರುವ ಈ ಸಂಸ್ಮರಣ ಸಂಪುಟ ಮೂರು ಭಾಗಗಳನ್ನೊಳಗೊಂಡಿದೆ: ಜೀವನದರ್ಶನ, ಸಾಹಿತ್ಯದರ್ಶನ, ನಿಘಂಟು ದರ್ಶನ. ಒಟ್ಟು 24 ಲೇಖನಗಳೂ ನಾಲ್ಕು ಕವಿತೆಗಳೂ ಇವೆ. ಮೊದಲ ಭಾಗದಲ್ಲಿ ಮೂರು ಲೇಖನಗಳೂ ನಾಲ್ಕು ಕವಿತೆಗಳೂ ಇವೆ. ಈ ಭಾಗದ ಲೇಖನಗಳು ಕಿಟೆಲರ ವ್ಯಾಪಕ ವ್ಯಕ್ತಿತ್ವವನ್ನೂ, ಅವರಿಗಿಂತ ಮೊದಲು ನಡೆದ ಕನ್ನಡ ಸಾಹಿತ್ಯ ವಿವೇಚನೆಯ ಪರಿಚಯವನ್ನೂ ಚೆನ್ನಾಗಿ ಮನಗಾಣಿಸಿವೆ. ಕಡೆಗೆ ಕವಿತೆಗಳು ಕೂಡ ಅವರ ಸಂದೇಶ ವನ್ನು ಶ್ರಮವನ್ನು ಮುಂದಿಡಲು ಪ್ರಯತ್ನಿಸಿರುವುದಲ್ಲದೆ ಆ ಹಿರಿಯರನ್ನು ಸಮರ್ಥ ವಾಗಿ ಸೆರೆಹಿಡಿದಿವೆ.

ಎರಡನೆಯ ಭಾಗ ಸಾಹಿತ್ಯ ದರ್ಶನ. ಅದರಲ್ಲಿರುವ ಆರು ಲೇಖನಗಳು ಅವರ ಕೃತಿಗಳ ವಿವಿಧ ಮುಖಗಳ ಪರಿಚಯ ಮಾಡಿಕೊಡಲೆತ್ನಿಸಿವೆ. ಈ ಭಾಗದಲ್ಲಿ ಸ್ಥೂಲವಾಗಿ ಕನ್ನಡ ಸಾಹಿತ್ಯ ಚರಿತ್ರೆಗೆ ಅವರ ಕೊಡುಗೆ ಎಂತಹುದೆಂಬುದರ ವಿಮರ್ಶೆಯೂ, ಛಂದೋಂಬುಧಿಯನ್ನು ಅವರು ಸಂಪಾದಿಸಿರುವ ರೀತಿಯ ಪ್ರಶಂಸೆಯೂ, ವ್ಯಾಕರಣ ಕ್ಷೇತ್ರದಲ್ಲಿ ಅವರು ಸಲ್ಲಿಸಿದ ಮಹತ್ತರ ಸೇವೆಯ ಸ್ಮರಣೆಯೂ ನಡೆದಿದೆ. ಅಂತೆಯೇ ಶಾಸನಗಳನ್ನು ಅಧ್ಯಯನ ಮಾಡಿದ ಕ್ರಮವನ್ನೂ, ಅವರ ಬರವಣಿಗೆಯಲ್ಲಿ ಕಾಣುವ ವೈವಿಧ್ಯವನ್ನೂ ವಿವೇಚನೆ ಮಾಡುವ ಪ್ರಯತ್ನಗಳಿವೆ. ಐರೋಪ್ಯರು ಕನ್ನಡಕ್ಕೆ ಮಾಡಿದ ಸೇವೆಯನ್ನು ಕುರಿತ ಬರೆಹ ಇಲ್ಲಿನ ಚೌಕಟ್ಟಿಗೆ ಹೊಂದಿಕೊಳ್ಳುವುದಿಲ್ಲ. ಅಂತೆಯೇ ಅವರ 'ಬರೆಹಗಳಲ್ಲಿ ವೈವಿಧ್ಯ' – ಎಂಬ ಬರೆಹ ತೀರ ಸರಳವೂ ಜಾಳುಜಾಳೂ ಆಯಿತು.

ಮೂರನೆಯ ಭಾಗ ನಿಘಂಟು ದರ್ಶನ ಕುರಿತದ್ದು. ಇಲ್ಲಿ ಕಿಟೆಲ್ಲರ ಶ್ರೇಷ್ಠ ಕೋಶದ ಬಹುಮುಖಗಳನ್ನು ಚರ್ಚಿಸಲಾಗಿದೆ. ಶಬ್ದಕೋಶದ ಅಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವಾಗಬೇಕಾದ ಭಾಗವಿದು. ಇಲ್ಲಿರುವ ಲೇಖನಗಳಲ್ಲೂ ಕೆಲವು ಕೇವಲ ಮೇಲುಮೇಲಿನ, ತಿಪ್ಪೆಸಾರಿಸುವ ಪರಿಚಯಕ್ಕೇ ನಿಂತಿವೆ. ಎರಡು ಮೂರು ಬರೆಹಗಳಷ್ಟೇ ಆ ಬೃಹತ್ ಕೋಶದ ಓರೆಕೋರೆ ಹಾಗೂ ಹಿರಿಮೆಗಳನ್ನು ತೂಗಿ ಒರೆಹಚ್ಚಿ ನೋಡುವ ತೌಲನಿಕ ಅಧ್ಯಯನದಿಂದ ಕೂಡಿವೆ.

ಕಳೆದ ವರ್ಷವಷ್ಟೇ (1971) ಕಿಟೆಲ್ ಕೋಶದ ಪುನರ್ ಮುದ್ರಣ ಮುಗಿಯಿತು. ಆ ಕೋಶವನ್ನು ತೀರ ತಕ್ಕಮಟ್ಟಿಗಾದರೂ ಪರಿಷ್ಕರಿಸಿ ಮುದ್ರಿಸಿದ್ದು ಮದರಾಸು ವಿಶ್ವವಿದ್ಯಾನಿಲಯ. ಶಬ್ದಕೋಶದ ಮರು ಸಂಪಾದನೆಯಲ್ಲಿ ತಾವು ಅನುಸರಿಸಿದ ಮಾರ್ಗವನ್ನು ಹೊಸ ಸಂಪಾದಕರು ವಿವರಿಸಿದ್ದಾರೆ. ಅವರ ಲೇಖನದಿಂದ ಸಹಜವಾಗಿಯೇ ಅನೇಕ ಉಪಯುಕ್ತ ಅಂಶಗಳನ್ನು ನಿರೀಕ್ಷಿಸುತ್ತೇವೆ. ಅವರ ಬರೆಹ ಓದಿ ಮುಗಿಸಿದ ಮೇಲೆ ಬಹುವಾಗಿ ನಿರಾಶೆಯಾಗುತ್ತದೆ. ಯಾವ ಹೊಸ ವಿಷಯ ಇಲ್ಲದ, ಹೆಚ್ಚಳವೂ ಇಲ್ಲದ ಚರ್ವಿತಚರ್ವಣ ಹಾಗೂ ವಿಷಯಾಂತರಗಳಿಂದ ಬಿರುಕು ಬಿಟ್ಟ ಬರೆಹವದು.

ವಿಶ್ವವಿದ್ಯಾನಿಲಯದ ವತಿಯಿಂದ ಮೂವರು ಸ್ನಾತಕೋತ್ತರ ಪದವೀಧರರು ಮಾಡಲು ಸಾಧ್ಯವಿದ್ದಷ್ಟನ್ನು ಈ ಪುನರ್ ಮುದ್ರಣದಲ್ಲಿ ಮಾಡಿದಂತೆ ತೋರುವುದಿಲ್ಲ. ಅನಾಯಾಸವಾಗಿ ಕೆಲಸ ಸಾಗಿಸಿದ್ದಾರೆ. ಇನ್ನೂ ಹೆಚ್ಚು ಪರಿಷ್ಕಾರ ಮಾಡಿ ನಿಘಂಟಿನ ಮೌಲ್ಯ ಹಾಗೂ ಉಪಯುಕ್ತತೆ ಹೆಚ್ಚಿಸಲು ಸಾಧ್ಯವಿತ್ತು. ಆದಷ್ಟೂ ಬೇಗ ಈ ಮರುಮುದ್ರಣ ಹೊರತರಬೇಕೆಂಬ ತುಂಬುಹಂಬಲದಿಂದಾಗಿ ಹೆಚ್ಚು ಮುತುವರ್ಜಿಯಿಂದ ಅಗತ್ಯವಾದ ಎಚ್ಚರ ತಳೆಯಲು ಆಗದೇ ಹೋಗಿರಬಹುದೆಂಬ ಊಹೆಯೂ ಸರಿಯಲ್ಲ. ನಿಘಂಟು ಮತ್ತೆ ದೊರೆಯುವಂತಾದುದೊಂದೇ ಅದರ ಮುಖ್ಯ ಪ್ರಯೋಜನ.

ನಿಘಂಟು ಕ್ಷೇತ್ರಕ್ಕೆ ಸೋದಾಹರಣಪೂರ್ವಕವಾಗಿ ಅವರ ಗಟ್ಟಿ ಕಾಣಿಕೆಯ ಮಹತ್ವವನ್ನೂ, ಅವರು ಬಳಸಿಕೊಂಡ ಮಾತೃಕೆಗಳ ಮೇಲ್ಮೆಯನ್ನೂ; ಪಂಪರಾಮಾಯಣ, ಬಸವಪುರಾಣ ಮೊದಲಾದ ಹಳೆಯ ಹೊತ್ತಗೆಗಳಿಂದ ಶಬ್ದಗಳನ್ನು ಸಂಗ್ರಹಿಸಿರುವ ಕ್ರಮದ ಸೊಗಸನ್ನೂ ಇಲ್ಲಿನ ಬರೆಹಗಳು ತಿಳಿಸಿವೆ. ಈ ಕೋಶದ ಶಬ್ದಗಳಲ್ಲಿ ಬಹುಪಾಲು ಬಸವಪುರಾಣದಿಂದ ಬಂದಿವೆ. ಜೈನ ಕಾವ್ಯಗಳನ್ನು ಬಳಸಿಕೊಳ್ಳುವಲ್ಲೂ, ಜೈನ ಧರ್ಮದ ಪಾರಿಭಾಷಿಕ ಶಬ್ದಗಳಿಗೆ ಅರ್ಥಕೊಡುವಲ್ಲೂ ಉಂಟಾಗಿರುವ ಪರಿಮಿತಿಗಳನ್ನು ಪರಿಚಯಿಸಲಾಗಿದೆ.

ಡಾ॥ ಬಿ. ಎಸ್. ಕುಲಕರ್ಣಿಯವರು ತಮ್ಮ ಲೇಖನದಲ್ಲಿ ಒಂದು ಕಡೆ "ಜೈನ ಪಾರಿಭಾಷಿಕ ಶಬ್ದಗಳನ್ನು ಆಯ್ದುಕೊಂಡು ಜೈನ ತತ್ವ ಪ್ರಣಾಲಿಯ ಹಿನ್ನೆಲೆಯಲ್ಲಿ ಅವುಗಳ ವಿಶಿಷ್ಟ ಅರ್ಥವನ್ನು ಕೊಡುವ ಪ್ರಯತ್ನ ಈ ನಿಘಂಟುವಿನಲ್ಲಿ ಆಗಿಲ್ಲ" (ಪುಟ 104) ಎಂದು ಹೇಳಿದ್ದಾರೆ. ಡಾ॥ ಬಿ. ಎಸ್. ಕುಲಕರ್ಣಿಯವರ ಕೊರಗಿನ ರೂಪದ ಹೇಳಿಕೆಯಲ್ಲಿ ಹೊಳೆಯುವ ಆಕ್ಷೇಪಣೆ ಅಸಾಧುವೆಂದು ತೋರುತ್ತದೆ. ಜೈನ ಮೊದಲಾದ ಧರ್ಮಗಳ ಮತೀಯಾದಿ ಪ್ರಕ್ರಿಯೆಗಳನ್ನು ತಿಳಿಸುವ ಎಲ್ಲ ಪಾರಿಭಾಷಿಕ ಶಬ್ದಗಳಿಗೂ ಅರ್ಥ ಹೇಳುವುದಕ್ಕೆ ಈ ಬಗೆಯ ನಿಘಂಟುಗಳಿಗಿಂತ ಪ್ರತ್ಯೇಕ ಪಾರಿಭಾಷಿಕ ಕೋಶಗಳು ಪ್ರಯತ್ನಿಸುವುದು ಲೇಸು. ಈ ವಿಚಾರದಲ್ಲಿ ನಿಘಂಟುಕಾರರು ತಳೆದ ವಿವೇಚನೆಯೇ ಸರಿಯಾಗಿದೆ.

ಈ ಹಿರಿಯ ಕೋಶದ ಹಿರಿಮೆಯನ್ನು ಆಪ್ಟೆಯವರ ಸಂಸ್ಕೃತ ಕೋಶದ ಹಿನ್ನೆಲೆಯಲ್ಲಿ ಒರೆಹಚ್ಚಿ ನೋಡಿದೆ. ಅಂತೆಯೇ ಅದರ ಸಂಸ್ಕೃತ ಶಬ್ದಗಳನ್ನೂ ಅಚ್ಚಗನ್ನಡ ಶಬ್ದಗಳನ್ನೂ ಗುರುತಿಸಿದ್ದಾರೆ. ಅಲ್ಲಿನ ಕೆಲವು ಹಿಂದೀ ಶಬ್ದಗಳ ಅರ್ಥ ಪರಿವರ್ತನೆ ಹಾಗೂ ಕೆಲವು ಇಂಗ್ಲಿಷ್ ಶಬ್ದಗಳ ಧ್ವನಿವ್ಯತ್ಯಾಸಗಳ ಪರಿಚಯವಿದೆ. ಕೋಶರಚನೆಯಲ್ಲಿ ದಾಸಸಾಹಿತ್ಯವನ್ನು ಹೇಗೆ ಉಪಯೋಗಿಸಿಕೊಂಡಿದ್ದಾರೆಂಬುದರ ವಿವರವಿದೆ.

ಈ ಕನ್ನಡ ನಿಘಂಟನ್ನು ತಮಿಳು, ಮಲೆಯಾಳ ನಿಘಂಟುಗಳ ಜೊತೆಯಲ್ಲಿ ಹೋಲಿಸಿದೆ. ಕಡೆಯಲ್ಲಿ ಅವರ ಲೇಖನಗಳನ್ನೂ ಗ್ರಂಥಗಳನ್ನೂ ಒಂದು ಸೂಚಿಯಾಗಿ ಸಿದ್ಧಪಡಿಸಿ ಕೊಟ್ಟಿದ್ದಾರೆ. ಕಡೆಯ ನಾಲ್ಕು ಲೇಖನಗಳು ಇಂಗ್ಲಿಷಿನಲ್ಲಿವೆ. ಇವುಗಳಲ್ಲಿ ತಮಿಳು ನಿಘಂಟು ಮತ್ತು ಕಿಟೆಲ್ಲರ ನಿಘಂಟನ್ನು ತುಲನಾತ್ಮಕವಾಗಿ ವಿವೇಚಿಸಿ ನೋಡುವ ದೃಷ್ಟಿಯಿಂದ ಬರೆದ ಲೇಖನ ತೀರ ಸಪ್ಪೆ, ಅಸಮರ್ಪಕ ಆಯಿತು. ನಿಘಂಟುಗಳಲ್ಲಿ ವಿಮರ್ಶೆ ಇಲ್ಲವೇ ತುಲನೆ ಮಾಡುವಾಗ ಗಮನಿಸಬೇಕಾದ ಅಂಶಗಳ ತಿಳಿವಳಿಕೆಯೇ ಅವರಿಗಿಲ್ಲ. ಈ ಅವಸರದಲ್ಲಿ ಕನ್ನಡ ನಿಘಂಟನ್ನು ತೆಲುಗು ನಿಘಂಟು ಜೊತೆಯಲ್ಲಿ ಹೋಲಿಸಿದ ಬರೆಹವೂ ಸೇರಬೇಕಿತ್ತು. ಅಂತೆಯೇ ತುಳುವಿನ ಸಂಬಂಧವಾಗಿ ಲೇಖನವೊಂದರ ಆಗತ್ಯವೂ ಕಂಡುಬರುತ್ತದೆ. ವಿವಿಧ ಲೇಖಕರು ಒಬ್ಬ ವ್ಯಕ್ತಿಯ ಹಲವು ಸಿದ್ಧಿ ಸಾಧನೆಗಳನ್ನು ಕುರಿತು ಬರೆದಿರುವಾಗ ಪುನರುಕ್ತಿ ಬಾರದಂತೆ ನೋಡಿಕೊಂಡಿರುವುದು ಪ್ರಶಂಸಾರ್ಹ. ಲೇಖನಗಳು ಕೂಡ ವಿಷಯ ದೃಷ್ಟಿಯಿಂದ ಹೆಚ್ಚು ವ್ಯಾಪಕವಾಗಿವೆ.

ಕಿಟೆಲ್ಲರ ಸಾಧನೆಗಳ ಸಿದ್ಧಿಯ ಹೆಜ್ಜೆಗಳನ್ನು ಗುರುತಿಸುವ ಕೃತಜ್ಞತೆಯ ಹಿನ್ನೆಲೆಯಲ್ಲಿ ಅವರ ಅನೇಕ ಕುಂದು ಕೊರತೆಗಳತ್ತ, ಇತಿಮಿತಿಗಳತ್ತ ಕಣ್ಣು ಮುಚ್ಚಿಕೊಂಡಿರುವುದು ಈ ಸಂಪುಟದ ನ್ಯೂನತೆಗಳಲ್ಲೊಂದು. ಇಲ್ಲಿನ ಹೆಚ್ಚಿನ ಬರೆಹಗಳಲ್ಲಿ ವಿಮರ್ಶೆಗಿಂತ ಕೇವಲ ಮೆಚ್ಚುಗೆಯ ನೋಟವೇ ಕಂಡುಬರುತ್ತದೆ. ಎಲ್ಲಿಯೂ ದೋಷಗಳನ್ನು ಎತ್ತಿ ತೋರಿಸಿಯೇ ಇಲ್ಲವೆಂದಲ್ಲ; ಪ್ರಶಂಸಾ ದೃಷ್ಟಿಯದೇ ಮೇಲುಗೈ. ಕಿಟೆಲ್ಲರನ್ನು ಕುರಿತು ಇದುವರೆಗೆ ಕನ್ನಡದಲ್ಲಿ ಬಂದಿರುವ ಲೇಖನಗಳ ಹಾಗೂ ಗ್ರಂಥಗಳ ಪಟ್ಟಿಯೊಂದನ್ನು ಕಡೆಯಲ್ಲಿ ಅನುಬಂಧವಾಗಿ ಕೊಡಬಹುದಾಗಿತ್ತು. ಅಂತೂ ಈ ಗ್ರಂಥ ಕಿಟೆಲ್ಲರ ಬರೆಹಗಳನ್ನು ಅಭ್ಯಾಸಮಾಡುವವರಿಗೆ ಉತ್ತಮ ಕೈಪಿಡಿ.

**ವರ್ಣನಾತ್ಮಕ ಭಾಷಾವಿಜ್ಞಾನ** (ಜೆ. ಕುಳ್ಳಿ): ಲೇಖಕರು 'ನನ್ನ ಮಾತು' ಎಂಬಲ್ಲಿ "ಕನ್ನಡದಲ್ಲಿ ಭಾಷಾವಿಜ್ಞಾನವನ್ನು ಕುರಿತು ಕೆಲವು ಗ್ರಂಥಗಳು ಈಗಾಗಲೇ ಪ್ರಕಟವಾಗಿವೆ. ಅವುಗಳಲ್ಲಿ ಕೆಲವು ಒಳ್ಳೆಯ ಗ್ರಂಥಗಳೂ ಇವೆ. ಆದರೆ ಅವೆಲ್ಲ ಸಕಲರಿಗೂ ತಿಳಿಯಲೆಂಬ ಉದ್ದೇಶದಿಂದ ಉದ್ದೇಶಪೂರ್ವಕವಾಗಿ ಪಾರಿಭಾಷಿಕತೆಯನ್ನು ಕಡಿಮೆ ಮಾಡಿವೆ. ಈ ಕಾರಣದಿಂದ ಅವುಗಳ ಉದ್ದೇಶವೂ ಫಲಿಸಿದೆ. ಪಾರಿಭಾಷಿಕತೆ ಕಡಿಮೆಯಾದಷ್ಟೂ ಒಂದು ಕೃತಿ ಹೆಚ್ಚು ಹೆಚ್ಚು ಸರಳವಾಗುತ್ತದೆ. ಪಾರಿಭಾಷಿಕತೆ ಹೆಚ್ಚಿದಷ್ಟೂ ವಿಶ್ಲೇಷಣೆ ಹೆಚ್ಚು ಹೆಚ್ಚು ಖಚಿತವಾಗುತ್ತದೆ. ಮೇಲಾಗಿ ಪಾರಿಭಾಷಿಕತೆ ವಿಜ್ಞಾನದ ಜೀವಾಳ. ಉಳಿದ ಮಾನವಿಕ ವಿಜ್ಞಾನಗಳಂತೆ ಭಾಷೆಯ ಅಭ್ಯಾಸವೂ ಒಂದು ವಿಜ್ಞಾನವಾಗಿರುವುದರಿಂದ, ಅಲ್ಲಿ ಪಾರಿಭಾಷಿಕತೆ ಇರಬೇಕಾದುದು ಅನಿವಾರ್ಯ. ಭಾಷಾಭ್ಯಾಸವನ್ನು ಸರಳಗೊಳಿಸುವ ಇಲ್ಲಿಯವರೆಗಿನ ಪ್ರಯತ್ನಗಳಿಂದ ಭಾಷಾಭ್ಯಾಸ ಪ್ರಾರಂಭಿಕ ಅವಸ್ಥೆಯನ್ನು ದಾಟಿದೆ. ಈಗ ಅದರ ವೈಜ್ಞಾನಿಕ ನಿಜಸ್ವರೂಪವನ್ನು ತೋರಿಸುವ ಕಾಲ ಸನ್ನಿಹಿತವಾಗಿದೆಯೆಂಬ ವಿಚಾರದಿಂದ ಈ ಗ್ರಂಥ ಹೆಚ್ಚಾಗಿ ಪಾರಿಭಾಷಿಕಯುಕ್ತವಾಗಿದೆ" ಎಂಬುದಾಗಿ ಹೇಳಿದ್ದಾರೆ.

ಇಂಥ ಗ್ರಂಥವೊಂದು ಪಾರಿಭಾಷಿಕಯುಕ್ತವಾಗಿರುವುದು ಯುಕ್ತವೇ. ಆದರೆ ಇಲ್ಲಿನ ಅನೇಕ ಪಾರಿಭಾಷಿಕ ಶಬ್ದಗಳು ವಿವಾದಕ್ಕವಕಾಶ ಮಾಡಿಕೊಡುತ್ತವೆಯಲ್ಲದೆ ಗೊಂದಲಕ್ಕೂ ಕಾರಣವಾಗಿವೆ. ಲೇಖಕರೇ ಅರಿತು ತಿಳಿಸಿರುವಂತೆ ಕನ್ನಡದಲ್ಲಿ ಈಗಾಗಲೇ ಡಾ॥ ಚಿದಾನಂದಮೂರ್ತಿ, ಶ್ರೀ ಹಂಪ. ನಾಗರಾಜಯ್ಯ ಮೊದಲಾದವರ ಭಾಷಾ ವಿಜ್ಞಾನ ಸಂಬಂಧಿಯಾದ ಕೆಲವು ಗ್ರಂಥಗಳು ಹೊರಬಂದಿವೆ. ಸಹಜವಾಗಿಯೇ ಅವುಗಳಲ್ಲಿ ಹಲವಾರು ಪಾರಿಭಾಷಿಕ ಶಬ್ದಗಳು ಬಳಕೆಯಾಗಿವೆ. ಈ ರೀತಿ ಈಗಾಗಲೇ ಬಳಕೆಗೆ ಬಂದಿರುವ, ಇತರ ಬರೆಹಗಾರರು ಬಳಸಿ ರೂಢಿಗೆ ತಂದಿರುವ ಪರಿಭಾಷೆಯನ್ನೇ ಈ ಲೇಖಕರೂ ಅಳವಡಿಸಿಕೊಳ್ಳುವುದುಚಿತವೇ ಹೊರತು ಅನಗತ್ಯವಾಗಿ ಹೊಸ ಪರಿಭಾಷೆ ತರುವುದು ಅಸಾಧು. ವರ್ಣನಾತ್ಮಕ ಭಾಷಾವಿಜ್ಞಾನ ಗ್ರಂಥದಲ್ಲಿ ಆಗಲೇ ಅಂಗೀಕೃತವಾದ ಪಾರಿಭಾಷಿಕ ಶಬ್ದಗಳಿಗೂ ಪ್ರತ್ಯೇಕ ಶಬ್ದಗಳನ್ನುಪಯೋಗಿಸಿರುವುದರಿಂದ ಇದರ ಪರಿಭಾಷೆಯಲ್ಲೇ ಮೊದಲು ಗೊಂದಲ ಪ್ರಾರಂಭವಾಗುತ್ತದೆ.

ಇಂಗ್ಲಿಷಿನ retroflex, vocal chords, flap, glide, arbitrary, unrounded, affricate, phonemics, manner of articulation, place or point of articulation – ಶಬ್ದಗಳಿಗೆ ಕನ್ನಡದಲ್ಲಿ ಕ್ರಮವಾಗಿ ಪ್ರತಿವೇಷ್ಟಿತ. ಘೋಷ(ನಾದ)ತಂತು, ತಾಡಿತ, ಧ್ವನಿಜಾರು, ಯಾದೃಚ್ಛಿಕ, ನಿರೋಷ್ಠ್ಯೀಕೃತ. ಸ್ಪೃಷ್ಟೋಷ್ಮ. ಧ್ವನಿಮಾವಿಜ್ಞಾನ, ಉಚ್ಚಾರ(ಣಾ) ವಿಧಾನ. ಉಚ್ಚಾರ(ಣಾ) ಸ್ಥಾನ– ಎಂಬ ಪಾರಿಭಾಷಿಕ ಶಬ್ದಗಳು ಇದುವರೆಗಿನ ಗ್ರಂಥಗಳಲ್ಲಿ ಉಪಯೋಗವಾಗಿವೆ. ಆದರೆ ಈ ಗ್ರಂಥದಲ್ಲಿ ಮೇಲಿನ ಶಬ್ದಗಳಿಗೆ ಕ್ರಮವಾಗಿ ಪರಿವೇಷ್ಟಿತ, ಧ್ವನಿಪಟಲ, ಲಘುಸ್ಪಷ್ಟ, ಸ್ರೋತ, ಅನುಕೂಲ (ಅನುಕೂಲಾತ್ಮಕ), ಅವೃತ್ತ. ಈಷತ್ ಸ್ಪರ್ಶ, ಧ್ವನಿಮಾ ವಿಭಾಗ. ಧ್ವನ್ಯುತ್ಪಾದನ ಪ್ರಯತ್ನ, ಧ್ವನ್ಯುತ್ಪಾದನ ಸ್ಥಾನ – ಎಂಬುದಾಗಿ ಪ್ರಯೋಗವಿದೆ.

ಇದರಿಂದ ಓದುಗರಿಗೆ ತೊಂದರೆಯಾಗುವ ಸಾಧ್ಯತೆಯೇ ಹೆಚ್ಚು. ಗ್ರಂಥದಿಂದ ಗ್ರಂಥಕ್ಕೆ ಶಾಸ್ತ್ರವಿಷಯಗಳನ್ನು ಕುರಿತ ಕೃತಿಗಳಲ್ಲಿ. ಪರಿಭಾಷೆಯಲ್ಲಿ ವ್ಯತ್ಯಾಸವಿರ ಬಾರದು. ಪುಟ 178ರಲ್ಲಿ flap ಎಂಬ ಶಬ್ದಕ್ಕೆ 'ಲೋಡಿತ' ಎಂದು ಸೂಚಿಸಿರು ವುದು ಸರಿಯಲ್ಲ. ಅದು ತಾಡಿತ ಎಂದಿರಬೇಕು. "ಈ ಪುಸ್ತಕದಲ್ಲಿ ಅನೇಕ ಪಾರಿಭಾಷಿಕ ಪದಗಳು ಪ್ರಥಮತಃ ನಿರ್ಮಾಣವಾಗಿ, ಬಳಕೆಯಾಗಿವೆ" – ಎಂದು ಹೇಳಿಕೊಂಡಿದ್ದಾರೆ. ಆದರೆ ಮೊದಲ ಸಲ ನಿರ್ಮಾಣವಾದ ಆ ಬಗೆಯ ಮಾತುಗಳು ತೀರ ಕಡಮೆ. ಅಲ್ಲದೆ ಪ್ರಥಮತಃ ನಿರ್ಮಾಣಿಸುವ ಭರದಲ್ಲಿ ಎಡವಿದ್ದಾರೆ, ಮೇಲೆ ಸೂಚಿಸಿರುವಂತೆ ಅನಾ ವಶ್ಯಕವಾಗಿ ರೂಢಿಯ ಶಬ್ದಕ್ಕೆ ಬೇರೆ ಶಬ್ದ ಕೊಟ್ಟಿದ್ದಾರೆ. ಹಲವಾರು ಕಡೆ. ಇಂಗ್ಲಿಷಿನ lax ಎಂಬುದಕ್ಕೆ ವಿಶ್ರಾಂತ ಎಂಬ ಶಬ್ದ ಬಳಸಿದ್ದಾರೆ. ಈ ಪಾರಿಭಾಷಿಕ ಶಬ್ದ ಹಾಗೂ ಇಂಥ ಇನ್ನಿತರ ಕೆಲವು ಶಬ್ದಗಳ ಸಮರ್ಪಕತೆಯಲ್ಲಿ ಸಂದೇಹಕ್ಕವಕಾಶವಿದೆ.

ಈ ಗ್ರಂಥದಲ್ಲಿ ಎದ್ದು ಕಾಣುವ ಮತ್ತೊಂದು ದೋಷವೆಂದರೆ ವಾಕ್ಯರಚನೆ ಯಲ್ಲಿರುವ ಶೈಥಿಲ್ಯ. ಅನೇಕ ವಾಕ್ಯಗಳು ಆರಂಭವಾಗುವುದು ಒಂದು ರೀತಿ, ಮುಕ್ತಾಯ ವಾಗುವುದು ಮತ್ತೊಂದು ರೀತಿ; ಒಮ್ಮೊಮ್ಮೆ ಕಾಲ. ವಚನ, ಪುರುಷ, ಲಿಂಗಗಳನ್ನು ಕಡೆಗಣಿಸಿ ಕಲಸುಮೇಲೋಗರವಾಗುವುದೂ ಉಂಟು, ಅದರಲ್ಲಿಯೂ ದೀರ್ಘ ವಾಕ್ಯಗಳಲ್ಲಿ.

ಈ ಬಗೆಯ ಸಡಿಲವಾದ ವಾಕ್ಯರಚನೆಯಿಂದ ವಿಷಯನಿರೂಪಣೆ ಜಾಳಾಗಿರು ವುದು ಕಂಡುಬರುತ್ತದೆ. ಪುನರುಕ್ತಿ ದೋಷವಂತೂ ತುಂಬಿ ತುಳುಕಿದೆ: "ಎರಡನೆಯ ದಾಗಿ, ವರ್ಣನಾತ್ಮಕ ಭಾಷಾ ವಿಜ್ಞಾನಿಗಳು ಯಾವ ರೀತಿ ಆಡಬಹುದಾಗಿದ್ದಿತು. ಅಥವಾ ಯಾವುದು ಶಿಷ್ಟರೂಪ ಎಂಬುದನ್ನು ಗಣಿಸದೆ, ಭಾಷೆಯ ರೂಪಗಳನ್ನು **ಇದ್ದಕ್ಕಿದ್ದಂತೆ** ಪರಿಗಣಿಸಬೇಕು. ಜನರು ಏನು ಅನ್ನಬಯಸುತ್ತಾರೆಂಬುದಕ್ಕಿಂತ. ಅವರು ಏನು ಅನ್ನುತ್ತಾರೆ ಎಂಬುದು ಮಹತ್ವದ್ದು. ಎಂದರೆ ಅವನು ಜನರು ಆಡಿದ್ದನ್ನು ಉಪಯೋಗಿಸುತ್ತಾನೆ: ಅವುಗಳ ಆದರ್ಶರೂಪಗಳನ್ನು ಕೊಡಲು ಹೋಗುವುದಿಲ್ಲ. ಇದೂ ಅಲ್ಲದೆ ಆಡುಮಾತಿನ ಎಲ್ಲ ಪ್ರಭೇದಗಳೂ ಆತನಿಗೆ ಗ್ರಾಹ್ಯ. ಒಂದು ಪ್ರಭೇದವನ್ನು ಬಿಟ್ಟು ಇನ್ನೊಂದನ್ನು ಸ್ವೀಕರಿಸುವ ಪ್ರಶ್ನೆಯಿಲ್ಲ. ಅವನಿಗೆ ಒಂದು

ರೂಪು ಹೆಚ್ಚು, ಇನ್ನೊಂದು ರೂಪು ಕಡಿಮೆಯಲ್ಲ. ಒಂದು ಸರಿ, ಇನ್ನೊಂದು ತಪ್ಪಲ್ಲ; ಒಂದು ಪವಿತ್ರ, ಇನ್ನೊಂದು ಅಪವಿತ್ರವಲ್ಲ. ಅವನಿಗೆ ಯಾವ ಭಾಷೆಯೇ ಆಗಲಿ, ಭಾಷೆಯ ಯಾವ ರೂಪವೇ ಆಗಲಿ ಎಲ್ಲವೂ ಯೋಗ್ಯವೇ. ಅವನು ಯಾವುದರ ಬಗೆಗೆಯೂ ನಿರ್ಣಯ ಕೊಡಲು ಹೋಗುವುದಿಲ್ಲ. ವರ್ಣನಾತ್ಮಕ ಭಾಷಾಶಾಸ್ತ್ರಜ್ಞನ ಕೆಲಸವೆಂದರೆ ಭಾಷೆಯನ್ನು ಇದ್ದಕ್ಕಿದ್ದಂತೆ ವರ್ಣಿಸುವುದು. ಅದರ ಅರ್ಥನಿರ್ಣಯ ಮಾಡುವ ಕೆಲಸ ಮಾನವಶಾಸ್ತ್ರಜ್ಞನಿಗೆ ಬಿಟ್ಟದ್ದು. ಉದಾಹರಣೆಗೆ 'ನಾನು ತಿಂದೆನು' ಮತ್ತು 'ನಾ ತಿನ್ನಿ' ಎಂಬ ರೂಪಗಳಿದ್ದರೆ ಮೊದಲನೆಯದು ಸರಿ, ಎರಡನೆಯದು ತಪ್ಪು ಎಂದು ಆತ ಹೇಳುವುದಿಲ್ಲ. ಆದರೆ, ಈ ಎರಡೂ ರೂಪಗಳು ಕನ್ನಡದ ಅವಶ್ಯಕ ಅಂಗಗಳು. ವರ್ಣನಾತ್ಮಕ ಭಾಷಾಶಾಸ್ತ್ರಜ್ಞ ಮಾಡುವ ಕೆಲಸವೆಂದರೆ – ಯಾವ ರೂಪು ಯಾವ ಸಂದರ್ಭದಲ್ಲಿ ಬಳಸಲ್ಪಡುತ್ತದೆ ಎಂಬುದನ್ನು ವರ್ಣಿಸುವುದು. ಆ ರೂಪು ಹಾಗೇಕೆ, ಈ ರೂಪು ಹೀಗೇಕೆ ಎನ್ನುವುದು ಇನ್ನೊಬ್ಬ ಶಾಸ್ತ್ರಜ್ಞನ ಕೆಲಸ. ಅದೇ ರೀತಿ ಕನ್ನಡದಲ್ಲಿ ಹೋಗೋಣ, ಹೋಗೋಮು, ಹೋಗೋಣು, ಹೋಗೂಮು, ಹೋಗಾಮು; ಇದ್ದಾನೆ, ಇದ್ದಾನ, ಅದಾನ, ಹಾನ ಮುಂತಾದ ವಿವಿಧ ರೂಪಗಳು ದೊರೆಯಬಹುದು. ಇವನ್ನೆಲ್ಲ ಇದ್ದಕ್ಕಿದ್ದಂತೆ ವರ್ಣಿಸುವುದು ಭಾಷಾವಿಜ್ಞಾನಿಗಳ ಕೆಲಸ. ಹೆಚ್ಚೆಂದರೆ ಅವು ಬಳಕೆಯಾಗುವ ಸಂದರ್ಭಗಳನ್ನು ಕೊಡಬಹುದು" (ಪು. 20). ಈ ದೀರ್ಘ ಪ್ಯಾರಾವನ್ನು ನಾಲ್ಕು ಮಾತುಗಳಲ್ಲಿ ಸಂಗ್ರಹಿಸಿಕೊಡಿರೆಂದು ಪರೀಕ್ಷೆಯಲ್ಲಿ ಕೊಡಬಹುದು. ಸಾರಾಂಶವಿಷ್ಟು: ವಸ್ತುವನ್ನು ಸ್ಪಷ್ಟವಾಗಿ ಹಾಗೂ ನೇರವಾಗಿ ನಿವೇದಿಸುವುದರತ್ತ ಆದ್ಯ ಗಮನ ಹರಿಸಬೇಕಿತ್ತು. ಉದಾಹರಣೆಗಳನ್ನು ಆದಷ್ಟೂ ಕನ್ನಡ ಭಾಷೆಯಿಂದ ಆರಿಸಿ ಕೊಡುವುದು ಅಗತ್ಯ. ಯಾಕಂದರೆ, ಯಾಕೆಂದರೆ ಎಂಬಂತಹ ಎರಡೆರಡು ರೂಪಗಳ ಬಳಕೆ ಸಾಧುವಲ್ಲ. ಲೇಖಕರು, ಇದು ಶಾಸ್ತ್ರಗ್ರಂಥ ಆದುದರಿಂದ, ಯಾವುದಾದರೂ ಒಂದು ರೂಪವನ್ನುಪಯೋಗಿಸುವುದು ಸೂಕ್ತ. ಇಂಗ್ಲಿಷ್, ತಲಪು ಎಂಬ ಮಾನ್ಯರೂಪಗಳಿಗೆ ಈ ಗ್ರಂಥದಲ್ಲಿ ಇಂಗ್ಲೀಷ್, ತಲುಪು ಎಂಬ ರೂಪಗಳಿರುವುದನ್ನು ಗುರುತಿಸಬಹುದಾದರೂ ಅದೇನೂ ದೋಷವಲ್ಲ. 'ಅಲ್ಪಡು' ಹತ್ತಿಸಿಕೊಂಡು ನಿಂತ ಅನೇಕಾನೇಕ ಕರ್ಮಣಿ ಪ್ರಯೋಗಗಳಿದ್ದರೂ ಅವಕ್ಕೂ ಈ ಹೇಳಿಕೆ ಅನ್ವಯಿಸುತ್ತದೆ. ಆದರೆ ಮುದ್ರಣ ಸ್ಖಾಲಿತ್ಯಗಳ ಹಾವಳಿ ಸಹಿಸುವುದು ಕಷ್ಟ. ಮುದ್ರಣ ಹಾಗೂ ಬಳಸಿರುವ ಕಾಗದ ತಕ್ಕಮಟ್ಟಿಗಿವೆ. ಇಂಥ ಶಾಸ್ತ್ರವಿಷಯದ ಗ್ರಂಥದಲ್ಲಿ ಮುದ್ರಣ ದೋಷಗಳು ಆದಷ್ಟೂ ಇಲ್ಲದಿರುವುದೂ, ಒಳ್ಳೆಯ ಮುದ್ರಣ ಹಾಗೂ ರಕ್ಷಾಕವಚ, ಒಳ್ಳೆಯ ಕಾಗದದ ಬಳಕೆ – ಇವೆಲ್ಲ ಅಪೇಕ್ಷಣೀಯ.

**ಕನ್ನಡ ಧ್ವನಿಮಾ** (ಎಂ. ಜಿ. ವೆಂಕಟೇಶಯ್ಯ) : ಲೇಖಕರಿಗೆ ಬರೆಯಲು ಆರಿಸಿಕೊಂಡಿರುವ ವಿಷಯದ ಮೇಲಿನ ಪ್ರಭುತ್ವ ಸಾಲದು. ಆಧುನಿಕ ವಿಚಾರಗಳ ಹಾಗೂ ಕೃತಿಗಳ ಪರಿಚಯವೂ ಇಲ್ಲ. ಹಳೆಯ, ಒಮ್ಮೊಮ್ಮೆ ಅನಧಿಕೃತವಾದ, ಹೊತ್ತಗೆಗಳ ಹೇಳಿಕೆಗಳನ್ನು ಆಶ್ರಯಿಸಿ ಎಡವುತ್ತಾರೆ. ಓದುಗರಿಗೆ ದಿಕ್ಕು ತಪ್ಪಿಸುತ್ತಾರೆ. ವಿವರಣೆಯಲ್ಲಿ, ವಿಷಯ ನಿರೂಪಣೆಯಲ್ಲಿ ಖಚಿತತೆ, ವೈಜ್ಞಾನಿಕತೆ ಕಡಮೆ.

ರಾಮನು ಎಂಬ ಶಬ್ದವನ್ನು ತೆಗೆದುಕೊಂಡು ಧ್ವನಿಮಾಗಳಾಗಿ ವಿಭಜಿಸುತ್ತಾ (ಪು. 12) – "ಮೊದಲನೆಯ ಪದದಲ್ಲಿ 5ನೆಯ ಅಂಶವಾದ **ನ** ಉಚ್ಚಾರಣೆಯ ಸೌಕರ್ಯಕ್ಕಾಗಿ ಬಂದ ಅಂಶ. ಆದುದರಿಂದ ಈ ಪ್ರಯೋಗದಲ್ಲಿ ಇದನ್ನು ಧ್ವನಿಮಾ ಎಂದು ಗಣಿಸಲಾಗುವುದಿಲ್ಲ. ಆರನೆಯ ಅಂಶವಾದ 'ಉ' ಪ್ರಥಮಾ ವಿಭಕ್ತಿಯನ್ನು ಸೂಚಿಸಲು ಬಂದ ಅಂಶ (ವಿಭಕ್ತಿ ಪ್ರತ್ಯಯ) ವಾದುದರಿಂದ ಅದನ್ನು ಇಲ್ಲಿ ಧ್ವನಿಮಾ ದಂತೆ ಗಣನೆ ಮಾಡುವುದಿಲ್ಲ. ಮಿಕ್ಕವು ಧ್ವನಿಮಾಗಳು. ಆದುದರಿಂದ ಕನ್ನಡ ಬರಹ ದಲ್ಲಿಯೂ ಮಾತಿನಲ್ಲಿಯೂ ಬರುವ ಅಕ್ಷರಗಳನ್ನೆಲ್ಲಾ ಎಲ್ಲಾ ಪ್ರಯೋಗಗಳಲ್ಲಿಯೂ ಧ್ವನಿಮಾಗಳೇ ಎಂದು ಲೆಕ್ಕಿಸಲಾಗುವುದಿಲ್ಲ" – ಎಂಬುದಾಗಿ ಬರೆದಿದ್ದಾರೆ. ಅವೈಜ್ಞಾ ನಿಕ ಬರಹಕ್ಕೆ ಇದು ಒಳ್ಳೆಯ ಉದಾಹರಣೆ.

ಪುಟ 15ರಲ್ಲಿ "ಕುದುರೆ ಎಂಬ ಪದದಿಂದ ।ಕ। ತೆಗೆದುಹಾಕಿದರೆ –ದುರೆ. (ಇದಕ್ಕೆ ಆ ಅರ್ಥವಿಲ್ಲ). ಆದುದರಿಂದ ಕನ್ನಡದಲ್ಲಿ ।ಕ। ಒಂದು ಧ್ವನಿಮಾ... ಸುರಿ= ಧಾರೆಯಾಗಿ ಬೀಳು; ಕುಸುರಿ=ಗಂಜಿ. ।ಕ। ಸೇರಿಸುವುದರಿಂದ ಅರ್ಥವು ಬೇರೆ ಯಾಯಿತು"– ಎಂದು ಬರೆಯುತ್ತಾರೆ. ಆದರೆ ಇಲ್ಲಿ ತೆಗೆದುಹಾಕಿದ್ದೂ, ಸೇರಿಸಿದ್ದೂ ।ಕ। ಅಲ್ಲ, ಕು. ಅಲ್ಲದೆ ।ಕ। ಎಂಬುದು ಒಂದು ಧ್ವನಿಮಾ ಎಂದು ಉದ್ದಕ್ಕೂ ವಿವರಿಸಿ ದ್ದಾರೆ. ಆದರೆ ।ಕ। ಎಂಬುದು ಒಂದು ಧ್ವನಿಮಾ ಅಲ್ಲ. ಅದರಲ್ಲಿ ಕ್+ಅ (ಕ್ ಮತ್ತು ಅ) ಎಂಬ ಎರಡು ಧ್ವನಿಮಾಗಳಿವೆ. ಉಳಿದ ಕಡೆಗಳಲ್ಲೂ ।ರ।, ।ಮ।, ।ವ।, ।ಣ।, ।ದ। (ಪು. 11) ಇದೇ ತಪ್ಪನ್ನೆಸಗಿದ್ದಾರೆ. ಇಂಥ ಶಿಥಿಲ ವಾಕ್ಯಗಳಿಂದ ಗ್ರಂಥದ ಮೌಲ್ಯ ಮಾಸಿದೆ.

**ಶಬ್ದಾವರ್ತ ನಿರುಕ್ತ** (ಎಂ.ಜಿ. ವೆಂಕಟೇಶಯ್ಯ): ಸಂಖ್ಯಾಶಾಸ್ತ್ರವನ್ನುಪಯೋಗಿಸಿ ಕೊಂಡು ಸಾಹಿತ್ಯಕೃತಿಗಳಿಗೆ ಅನ್ವಯಿಸಿ ಕೆಲವು ನಿಯಮಾವಳಿಗಳನ್ನು ನಿರೂಪಿಸುವ ಭಾಷಾವಿಜ್ಞಾನದ ಒಂದು ಕ್ರಮವನ್ನನುಸರಿಸಿ ಬರೆದ ಗ್ರಂಥವಿದು. ಶಬ್ದಗಳ ಪುನರುಕ್ತಿ ಯನ್ನೇ ತಳಹದಿಯಾಗಿ ಇಟ್ಟುಕೊಂಡು ಲೇಖಕರ ಶೈಲಿಗೆ ಸಂಬಂಧಪಟ್ಟ ಕೆಲವು ಅಂಶ ಗಳನ್ನು ವಿವರಿಸಲು ತಾವು ಪ್ರಯತ್ನ ಪಟ್ಟಿರುವುದಾಗಿ ಇದರ ಬರೆಹಗಾರರ ಅರಿಕೆ.

ಮೂವರು ಹೆಸರಾಂತ ಬರೆಹಗಾರರ ಮೆಚ್ಚುಗೆ ಹೊತ್ತರೂ ಈ ಹೊತ್ತಗೆಯ ಮೌಲ್ಯವಾಗಲಿ ಉಪಯುಕ್ತತೆಯಾಗಲಿ ಹೆಚ್ಚಿಲ್ಲ – ಪ್ರಯೋಜನವಂತೂ ಓದುಗರಿಗೆ ಕನಸಿನ ಗಂಟು. ಸಾಹಿತ್ಯ ಪರಿಷತ್ತು ಈ ಪುಸ್ತಕದ ಪ್ರಕಟಣೆಗೆ ಹಾಕಿದ ಹಣ ಸಮುದ್ರಕ್ಕೆ ನೀರು ಸುರಿದಂತೆ ಪೋಲಾಗಿದೆ.

ಮೊದಲ ಮೂರು ಪುಟಗಳುದ್ದಕ್ಕೂ ಲೇಖಕರು ತಮ್ಮ ಬೆನ್ನನ್ನು ತಾವೇ ಚಪ್ಪರಿಸಿ ಕೊಂಡು ಬಡಾಯಿ ಕೊಚ್ಚಿಕೊಂಡಿರುವುದು ಅನಾವಶ್ಯಕ.

ಎರಡನೆಯ ಅಧ್ಯಾಯ 'ನಿಯಮ' – ಇದು. ಓಂದಿ ಓಂಜಿ ಬರೆದರೆ ಹೇಗೆ ಪುಟ ಗಳನ್ನು ತುಂಬಿಸಬಹುದೆಂಬುದಕ್ಕೆ ಉತ್ತಮ ಉದಾಹರಣೆ. ಲೇಖಕರು ತಾವು ಅನು ಸರಿಸಿರುವ ನಿಯಮವನ್ನು ನೇರವಾಗಿ ನಿಖರವಾಗಿ ನಾಲ್ಕು ಮಾತುಗಳಲ್ಲಿ ಹೇಳದೆ,

ಕೊಂಕಣ ಸುತ್ತಿ ಮೈಲಾರಕ್ಕೆ ಬಂದಂತೆ. ತಾವು ಯಾವ ಯಾವ ನಿಯಮಗಳನ್ನು ಅನು ಸರಿಸಿಲ್ಲವೆಂಬುವರ ದೊಡ್ಡ ಪಟ್ಟಿ ಕೊಟ್ಟಿದ್ದಾರೆ. ಇಂಥ ಚಮತ್ಕಾರಗಳಿಂದ ಲಭಿಸುವ ಲಾಭ ಶೂನ್ಯ.

ಮುವ್ವತ್ತು ವರ್ಷಗಳ ಹಿಂದೆ ಬರೆದ ಹಸ್ತಪ್ರತಿ ಈಗ ಅಚ್ಚಾಗುತ್ತಿದೆಯೆಂದು ನಿವೇದಿಸುತ್ತಾರೆ. ಅಂದೂ ಬಹುಶಃ ಈ ಬಗೆಯ ದ್ರಾವಿಡ ಪ್ರಾಣಾಯಾಮದಂತಹ ಬರೆಹ ಬೇಕಿದ್ದಿರಲಾರದು. ಇಂದಿನಂತೆ.

ಮುಖ್ಯವಾದ ದೋಷ ಸಂಕ್ಷಿಪ್ತತೆಯ, ಸ್ಪಷ್ಟತೆಯ ಅಭಾವ. ಇಡೀ ಗ್ರಂಥವನ್ನು ಇಪ್ಪತ್ತು ಪುಟಗಳ ಲೇಖನ ಪರಿಮಿತಿಯಲ್ಲಿ ಅಳವಡಿಸಬಹುದು. ಅದನ್ನು ಹಿಂಜಿ 165 ಪುಟಗಳಿಗೆ ಹಿಗ್ಗಿಸಿದ್ದಾರೆ. ಪುನರಾವೃತ್ತಿ ಹಾಗೂ ಪ್ರಾಪ್ತ ಪದಸಂಖ್ಯೆ – ಇದಿಷ್ಟೇ ಈ ಪುಸ್ತಕದ ತಿರುಳು. ಈ ಸಾರವನ್ನು ಸಾರುವುದಕ್ಕೆ ಒಂದೆರಡು ಉದಾಹರಣೆಗಳು ಸಾಕು. ಅದರ ಜೊತೆಗೆ ಹದಿನಾಲ್ಕು ಪುಟಕ್ಕೂ ಮೀರಿ ಇಂಗ್ಲಿಷ್ ವಾಕ್ಯಗಳು ಉದಾಹೃತವಾಗಿವೆ. ಮೂಗಿಗಿಂತ ಮೂಗುತಿಯೇ ಭಾರ ಎಂಬ ಸಾಮತಿಗೆ ಸಾಕ್ಷಿ ಹೇಳಲು. ಸ್ಥಿತಿಸ್ಥಾಪನಶಕ್ತಿ ಇದೆಯೆಂದು 'ಸಿಕ್ಕಾಪಟ್ಟೆ' ಅಳತೆ ಮೀರಿ ಎಳೆದರೆ ರಬ್ಬರು ಕೂಡ ತುಂಡಾಗಿಬಿಡುತ್ತದೆ.

ಲೇಖಕರು – ಕವಿರಾಜಮಾರ್ಗ (9, 37), ಕವಿರಾಜಮಾರ್ಗಂ (10. 39); ಪಂಪಾಶತಕ (10. 37), ಪಂಪಾಶತಕಂ (12, 40) – ಹೀಗೆ ಎರಡೆರಡು ವಿಧವಾಗಿ ಹೆಸರಿಸಿರುವುದು ಕೂಡ ಇಂಥ ಗ್ರಂಥಗಳಲ್ಲಿ ಸರಿಯಾಗದು. ಫೋನೀಂ, ಮಾರ್ಫೀಂ ಎಂಬ ಇಂಗ್ಲಿಷ್ ಶಬ್ದಗಳನ್ನು ಬಳಸಿದ್ದಾರೆ, ಹಲವು ಕಡೆ. ಆದರೆ ಅವುಗಳಿಗೆ ಕನ್ನಡ ದಲ್ಲಿ ರಚಿತವಾಗಿರುವ ಭಾಷಾವಿಜ್ಞಾನ ಗ್ರಂಥಗಳಲ್ಲಿ ಧ್ವನಿಮಾ, ಆಕೃತಿಮಾ ಎಂಬ ಪಾರಿಭಾಷಿಕ ಶಬ್ದಗಳ ಬಳಕೆ ಆಗಿದೆ, ಮಾನ್ಯವೂ ಆಗಿದೆ. ಈ ಲೇಖಕರೂ ಅವನ್ನೇ ಉಪಯೋಗಿಸಬೇಕಾದ್ದು ಉಚಿತ.

ಪುಟ 36ರಲ್ಲಿ 'ಫೋನೀಂ' ವಿವರದಲ್ಲಿ ಎಡವಿದ್ದಾರೆ: ಪ, ದ, ಮ–ಗಳಲ್ಲಿ ಅವರು ತಿಳಿದಂತೆ ಒಂದೊಂದು ಧ್ವನಿಮಾ ಇಲ್ಲ, ಎರಡೆರಡು ಧ್ವನಿಮಾಗಳಿವೆ. ಪುಟ 41ರಲ್ಲಿ 'ಮಾರ್ಫೀಂ' ವಿವರ ಕೂಡ ಸ್ಥೂಲವಾಗಿ ಒಪ್ಪಬಹುದೇ ಹೊರತು ಭಾಷಾವಿಜ್ಞಾನದ ನಿರೂಪಣೆಗೆ ಅನುಗುಣವಾಗಿಲ್ಲ. ಬದ್ಧ ಆಕೃತಿಮಾ ಎಂಬುದಕ್ಕೆ ಅವರು ಶುದ್ಧ 'ಮಾರ್ಫೀಂ' ಎಂದು ಹೇಳಿದ್ದಾರೆ.

ಹೀಗೆ ಈ ತಪ್ಪುಗಳ ಪಟ್ಟಿಯನ್ನು ಇನ್ನೂ ಬೆಳೆಸಬಹುದು, ಅಗತ್ಯವಿಲ್ಲ. ಒಟ್ಟಿ ನಲ್ಲಿ ಲೇಖಕರು ಬೆಟ್ಟಕ್ಕೆ ಕಲ್ಲುಹೊತ್ತ ವ್ಯರ್ಥ ಸಾಹಸ ಮಾಡಿದ್ದಾರೆ. ಅಮೂಲ್ಯ ವಿರಾಮ ವೇಳೆಯನ್ನು ಕಳೆದು ವೃಥಾಶ್ರಮ ಪಟ್ಟ ಲೇಖಕರು ಇದೇ ಸಮಯವನ್ನು ಉಪಯೋಗಿಸಿಕೊಂಡು ಕನ್ನಡ ಭಾಷೆ–ಸಾಹಿತ್ಯಗಳ ಸಂವರ್ಧನೆಗೆ ಸಹಕಾರಿಯಾಗಬಲ್ಲ ಗ್ರಂಥ ರಚಿಸಬಹುದಿತ್ತು.

**ಛಂದಸ್ಸಿನ ಔಚಿತ್ಯ** (ಶಿವರಾಮ ಐತಾಳ): ಇದು ಛಂದಸ್ ಶಾಸ್ತ್ರ ವಿಷಯವಾಗಿ ಬರೆದ ಪುಸ್ತಿಕೆ. ಇದುವರೆಗೆ ಕನ್ನಡದಲ್ಲಿ ಛಂದಸ್ಸನ್ನು ಕುರಿತು ಪ್ರಕಟವಾಗಿರುವ ಪುಸ್ತಕಗಳು ಕಡಮೆ. ಬಿಡಿ ಲೇಖನಗಳು ಬಹಳ. ಈ ಹಿನ್ನೆಲೆಯಲ್ಲಿ ಇದಕ್ಕೊಂದು ಸ್ಥಾನ ವಿದೆಯಲ್ಲದೆ ಬರೆಹದ ಮೇಲ್ಮೆಯಿಂದಾಗಿ ಇದಕ್ಕೊಂದು ವಿಶಿಷ್ಟವಾದ ಸ್ಥಾನವಿದೆ. ಇದುವರೆಗಿನ ಛಂದಸ್ಸನ್ನು ಕುರಿತು ಬರೆದ ಹೊತ್ತಗೆಗಳಲ್ಲಿ ಸ್ವತಂತ್ರವಾದ ವಿವರಣೆ ಗೌಣವಾಗಿತ್ತು. ಇದರಲ್ಲಿ ಸ್ವೋಪಜ್ಞತೆಗೆ ಆದ್ಯತೆ.

ಹಳಗನ್ನಡ, ನಡುಗನ್ನಡ, ಹೊಸಗನ್ನಡ – ಇವುಗಳ ಸಾಹಿತ್ಯ ವಿಕಾಸವನ್ನು ಛಂದಸ್ಸಿನ ಹಾಗೂ ಭಾಷೆಯ ದೃಷ್ಟಿಯಿಂದ ಇಲ್ಲಿ ಮಾಡಿರುವ ವಿಹಂಗಮ ರೂಪದ ಸಮೀಕ್ಷೆ ಮನನೀಯ. ಭಾಷೆಗೂ ಛಂದಸ್ಸಿಗೂ, ಗದ್ಯಕ್ಕೂ ಛಂದಸ್ಸಿಗೂ, ಕವಿತೆಗೂ ಛಂದಸ್ಸಿಗೂ ಇರುವ ಸಂಬಂಧ ಹಾಗೂ ಅಗತ್ಯಾನಗತ್ಯಗಳ ವಿವೇಚನೆ ಇಲ್ಲಿದೆ.

ನೃತ್ಯ, ಸಂಗೀತ, ಸ್ವರಾಘಾತ ಮೊದಲಾದ ಬೇರೆ ಬೇರೆ ನಿಟ್ಟಿನಿಂದಲೂ ಛಂದ ಸ್ಸಿನ ಅಗತ್ಯ–ಔಚಿತ್ಯವನ್ನು ವಿಮರ್ಶಿಸಿದ್ದಾರೆ. ಆಘಾತದ ದೃಷ್ಟಿಯಿಂದ ಮಾಡಿರುವ ವಿವೇಚನೆ ಇನ್ನೂ ಪರಿಶೀಲನಾರ್ಹ. ಬಹುವಾಗಿ ಹೇಳಿಕೆಗಳನ್ನು ಉದಾಹರಣೆಗಳಿಂದ ಸ್ಪಷ್ಟಪಡಿಸಲಾಗಿದೆ.

ಶಾಸ್ತ್ರೀಯ ಬರೆಹಕ್ಕೆ ಅನುಗುಣವಾದ ಭಾಷೆ ಇಲ್ಲಿದ್ದರೂ ಲೇಖಕರು ಒಮ್ಮೊಮ್ಮೆ ಭಾವುಕತೆಯಿಂದ ಮೂಲವಿಷಯನಿರೂಪಣೆಯಿಂದ ದೂರ ಸರಿಯುತ್ತಾರೆ. ಹಲವು ಕಡೆ ವಾಕ್ಯಗಳನ್ನೂ ಕೆಲವು ಪುಟಗಳನ್ನೂ ಧಾರಾಳವಾಗಿ ಬಿಡಬಹುದಾಗಿತ್ತು; ಉದಾಹರಣೆ– ಪುಟ 14, 19, 22ರಿಂದ 28. ಹಾಗೆ ನೋಡುವುದಾದರೆ ಪುಟ 13ರಿಂದ 28ರ ವರೆಗಿನ 16 ಪುಟಗಳ ವಿವರಣೆಯನ್ನು ಅಯ್ದಾರು ಪುಟಗಳಲ್ಲಿ ಅಡಕಗೊಳಿಸಬಹುದಿತ್ತು.

ಈ ಕೃತಿಯ ಜೊತೆಗೆ ಇದೇ ಸಾಹಿತ್ಯವಾಹಿನಿ ಮಾಲೆಯಲ್ಲಿ ಪ್ರಕಟವಾಗಿರುವ ಈ ಲೇಖಕರ 'ಕನ್ನಡ ಛಂದಸ್ಸಿನ ಪರಿಚಯ' ಎಂಬ ಪುಸ್ತಿಕೆಯನ್ನು ಅವಲೋಕಿಸ ಬಹುದು.

**ಛಂದೋಂಬುಧಿ** (ರಾಮಚಂದ್ರರಾವ್): ನಾಗವರ್ಮನ ಛಂದೋಂಬುಧಿಯನ್ನು ಈಗಾಗಲೇ ಇಬ್ಬರು ವಿದ್ವಾಂಸರು ಮುದ್ರಿಸಿದ್ದಾರೆ. ಅವುಗಳಲ್ಲಿ 1874ರಲ್ಲಿ ಅಚ್ಚಾದ ರೆ॥ ಎಫ್. ಕಿಟ್ಟೆಲ್ಲರ ಪ್ರತಿಯನ್ನೇ ಈ ಪ್ರಕೃತ ಸಂಪಾದಕರು ಆಧರಿಸಿದ್ದಾರೆ.

ಈ ಸಂಪಾದಿತ ಕೃತಿಯಲ್ಲಿ ಹೆಚ್ಚಿನ. ಹೇಳಿಕೊಳ್ಳುವಂತಹ ಸಂಶೋಧಕ ದೃಷ್ಟಿ ಇಲ್ಲವೇ ಸಾಮಗ್ರಿ ಇಲ್ಲ. ಕೇವಲ ಹಿಂದಿನ ಮುದ್ರಣವನ್ನಷ್ಟೇ ಅನುಸರಿಸಿರುವ ಈ ಪ್ರಯತ್ನ ಅನಗತ್ಯವೆಂದೇ ಹೇಳಬೇಕಾಗುತ್ತದೆ. ಕಾರಣ ಗ್ರಂಥಸಂಪಾದನಾ ಶಾಸ್ತ್ರದ ಪರಿಚಯ ಕೂಡ ಈ ಸಂಪಾದಕರಿಗಿಲ್ಲ. ಅಯ್ದೂವರೆ ಪುಟದ ಮುನ್ನುಡಿಯಲ್ಲೂ ಛಂದೋಂಬುಧಿಯ ಬಗೆಗೆ ತಿಳಿಸಿರುವ ಮಾತುಗಳೆಲ್ಲ ಚರ್ವಿತಚರ್ವಣವೇ ಹೊರತು ಹೊಸದೇನೂ ಹೇಳಿಲ್ಲ.

ಮುಖ್ಯವಾದ ಕೊರತೆ ಈ ಮುದ್ರಣಕ್ಕೆ ಬೇರೆ ಯಾವ ಓಲೆಗರಿ ಹಸ್ತಪ್ರತಿಯನ್ನೂ ಬಳಸಿಕೊಳ್ಳದಿರುವುದು. ಇದರಿಂದ ಈ ಗ್ರಂಥ ಪ್ರಮಾಣಭೂತವಾದ ಮುದ್ರಣ ವಾಗಲಾರದು. ಮುದ್ರಣದಿಂದ ಮುದ್ರಣಕ್ಕೆ ಲಭ್ಯವಾದ ಆಧಾರ ಸಾಮಗ್ರಿಯನ್ನು ಉಪಯೋಗಿಸಿಕೊಂಡು ಪ್ರಗತಿ ಕಾಣಬೇಕು. ಹಾಗಾದಾಗಲೇ ತರುವಾಯದ ಮುದ್ರಣ ಗಳ ಸಾರ್ಥಕ್ಯ. ಇಲ್ಲಿ ಅಂಥ ಪರಿಷ್ಕಾರ ಕಂಡುಬರುವುದಿಲ್ಲ.

ಗ್ರಂಥದುದ್ದಕ್ಕೂ ಹಾಸುಹೊಕ್ಕಾಗಿರುವ ಮುದ್ರಣ ಸ್ಖಾಲಿತ್ಯಗಳು ಓದುಗರನ್ನು ತಪ್ಪುದಾರಿಗೆಳೆಯುತ್ತವೆ, ವಿದ್ವಾಂಸರಿಗೆ ತಲೆನೋವು ತರಿಸುತ್ತವೆ. ಷಟ್ಪದಿ ಪದ್ಯ ಗಳೆಲ್ಲ ಮೂಲಗ್ರಂಥದ ಭಾಗಗಳಾಗಿ ಸೇರ್ಪಡೆಯಾಗಿವೆ. ಇವು ಪ್ರಕ್ಷಿಪ್ತಗಳಿರಬಹುದೆ ಎಂಬ ಸೂಚನೆಯೂ ಇಲ್ಲ. ಪದ್ಯಗಳ ಅಕಾರಾದಿ, ಅರ್ಥಕೋಶ, ಪಾಠಾಂತರಗಳು, ವಿಶೇಷ ಟಿಪ್ಪಣಿಗಳು, ಕವಿ ಕೃತಿ ವಿಚಾರವಾದ ಪ್ರೌಢವಿಮರ್ಶೆ, ಛಂದಸ್ಸಿನ ಬಗೆಗೆ ನಾಗ ವರ್ಮನ ಕೊಡುಗೆ ಕುರಿತ ಸೂಚನೆ – ಇವು ಯಾವೂ ಇಲ್ಲದೆ ಈ ಗ್ರಂಥ ಕೇವಲ ಒಂದು 'ಬಜಾರ್ ಎಡಿಷನ್' ಆಗಿ ನಿಂತಿದೆ. ಇದರ ಅವಲೋಕನದಿಂದ ಸ್ಪಷ್ಟವಾಗುವ ಒಂದು ವಿಚಾರವೆಂದರೆ – ಛಂದೋಂಬುಧಿಯ ಉತ್ತಮ ಪರಿಷ್ಕೃತ ಸಂಪಾದಿತ ಮುದ್ರಣ ವೊಂದರ ಅಗತ್ಯ ಇನ್ನೂ ಇದ್ದೇ ಇದೆ – ಎಂಬುದು.

**ಕೇಶಿರಾಜ** (ಶ್ರೀನಿವಾಸನ್)**:** ಈ ಪುಸ್ತಿಕೆ ಸಾಹಿತ್ಯವಾಹಿನಿ ಮಾಲೆಯಲ್ಲಿ (ಸಂಖ್ಯೆ 22) ಪ್ರಕಟವಾಗಿದೆ. ಇದರಲ್ಲಿ ಕೇಶಿರಾಜನ ಪರಿಚಯವಿದೆ, ಜೊತೆಗೆ ಶಬ್ದಮಣಿ ದರ್ಪಣದ ಸ್ಥೂಲ ಪರಿಚಯವಿದೆ.

ವರ್ಣ ಸಮಾಮ್ನಾಯ. ಕೇಶಿರಾಜನ ಕನ್ನಡ ಪ್ರಜ್ಞೆ, ವಿಭಕ್ತಿ ಪಲ್ಲಟ, ಗಮಕ ಸಮಾಸ, ಱಳಕುಳಕ್ಷಳ ವಿಚಾರ, ಶ್ರುತಿಸಹ್ಯ ಸಂಧಿ, ಸಮಸಂಸ್ಕೃತ, ಮೊದಲಾದು ವನ್ನು ಕುರಿತು ಕೇಶಿರಾಜನ ವಿವರಣೆ ಏನೆಂಬುದನ್ನು ಇಲ್ಲಿ ಸಂಗ್ರಹವಾಗಿ ತಿಳಿಸಿಕೊಟ್ಟಿ ದ್ದಾರೆ.

ಈ ಪುಸ್ತಿಕೆಯ ಮೊದಲ ಹತ್ತು ಪುಟದಲ್ಲಿ ಬಂದಿರುವ ವಿಷಯ ಅನುಚಿತ. ಅದೇ ಪುಟಗಳನ್ನು ಶಬ್ದಮಣಿದರ್ಪಣದ ಪರಿಚಯಕ್ಕೇ ಮೀಸಲಿರಿಸಿದ್ದರೆ ಉಪಯುಕ್ತತೆ ಇನ್ನೂ ಹೆಚ್ಚುತ್ತಿತ್ತು. ಮೂರನೆಯ (ವಾಸ್ತವವಾಗಿ ಮೊದಲನೆಯ) ಪುಟದಲ್ಲಿ ಬಂದಿ ರುವ ಇಂಗ್ಲಿಷ್ ವಾಕ್ಯಗಳ ಉಲ್ಲೇಖ ಅಲ್ಲಿನ ವಿವರಣೆಗೆ ಹೊಂದಿಕೊಳ್ಳುವುದೇ ಇಲ್ಲ.

ಇದರ 12ನೆಯ ಪುಟದಲ್ಲಿ ಕಾಲ್ಡ್‌ವೆಲ್ಲನ ಗ್ರಂಥವಾದ ತೌಲನಿಕ ದ್ರಾವಿಡ ಭಾಷೆ ಗಳ ವ್ಯಾಕರಣ ಕುರಿತು ಬರೆಯುತ್ತಾ 'ಇತ್ತೀಚೆಗೆ ಮೂರನೆಯ ಮುದ್ರಣವನ್ನು ಕಂಡಿದೆ' ಎಂದಿದ್ದಾರೆ. ಆದರೆ ಇತ್ತೀಚೆಗೆ, ಅಂದರೆ 1956ರಲ್ಲಿ, ಅದು ಕಂಡದ್ದು ಮೂರ ನೆಯ ಮುದ್ರಣವಲ್ಲ, ನಾಲ್ಕನೆಯದು.

ಇಂಥ ಕೆಲವು ಅಂಕಿ ಅಂಶಗಳ ಅರೆಕೊರೆಗಳ ಹೊರತು ಈ ಪುಸ್ತಿಕೆ ಕೇಶಿರಾಜನ ಶಬ್ದಮಣಿದರ್ಪಣ ವ್ಯಾಸಂಗಿಗಳಿಗೆ, ಅದರಲ್ಲೂ ವಿದ್ಯಾರ್ಥಿಗಳಿಗೆ ಒಂದು ಉತ್ತಮ ಪ್ರವೇಶಿಕೆ.

**ಪಂಪಭಾರತ ದೀಪಿಕೆ** (ಡಿ. ಎಲ್. ನರಸಿಂಹಾಚಾರ್ಯ): ಬಿ. ಎ. (ಆನರ್ಸ್) ಎಂ. ಎ. ತರಗತಿಗಳ ಪ್ರೌಢ ವಿದ್ಯಾರ್ಥಿಗಳಿಗೆ ಪಂಪಭಾರತವನ್ನು ಹಲವಾರು ವರ್ಷ ಪಾಠ ಹೇಳಿದ ಆಚಾರ್ಯರು ಅದರಲ್ಲಿ ಎದುರಾಗುವ ಸಿಕ್ಕುಗಳನ್ನು ಬಿಡಿಸುವ ಸುಳಿವು ಕಂಡುಕೊಂಡರು. ಹಿಡಿದ ಅನ್ವೇಷಕ ಜಾಡನ್ನು ಬಿಡದೆ ಮತ್ತೆ ಮತ್ತೆ ಪಂಪಭಾರತ ವನ್ನೇ ಮನನಮಾಡಿದರು. ಅಂತಹ ಒಂದು ಅಧ್ಯಯನ, ಸಂಶೋಧನೆ ಹಾಗೂ ಉನ್ನತ ಪಾಂಡಿತ್ಯ – ಇವುಗಳ ಪೂರ್ಣಫಲ ಈ ವ್ಯಾಖ್ಯಾನಗ್ರಂಥ. ಈ ಟೀಕೆ ಸಾಕಷ್ಟು ವಿಸ್ತಾರ ವಾಗಿಯೂ ಪ್ರತಿಪದಾರ್ಥ ಸಹಿತವಾಗಿಯೂ, ರಚಿತವಾಗಿದೆ. ಇದೊಂದು ವಿದ್ವತ್ ಸಾಹಸ. ವ್ಯಾಕರಣ, ಛಂದಸ್ಸು, ಪೂರ್ವಕಥಾವೃತ್ತಾಂತ, ಶಬ್ದಾರ್ಥ ನಿರ್ಣಯ, ಆಕರ ಗ್ರಂಥಗಳು – ಮೊದಲಾದ ಹಲವಾರು ವಿಷಯಗಳು ನಿರೂಪಿತವಾಗಿವೆ. ಇವೆಲ್ಲ ಪಂಪ ಭಾರತ ಕಾವ್ಯದ ರಸಾಸ್ವಾದನೆಗೆ ಇಂಬಾಗಿ ನಿಲ್ಲುತ್ತವೆ. ವ್ಯಾಖ್ಯಾನ ಗ್ರಂಥಗಳ ಪ್ರಾಚೀನ ಪರಂಪರೆಯನ್ನು ಸುಸಮರ್ಥ ರೀತಿಯಲ್ಲಿ ಆಚಾರ್ಯರು ಮುಂದುವರಿಸಿಕೊಂಡು ಬಂದಿರುವುದನ್ನಿಲ್ಲಿ ನಿಚ್ಚಳವಾಗಿ ನೋಡಬಹುದು.

ಪಂಪಭಾರತ ಸಂಶೋಧಕರಿಗೆ ಆಡುಂಬೊಲ. ಅದರಲ್ಲಿ ಅನೇಕ ಗಂಟುಗಳಿವೆ. 'ಪಂಪಭಾರತ ದೀಪಿಕೆ' ಅನೇಕ ಗಂಟುಗಳನ್ನು ತೆಗೆದುಹಾಕಿದೆ. ಸಿಕ್ಕುಗಳನ್ನು ಬಿಡಿಸಿದ್ದರೂ ಬಲ್ಲವರಿಗೆ ಇಲ್ಲಿ ಬೆರಗೇನೂ ಇಲ್ಲವೆಂದು ದೀಪಿಕಾಕಾರರು ಅರಿಕೆ ಮಾಡಿದ್ದಾರೆ. ಬಲ್ಲವ ರಿಗೇ ಇಲ್ಲಿನ ಬೆರಗು ಗೋಚರಿಸುವುದು. ಪಂಪಭಾರತವನ್ನು ಸ್ವಂತವಾಗಿ ವ್ಯಾಸಂಗ ಮಾಡಲಿಚ್ಛಿಸುವವರಿಗೂ ಬೋಧಿಸುವವರಿಗೂ ಇದರಿಂದ ಮಹದುಪಕಾರವಾಗಿದೆ.

ಹೀಗಿದ್ದೂ ಕೆಲವು ಕಡೆ ವ್ಯಾಖ್ಯಾನಕಾರರು ನೀಡಿರುವ ವಿವರಣೆ, ಸೂಚನೆ, ಅರ್ಥೈಸುವಿಕೆ – ಇವು ಅನುಮಾನಕ್ಕೆಡೆ ಮಾಡಿಕೊಟ್ಟಿರಬಹುದು. ಅದನ್ನು ಅವರೇ ಒಪ್ಪಿಕೊಂಡು ಹೇಳಿರುವ ಮಾತುಗಳಿವು: "ಹಲವೆಡೆಗಳಲ್ಲಿ ಭಿನ್ನಾಭಿಪ್ರಾಯಗಳಿಗೆ ಅವ ಕಾಶವಿದೆ; ನನ್ನದೇ ಸರಿಯೆಂಬ ಹಠವೇನೂ ಇಲ್ಲ. ಜಿಜ್ಞಾಸುವಿನ ದೃಷ್ಟಿಯಿಂದ ಕೆಲ ವಂಶಗಳನ್ನು ಚರ್ಚಿಸಿದೆ. ನನಗೆ ಸಂದೇಹವೆಂದು ತೋರಿದೆಡೆಗಳಲ್ಲಿ ಪ್ರಶ್ನೆ ಚಿಹ್ನೆಯನ್ನು ಧಾರಾಳವಾಗಿ ಬಳಸಿದ್ದೇನೆ; ತಿಳಿಯದ ಅಂಶಗಳಿಗೂ ಇದೇ ಚಿಹ್ನೆಯನ್ನು ಅಲ್ಲಲ್ಲಿ ಹಾಕಿದೆ. ಈ ಪ್ರಶ್ನೆ ಚಿಹ್ನೆಗಳನ್ನು ತೆಗೆದುಹಾಕುವ ಕೆಲಸ ಮುಂದಿನ ವಿದ್ವಾಂಸರಿಗೆ ಸೇರಿದುದಾಗಿದೆ. ಈ ಕ್ಷೇತ್ರದಲ್ಲಿ ಸಂಶೋಧನೆ ಮುಂದುವರಿದು ಹೊಸ ಆಧಾರಗಳು ತಲೆದೋರುವುದರಿಂದ ಸಮಸ್ಯೆಗಳ ಪರಿಹಾರ ಸಾಧ್ಯವಾಗಬಹುದು. ಇವನ್ನೆಲ್ಲ ಸಹಾನು ಭೂತಿಯಿಂದ ನೋಡಬೇಕೆಂದು ನನ್ನ ನಮ್ರತೆಯ ವಿನಂತಿ" (ಪು. xiv).

ಆಚಾರ್ಯರು ಶಬ್ದಾರ್ಥ ವ್ಯಾಖ್ಯಾನದ ಜೊತೆಗೆ ಅಲ್ಲಲ್ಲಿ ತೀರ ಅಗತ್ಯವೆಂದು ತೋರಿದೆಡೆಗಳಲ್ಲಿ ಪಂಪನ ಪ್ರತಿಭೆಯ ಪರಿಭಾವನೆಯನ್ನೂ ಸಂಗ್ರಹವಾಗಿ ನಡಸುತ್ತಾರೆ: "ಈ ಪದ್ಯದಲ್ಲಿ ಪರಶುರಾಮನ ಅಧಿಕಾರವಾಣಿ. ಅವನ ದರ್ಪ. ಸ್ವಪ್ರತಾಪದಲ್ಲಿ ನಂಬಿಕೆ, ಶಿಷ್ಯನ ವಿಧೇಯತೆಯಲ್ಲಿ ವಿಶ್ವಾಸ, ಅಂಬೆಯ ವಿಷಯವಾಗಿ ಪರಿತಾಪ, ಮದುವೆ ಶೀಘ್ರವಾಗಿ ನಡೆಯಲೆಂಬ ಉತ್ಸುಕತೆ, ಶಿಷ್ಯನು ತನ್ನ ಮಾತನ್ನು ನಡಸುತ್ತಾನೋ

ಇಲ್ಲವೋ ಎಂಬ ಸಂದೇಹ ಮುಂತಾದ ಭಾವತುಮುಲ ಒಟ್ಟಿಗೆ ಸೇರಿಕೊಂಡಿವೆ; ಚಿಕ್ಕ ವಾಕ್ಯಗಳು ಕ್ರಿಯಾವೇಗವನ್ನು ಪ್ರತಿಬಿಂಬಿಸುತ್ತವೆ" (ಪು. 30).

ಈ ದೀಪಿಕೆಯ ಬೆಳಗಿನಲ್ಲಿ ಪಂಪಭಾರತವನ್ನು ಚೆನ್ನಾಗಿ ತಿಳಿಯಬಹುದು.

ಈ ಗ್ರಂಥದಲ್ಲಿ ಎದ್ದು ಕಾಣುವ ಒಂದೇ ಕೊರತೆಯೆಂದರೆ ಮುದ್ರಣಕಾರ್ಯ ದಲ್ಲಿ ತೋರಿರುವ ತಾಟಸ್ಥ್ಯ ಅಥವಾ ಔದಾಸೀನ್ಯ. ಇಂಥದೊಂದು ಅಪೂರ್ವಗ್ರಂಥದ ಅಚ್ಚಿನ ವಿಚಾರದಲ್ಲಿ ಹೆಚ್ಚಿನ ಮುತುವರ್ಜಿ ವಹಿಸಿದ್ದರೆ ಪುಟ ಪುಟವೂ ಕಾರುವ, ನಾಲ್ಕು ಪುಟದ ಒಪ್ಪೋಲೆಗೂ ಮೀರಿದ ದೋಷಗಳು ಕಡಮೆಯಾಗಬಹುದಿತ್ತು.

**ಹರಿಹರನ ಕೃತಿಗಳು— ಒಂದು ಸಂಖ್ಯಾನಿರ್ಣಯ** (ಹಿರೇಮಲ್ಲೂರು **ಈಶ್ವರನ್**): ಕನ್ನಡದ ಮಹಾಕವಿಗಳಲ್ಲಿ ಹರಿಹರನೂ ಒಬ್ಬ. ಆತನ ರಗಳೆಗಳು ಅನೇಕ. ಹರಿಹರ ಎಷ್ಟು ರಗಳೆಗಳನ್ನು ಬರೆದಿದ್ದ ಎಂಬುದನ್ನು ಖಚಿತವಾಗಿ ಹೇಳಲು ತೊಡಕು ಗಳಿವೆ. ಹರಿಹರನ ಕಾವ್ಯಮುದ್ರಿಕೆ 'ಹಂಪೆಯ ವಿರೂಪಾಕ್ಷ'. ಈ ಮುದ್ರಿಕೆಯುಳ್ಳ ರಗಳೆಗಳೆಲ್ಲ ಹರಿಹರನವು ಎಂಬ ನಂಬಿಕೆಯಿದೆ. ಈ ಮುದ್ರಿಕೆ ಇಲ್ಲದ ಮಾತ್ರಕ್ಕೆ ಅವು ಹರಿಹರಕೃತವಲ್ಲ ಎಂಬ ಭಾವನೆ ಹೇಗೆ ಅಗ್ರಾಹ್ಯವೋ, ಹಾಗೆ ಈ ಮುದ್ರಿಕೆ ಇರುವ ರಗಳೆಗಳೆಲ್ಲ ಹರಿಹರಕೃತವೆಂದು ತಿಳಿಯುವುದೂ ತಪ್ಪಾದೀತು. ಮೂರು ಮುಖ್ಯ ಕಾರಣ ಗಳಿಂದ:

ಅ. ಒಂದು ರಗಳೆಗೆ ಒಂದಕ್ಕಿಂತ ಹೆಚ್ಚಿನ ಮುದ್ರಿಕೆಗಳು ಭಿನ್ನ ಭಿನ್ನ ಮಾತೃಕೆ ಗಳಲ್ಲಿರುತ್ತವೆ.

ಆ. ಮೂಲದ ಕಾವ್ಯಮುದ್ರಿಕೆಗಳನ್ನು ಪಲ್ಲಟಮಾಡಿ ಕೃತ್ರಿಮ ಮುದ್ರಿಕೆಗಳನ್ನು ಸೇರಿಸಲಾಗಿರುತ್ತದೆ.

ಇ. ಹರಿಹರನ ಹೆಸರಿನಲ್ಲಿ ಆತನ ಅಭಿಮಾನಿಗಳಿಂದ ರಗಳೆಯ ರಚನೆಯಾಗಿರು ತ್ತದೆ.

ಇವುಗಳಲ್ಲಿ ಮೂರನೆಯ ಕಾರಣವನ್ನು ಒತ್ತುಕೊಟ್ಟು ಗುರುತಿಸಬೇಕಾಗುತ್ತದೆ. ದಾಸರ ಕೀರ್ತನೆಗಳೂ ಶರಣರ ವಚನಗಳೂ ಸರ್ವಜ್ಞನ ವಚನಗಳೂ ಹೀಗೆ ಆಗಿರು ವುದುಂಟು. ಅಷ್ಟೇಕೆ ಹಳಗನ್ನಡ ಕಾವ್ಯಗಳಲ್ಲೂ, ಕಡೆಗೆ ವ್ಯಾಕರಣ, ಛಂದಸ್ಸು ಮೊದ ಲಾದ ಶಾಸ್ತ್ರೀಯ ಕೃತಿಗಳಲ್ಲೂ ಹೀಗೆ ಪ್ರಕ್ಷಿಪ್ತಗಳ ಸೇರ್ಪಡೆ ನಡೆದಿದೆ.

ಈ ಬಗೆಯ ತೊಡಕನ್ನು ಹರಿಹರನ ರಗಳೆಗಳ ಸಂಖ್ಯಾನಿರ್ಣಯದಲ್ಲೂ ಎದುರಿಸಬೇಕಾಗುತ್ತದೆ. ಇದು ಸಾಮಾನ್ಯ ಓದುಗರ ಸಮಸ್ಯೆಯಲ್ಲ, ನಿಜ. ವಿದ್ವತ್ ಪ್ರಪಂಚಕ್ಕೆ ಸಂಬಂಧಪಟ್ಟ ಈ ಸಿಕ್ಕನ್ನು ಬಿಡಿಸುವ ಉದ್ದೇಶದಿಂದ ರಚಿತವಾದ ಹೊತ್ತಿಗೆ ಇದು.

ಲೇಖಕರು ತಮಗೆ ದೊರೆತ ರಗಳೆಯ ಮಾತೃಕೆಗಳ ಆಧಾರದಿಂದ ಪ್ರಸ್ತುತ ಪ್ರಬಂಧದಲ್ಲಿ ಹರಿಹರ ವಿರಚಿತ ರಗಳೆಗಳ ಸಂಖ್ಯೆ 106 ಎಂದು ಅಭಿಪ್ರಾಯ ಪಟ್ಟಿ ದ್ದಾರೆ. "ಸಂಸಾರ ಹೇಯ ಎಂಬ ಹೆಸರಿನ ಒಂದು ರಗಳೆ ಹರಿಹರ ವಿರಚಿತ ಅಹುದೋ

ಅಲ್ಲವೋ ಎಂಬ ಪ್ರಶ್ನೆಗೆ ಉತ್ತರ ಹೇಳುವುದಕ್ಕೆ ಈಗ ಸಿಕ್ಕಿರುವ ಮಾತೃಕೆಗಳ ಆಧಾರ ವಷ್ಟೇ ಸಾಲದ್ದರಿಂದ" ಆ ರಗಳೆಯ ಕರ್ತೃತ್ವವನ್ನು ಅನುಮಾನದ ಪರದೆಯಲ್ಲಿರಿಸಿದ್ದಾರೆ.

ಹರಿಹರನ ರಗಳೆಗಳಲ್ಲಿ ಅಚ್ಚಾದುವನ್ನೂ ಅಪ್ರಕಟಿತವಾದುವುಗಳನ್ನೂ ಹಸ್ತಪ್ರತಿಗಳನ್ನೂ ಬಳಸಿಕೊಂಡಿದ್ದಾರೆ. ಇದು ಅಚ್ಚಿಗೆ ಸಿದ್ಧವಾದದ್ದು 1954ರಲ್ಲಿ, ಅಚ್ಚಾದದ್ದು 1971ರಲ್ಲಿ (ಜನವರಿಯಲ್ಲಿ). ಹದಿನೆಂಟು ವರ್ಷಗಳ ನಡುವಿನ ಗಡುವಿನಲ್ಲಿ ಹರಿಹರನ ಕೃತಿಗಳ ವಿಚಾರದಲ್ಲಿ ವಿಪುಲವಾದ ವಿಮರ್ಶೆ ಹೊರಬಂದಿದೆ. ಅವುಗಳಲ್ಲಿ ದೇವೀರಪ್ಪನವರ ಗ್ರಂಥವಂತೂ ಗಮನಾರ್ಹ. ಸಧ್ಯಕ್ಕಂತೂ ಅದೇ ಉಪಾದೇಯ.

ಹೀಗಾಗಿ ಈ ಗ್ರಂಥ ಅನೇಕ ವಿವರಗಳಲ್ಲಿ ಸಮಕಾಲೀನ ತೀರ್ಮಾನದ ನಿಲುವಿಗೆ ಸಿಲುಕದೆ, ನಿಲ್ಲದೆ ಹೋಗುವುದು ಸಹಜವೇ. ಹಾಗೆಂದು ಲೇಖಕರೂ ಬಲ್ಲರು: "ಈ ಪ್ರಬಂಧದಲ್ಲಿ ಹರಿಹರಕೃತ ರಗಳೆಗಳ ಸಂಖ್ಯಾನಿರ್ಣಯದ ಬಗೆಗೆ ನಾನು ವ್ಯಕ್ತಪಡಿಸಿರುವ ಅಭಿಪ್ರಾಯ ಇದಮಿತ್ಥಂ ಎಂದು ಹೇಳುವ ಧಾರ್ಷ್ಟ್ಯ ನನಗಿಲ್ಲ. ಪಂಡಿತರು ಸಾಧಾರಪೂರ್ವಕವಾಗಿ ಇದರಲ್ಲಿ ಹೆಚ್ಚು ಕಡಿಮೆ ಮಾಡಿ ತೋರಿಸಬಹುದಾದರೆ ಮಾನ್ಯವೆ."

ಲೇಖಕರು ಸಾಕಷ್ಟು ಸಂಶೋಧನೆ (?) ನಡಸಿದ್ದಾರೆ, ಬಹುವಾಗಿ ಶ್ರಮಪಟ್ಟಿದ್ದಾರೆ. ಈ ವಿಷಯದಲ್ಲಿ ಅನೇಕ ವಿದ್ವಾಂಸರ ನೆರವು ಕೂಡ ಪಡೆದಿದ್ದಾರೆ. ಆದರೆ ಅವರ ಬರೆಹ ಬಹಳ ಸರಳವಾಗಿದ್ದು ಆಳತೆಯಿಲ್ಲದೆ ಬೆಳೆದುಬಿಟ್ಟಿದೆ. ಸಂಕ್ಷಿಪ್ತತೆಗಿಂತ ವಿಸ್ತಾರದತ್ತ ಒಲವು ತೋರಿದ್ದಾರೆ. ತೀರ ಸಣ್ಣ ಸಾಮಾನ್ಯ ವಿಚಾರಗಳನ್ನೂ ಮಹತ್ತಾಗಿ ತಿಳಿದು ಲಂಬಿಸಿಬಿಡುತ್ತಾರೆ. ಹರಿಹರಕೃತ ರಗಳೆಗಳ ನಿರ್ಧಾರ ಎಂಬ ಅಧ್ಯಾಯ ಅಣುವನ್ನು ಬ್ರಹ್ಮಾಂಡವಾಗಿ ಪರಿಗಣಿಸುವುದು ಹೇಗೆಂಬುದಕ್ಕೆ ಪ್ರಮಾಣವಾಗಿದೆ. ಇಲ್ಲೆಲ್ಲ ಪ್ರಾರಂಭದ ಅಧ್ಯಾಯಗಳಲ್ಲಿ ಬಂದ ಪ್ರಸ್ತಾಪವೇ ಪುನಃಪುನಃ ಬಂದು ಪುನರುಕ್ತಿಯ ದೋಷಕ್ಕೆ ಪಕ್ಕಾಗಿದೆ.

ಹೊಸದಲ್ಲದ ಅಂಶಗಳನ್ನು ಹೆಚ್ಚಾಗಿ ಹೊತ್ತಿರುವುದರಿಂದ ಸಂಶೋಧನೆಯ ಮಟ್ಟ ಕಡಮೆ ಆಗಿದೆ.

# ಇತಿಹಾಸ, ಸಂಸ್ಕೃತಿ ಮತ್ತು ವಿಶ್ವಕೋಶ

## ಎಂ. ಚಿದಾನಂದ ಮೂರ್ತಿ

ಈ ಪರಿವೀಕ್ಷಣೆಯಲ್ಲಿ ಇತಿಹಾಸ, ಸಂಸ್ಕೃತಿಗಳಿಗೆ ಸಂಬಂಧಿಸಿದ ಆರು ಗ್ರಂಥಗಳು, ಒಂದು ವಿಶ್ವಕೋಶ ಸೇರ್ಪಡೆಯಾಗಿವೆ. ಆರು ಗ್ರಂಥಗಳಲ್ಲಿ ಎರಡು ಪಠ್ಯಗ್ರಂಥಗಳ ರೀತಿಯವು; ಒಂದು ಅನೇಕ ಗ್ರಂಥಗಳ ಸಾರಾಂಶ ರೀತಿಯದು; ಒಂದು ಅನುವಾದಿತ; ಎರಡು ಸ್ವತಂತ್ರ ಕೃತಿಗಳು. ಮೊದಲು ಒಟ್ಟು ಭಾರತಕ್ಕೆ ಸಂಬಂಧಿಸಿದ ಕೃತಿಗಳನ್ನು ಪರಿಶೀಲಿಸಿ, ಬಳಿಕ ಕರ್ನಾಟಕಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪರಿಶೀಲಿಸಲಾಗುತ್ತದೆ. ಕೊನೆಯಲ್ಲಿ ವಿಶ್ವಕೋಶ ಬರುತ್ತದೆ.

**ಯುಗಯಾತ್ರೀ ಭಾರತೀಯ ಸಂಸ್ಕೃತಿ** – ಸಂಪುಟ 2: ಇದು ಕಲ್ಕತ್ತೆಯ ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್ ಸಂಸ್ಥೆ ಪ್ರಕಟಿಸಿದ Cultural Heritage of India ಗ್ರಂಥಮಾಲಿಕೆಯ ಎರಡನೆಯ ಸಂಪುಟದ 'ಕನ್ನಡ ಅವತಾರ'. ಅನುವಾದವನ್ನು 'ಅವತಾರ'ವೆಂದು ಪ್ರಕಾಶಕರು ಹೆಸರಿಸಿ ಅವತಾರ ಎಂಬ ಮಾತಿನ ಅರ್ಥಗಾಂಭೀರ್ಯಕ್ಕೆ ಚ್ಯುತಿಯನ್ನು ತಂದಿರುವುದಲ್ಲದೆ ಶ್ರೀ ರಾಮಕೃಷ್ಣ ಮಹಾಸಂಘ, ರಾಮಕೃಷ್ಣ ಪರಮಹಂಸರ ಬಗ್ಗೆ, ಕನ್ನಡ ಮಾಧ್ಯಮದ ಬಗ್ಗೆ ಅನಗತ್ಯ ಪ್ರಚಾರ ಮಾಡಲು ಹೊರಟಂತೆ ತೋರುತ್ತದೆ. ವಸ್ತುನಿಷ್ಠ ಇತಿಹಾಸ ಗ್ರಂಥದ ಆರಂಭದಲ್ಲಿ ಆವೇಶದ, ಆಡಂಬರದ ಮಾತುಗಳು ಸೊಗಸುವುದಿಲ್ಲ. ಈ ಕನ್ನಡ ಗ್ರಂಥಕ್ಕೆ ಬಹು ಉಚಿತವಾದ ನಾಮಕರಣವನ್ನು ಮಾಡಿದ್ದಾರೆ ಕೆ. ವಿ. ಪುಟ್ಟಪ್ಪನವರು.

ಭಾರತೀಯರಿಂದಲೇ ಭಾರತೀಯ ಸಂಸ್ಕೃತಿಯ ವ್ಯಾಖ್ಯಾನ ಈ ಪ್ರಮಾಣದಲ್ಲಿ ಬಂದಿರುವುದು ಇದೇ ಮೊದಲು (ಇಂಗ್ಲಿಷ್ ಮೂಲ–1937). Cultural Heritage of India ಮಾಲಿಕೆಗೆ ಬೊಂಬಾಯಿನ ಭಾರತೀಯ ವಿದ್ಯಾಭವನ ಪ್ರಕಟಿಸಿರುವ ಭಾರತೀಯ ಇತಿಹಾಸ ಗ್ರಂಥಮಾಲಿಕೆ (ಪ್ರಥಮ ಸಂಪುಟ – 1951) ಒಂದು ರೀತಿಯಲ್ಲಿ ಪೂರಕ. ಒಂದರಲ್ಲಿ ಸಾಂಸ್ಕೃತಿಕ ಇತಿಹಾಸಕ್ಕೆ ಪ್ರಾಧಾನ್ಯ; ಮತ್ತೊಂದರಲ್ಲಿ ರಾಜಕೀಯ ಇತಿಹಾಸಕ್ಕೆ ಪ್ರಾಧಾನ್ಯ.

ಈ ಎರಡನೆಯ ಸಂಪುಟ ಇತಿಹಾಸಗಳು, ಪುರಾಣಗಳು, ಧರ್ಮ ಮತ್ತು ಇತರ ಶಾಸ್ತ್ರಗಳನ್ನು ಒಳಗೊಂಡಿದೆ. ಅತ್ಯಂತ ಸುಪ್ರಸಿದ್ಧ, ಶ್ರೇಷ್ಠ ವಿದ್ವಾಂಸರು ಭಾರತೀಯ ಸಂಸ್ಕೃತಿಯ ನಾನಾ ಮುಖಗಳ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ. ಕೆ. ಕೆ. ಹಂದಿಕಿ, ಎ.ಡಿ. ಪುಸಲ್ಕರ್, ಸಿ.ಎಲ್. ವೈದ್ಯ, ಆರ್.ಎನ್. ದಾಂಡೇಕರ್, ಯು.ಎನ್. ಘೋಷಾಲ್ ಕೆ. ಎ. ನೀಲಕಂಠ ಶಾಸ್ತ್ರೀ ಮುಂತಾದ ಮಹನೀಯರ ಲೇಖನಗಳು ಇಲ್ಲಿವೆ. ಇವರ ಇಂಗ್ಲಿಷ್ ಲೇಖನಗಳನ್ನು ಅನುವಾದಿಸಿರುವವರಲ್ಲಿ ಎಲ್ಲರೂ ಭಾರತೀಯ ಸಂಸ್ಕೃತಿಯನ್ನು ಅಧ್ಯಯನ ಮಾಡಿದವರು ಮತ್ತು ಲೇಖನ ವ್ಯವಸಾಯದಲ್ಲಿ ಪಳಗಿದವರು.

ಇದರಿಂದ ಶ್ರೇಷ್ಠ ಗ್ರಂಥವೊಂದರ ಶ್ರೇಷ್ಠ ಕನ್ನಡಾವತರಣಿಕೆ ('ಅವತರಣಿಕೆ' ಪ್ರಯೋಗ ಕ್ಷಮ್ಯ) ಕನ್ನಡಿಗರಿಗೆ ಲಭ್ಯವಾಗಿದೆ. ಅದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯವನ್ನೂ, ಪ್ರಸಾರಾಂಗದ ನಿರ್ದೇಶಕ ಪ್ರಭುಶಂಕರ ಅವರನ್ನೂ ಅಭಿನಂದಿಸಬೇಕು.

'ಯುಗಯಾತ್ರೀ ಭಾರತೀಯ ಸಂಸ್ಕೃತಿ'ಯ ಮೊದಲ ಸಂಪುಟ ಭಾರತದ ಇತಿಹಾಸಪೂರ್ವಯುಗದಿಂದ ಆರಂಭಿಸಿ ಸೈಂಧವ ಕಣಿವೆ ಸಂಸ್ಕೃತಿ, ವೈದಿಕ ಯುಗ, ಬೌದ್ಧ ಜೈನ ಧರ್ಮಗಳ ಕಾಲದ ವರೆಗಿನ ಚಿತ್ರವನ್ನು ಕೊಡುತ್ತದೆ. ಅಲ್ಲಿಂದ ಮುಂದಿನ ಚಿತ್ರ ಈ ಎರಡನೆಯ ಸಂಪುಟದಲ್ಲಿ ದೊರಕುತ್ತದೆ. ಪ್ರಾರಂಭದಲ್ಲಿ ಬರುವ ರಾಮಾಯಣ ಮತ್ತು ಮಹಾಭಾರತಗಳನ್ನು ಕುರಿತಾದ ಏಳು ಲೇಖನಗಳು ಅತ್ಯಂತ ಉದ್ಬೋಧಕ ವಾಗಿವೆ. ಆ ಕೃತಿಗಳ ಮೂಲವಸ್ತು. ಅವು ಕ್ರಮೇಣ ಪ್ರಕ್ಷೇಪಗಳನ್ನು ಮೈಗೂಡಿಸಿ ಕೊಂಡು ಬೆಳೆದದ್ದು, ಕಥಾಪ್ರಭೇದಗಳು. ಭಾರತೀಯ ಜನಜೀವನ ಮತ್ತು ಸಾಹಿತ್ಯ ಗಳ ಮೇಲೆ ಆ ಮಹಾಕಾವ್ಯಗಳು ಬೀರಿರುವ ಅಚ್ಚಳಿಯದ ಪ್ರಭಾವ ಇವೆಲ್ಲವನ್ನೂ ಅಲ್ಲಿ ವಿಸ್ತಾರವಾಗಿ ಚರ್ಚಿಸಿದೆ. ಆಗ್ನೇಯ ಏಷ್ಯಾದ ಮೇಲೆ ಅವು ಬೀರಿರುವ ಪ್ರಭಾವ ಒಂದು ಅಧ್ಯಾಯದ ವಸ್ತು. ಜಾವಾದ ರಾಮಾಯಣ ಕಥಾಂತರವೊಂದರಲ್ಲಿ ಸೀತೆ ರಾವಣನ ಚಿತ್ರಪಟವನ್ನು ಅನುದ್ದೇಶಪೂರ್ವಕವಾಗಿ ಇಟ್ಟುಕೊಂಡದ್ದು ಅವಳ ಮತ್ತು ರಾಮನ ಮಧ್ಯೆ ವಿರಸ ಬೆಳೆಯಲು ಕಾರಣವಾಯಿತೆಂದಿದೆ. ಇಂತಹ ಒಂದು ಕತೆ ಭಾರತೀಯ ಜಾನಪದದಲ್ಲೂ ಉಂಟೆಂಬುದನ್ನು ಇಲ್ಲಿ ನೆನೆಯಬಹುದು.

ಭಗವದ್ಗೀತೆ ಭಾರತೀಯ ಗ್ರಂಥಗಳಲ್ಲೆಲ್ಲ ಅತ್ಯಂತ ಸುಪ್ರಸಿದ್ಧವಾದುದು. ಅದು ಭಾರತೀಯರ ಆಧ್ಯಾತ್ಮಿಕ ಜೀವನವನ್ನು ಉದ್ದಕ್ಕೂ ರೂಪಿಸುತ್ತಿರುವ ಮಹಾ ಗ್ರಂಥ. ಆದರೆ, ವಿದ್ವಾಂಸರಿಗೆ ಅದು ಅನೇಕ ಸಮಸ್ಯೆಗಳನ್ನೂ ಹುಟ್ಟಿಸಿದೆ. ಇವೆಲ್ಲವುಗಳ ಜೊತೆಗೆ ಅದನ್ನು ಅನುಸರಿಸಿ ಹುಟ್ಟಿದ ಅನೇಕ 'ಗೀತೆ'ಗಳನ್ನೂ (ಉದಾ: ಬ್ರಾಹ್ಮಣಗೀತಾ, ಮನು ಗೀತಾ, ಸೂರ್ಯಗೀತಾ) ಇಲ್ಲಿ ಪರಿಚಯ ಮಾಡಿಕೊಟ್ಟಿದೆ.

ವಿದ್ವಾಂಸರಿಂದ ಮೊನ್ನೆಮೊನ್ನೆಯವರೆಗೆ ಅನಾದರಿತವಾಗಿದ್ದ ಭಾಗವೊಂದು ಸಂಸ್ಕೃತದಲ್ಲಿದ್ದಿತು: ಅದೇ ಪುರಾಣಗಳು. ಪುರಾಣಗಳನ್ನು 'ಪುರಾತನರ ಭಾಷೆ'ಯೆಂದು ಕರೆಯುವುದುಂಟು. ಕತೆಗಳ ಮೂಲಕ ಜಗತ್ತನ್ನು ಅರ್ಥ ಮಾಡಿಕೊಳ್ಳುವ, ಮಾಡಿ ಕೊಡುವ ಪ್ರಯತ್ನ ಪುರಾಣಗಳಲ್ಲಿದೆ. ಜೊತೆಗೆ, ವೇದಾಧ್ಯಯನಕ್ಕೆ ಅನರ್ಹರಾದ 'ಸ್ತ್ರೀ, ಶೂದ್ರ'ರ ಬೋಧೆಗಾಗಿ ಪುರಾಣಗಳು ಹುಟ್ಟಿವೆ ಎಂಬ ನಂಬಿಕೆಯೂ ಉಂಟು. ಪುರಾಣ ವಿಭಾಗದಲ್ಲಿ ಬಂದಿರುವ ಆರ್. ಎನ್. ದಾಂಡೇಕರ್ ಅವರ 'ಭಾರತೀಯ ಪುರಾಣ ಸಾಹಿತ್ಯ' ಒಂದು ಮೌಲಿಕ ಪ್ರಬಂಧ.

ಮುಂದಿನ ಅಧ್ಯಾಯಗಳಲ್ಲಿ ಧರ್ಮಸೂತ್ರಗಳು, ಪ್ರಾಯಶ್ಚಿತ್ತ ಮತ್ತು ವ್ರತಗಳು, ಸಂಸ್ಕಾರಗಳ ವಿಷಯ ಬಂದಿವೆ. ಹಿಂದೂ ಸಾಮಾಜಿಕ. ರಾಜಕೀಯ ವ್ಯವಸ್ಥೆಗಳ ಅಧ್ಯಾ ಯಗಳು ಗಮನಾರ್ಹವಾಗಿವೆ. ಈ ಅಧ್ಯಾಯಗಳ ಮಧ್ಯೆ ತಮಿಳಿನ "ತಿರುಕ್ಕುರಳ್"

ಗ್ರಂಥಕ್ಕೇ ಒಂದು ಪ್ರತ್ಯೇಕ ಅಧ್ಯಾಯ ಮೀಸಲಾಗಿರುವುದು ಆಶ್ಚರ್ಯ. ಅಂತಹ ಗ್ರಂಥಗಳು ಬೇರೆ ದೇಶೀಯ ಭಾಷೆಗಳಲ್ಲೂ ಉಂಟು. ಮಧ್ಯಯುಗದ ಭಾರತದ ಸಾಮಾಜಿಕ ಸುಧಾರಕರ ಬಗ್ಗೆ ಒಂದು ಪ್ರತ್ಯೇಕ ಅಧ್ಯಾಯವಿದೆ. ಅದರಲ್ಲಿ ಉಲ್ಲೇಖವಾಗಿರುವ ಅನೇಕರು ಮುಖ್ಯವಾಗಿ ಭಕ್ತರು ಅಷ್ಟೇ. ಸಮಾಜ ಸುಧಾರಕರಾಗಿ ಬಸವಣ್ಣನವರ ಹೆಸರು ಬಂದಿದ್ದರೂ, ಕರ್ನಾಟಕದಲ್ಲಿ ನಡೆದ ಸಾಮಾಜಿಕ ಕ್ರಾಂತಿಗೆ ಸಿಗಬೇಕಾದಷ್ಟು ಸ್ಥಾನ ಇಲ್ಲಿ ಸಿಕ್ಕಿಲ್ಲ. 1962ರಲ್ಲಿ ಇಂಗ್ಲಿಷ್ ಗ್ರಂಥದ ಎರಡನೆಯ ಸಂಪುಟ ಪರಿಷ್ಕೃತವಾದಾಗ, ಆ ಕೊರತೆಯನ್ನು ಹೋಗಲಾಡಿಸಲವಕಾಶವಿದ್ದಿತು. 'ಹಿಂದೂ ಆರ್ಥಿಕ ವಿಚಾರಗಳು' ಲೇಖನವನ್ನು ಅನುವಾದಿಸಿರುವವರು ಲೇಖನದ ಕೊನೆಯಲ್ಲಿ ಪಟ್ಟಿ ಮಾಡಿರುವ ಇಂಗ್ಲಿಷ್ ಗ್ರಂಥಗಳನ್ನೂ ಅನುವಾದಿಸಿ ಕೊಟ್ಟಿರುವುದು ಸರಿಯಲ್ಲ. ಈ ಬಗ್ಗೆ ಸಂಪಾದಕರು ಎಚ್ಚರ ವಹಿಸಬೇಕಿದ್ದಿತು.

ಈ ಪುಸ್ತಕದ ದೊಡ್ಡ ಕೊರತೆಯೆಂದರೆ ಗ್ರಂಥದ ಕೊನೆಯಲ್ಲಿ ಶಬ್ದಸೂಚಿಯಿಲ್ಲದಿರುವುದು. (ಮೂಲ ಗ್ರಂಥಕ್ಕೆ ವಿಸ್ತಾರವಾದ ಶಬ್ದಸೂಚಿಯಿದೆ.) ಸರಿಯಾದ ಶಬ್ದಸೂಚಿಯಿಲ್ಲದಿದ್ದರೆ ಇಂತಹ ಪುಸ್ತಕದ ಉಪಯುಕ್ತತೆ ಬಹಳ ಕಡಮೆಯಾಗುತ್ತದೆ.

'ಯುಗಯಾತ್ರೀ ಭಾರತೀಯ ಸಂಸ್ಕೃತಿ' ಭಾರತೀಯ ಶಾಸ್ತ್ರದ (Indology) ವಿದ್ಯಾರ್ಥಿಗಳಿಗೆ ಒಂದು ಉತ್ತಮ ಸಂದರ್ಭಗ್ರಂಥ. ಅದರ ಅನುವಾದ ಮೂಲಕ್ಕೆ ಭಂಗವನ್ನು ತಂದಿಲ್ಲ. ಅಚ್ಚಿನ ದೋಷಗಳು ಕನಿಷ್ಠ ಸಂಖ್ಯೆಯಲ್ಲಿವೆ. ಅಚ್ಚು ಮಾಡಿಸಿರುವ ರೀತಿ, ಪುಸ್ತಕದ ಹೊರನೋಟ (ಇದೂ ಮೂಲಗ್ರಂಥದಂತೆಯೇ ಇದೆ) ಎಲ್ಲವೂ ಪ್ರಥಮ ವರ್ಗದವು. ಇಂತಹ ಗ್ರಂಥಗಳ ಪ್ರಕಟಣೆ ಕನ್ನಡದ ಶ್ರೀಮಂತಿಕೆಯನ್ನು, ಅದರ ನಿಜವಾದ ಅರ್ಥದಲ್ಲಿ, ಹೆಚ್ಚಿಸುತ್ತದೆ.

**ಸಾಂಸ್ಕೃತಿಕ ಬೃಹದ್ಭಾರತ:** ಭಾರತ ತನ್ನ ಪೂರ್ವದೇಶಗಳಾದ ಬರ್ಮಾ, ಥೈಲ್ಯಾಂಡ್, ಇಂಡೋನೇಷಿಯ, ಮಲೇಷಿಯ, ವಿಯೆಟ್ನಾಂ ಮುಂತಾದ ದೇಶಗಳ ಮೇಲೆ ಬೀರಿದ ಅಪಾರವಾದ ಪ್ರಭಾವ ಅದರ ಸಾಂಸ್ಕೃತಿಕ ಇತಿಹಾಸದ ಒಂದು ಉಜ್ವಲ ಅಧ್ಯಾಯ. 'ಸಾಂಸ್ಕೃತಿಕ ಬೃಹದ್ಭಾರತ' ಎಂಬ ಶೀರ್ಷಿಕೆ ಗಮನಿಸಬೇಕಾದ್ದು. ಇಂದಿನ 'ಭಾರತ' 1947ಕ್ಕಿಂತ ಹಿಂದಿನದಕ್ಕಿಂತ ಕುಗ್ಗಿಹೋಗಿದೆ. ಏಕೆಂದರೆ ಪಶ್ಚಿಮ ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳು ಅದರಿಂದ ಸಿಡಿದು ನಿಂತಿವೆ. ಇದು ರಾಜಕೀಯ ಭಾರತದ ವಿಷಯವಾಯಿತು. ಸಾಂಸ್ಕೃತಿಕವಾಗಿ ನೋಡಿದಾಗ ಭಾರತದ ನಕ್ಷೆ ಇನ್ನೂ ವಿಶಾಲವಾದುದು, ಗ್ರಂಥ ಲೇಖಕ ಎ. ವಿ. ನರಸಿಂಹಮೂರ್ತಿಯವರ ಪ್ರಕಾರ. ಅದರಂತೆ ಸಾಂಸ್ಕೃತಿಕ ಬೃಹದ್ಭಾರತವು ಈಗಿನ ಭಾರತ, ಪಶ್ಚಿಮ ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳನ್ನು ಕೇಂದ್ರವಾಗಿ ಹೊಂದಿ, ಸುತ್ತಮುತ್ತಣ ಬರ್ಮಾ, ಥೈಲ್ಯಾಂಡ್, ಇಂಡೊನೇಷಿಯ, ಮಲಯೇಷಿಯ, ಕ್ಯಾಂಬೋಡಿಯ, ವಿಯೆಟ್ನಾಂ, ಸಿಂಹಳ. ನೇಪಾಳ, ಚೀನಾ (ಟಿಬೆಟ್ ಸೇರಿದಂತೆ), ಅಫ್ಘಾನಿಸ್ತಾನಗಳನ್ನು ಒಳಗೊಳ್ಳುತ್ತದೆ. ಒಂದು ಕಾಲಕ್ಕೆ ಇಲ್ಲೆಲ್ಲ ಒಂದು 'ಸಂಸ್ಕೃತಿ'ಯು ವ್ಯಾಪಿಸಿದ್ದಿತು ಅಥವಾ ಆ 'ಸಂಸ್ಕೃತಿ'ಯ

ಪ್ರಭಾವ ಮುದ್ರೆ ಸ್ಪಷ್ಟವಾಗಿದ್ದಿತು. ಅದು ಪ್ರಧಾನವಾಗಿ 'ಭಾರತೀಯ'ವಾಗಿದ್ದು ದರಿಂದ, ಅವೆಲ್ಲ ದೇಶಗಳನ್ನೂ ಸಾಂಸ್ಕೃತಿಕ ಬೃಹದ್ಭಾರತವೆಂದು ಕರೆದು, ಅಲ್ಲಿಯ ಸಂಸ್ಕೃತಿಗಳ ಭಾರತೀಯತೆಯನ್ನು ಪರಿಚಯ ಮಾಡಿಕೊಟ್ಟಿದ್ದಾರೆ ಎ. ವಿ. ನರಸಿಂಹ ಮೂರ್ತಿಯವರು.

ಈ ವಿಷಯವನ್ನು ಕುರಿತು ಇಲ್ಲಿಯವರೆಗೆ ಇಂಗ್ಲಿಷಿನಲ್ಲಿ (ಮತ್ತು ಫ್ರೆಂಚ್, ಡಚ್ ಭಾಷೆಗಳಲ್ಲಿ) ಗ್ರಂಥಗಳು ರಚಿತವಾಗಿದ್ದುವು. ಕನ್ನಡದಲ್ಲಿ ಪ್ರಾಸಂಗಿಕವಾಗಿ ಅಲ್ಲಿ ಇಲ್ಲಿ ಉಲ್ಲೇಖಗಳು ಬಂದಿದ್ದುವು: ಒಂದೆರಡು ಲೇಖನಗಳೂ ಪ್ರಕಟವಾಗಿದ್ದುವು. ಆ ವಿಷಯದ ಬಗ್ಗೆ ಒಂದು ಸಮಗ್ರ ಗ್ರಂಥವನ್ನೇ ಬರೆದು ಹೊರತಂದಿರುವುದು ಸ್ವಾಗತಾರ್ಹವಾಗಿದೆ.

ಈ ಗ್ರಂಥದಲ್ಲಿ ಒಟ್ಟು ಹದಿನಾಲ್ಕು ಅಧ್ಯಾಯಗಳಿವೆ. ಮೊದಲ ಎರಡು ಅಧ್ಯಾಯ ಗಳಲ್ಲಿ ವಿಷಯ ಪ್ರವೇಶ ಮತ್ತು ಸಾಂಸ್ಕೃತಿಕ ಬೃಹದ್ಭಾರತದಲ್ಲಿ ಸಮಾವೇಶಗೊಳ್ಳುವ ದೇಶಗಳ ಭೂಗೋಳ ಮತ್ತು ಪೂರ್ವೇತಿಹಾಸಗಳು ನಿರೂಪಿತವಾಗಿವೆ. ಮುಂದಿನ ಹತ್ತು ಅಧ್ಯಾಯಗಳಲ್ಲಿ ಬೇರೆ ಬೇರೆ ದೇಶಗಳ ರಾಜಕೀಯ, ಸಾಂಸ್ಕೃತಿಕ ಇತಿಹಾಸಗಳು, ವಿಶೇಷವಾಗಿ ಭಾರತೀಯ ಸಂಸ್ಕೃತಿಗೆ ಸಂಬಂಧಿಸಿದಂತೆ, ಬಂದಿವೆ. ಕೊನೆಯ ಎರಡು ಅಧ್ಯಾಯಗಳು ರಾಜ್ಯಭಾರ ಕ್ರಮ ಮತ್ತು ವಾಸ್ತುಶಿಲ್ಪಗಳಿಗೆ ಮೀಸಲಾಗಿವೆ.

ಮೊದಲ ಅಧ್ಯಾಯದಲ್ಲಿ "ಬೃಹದ್ಭಾರತ ಎನ್ನುವುದು ಕೇವಲ ಸಂಸ್ಕೃತಿಯ ದೃಷ್ಟಿಯಿಂದ ಮಾತ್ರ. ಭೌಗೋಳಿಕ ಅರ್ಥವ್ಯಾಪ್ತಿ ಅದಕ್ಕೆ ಇಲ್ಲ" ಎಂದು ತಮ್ಮ ಗ್ರಂಥದ ಉದ್ದೇಶವನ್ನು ಸ್ಪಷ್ಟಪಡಿಸಿ, ಬೃಹದ್ಭಾರತದ ಸಂಸ್ಕೃತಿಯ ಬಗ್ಗೆ ಕೆಲಸ ಮಾಡಿರುವ, ವಿಶೇಷವಾಗಿ ಫ್ರೆಂಚ್, ಡಚ್, ಭಾರತೀಯ ವಿದ್ವಾಂಸರನ್ನು ಹೆಸರಿಸಿದ್ದಾರೆ. ಆಯಾ ದೇಶಗಳ ಭೂಶೋಧನೆ, ಶಾಸನಗಳು, ದೇವಾಲಯಗಳು, ಗ್ರಂಥಗಳು ಇತ್ಯಾದಿ ಗಳು ಅಂತಹ ಅಧ್ಯಯನಕ್ಕೆ ವಿಶೇಷ ಸಾಮಗ್ರಿಯನ್ನು ಒದಗಿಸುತ್ತವೆ. ಉದಾಹರಣೆಗೆ ಜಾವಾದ ಇತಿಹಾಸವನ್ನರಿಯಲು 'ನಗರಕೃತಾಗಮ', 'ಪರರತನ್' ಎಂಬ ಗ್ರಂಥ ಗಳು, ಜಾವ ಮತ್ತು ಬಲಿ ದ್ವೀಪಗಳ ಇತಿಹಾಸವನ್ನರಿಯಲು ಜಾವ ಭಾಷೆಯಲ್ಲಿ ಬರೆದ 'ರಾಮಾಯಣ', 'ಮೇಘಾಂತಕ', 'ಭೌಮ ಕಾವ್ಯ' ಮುಂತಾದ ಕೃತಿಗಳು, ಸಿಂಹಳ ದ್ವೀಪದ ಇತಿಹಾಸವನ್ನು ತಿಳಿಯಲು 'ದೀಪವಂಶ', 'ಮಹಾವಂಶ', 'ಚೂಲವಂಶ' ಗಳೆಂಬ ಕೃತಿಗಳು ಸಹಾಯಕವಾಗಿವೆ. ಕಂಬುಜದ (ಈಗಿನ ಕ್ಯಾಂಬೋಡಿಯ) ಪ್ರಾಚೀನ ಚರಿತ್ರೆಗೆ ಸಂಬಂಧಿಸಿದಂತೆ ಸುಮಾರು ಮುನ್ನೂರು ನಾಗರೀಲಿಪಿಯ ಸಂಸ್ಕೃತ ಶಾಸನ ಗಳು ದೊರಕಿವೆ.

ಪ್ರಾಚೀನ ಭಾರತೀಯರು ಕಡಲಾಚೆಯ ದೇಶಗಳಿಗೆ ಹೋಗಿ ಅಲ್ಲಿ ನೆಲಸಲು ಕಾರಣಗಳೇನಿರಬಹುದು ಎಂಬ ಪ್ರಶ್ನೆಯ ಜೊತೆಗೆ, ಹಾಗೆ ನೆಲಸಿದವರು ಭಾರತದ ಯಾವ ಪ್ರದೇಶಕ್ಕೆ ಸೇರಿದವರು ಎಂಬುದೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಈ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವುದನ್ನು ನರಸಿಂಹಮೂರ್ತಿಯವರು

ಚರ್ಚಿಸಿ, ವಲಸೆಗಾರರು ಮುಖ್ಯವಾಗಿ ತಮಿಳುನಾಡಿನವರಾಗಿದ್ದರೂ, ಭಾರತದ ನಾನಾ ಭಾಗಗಳಿಂದಲೂ (ಬಂಗಾಳ, ಆಂಧ್ರ, ಕರ್ನಾಟಕ) ವಲಸೆಗಾರರು ಹೋಗಿದ್ದಿರಬಹು ದೆಂಬ ತೀರ್ಮಾನಕ್ಕೆ ಬರುತ್ತಾರೆ.

ಮೂರನೆಯ ಅಧ್ಯಾಯದಿಂದ ಮುಂದಕ್ಕೆ ಒಂದೊಂದು ದೇಶವನ್ನು ಆರಿಸಿ ಕೊಂಡು, ಆ ದೇಶದ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಇತಿಹಾಸಗಳಲ್ಲಿ ಭಾರ ತೀಯ ಸಂಸ್ಕೃತಿಯ ಪ್ರಭಾವವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಕಂಬುಜದ ಕತೆಗಳ ಪ್ರಕಾರ ಆ ರಾಜ್ಯಸ್ಥಾಪಕ ಆರ್ಯದೇಶದಿಂದ ಬಂದ ಕಂಬು ಸ್ವಾಯಂಭುವ ಎಂಬ ಶಿವಭಕ್ತ. ಈ ರಾಜವಂಶದವರ ಮನೆದೇವತೆ ಭದ್ರೇಶ್ವರ ಶಿವ. ಈ ರಾಜವಂಶ ದಲ್ಲಿ ಕ್ರಿ. ಶ. 802–54ರ ವರೆಗೆ ಆಳಿದ ಎರಡನೆಯ ಜಯವರ್ಮ ಅತ್ಯಂತ ಸಮರ್ಥ. ಇವನೇ ಆಂಗ್ಕೋರ್ ಪಟ್ಟಣದ ಸುಪ್ರಸಿದ್ಧ ದೇವಾಲಯವನ್ನು ಸ್ಥಾಪಿಸಿದವನು.

ಈ ವಂಶದ ರಾಜರು ಮರಣಾನಂತರ ಎರಡನೆಯ ಹೆಸರನ್ನು ಪಡೆಯುತ್ತಿದ್ದ ಸಂಗತಿ ವಿಲಕ್ಷಣವಾದುದು. ಉದಾಹರಣೆಗೆ, ಮೇಲೆ ಹೇಳಿದ ಜಯವರ್ಮ ಮರಣಾ ನಂತರ ಪರಮೇಶ್ವರ ಎಂಬ ಹೆಸರನ್ನು, ಇವನ ಮಗ ಮೂರನೆಯ ಜಯವರ್ಮ (854–77) ವಿಷ್ಣುಲೋಕ ಎಂಬ ಹೆಸರನ್ನು ಪಡೆದರು. ಕ್ರಿ. ಶ. 908 ರಲ್ಲಿ ಮಡಿದ ಯಶೋಲೋಕ 'ಪರಮ ಶಿವಲೋಕ' ಎಂಬ ಹೆಸರನ್ನು ಪಡೆದ.

ಕಂಬುಜದ ಸಾಮಾನ್ಯ ಜನಜೀವನದ ಮೇಲೂ ಭಾರತೀಯ ಸಂಸ್ಕೃತಿಯ ಪ್ರಭಾವ ಅಪರಿಮಿತವಾಗಿದ್ದಿತು. ಅವರು ಶೈವ (ಪಾಶುಪತ), ವೈಷ್ಣವ, ಬೌದ್ಧ ಧರ್ಮಗಳಿಗೆ ಸೇರಿದವರಾಗಿದ್ದರು. ಅನೇಕ ಸ್ತ್ರೀಯರು ವಿದ್ಯಾವತಿಯರಾಗಿದ್ದುದು ಮಾತ್ರವಲ್ಲದೆ, ಬೌದ್ಧಮಠಗಳಲ್ಲಿ ಪ್ರಾಧ್ಯಾಪಕಿಯರೂ ಆಗಿದ್ದರು. ವಿವಿಧ ಮತಗಳ 'ಆಶ್ರಮ'ಗಳಲ್ಲಿ ಪುಸ್ತಕ ಭಂಡಾರಗಳಿದ್ದು, ಅಲ್ಲಿ ಅಧ್ಯಯನ ಅಧ್ಯಾಪನಗಳು ನಡೆಯು ತ್ತಿದ್ದುವು.

ಚಂಪಾರಾಜ್ಯ (ಈಗಿನ ವಿಯೆಟ್ನಾಮ್) ದಲ್ಲಿ ಕ್ರಿ. ಶ. 2ನೆಯ ಶತಮಾನದಲ್ಲಿ ಹಿಂದೂಗಳು ಬಂದು ನೆಲಸಿದಂತೆ ಕಾಣುತ್ತದೆ. ಇಲ್ಲಿ ಆಳಿದ ಪಾಂಡುರಂಗ ವಂಶ, ಭೃಗು ವಂಶದ ದೊರೆಗಳು ಹಿಂದೂಗಳಾಗಿದ್ದರು. ಈ ರಾಜರು, ಭಾರತದ ಪದ್ಧತಿಯನ್ನನು ಸರಿಸಿ ತಮ್ಮ ಹೆಸರಿನಲ್ಲಿ ಈಶ್ವರ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. (ಉದಾ ಹರಣೆಗೆ, ಭದ್ರವರ್ಮನು ಭದ್ರೇಶ್ವರ ಲಿಂಗ ಇತ್ಯಾದಿ). ಇದು ದಕ್ಷಿಣ ಭಾರತಕ್ಕೆ ವಿಶಿಷ್ಟವಾದ ಪದ್ಧತಿಯಾಗಿರುವಂತೆ ತೋರುತ್ತದೆ. ಇಲ್ಲಿಯ ಶಾಸನಗಳಲ್ಲಿ ಲಕ್ಷ್ಮಿಗೆ ಪ್ರಾಧಾನ್ಯವಿದ್ದಿತು. ವಿವಾಹ ಕರ್ಮಗಳಲ್ಲಿ ಬ್ರಾಹ್ಮಣರದು ಪ್ರಧಾನ ಪಾತ್ರವಾಗಿದ್ದಿತು. ಸಹಗಮನ ಪದ್ಧತಿಯು ರೂಢಿಯಲ್ಲಿದ್ದು, ಸಹಗಮನ ಮಾಡದೆ ಉಳಿದ ವಿಧವೆಯರು ತಲೆಯ ಕೂದಲನ್ನು ಬಾಚಿಕೊಳ್ಳುತ್ತಿರಲಿಲ್ಲ.

ಮಲಯ ದ್ವೀಪಸ್ತೋಮದಲ್ಲಿ ಜಾವದ್ವೀಪ (ಯವದ್ವೀಪ) ಭಾರತೀಯ ಸಂಸ್ಕೃ ತಿಯ ದೃಷ್ಟಿಯಿಂದ ಪ್ರಮುಖವಾದುದು. ಕ್ರಿ. ಶ. 5ನೆಯ ಶತಮಾನದಲ್ಲಿ ಅಲ್ಲಿ ಬೌದ್ಧ

ಧರ್ಮಕ್ಕಿಂತ ವೈದಿಕ ಧರ್ಮ ಪ್ರಬಲವಾಗಿದ್ದಿತು. ಸುಮಾತ್ರ ದ್ವೀಪದ ಅತಿಮುಖ್ಯ ರಾಜ್ಯವೆಂದರೆ ಶ್ರೀವಿಜಯ. ಬೋರ್ನಿಯಾ ದ್ವೀಪದಲ್ಲಿ ಯೂಪಸ್ತಂಭದ ಮೇಲೆ ಶಾಸನಗಳು ಸಿಕ್ಕಿವೆ. ಅದೇ ದ್ವೀಪಸ್ತೋಮದಲ್ಲಿನ ಬಲಿದ್ವೀಪದ ಜನಸಂಖ್ಯೆಯಲ್ಲಿ ಇಂದಿಗೂ ಶೇಕಡ ಎಂಬತ್ತರಷ್ಟು ಹಿಂದೂಗಳೇ. ಇಲ್ಲಿ ಆಳಿದ ಸುಪ್ರಸಿದ್ಧ ರಾಜವಂಶ ಶೈಲೇಂದ್ರರದು.

ನೇಪಾಲವು ಇಂದಿಗೂ ಮುಖ್ಯವಾಗಿ ಹಿಂದೂಗಳ ರಾಜ್ಯವೇ ಆಗಿದ್ದು, ವೈದಿಕ ಸಂಸ್ಕೃತಿಯನ್ನು ಉಳಿಸಿಕೊಂಡಿರುವ ದೇಶ.

ಬರ್ಮ, ಟಿಬೆಟ್, ಸಿಂಹಳ, ಚೀನಾ ದೇಶಗಳು ಪ್ರಧಾನವಾಗಿ ಬೌದ್ಧ ಧರ್ಮಾನುಯಾಯಿಗಳಾದ್ದರಿಂದ ಅವೂ ಭಾರತೀಯ ಸಂಸ್ಕೃತಿಯ ವ್ಯಾಪ್ತಿಯೊಳಕ್ಕೇ ಬರುತ್ತವೆ ಎಂದು ನರಸಿಂಹಮೂರ್ತಿಯವರ ಅಭಿಪ್ರಾಯ. ಮಧ್ಯ ಏಷ್ಯದಲ್ಲಿ 1891 ರಲ್ಲಿ ಕರ್ನಲ್ ಬೋವರ್ ಕಂಡುಹಿಡಿದ 'ಬೋವರ್ ಹಸ್ತಪ್ರತಿ' ಕ್ರಿಸ್ತಶಕ ನಾಲ್ಕನೇ ಶತಮಾನದಲ್ಲಿ ಲಿಖಿತವಾದ ಒಂದು ವೈದ್ಯಗ್ರಂಥ. ಅದೇ ಪ್ರದೇಶದಲ್ಲಿ ಕ್ರಿಸ್ತಶಕ ಎರಡನೇ ಶತಮಾನದ ಧಮ್ಮಪದದ ಹಸ್ತಪ್ರತಿ ದೊರಕಿದೆ. ಈ ಪ್ರದೇಶ ಅನೇಕ ಬೌದ್ಧ ವಿಹಾರಗಳನ್ನೊಳಗೊಂಡಿದ್ದಿತು. ಆಫ್ಘಾನಿಸ್ತಾನವು ಭಾರತೀಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದಿತು. ಒಂದು ಕಾಲಕ್ಕೆ ಇಲ್ಲಿ ಬೌದ್ಧಧರ್ಮದ ಜೊತೆಗೆ ಶೈವಧರ್ಮವೂ ಪ್ರಚಾರದಲ್ಲಿದ್ದಿತು.

ಹೀಗೆ, ಸಾಂಸ್ಕೃತಿಕ ಬೃಹದ್ಭಾರತದ ದೇಶಗಳ ಆಡಳಿತವಿಧಾನ, ಮತಗಳು ಮತ್ತು ವಾಸ್ತುಶಿಲ್ಪದ ಮೇಲೆ ಭಾರತದ ಪ್ರಭಾವ ಅಪರಿಮಿತ. ಕ್ಯಾಂಬೋಡಿಯದ ಆಂಗ್ಕೊರ್ ವಾಟ್, ಸಂಬೊರ್ ಪ್ರೈಕುಕ್ ಹಿಂದೂ ದೇವಾಲಯಗಳು ಶ್ರೇಷ್ಠ ಕಲೆಗೆ ನಿದರ್ಶನಗಳು. ಜಾವಾದ ಬೊರೊಬುದೂರಿನ ಸ್ತೂಪವು ವಿಶ್ವವಿಖ್ಯಾತವಾಗಿದೆ.

'ಸಾಂಸ್ಕೃತಿಕ ಬೃಹದ್ಭಾರತ' ಎಂಬ ಹೆಸರೇನೋ ಆಕರ್ಷಕವಾಗಿದೆ. ಮತ್ತು ಅದರಿಂದ ಭಾರತೀಯರು ಹೆಮ್ಮೆಪಟ್ಟುಕೊಳ್ಳಲೂ ಬಹುದು. ಆದರೆ, ಬೇರೊಂದು ದೇಶದ ಮೇಲೆ ಇಲ್ಲಿಯ ಪ್ರಭಾವ ಎಷ್ಟೇ ತೀವ್ರವಾಗಿದ್ದರೂ, ಅಲ್ಲಿಯ ಸಂಸ್ಕೃತಿಯನ್ನು ಇಲ್ಲಿಯ ಸಂಸ್ಕೃತಿಯ ಒಂದು ಭಾಗವೆಂದು ಗಣಿಸುವುದು ಉಚಿತವಾದೀತೆ? ಚೀನಾಕ್ಕೆ ತನ್ನದೇ ಆದ, ಭಾರತಕ್ಕಿಂತಲೂ ಪ್ರಾಚೀನವಾದ ಒಂದು ಸಂಸ್ಕೃತಿಯಿದೆ. 'ಸಾಂಸ್ಕೃತಿಕ ಬೃಹದ್ಭಾರತ'ವು ಚೀನಾವನ್ನು ಒಳಗೊಳ್ಳುವಷ್ಟು ಸಮರ್ಥವಾಗುತ್ತದೆಯೇ? ನೇಪಾಲ, ಸಿಂಹಲದಂತಹ ಇನ್ನೂ ಹತ್ತಿರದ ಚಿಕ್ಕ ರಾಷ್ಟ್ರಗಳು ಭಾರತದಿಂದ ತಾವು ರಾಜಕೀಯವಾಗಿ ಮಾತ್ರವಲ್ಲದೆ ಸಾಂಸ್ಕೃತಿಕವಾಗಿಯೂ ಭಿನ್ನವೆಂಬುದನ್ನು ಸ್ಥಾಪಿಸಲು ಬಯಸುತ್ತಿರುವ ಈ ಕಾಲದಲ್ಲಿ ದೂರದ ವಿಯೆಟ್ನಾಂನಂತಹ ದೇಶವೂ ಐತಿಹಾಸಿಕವಾಗಿ ಸಾಂಸ್ಕೃತಿಕ ಬೃಹದ್ಭಾರತದ ಭಾಗವಾಗಿತ್ತೆಂದು ವಾದಿಸುವುದು ಸರಿಯೇ? ಅದು ಸರಿ ಎನ್ನುವುದಾದರೆ, ಇಸ್ಲಾಂ ಪ್ರಭಾವವಿರುವ ದೇಶಗಳನ್ನೆಲ್ಲ–ಭಾರತವನ್ನೂ ಸೇರಿಸಿಕೊಂಡು– 'ಸಾಂಸ್ಕೃತಿಕ ಬೃಹದರೇಬಿಯ' ಎಂದು ಕರೆದರೆ ನಾವು ಸಹಿಸು

ತ್ತೀವೆಯೆ? 'ಸಾಂಸ್ಕೃತಿಕ ಬೃಹದ್ಭಾರತ' ಎಂಬ ಮಹದಾಶೆಯ ಶೀರ್ಷಿಕೆಯ ಬದಲು (Wales H.G. Quaritch ಅವರ The Making of Greater India ಗ್ರಂಥದ ಹೆಸರಿನ ಬಗ್ಗೆಯೂ ಇದೇ ಆಕ್ಷೇಪಣೆ ಎತ್ತಬಹುದು) – ಭಾರತೀಯ ಸಂಸ್ಕೃತಿಯ ಪ್ರಸಾರ, ಪ್ರಭಾವ ಎಂಬರ್ಥಗಳನ್ನು ಒಳಗೊಳ್ಳುವ ಬೇರೊಂದು ಶೀರ್ಷಿಕೆಯನ್ನು ಕೊಟ್ಟಿದ್ದರೆ ಹೆಚ್ಚು ಉಚಿತವಾಗಿರುತ್ತಿತ್ತು.

ಆಗ್ನೇಯ ಏಷ್ಯಾದಲ್ಲಿ ಭಾರತ, ರಾಮಾಯಣಗಳಂತೆ ಪಂಚತಂತ್ರವೂ ಪ್ರಚಲಿತ ವಾಗಿದ್ದಿತು. ಅದನ್ನು ಲೇಖಕರು ಗಮನಿಸಿಲ್ಲ. ಅದರ ಬಗ್ಗೆ ವಿಶೇಷವಾಗಿ ಕೆಲಸಮಾಡಿ ಇಂಗ್ಲಿಷ್, ಕನ್ನಡಗಳಲ್ಲಿ ಹತ್ತಾರು ಲೇಖನಗಳನ್ನು ಬರೆದಿರುವ ಡಾ॥ಎ. ವೆಂಕಟಸುಬ್ಬಯ್ಯ ನವರ ಬರಹಗಳನ್ನು ಲೇಖಕರು ಉಪಯೋಗಿಸಿಕೊಳ್ಳಬಹುದಿತ್ತು.

ಈ ಪುಸ್ತಕದ ಉಪಯುಕ್ತತೆಯ ಬಗ್ಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ಭಾಷೆ ಲಲಿತವಾಗಿದ್ದರೂ, ನಿರೂಪಣೆಯಲ್ಲಿ ಗರಿಗರಿತನ ಅಷ್ಟಾಗಿ ಕಾಣಿಸದು. ಅನೇಕ ಗ್ರಂಥಗಳನ್ನು ಓದಿ, ಅವುಗಳ ಸಾರವನ್ನು ಭಟ್ಟಿಯಿಳಿಸಿ ಕೊಟ್ಟಿರುವ ಈ ಪಠ್ಯಗ್ರಂಥ ಭಾರತೀಯ ಸಂಸ್ಕೃತಿಯ ಬಗ್ಗೆ ನಮಗಿರುವ ತಿಳಿವನ್ನು ಹೆಚ್ಚಿಸುತ್ತದೆ ಎಂಬುದರ ಬಗ್ಗೆ ಅನುಮಾನವಿಲ್ಲ.

**ಋಗ್ವೇದಸಾರ: ನಾಗಪ್ರತಿಮಾವಿಚಾರ:** ಇತ್ತೀಚೆಗೆ ಬಂದಿರುವ ಅತ್ಯಂತ ವಿಲಕ್ಷಣ ಗ್ರಂಥಗಳಲ್ಲಿ ಶಂ. ಬಾ. ಜೋಶಿಯವರ 'ಋಗ್ವೇದಸಾರ: ನಾಗಪ್ರತಿಮಾ ವಿಚಾರ' ಒಂದು. ಒಂಬೈನೂರು ಪುಟಗಳನ್ನು ಮೀರಿಸಿರುವ ಬೃಹತ್ ಗ್ರಂಥವೊಂದನ್ನು ಓದಿಯೂ ಲೇಖಕರು ನಿರ್ದಿಷ್ಟವಾಗಿ ಏನು ಹೇಳಲು ಪ್ರಯತ್ನಿಸುತ್ತಿದ್ದಾರೆಂದು ತಿಳಿಯದೇ ಹೋಗುವ ಸಂಗತಿ ಅಸಾಧಾರಣವಾದದ್ದೇ. ಈ ಗ್ರಂಥವನ್ನು ಓದಿ ಮುಗಿಸುವುದು ಒಂದು ಸಾಹಸ. ಆದರೆ ಶ್ರಮಕ್ಕೆ ಪ್ರತಿಫಲವಿದೆ ಎನ್ನುವುದು ಬಹಳ ಸಂದೇಹಾಸ್ಪದ.

ಇದಕ್ಕೆ ಏನು ಕಾರಣ? ಪುಸ್ತಕದ ಯಾವ ಪುಟವೂ, ಪುಟದ ಯಾವ ಪ್ಯಾರಾವೂ ಅರ್ಥವಾಗುವುದಿಲ್ಲವಲ್ಲ – ಇದಕ್ಕೆ ಏನು ಕಾರಣ? ಲೇಖಕರೆ ಅಥವಾ ಓದುಗರೆ?

ಜೋಶಿಯವರ ಅದ್ಭುತ ಜ್ಞಾಪಕ ಶಕ್ತಿ, ಅವರ ವ್ಯಾಸಂಗದ ವೈಶಾಲ್ಯ ಎಂಥವ ರನ್ನೂ ದಂಗುಬಡಿಸುತ್ತದೆ. ಆದರೆ ಅವರಲ್ಲಿ ಕಂಡುಬರುವ ದೊಡ್ಡ ದೋಷ – ವ್ಯವ ಸ್ಥಿತ ಆಲೋಚನೆಯಿಲ್ಲದಿರುವುದು. ಕೆಟ್ಟ ಶೈಲಿ ಲೇಖಕನಿಗೂ ಓದುಗನಿಗೂ ಹೇಗೆ ಅಡ್ಡಿಯಾಗಿ ನಿಲ್ಲಬಲ್ಲುದೆಂಬುದಕ್ಕೆ ಜೋಶಿಯವರ ಬರಹ ಉತ್ತಮ ನಿದರ್ಶನಗಳನ್ನು ಒದಗಿಸುತ್ತದೆ.

ಜೋಶಿಯವರು ತಾವು ಏನೇನನ್ನು ಓದಿದ್ದಾರೆ, ಏನೇನು ನೆನಪಿಗೆ ಬರುತ್ತದೆ. ಆಲೋಚನೆಗಳು ಯಾವ ಕ್ರಮದಲ್ಲಿ ಹೊಳೆಯುತ್ತದೆ-ಹಾಗೆಹಾಗೆಯೇ ಬರೆದುಬಿಡುತ್ತಾರೆ, ಇದು ಸರಿಯೇ, ಈ ಅಭಿಪ್ರಾಯಕ್ಕೆ ಆಕ್ಷೇಪಣೆಗಳಿಲ್ಲವೇ, ಹೀಗೆ ಹೇಳಿದರೆ ಅದು ಓದುಗರನ್ನು ಮುಟ್ಟುತ್ತದೆಯೇ ಎಂಬ ಪ್ರಶ್ನೆಗಳು ಅವರನ್ನು ಬಾಧಿಸಿದಂತೆ ತೋರುವು

ದಿಲ್ಲ. ಪದಗಳನ್ನು ಒಡೆಯುವ ರೀತಿ. ಅಚ್ಚು ಮಾಡಿಸುವ ರೀತಿ, ಮಧ್ಯೆ ಮಧ್ಯೆ ಬೇರೆಯವರ ಮಾತನ್ನೂ ಹೆಸರುಗಳನ್ನೂ ಉಲ್ಲೇಖಿಸುವ ರೀತಿ ಎಲ್ಲವೂ ಬೇಸರವುಂಟುಮಾಡುತ್ತವೆ. ವ್ಯಾಕರಣ ಎಲ್ಲೋ ಹಾರಿರುತ್ತದೆ. ವಾಕ್ಯ ಪೂರ್ತಿಯಾಗಬೇಕೆಂದಿಲ್ಲ; ಭಾಷೆಯ ಇತಿಹಾಸ, ರಚನೆಗಳಿಗೆ ಬೆಲೆ ಇಲ್ಲ; ಯಾವ ಸಂಗತಿಯನ್ನು ಯಾವುದರ ಜೊತೆಗಾದರೂ ಹೊಂದಿಸಬಹುದು. ಅಚ್ಚಿನ ತಪ್ಪುಗಳಿಗೆ ಮಿತಿಯಿಲ್ಲ. ಹೀಗಾಗಿ ಇಡೀ ಗ್ರಂಥ ಮೇಧಾವಿ ವಿದ್ವಾಂಸನೊಬ್ಬನ ಕನವರಿಕೆಯಾಗಿ ತೋರುತ್ತದೆ.

ನನ್ನ ಈ ಮಾತುಗಳಿಂದ, ಇದು ಗ್ರಂಥವನ್ನು ಓದಿ ಅರ್ಥಮಾಡಿಕೊಳ್ಳಲಾಗದ ಸೋಮಾರಿ ಅಥವಾ ದುರ್ಬಲನ ಅಭಿಪ್ರಾಯವೆಂಬ ಭಾವನೆ ಓದುಗರಿಗೆ ಬರಬಹುದು. ಕೆಳಗೆ, ಪುಸ್ತಕ ತೆಗೆದಾಗ ಕಾಣಿಸಿದ ಒಂದು ಪ್ಯಾರಾವನ್ನು, ಅದು ಇರುವಂತೆಯೇ ಉದ್ಧರಿಸಿಕೊಡುತ್ತೇನೆ, ಓದುಗರ ಅವಗಾಹನೆಗಾಗಿ:

"'ಅಕ್ಷ' (: ಕಣ್ಣು), ಎಂಬಲ್ಲಿ ನೇತ್ರಕ್ಕಿಂತ ಭಿನ್ನ ಅರ್ಥವು ಅಭಿಪ್ರೇತವಿದೆ! ನೇತ್ರ, ನಯನ ಈ ಶಬ್ದ ಸಂಕೇತಗಳಲ್ಲಿ ಹುದುಗಿರುವ ನೀ>ನಯ್– (ಮುಂದೆ ಒಯ್ಯು) ಈ ಧಾತ್ವರ್ಥವೇ ಬೇರೆ; 'ಚಕ್ಷು' ಎಂಬಲ್ಲಿ ಬೆಳಕನ್ನು ಕಾಣುವ ಇಂದ್ರಿಯ ಎಂಬ ಅರ್ಥ ಸ್ಪಷ್ಟವಿದೆ. ಈ ಬೆಳಕೂ ಸಹ ಅಭೌತವೇ. ಆದರೆ **ಕಣ್ಣು** (>ಗಣ್ಣು ಗ್ರಂಥಿ ಅಥವಾ ತೂತು) ಮತ್ತು 'ಅಕ್ಷ', 'ಅಕ್ಷಿ' ಎಂಬಲ್ಲಿ (**ಕ್ಷ**ಯರಹಿತ ಜ್ಞಾನದ ದೃಷ್ಟಿ,) ಬೇರೊಂದು ಪಾತಳಿಯ ಅನುಭವ ಅಭಿಪ್ರೇತವಿದೆ. ನಯನ-ಚಕ್ಷು ಸವಿತೃ ಪ್ರಕಾಶಗ್ರಹಣದ ಇಂದ್ರಿಯ; ಆದರೆ ಅಕ್ಷ: ಕಣ್ಣು: ತ್ರೀ (ಅಥವಾ ಷಟ) ಚಕ್ರಯೋಗದ ದಿವ್ಯಾಧ್ಯಾತ್ಮದ ಅನುಭಾವದ ಮೂಲಕ ಉತ್ಪನ್ನವಾಗುವ 'ಶಾಶ್ವತ' ದೃಷ್ಟಿ ಎಂಬ ಧ್ವನ್ಯರ್ಥವು ಇಲ್ಲಿದೆ. ಆದರೆ! ಚಕ್ಷು ನೇತ್ರ, ನಯನವು ಲೌಕಿಕ ಜೀವನದ ಮಾರ್ಗಕ್ರಮಣದಲ್ಲಿ ಮಾತ್ರ ಉಪಯುಕ್ತ ದೃಷ್ಟಿ ಎಂದು ತತ್: ಏಕಂ ಪಂಥೀಯ ಮತ! **ಅಕ್ಷನಂತರು ದಿವ್ಯ ಅಕ್ಷರು, ಬಿಡುಗಣ್ಣವರು!** ಈ ಒಮ್ಮೆ ತೆರೆದ ಕಣ್ಣು ಮುಚ್ಚುವುದಿಲ್ಲ! ಬಿಡುಗಣ್ಣರಿಗೆ – ಪಕ್ಷ್ಮಗಳು ಇರುವುದಿಲ್ಲ, ಎಂಬ ಸಾಂಪ್ರದಾಯಿಕ ನಂಬುಗೆಯುಂಟು! ಇವರಿಗೆ ನಿದ್ರೆಯೆಲ್ಲಿ! ಈ ಕಾರಣದಿಂದಲೆ ಬಿಡುಗಣ್ಣರಿಗೆ ಹಗಲು–ಇರುಳು ಭೇದವಿಲ್ಲ! ಈ 'ಅಕ್ಷ' ಶಬ್ದ ಸಂಕೇತಕ್ಕೆ 'Knowledge, religious knowledge' ಎಂಬ ಅರ್ಥವಿರುವುದಾಗಿ ಸೂಚಿಸಿ, ಈ ಪ್ರಯೋಗಗಳು ವಿರಳ ಎಂದೂ ಮೊ. ವಿ. ಕೋಶ ನಮೂದಿಸಿದೆ; 'ಜ್ಞಾನ'ವು, ತತ್ ಮಯತೆಯ ರಸಾನಂದದಲ್ಲಿ ಅಕ್ಷದಿಂದ ಬರುವ 'ಅಕ್ಷ':–ರ ಒಳಗಣ್ಣು ಅರಳಿದಾಗ **ಕಣಿಯ ಮೂಲಕ ಪ್ರಾಪ್ತನಾಗುವ 'ಜ್ಞಾನ'**: ವಿದ್ಯೆಯಿಂದ ಇದು ಬೇರೆ ಎಂದು ಉಪನಿಷತ್ತುಗಳು, ಗೀತೆ ಹೇಳಿರುವುದರ ಮರ್ಮವು ಹೀಗಿದೆ. ಈ ಒಳಕಣ್: 'ಅಕ್ಷ' (: axle : ಇರಸು):ಇದರ ಮೂಲಕ ಆಗುವ ಜ್ಞಾನವು ಸ್ಪರ್ಶೇಂದ್ರಿಯ ಜನ್ಯಪ್ರಜ್ಞೆ. ಆದುದರಿಂದ ಈ ದಿವ್ಯಾಧ್ಯಾತ್ಮ ಜ್ಞಾನೋಪಲಬ್ಧಿಯು ಜೀವನ ಪರಿಸರವನ್ನು ಗ್ರಹಿಸಿಕೊಳ್ಳಲು ಶ್ರಮ ಪಡಬೇಕಾಗಿಲ್ಲ. 'ಸರ್ + ಪ': ನಾಗ ಎಂಬ ಸಾರ್ಥ **ಅಕ್ಷವು ಸ್ಪರ್ಶಜ್ಞಾನದ ಕಣ್ಣು**, ಎಂದಲ್ಲಿ ಅವಾಸ್ತವವೇನಿದೆ? ಈ ದೃಷ್ಟಿಯಿಂದ ಕಂದ-

ಮಿಳ **ಕಣ್ಣು, ಕಣಿ>ಗಣಿ** ಈ ಅಕ್ಷರ ಸಾಂಕೇತಿಕ ಪ್ರತಿಮೆಗಳು ಮಾನವರ ಜ್ಞಾನದ ವಿಕಾಸದ ಶ್ರೀಕಾರ: ಗಣ–ಪತಿಯೆ ಆಗಿರುವುದನ್ನು ನಿದರ್ಶನಕ್ಕೆ ತಂದುಕೊಡುತ್ತಿಲ್ಲವೆ? ಸರಸ್ವತಿಯನ್ನು 'ಅಂಬ, ಅಂಬಿತಮೆ' ಎಂದುದೂ ( II. 42.16 ), ಅಂಬೆ= ಗೌರಿ: ಸಹಸ್ರಾಕ್ಷರಾ ಎಂದುದೂ ( I. 164–11 ) ಅರ್ಥಪೂರ್ಣವಿಲ್ಲವೆ ? ಮೊ. ವಿ. ಕೋಶವು ನಮೂದಿಸಿರುವ ಈ ಅರ್ಥ : ಆಕೃತಿ ಸಮೀಕ್ಷಾರ್ಹವಾಗಿವೆ: 3 ಅಕ್ಷ : an organ of sense, Sensual perception. the soul ; **ಕಣ್ > ಗಣ್ಣು** = soul = ಜೀವಾಳ ! 'ಅಕ್ಷ'ವು, ( ಬಾಡಬ ಅಗ್ನಿ) 'ಕುಮಾರ' ಶಕ್ತಿಯ ನಿತ್ಯ ಸನಾತನ ಪ್ರತಿಮೆ. ಎಂದರೆ ಅಪರಾಧವಾದೀತೆ? 1) **ಉತ್ತಾನಪದ** (:ಅಕ್ಷ: ಬಡ್ಡಿ [ವೃಕ್ಷ]) ಮತ್ತು 2) **'ಧ್ರುವ' (:ಕುಮಾರ)** ಎರಡೂ ಏಕಕಾಲಕ್ಕೆ! ಈ ಪ್ರಾತಿನಿಧಿಕ ಸಂಕೇತವು ಒಂದು ನೈತಿಕ ಕಥೆ (Parable) ಮೂಲತಃ! ಆದರೆ ಆಖ್ಯಾಯಿಕಾ (legend) ಸ್ವರೂಪದ ಜರತಾರೀ ವಸನ ಧರಿಸದಿದ್ದರೆ, ಈ ನಾಗ: ಲಿಂಗನ ಪ್ರತಿಮೆಯನ್ನು ಈ ವರೆಗೆ ಉಳಿಸಿಕೊಳ್ಳಲು, ಸಾಮಾಜಿಕ ಪ್ರಜ್ಞೆ: ಮನುಜರ ಹಂತದ ಅಂತಃಸಾಕ್ಷಿ, ಒಪ್ಪಬಹುದಿತ್ತೆ ಎಂಬ ಸಂದೇಹಕ್ಕೆ ಅವಕಾಶವಿದೆ. 'ಉತ್ತಾನ–ಪದ' ಈ ಸಂಕೇತವು **ನಿಗುರಿ ನಿಂತ ದಕ್ಷ:** ಬಡ್ಡಿ (ವೃಕ್ಷ) ಎಂಬರ್ಥದಲ್ಲಿ ಋಗ್ವೇದದಲ್ಲಿದೆ! (X. 72, 3) ಎಂದರೆ ಅಲ್ಲಿ ಈ ಉತ್ತಾನಪದ ಪ್ರಚ್ಛನ್ನ 'ದಕ್ಷ'ನೇ ಎಂದು ಸಿದ್ಧ ವಾಗುತ್ತದೆ, ವೃಕ್ಷ (ಬಡ್ಡಿ): ಉತ್ತಾನಪದ ಇದು ದಕ್ಷವಿಲ್ಲದಾಗ – ಬರಿ ಕೊರಡು ಆದಾಗ, ಜಾತೀ–ಹೆಣ್ಣು ಒದ್ದಲ್ಲಿ ಅದು ಮರಳಿ ಚಿಗಿ (ಜಿಗಿ)ಯ ತೊಡಗು ತ್ತದೆ, ಇದರ ಹೆಸರು ಅಶೋಕವೃಕ್ಷ! ಅಂದರೆ ಅ–ದಕ್ಷ ಉತ್ತಾನಪದ ಶೋಕವೃಕ್ಷ ತಾನೆ, ಕಾಲಿದಾಸಾದಿ ಕವಿಪುಂಗವರು ಬಲ್ಲ ಈ 'ಸಮಯ'ದ ಅರ್ಥವು ದಿವ್ಯಾಕ್ಷದ ಸಂದರ್ಭದಲ್ಲಿ ಮಾತ್ರ ಗೋಚರಕ್ಕೆ ಬರುತ್ತಿರುವ ಈ ಸೋಜಿಗ ಅಭ್ಯಸನೀಯವಿದೆ."

ಬರವಣಿಗೆ ಹೀಗೆಯೇ ಸಾಗುತ್ತದೆ. ಜೋಶಿಯವರು ಅಲ್ಲೇ ನಿಲ್ಲುತ್ತಾರೆ, ಓದುಗ ಇಲ್ಲೇ ಉಳಿಯುತ್ತಾನೆ.

**ಗಣಪತಿ**: ಗಣಪತಿ ಭಾರತೀಯ ದೇವತೆಗಳಲ್ಲೆಲ್ಲ ಬಹು ಗಮನ ಸೆಳೆದವನು. ಅವನ ವಿಚಿತ್ರ ಆಕಾರ ಗೂಢ ಸಂಕೇತಗಳನ್ನೊಳಗೊಂಡಿದೆಯೆಂಬ ಭಾವನೆಯನ್ನು ಹುಟ್ಟಿಸುತ್ತದೆ. ಭಾರತದಲ್ಲಿ ಜಾತಿ ಮತಗಳ ಭೇದವಿಲ್ಲದೆ ಎಲ್ಲರಿಂದಲೂ ಅವನು ಪೂಜೆಗೊಳ್ಳುತ್ತಾನೆ. ಅವನ ವಿಗ್ರಹಗಳು ಭಾರತದಾಚೆ, ದೂರದೇಶಗಳಲ್ಲೂ ದೊರ ಕಿವೆ. ಅವನ ಹಬ್ಬವನ್ನು ರಾಷ್ಟ್ರೀಯ ಉತ್ಸವವಾಗಿ ಪರಿವರ್ತಿಸಲು ತಿಲಕರಂತಹವರು ಪ್ರಯತ್ನಿಸಿದರು. ಹೀಗೆ, ಗಣಪತಿಯ ಕಲ್ಪನೆ, ಇತಿಹಾಸ, ಹರಹುಗಳ ಅಧ್ಯಯನ ಅನೇಕ ದೃಷ್ಟಿಗಳಿಂದ ಸ್ವಾರಸ್ಯವಾದುದು.

ಕನ್ನಡದಲ್ಲಿ ಗಣಪತಿ ಬಗ್ಗೆ ಒಂದೆರಡು ಚಿಕ್ಕ ಬರಹಗಳನ್ನು ಬಿಟ್ಟರೆ ಹೆಚ್ಚಿಗೆ ದೊರೆ ಯುವುದಿಲ್ಲ. (ಇವುಗಳನ್ನು ಲೇಖಕರು ಬಲ್ಲವರಾದರೂ ಇವುಗಳ ಹೆಸರನ್ನು 'ಗ್ರಂಥ ಋಣ'ದಲ್ಲಿ ಕಾಣಿಸಿಲ್ಲ). ಇಂಗ್ಲಿಷಿನಲ್ಲಿ ಈ ದೇವತೆಯ ಬಗ್ಗೆ ಸಾಕಷ್ಟು ಬರಹ ಬಂದಿದೆ; ಮರಾಠಿ. ಹಿಂದಿಯಲ್ಲಿಯೂ ಉಂಟು. ಅವುಗಳನ್ನೆಲ್ಲ ಶ್ರದ್ಧೆಯಿಂದ ಅಧ್ಯಯನಮಾಡಿ.

ಅವುಗಳ ಸಾರವನ್ನು ಮ. ಶ್ರೀಧರಮೂರ್ತಿಯವರು "ಗಣಪತಿ" ಪುಸ್ತಕದಲ್ಲಿ ಕೊಟ್ಟಿದ್ದಾರೆ. "ವಸ್ತುಶಃ ಈ ಪುಸ್ತಕಕ್ಕಾಗಿ ನಾನು ಮಾಡಿದ 'ಸಂಶೋಧನೆ' ಎಂಬುದು ಏನೂ ಇಲ್ಲ. ಈ ಹಿಂದೆ ಅನೇಕಾನೇಕ ವಿದ್ವನ್ಮಣಿಗಳೂ ಸಂಶೋಧಕರೂ ಪಟ್ಟಿರುವ ಶ್ರಮವನ್ನು ನಾನು ಧಾರಾಳವಾಗಿ ಬಳಸಿಕೊಂಡಿದ್ದೇನಷ್ಟೆ" ಎಂದು ಲೇಖಕರೇ ಹೇಳಿ ಕೊಂಡಿದ್ದರೂ ಈ ಪುಸ್ತಕದ ಉಪಯುಕ್ತತೆಯು ಬೆಲೆ ಕಡಮೆಯಾಗುವುದಿಲ್ಲ.

ಆರಂಭದಲ್ಲಿ ಲೇಖಕರು ಗಣಪತಿಯ ಹುಟ್ಟು–ವಿಕಾಸಗಳನ್ನು ಕುರಿತು ಚರ್ಚಿಸು ತ್ತಾರೆ. ವೇದಯುಗದಲ್ಲಿ 'ಗಣಪತಿ' ಇರಲಿಲ್ಲ. ಋಗ್ವೇದದ ರುದ್ರನ ಮಕ್ಕಳಾದ ಮರು ತರು ಮತ್ತು ಬೃಹಸ್ಪತಿ ಸೇರಿ ಮುಂದೆ ವಿನಾಯಕ–ಗಣಪತಿಯಾಗಿರಬೇಕು ಎಂದು ವಿದ್ವಾಂಸರು ಊಹಿಸಿದ್ದಾರೆ. ಏಕೆಂದರೆ ಮರುತರು ವಿಘ್ನಕಾರಿಗಳು ಮತ್ತು ವಿಘ್ನ ಪರಿಹಾರಕರು; ಬೃಹಸ್ಪತಿ ವಿಘ್ನನಿವಾರಕ ಮತ್ತು ಮರುತರ ಯಜಮಾನ. ರುದ್ರ ಮತ್ತು ಮುಂದೆ ಕಾಣಿಸಿಕೊಂಡ ಶಿವ ಇಬ್ಬರಿಗೂ ಅಭೇದತ್ವ ಕಲ್ಪನೆಯಾಯಿತೆಂಬುದನ್ನು ನೆನೆದರೆ, ಅಂತಹ ಊಹೆ ಸಾಧ್ಯವೇನೋ ಎಂದು ಅನ್ನಿಸುತ್ತದೆ. ಆದರೆ ಇದೆಲ್ಲ ಊಹೆಯೇ! ಸ್ಮೃತಿಗಳ ಕಾಲದಲ್ಲಿ ಕೇಡಿಗರಾದ ಅನೇಕ 'ವಿನಾಯಕ'ರ ಹೆಸರು ಬರು ತ್ತವೆ. ವಿನಾಯಕನಿಗೆ 'ಗಜಮುಖ' ಪ್ರಾಪ್ತವಾದದ್ದು ಹೇಗೆ ಎಂಬ ಸಮಸ್ಯೆ ಇದ್ದೇ ಇದೆ. ಆನೆಗಳಿಗೆ ಹೆದರಿದ ಕಾಡುಜನ ಆನೆಯ ತಲೆಯ ದೇವತೆಯನ್ನು ಕಲ್ಪಿಸಿ. ಅವನನ್ನು ಆರಾಧಿಸುವುದರಿಂದ ಕೇಡು ತಪ್ಪುತ್ತದೆ ಎಂದು ಭಾವಿಸಿದ್ದೇ ಗಜಮುಖನ ಹುಟ್ಟಿಗೆ ಕಾರಣ ಎನ್ನುವವರೂ ಇದ್ದಾರೆ. ಹೀಗೆ ಈ ದೇವತೆಯ ಉಗಮ. ಬೆಳವಣಿಗೆ ಬಹಳ ಜಟಿಲವಾದ ಸಮಸ್ಯೆ. ಕೊನೆಗೆ ಈ ದೇವತೆ ಆರ್ಯರದ್ದೇ, ದ್ರಾವಿಡರದ್ದೇ ಎಂಬ ಸಮಸ್ಯೆ ಹಾಗೆಯೇ ಇದೆ. ಇಂತಹ ಕಡೆ ಯಾವುದೇ ಅಭಿಪ್ರಾಯವನ್ನೂ ಪಟ್ಟಾಗಿ ಹಿಡಿಯದೆ ಅವುಗಳನ್ನು ನೇರವಾಗಿ ನಿರೂಪಿಸಿರುವ ಲೇಖಕರು ತೋರಿರುವ ಸಂಯಮ ಮೆಚ್ಚತಕ್ಕದ್ದಾಗಿದೆ.

ಪುರಾಣಕಾಲಕ್ಕೆ ಗಣಪತಿಯ ಕಲ್ಪನೆ ಪೂರ್ಣವಾಯಿತು. ಅವನ ಬಗ್ಗೆ ಅನೇಕ ಕತೆಗಳೂ ಹುಟ್ಟಿಕೊಂಡುವು. ಶ್ರೀಧರಮೂರ್ತಿಯವರು ಕೆಲವು ಕತೆಗಳ ಸಾರಾಂಶ ಕೊಟ್ಟಿರುವುದು ತೌಲನಿಕ ಅಧ್ಯಯನಕ್ಕೆ ಸಹಾಯವನ್ನುಂಟುಮಾಡುತ್ತದೆ.

ಗಣಪತಿಯ ವಿಗ್ರಹ ಕಲ್ಪನೆ ಒಂದು ಅಧ್ಯಾಯವನ್ನು ತುಂಬಿದೆ. ಗಣಪತಿ ಪಾರ್ವತಿಯ ಮೈಯ ಮಣ್ಣಿನಿಂದ. ಸ್ನಾನದ ಸಮಯದಲ್ಲಿ ಹುಟ್ಟಿದವನು ಎಂಬಂತಹ ಸಂಗತಿಗಳನ್ನು ನೋಡಿದರೆ ಅವನು ಪ್ರಜನನ ದೇವತೆ (Fertility god) ಎಂಬ ಕಲ್ಪನೆಗೆ ಅವಕಾಶವಾಗುತ್ತದೆ. ಗಣಪತಿಯಲ್ಲಿ ತಾಂತ್ರಿಕ ಆರಾಧನೆಯ ಸಂಕೇತ ಗಳನ್ನು ವಿದ್ವಾಂಸರು ಕಂಡಿದ್ದಾರೆ. 'ವಿಗ್ರಹ ಲಕ್ಷಣ ವೈವಿಧ್ಯ' ಅಧ್ಯಾಯದಲ್ಲಿ ಬರುವ ಗಣೇಶನ ರೂಪ ವೈವಿಧ್ಯ ಎಂಥವರನ್ನೂ ಬೆರಗುಗೊಳಿಸುತ್ತದೆ. ಗಣಪತಿಯ ಶಿಲ್ಪ ಲಕ್ಷಣದ ಬಗ್ಗೆಯೇ ಒಂದು ಪ್ರತ್ಯೇಕ ನಿಬಂಧವನ್ನು ಬರೆಯಬಹುದು.

'ವಿದೇಶಗಳಲ್ಲಿ ಗಣಪತಿ' ಎಲ್ಲ ಓದುಗರಿಗೂ ಕುತೂಹಲ ಹುಟ್ಟಿಸುವ ಅಧ್ಯಾಯ. ಬಹುಶಃ ಹಿಂದೂ ವ್ಯಾಪಾರಿಗಳ ಜೊತೆ ವಿಘ್ನನಿವಾರಕನಾಗಿ ಹೋಗಿ ಸಿಂಹಳ, ಇಂಡೊನೇಷಿಯ, ಚೀನಾ ಮುಂತಾದ ದೇಶಗಳಲ್ಲಿ ಗಣಪತಿ ನೆಲಸಿದ. ಈ ಪುಸ್ತಕದಲ್ಲಿ ಆ ದೇಶಗಳ ಗಣಪತಿ ವಿಗ್ರಹಗಳ ಚಿತ್ರಗಳನ್ನು ಕೊಟ್ಟಿದ್ದಾರೆ.

'ಗಣಪತಿ ಸಾಹಿತ್ಯ' ವಿಭಾಗದಲ್ಲಿ ಹೊಸಗನ್ನಡದಲ್ಲಿ ಬಂದಿರುವ ಕುವೆಂಪು, ಪು.ತಿ.ನ. ಅವರ ಸುಪ್ರಸಿದ್ಧ ಕವಿತೆಗಳನ್ನು ಪರಿಚಯ ಮಾಡಿಕೊಡಬಹುದಿತ್ತು.

ರೇಖಾ, ಭಾವಚಿತ್ರಗಳು ಪುಸ್ತಕವನ್ನು ಆಕರ್ಷಕವಾಗಿ ಮಾಡಿವೆ. ಗಣಪತಿಯ ಬಗ್ಗೆ ಕುತೂಹಲವುಳ್ಳವರಿಗೆ ಈ ಪುಸ್ತಕ ಉಪಯುಕ್ತ ಮಾಹಿತಿಯನ್ನೊದಗಿಸುತ್ತದೆ. ಆಡಂಬರ, ಆರ್ಭಟವಿಲ್ಲದ ತಿಳಿಭಾಷೆಯ ಈ ಪುಸ್ತಕದ ಕೊನೆಯಲ್ಲಿ ಹೆಚ್ಚಿನ ಅಭ್ಯಾಸ ಮಾಡಲು ಬಯಸುವವರಿಗೆ ದೊಡ್ಡ 'ಗ್ರಂಥ ಋಣ'ದ ಪಟ್ಟಿ ಇದೆ.

**ಕದಂಬ ಮತ್ತು ಗಂಗರ ಇತಿಹಾಸ:** ಕದಂಬರು ಕನ್ನಡ ಪ್ರದೇಶದಲ್ಲಿ ಸ್ವತಂತ್ರವಾಗಿ ಆಳಿದ ಮೊತ್ತಮೊದಲ ದೇಶೀಯ ದೊರೆಗಳು. ಅವರ ಸಮಕಾಲೀನರಾಗಿ ಇನ್ನೂ ದಕ್ಷಿಣದಲ್ಲಿ ಆಳಿದವರು ಗಂಗರು. ಕರ್ನಾಟಕದ ಇತಿಹಾಸ ಕ್ರಿಸ್ತಪೂರ್ವ ಮೂರನೆಯ ಶತಮಾನದ ಅಶೋಕನಿಂದ ಆರಂಭವಾಗುತ್ತದೆ; ನಂತರ ಶಾತವಾಹನರು, ಬಳಿಕ ಪಲ್ಲವರು ಕನ್ನಡನಾಡಿನಲ್ಲಿ ಆಳಿದರು. ಆದರೆ ಕರ್ನಾಟಕ ತನ್ನ ಅಸ್ತಿತ್ವವನ್ನು ರೂಪಿಸಿಕೊಂಡು ವ್ಯಕ್ತಿತ್ವವನ್ನು ಕಂಡುಕೊಂಡದ್ದು ಕದಂಬ–ಗಂಗರ ಕಾಲದಲ್ಲಿ. ಈ ದೃಷ್ಟಿಯಿಂದ ಆ ಎರಡು ರಾಜಮನೆತನಗಳ ಇತಿಹಾಸ ನಮಗೆ ಮುಖ್ಯವಾಗಿರುತ್ತದೆ.

ಈ ರಾಜವಂಶಗಳನ್ನು ಕುರಿತಂತೆ ಸ್ವಲ್ಪ ಕೆಲಸ ನಡೆದಿದೆ. ಹಲವು ಲೇಖನಗಳ ಜೊತೆ, ಮೊರೇಸ್ ಅವರ Kadamba Kula, ಎಂ. ವಿ. ಕೃಷ್ಣರಾವ್ ಅವರ The Gangas of Talakad ಎಂಬ ಗ್ರಂಥಗಳು ಇಲ್ಲಿ ಉಲ್ಲೇಖಾರ್ಹ. ಎಸ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿಯವರ "ಕರ್ನಾಟಕದ ಅರಸು ಮನೆತನಗಳು" ಪುಸ್ತಕದಲ್ಲಿಯೂ ಈ ಎರಡು ರಾಜಮನೆತನಗಳ ವಿಷಯವನ್ನು ಶಾಸ್ತ್ರೀಯವಾಗಿ ಚರ್ಚಿಸಿದೆ. (ಪ್ರಸ್ತುತ ಗ್ರಂಥದ ಕರ್ತೃಗಳಾದ ಎ. ಎಸ್. ನಂಜುಂಡಸ್ವಾಮಿಯವರು ತಮ್ಮ ಗ್ರಂಥಪಟ್ಟಿಯಲ್ಲಿ ಈ ಪುಸ್ತಕದ ಹೆಸರನ್ನೇ ಹೇಳುವುದಿಲ್ಲ.) ಈ ರಾಜವಂಶಗಳ ಬಗ್ಗೆ ಕನ್ನಡದಲ್ಲಿ ಎಷ್ಟು ಬರಹ ಬಂದರೂ ಸ್ವಾಗತಾರ್ಹವೇ.

ಕದಂಬರ ಬಗ್ಗೆ ಬರೆಯುತ್ತ ನಂಜುಂಡಸ್ವಾಮಿಯವರು ಆರಂಭದಲ್ಲಿ ಮಯೂರಶರ್ಮನಿಂದ ಹಿಡಿದು ಈಚಿನ ರಾಜರ ಬಗ್ಗೆ ಏನು ತಿಳಿದು ಬಂದಿದೆಯೋ ಅಷ್ಟನ್ನು ನಿರೂಪಿಸುತ್ತಾರೆ. ಕದಂಬರ ಬೇರೆ ಬೇರೆ ಶಾಖೆಗಳ ಬಗ್ಗೆಯೂ ಪ್ರಸ್ತಾಪಿಸುತ್ತಾರೆ. ಇಲ್ಲೆಲ್ಲ ಮೊರೇಸರ ಗ್ರಂಥಾನುವಾದವಿದೆ. ಹಾಗೆ ಅನುವಾದಿಸುವಲ್ಲಿ ತಪ್ಪೂ ಮಾಡುತ್ತಾರೆ. ಮಾಂಧಾತೃವರ್ಮ ಎಂಬುದನ್ನು 'ಮಂದ್ರಾತ್ರಿವರ್ಮ' ಎಂದು ಬರೆಯುತ್ತಾರೆ, ಹಾಗೆಯೇ 'ಕಟುಮುಖವಾದಿತ್ರ' ಎಂಬುದನ್ನು 'ಕಹುಮುಖವದಿತ್ರ' ಎಂದು ಬರೆಯು

ತ್ತಾರೆ. ಇದಕ್ಕೆ ಕಾರಣ ಇಂಗ್ಲಿಷ್ ಲಿಪ್ಯಂತರ ('Katumukhavaditra'). 'ಗೌರವ' ಎಂದು ಅವರು ಹೇಳುವ ಯಾವ ಶೈವಶಾಖೆಯೂ ಕರ್ನಾಟಕದಲ್ಲಿರಲಿಲ್ಲ. (ಅವರ ಅಭಿಪ್ರಾಯ 'ಗೊರವ' ಎಂದಿರಬಹುದು. ಆದರೆ 'ಗೊರವ' ಎಂಬ ಮಾತಿಗೆ ಸನ್ಯಾಸಿ ಎಂದು ಮಾತ್ರ ಅರ್ಥ). ಕದಂಬರ ಕಾಲದ ಆಡಳಿತ. ಚಿತ್ರಕಲೆ ಅಧ್ಯಾಯಗಳಲ್ಲಿ ಮಾಮೂಲಿ ಸಂಗತಿಗಳಿವೆ.

ಗಂಗರ ಇತಿಹಾಸ ಬರೆಯುವಾಗಲಂತೂ ಲೇಖಕರು ಮೂಲ ಶಾಸನಗಳನ್ನೇ ನೋಡದೆ – ಅದರೂ ಅವುಗಳನ್ನು ಯಥೇಷ್ಟವಾಗಿ ಉದ್ಧರಿಸಿ – ಇತರರ ಬರಹಗಳನ್ನೇ ಅವಲಂಬಿಸಿದ್ದಾರೆ. (ಆ ಬರಹಗಳಲ್ಲಿ ಶಾಸನಗಳ ಆಕರಗಳು ಸಿಗುತ್ತವೆ ತಾನೇ!). 'ಕೊಂಗುದೇಶ ರಾಜಕ್ಕಲ್' (=ಕೊಂಗುದೇಶ ರಾಜಾಕ್ಕಳ್), ವಾಡಿಭಸಿಂಹ (=ವಾದೀಭ ಸಿಂಹ), 'ತಾಡಮಂಗಲ ಮಾಧವ' (=ತಡಂಗಾಲ ಮಾಧವ), ಬಾಳ್ಗಲ್ಚ (=ಬಾಳ್ಗಚ್ಚು), ಪಿಟ್ಟುವಿಪತಿ (=ಪಿಟ್ಟುವಿಪತಿ, ಪೃಥ್ವೀಪತಿ), 'ಬಡ್ಡೆಗ' (=ಬದ್ದೆಗ)– ಇಂಥವನ್ನು ಬೇಕಾದಷ್ಟು ಹೆಸರಿಸಬಹುದು. ಗಂಗರ ಕಾಲದ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಬರೆಯುತ್ತ "ತಾಂಬೂಲ ಚರ್ವಣಕ್ಕೆ ಬಡವ ಬಲ್ಲಿದರೆಂಬ ಭೇದವಿರಲಿಲ್ಲ" ಎಂದು ಮುಂತಾಗಿ ಹೇಳುವುದು ನಗೆ ಬರಿಸುತ್ತದೆ.

ಅಲ್ಲಲ್ಲಿ ರೈಸ್, ಮೊರೇಸ್ ಮೊದಲಾದ ವಿದ್ವಾಂಸರ ಹೆಸರುಗಳನ್ನು ಉಲ್ಲೇಖಿಸಿರುವುದು ಅವರ ಗ್ರಂಥಗಳಿಂದ ವಿಷಯ ಸಂಗ್ರಹ ಮಾಡಿರುವುದನ್ನು ಮರಸುವುದಕ್ಕಾಗಿ. ಇಂತಹ ಪುಸ್ತಕ ಪ್ರಕಟಣೆಯಿಂದ ಯಾರಿಗೂ ಯಾವ ರೀತಿಯಲ್ಲಿಯೂ ಉಪಯೋಗವಾಗುವುದಿಲ್ಲ.

**ಕರ್ಣಾಟಕ ಶಾಸನ ಸಮೀಕ್ಷೆ:** ಕರ್ನಾಟಕದ ಶಾಸನಗಳ ವಿಷಯವಾಗಿ ಕೆ. ವಿ. ರಮೇಶ್ ಅವರು ಬೆಂಗಳೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ಕೊಟ್ಟ ಮೂರು ವಿಶೇಷೋಪನ್ಯಾಸಗಳ ಸಂಗ್ರಹ ಈ ಪುಸ್ತಕ.

ಮೊದಲ ಉಪನ್ಯಾಸದಲ್ಲಿ ಭಾರತದ ಇತಿಹಾಸ ರಚನೆಯಲ್ಲಿ ಶಾಸನಗಳ ಪಾತ್ರ ವೇನೆಂಬುದನ್ನು ಚರ್ಚಿಸುತ್ತಾರೆ. ಚೀನಾದಲ್ಲಿ ಶಾಸನಗಳನ್ನು ಕ್ರಮಬದ್ಧವಾಗಿ ಅಧ್ಯಯನಮಾಡುವ ಪ್ರವೃತ್ತಿ ಕ್ರಿಸ್ತಶಕ ಹನ್ನೊಂದನೇ ಶತಮಾನದಷ್ಟು ಹಳೆಯದಾದರೂ ಭಾರತದಲ್ಲಿ ಶಾಸನಗಳನ್ನು ಗಮನಕ್ಕೆ ತೆಗೆದುಕೊಂಡದ್ದು ಹದಿನೆಂಟನೇ ಶತಮಾನದ ಕೊನೆಯ ಭಾಗದಲ್ಲಿ. ಶಾಸನಗಳ ಕ್ರಮಬದ್ಧ ಅಧ್ಯಯನ ಇಲ್ಲಿ ಹೇಗೆ ಆರಂಭವಾಯಿತೆಂಬುದರ ಸ್ಥೂಲಚಿತ್ರವನ್ನು ರಮೇಶ್ ಕೊಟ್ಟಿದ್ದಾರೆ. 12ನೇ ಶತಮಾನದ ಕಲ್ಹಣ ತಾನು ಕಾಶ್ಮೀರದ ಇತಿಹಾಸ ಬರೆಯುವಲ್ಲಿ ತಾಮ್ರಪಟಗಳಂತಹ ದಾಖಲೆಗಳನು ನೋಡಿರುವುದಾಗಿ ಹೇಳಿಕೊಂಡಿದ್ದಾನೆ. ಶಾಸನವೆಂದ ತಕ್ಷಣ ಅದು ಹೇಳುವುದೆಲ್ಲ ನಿಜವಾಗಿರುವುದಿಲ್ಲ, ಅಲ್ಲಿರಬಹುದಾದ ಉತ್ಪ್ರೇಕ್ಷೆಗಳ ಬಗ್ಗೆ ಎಚ್ಚರ ಬೇಕೆಂದು ಸೂಚಿಸಿದ್ದಾರೆ. ಶಾಸನಗಳು ನಮಗೆ ಐತಿಹಾಸಿಕವಾದ ಹೊಸ ಸಂಗತಿಗಳನ್ನು ತಿಳಿಸುವುದಲ್ಲದೆ ಸಾಹಿತ್ಯದಂತಹ ಬೇರೆ ಮೂಲಗಳಿಂದ ತಿಳಿದುಬರುವ ಸಂಗತಿಗಳಿಗೆ ಸಮರ್ಥನೆ

ನೀಡುತ್ತವೆ. ರಮೇಶ್ ಅನೇಕ ಉದಾಹರಣೆಗಳೊಡನೆ ಇದನ್ನು ಸಮರ್ಥಿಸಿದ್ದಾರೆ.

ಭಾರತೀಯ ಶಾಸನಗಳ ಹಿನ್ನೆಲೆಯಲ್ಲಿ ಕರ್ನಾಟಕದ ಶಾಸನಗಳ ಸ್ವರೂಪ ಎಂತಹುದು ಎಂಬುದು ಎರಡನೆಯ ಉಪನ್ಯಾಸದ ಸಾರಾಂಶ. ಕರ್ನಾಟಕದ ಶಾಸನಗಳ ಇತಿಹಾಸ ಅಶೋಕನಿಂದ ಆರಂಭವಾಗುತ್ತದೆ (ಅಶೋಕನ 'ಐದು' ಶಾಸನಗಳು ಕರ್ನಾಟಕದಲ್ಲಿವೆ ಎಂಬ ಮಾತು ರಮೇಶರಿಗೆ ಅರಿಯದಂತೆ ಆಗಿರುವ ಪ್ರಮಾದ. ಸಿಕ್ಕಿರುವ ಅಶೋಕನ ಶಾಸನಗಳ ಸಂಖ್ಯೆ ಆರು). ಕರ್ನಾಟಕದಲ್ಲಿ ಮೊದಮೊದಲು ಬರಿಯ ಪ್ರಾಕೃತ ಶಾಸನಗಳು ದೊರೆತು. ಬಳಿಕ ಸಂಸ್ಕೃತ ಶಾಸನಗಳು ಪ್ರಬಲವಾಗಿ, ಮುಂದೆ ಕನ್ನಡ ಭಾಷೆಯ ಶಾಸನಗಳು ಕ್ರಮೇಣ ಹೆಚ್ಚುತ್ತಾ ಹೋಗುವುದನ್ನು ತೋರಿಸಿದ್ದಾರೆ. ಇದಕ್ಕೆ ಕಾರಣ – ದೇಶೀಯ ಭಾಷೆಗಳ ವಿಷಯದಲ್ಲಿ ಜನತೆ ಮತ್ತು ವಿದ್ವಾಂಸರು ಬೆಳೆಸಿಕೊಳ್ಳುತ್ತ ಬಂದ ಅಭಿಮಾನ ಎಂಬುದರಲ್ಲಿ ಸಂದೇಹವಿಲ್ಲ. ಚಾಲುಕ್ಯರ ಮೂಲ ಹೆಸರು ನಿಜವಾಗಿ 'ಚಲುಕ್ಯ' ಎಂಬ ರಮೇಶರ ವಾದ ಗಮನಾರ್ಹವಾದ್ದು. ಆದರೆ ಆ ವಂಶದ ಪೂಗವರ್ಮ ಎಂಬುದರ ಮೂಲ 'ಪುಗಟ್ವರ್ಮ' ಎಂದೂ (ಪುಗಟ್ = ಪೊಗಳು). ಆದ್ದರಿಂದ ಪೂಗವರ್ಮ ಮತ್ತು ಕೀರ್ತಿವರ್ಮ ಅಭಿನ್ನರು ಎಂಬ ಅವರ ವಾದ ಅಷ್ಟೇನೂ ಸಮರ್ಥನೀಯವೆಂಬಂತೆ ತೋರದು. ಕರ್ನಾಟಕದಲ್ಲಿ ಹಿಂದೆ ಮತ್ತು ಈಚೆಗೆ ದೊರಕಿರುವ ಅನೇಕ ಶಾಸನಗಳ ಪ್ರಾಮುಖ್ಯವನ್ನು ರಮೇಶ್ ವಿಸ್ತಾರವಾಗಿ ಚರ್ಚಿಸಿದ್ದಾರೆ. ಉಪನ್ಯಾಸದ ಕೊನೆಯಲ್ಲಿ ಇತಿಹಾಸದ ವಿದ್ಯಾರ್ಥಿಗಳು ಶಾಸನಗಳ ಸಾರಾಂಶವನ್ನು (ಅಥವಾ ಇಂಗ್ಲಿಷ್ ಅನುವಾದವನ್ನು) ಅವಲಂಬಿಸುತ್ತಿರುವ ಪ್ರವೃತ್ತಿಯನ್ನು ಖಂಡಿಸುತ್ತ ಶಾಸನಗಳ ಮೂಲಪಾಠವನ್ನು ತಾವೇ ಅಧ್ಯಯನ ಮಾಡುವುದರ ಅಗತ್ಯವನ್ನು ಒತ್ತಿ ಹೇಳಿದ್ದಾರೆ. "ಇತಿಹಾಸದ ಪುನಾರಚನೆಯೇನೂ ಗುರಿಯಿಲ್ಲದ ಒಂದು ಅಧ್ಯಯನ ಕ್ಷೇತ್ರವಲ್ಲ. ಅದರ ಮುಖ್ಯಗುರಿ ನಮ್ಮನ್ನು ನಮಗೇ ಪರಿಚಯ ಮಾಡಿಕೊಡುವುದು" ಎಂಬ ಅವರ ಮಾತು ಗಮನಾರ್ಹವಾದುದು.

ಮೂರನೆಯ ಉಪನ್ಯಾಸದ ವಿಷಯ ಕರ್ನಾಟಕ ಮತ್ತು ಹೊರನಾಡಿನ ಶಾಸನಗಳು. ಆಗ್ನೇಯ ಏಷ್ಯದಲ್ಲಿ ಭಾರತೀಯ ಸಂಸ್ಕೃತಿ ಅನೇಕ ಶತಮಾನ ಪ್ರಬಲವಾಗಿತ್ತೆಂಬುದು ಇತಿಹಾಸದ ವಿದ್ಯಾರ್ಥಿಗಳಿಗೆ ಗೊತ್ತಿರುವ ವಿಷಯ. ಆಗ್ನೇಯ ಏಷ್ಯದಲ್ಲಿ ಯಾವ ಕನ್ನಡ ಶಾಸನವೂ ದೊರೆಯದಿದ್ದರೂ ಅಲ್ಲಿಯ ರಾಜರ ಕೊನೆಯ '-ವರ್ಮನ್', '–ಮಾರ' ಎಂಬ ಭಾಗಗಳು. 'ದಿಂಡಿಗ' ಎಂಬ ರಾಜನ ಹೆಸರು, ಕ್ಯಾಂಬೋಡಿಯದ ಸಮ್ರೋನ್ ಶಾಸನ ರಾಷ್ಟ್ರಕೂಟರ ಕಾಲದ ಕನ್ನಡ ಲಿಪಿಯಲ್ಲಿರುವುದು – ಇವೇ ಮೊದಲಾದ ಸಾಕ್ಷ್ಯಾಧಾರಗಳು ಕರ್ನಾಟಕಕ್ಕೂ ಆಗ್ನೇಯ ಏಷ್ಯಕ್ಕೂ ಇದ್ದ ಸಾಂಸ್ಕೃತಿಕ ಸಂಬಂಧವನ್ನು ತೋರಿಸುತ್ತವೆ.

ಕರ್ನಾಟಕ ಬಿಟ್ಟು ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಇಲ್ಲಿನ ದೊರೆಗಳ ಶಾಸನಗಳು ಸಾಕಷ್ಟು ದೊರೆತಿವೆ. ಇಮ್ಮಡಿ ಪುಲಿಕೇಶಿಯ ಮಗ ಒಂದನೆಯ ವಿಕ್ರಮಾದಿತ್ಯನ ತಾಮ್ರಶಾಸನಗಳು ತಮಿಳುನಾಡು. ಆಂಧ್ರ, ಮಹಾರಾಷ್ಟ್ರಗಳಲ್ಲಲ್ಲದೆ ಗುಜರಾತಿನ

ಬಡೋದ ಜಿಲ್ಲೆಯಲ್ಲಿಯೂ ದೊರೆತಿವೆ. ಮಧ್ಯಪ್ರದೇಶದ ಸಾತ್ನಾ ಜಿಲ್ಲೆಯ ಜೂರಾ ಎಂಬಲ್ಲಿ ದೊರೆತಿರುವ ಕನ್ನಡ ಶಾಸನ ರಾಷ್ಟ್ರಕೂಟ ಮೂರನೆಯ ಕೃಷ್ಣನ ಪ್ರಶಸ್ತಿಯನ್ನು ಒಳಗೊಂಡಿದೆ. ಹೊರನಾಡಿನ ಕನ್ನಡ ಶಾಸನಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳ ಪ್ರಭಾವದ ಕಡೆ ರಮೇಶ್ ಗಮನ ಸೆಳೆದಿದ್ದಾರೆ. ಈಚೆಗೆ ಸಿಕ್ಕ ಹೊರನಾಡಿನ ಶಾಸನಗಳಲ್ಲಿ ಆಂಧ್ರಪ್ರದೇಶದ ಜಿನವಲ್ಲಭನ ಶಾಸನ ಬಹಳ ಗಮನಾರ್ಹವಾದುದು. ಜಿನವಲ್ಲಭ ಮತ್ತು ಪಂಪರ ತಾಯಿ ಅಬ್ಬಣಬ್ಬೆ ಎಂಬುದನ್ನು ತೋರಿಸಿ ಕೊಟ್ಟವರಲ್ಲಿ ಜಿ.ಎಸ್. ಗಾಯಿ ಮೊದಲಿಗರೇನೂ ಅಲ್ಲ. ಅವರಿಗಿಂತ ಮೊದಲೇ ಆ ವಿಷಯದ ಬಗ್ಗೆ ಮತ್ತು ಇಡೀ ಶಾಸನದ ಬಗ್ಗೆ ಚರ್ಚೆ ನಡೆದು ತೀರ್ಮಾನವೂ ಆಗಿತ್ತು ಎಂಬುದನ್ನು ರಮೇಶ್ ಸೂಚಿಸಿದ್ದರೆ ಉಚಿತವಾಗುತ್ತಿತ್ತು.

ಹೀಗೆ ತಮ್ಮ ಉಪನ್ಯಾಸಗಳಲ್ಲಿ ರಮೇಶ್ ಕರ್ನಾಟಕದ ಒಳಗಿನ ಮತ್ತು ಹೊರಗಿನ ಶಾಸನಗಳನ್ನು ಸಮೀಕ್ಷೆ ಮಾಡಿ ಅವುಗಳ ಮಹತ್ವವನ್ನು ಎತ್ತಿ ತೋರಿಸುತ್ತ, ಅವುಗಳ ಅಧ್ಯಯನದಲ್ಲಿ ಎದುರಾಗುವ ಸಣ್ಣ ಸಣ್ಣ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸಿದ್ದಾರೆ. ಇದರ ಫಲವಾಗಿ ಅನೇಕ ಹೊಸ ಸಂಗತಿಗಳ ಬಗ್ಗೆ ಪ್ರಪ್ರಥಮವಾಗಿ ಚರ್ಚಿಸಿರುವರಲ್ಲದೆ ಆ ನೆಪದಲ್ಲಿ ಅನೇಕ ಅಪ್ರಕಟಿತ ಶಾಸನಗಳನ್ನೂ ಪ್ರಸ್ತಾಪಿಸಿದ್ದಾರೆ. ಈ ಚಿಕ್ಕ ಪುಸ್ತಕ ಶಾಸನಗಳ ಶಾಸ್ತ್ರೀಯ ಅಧ್ಯಯನ ಮಾಡುವವರಿಗೆ ಒಂದು ದಾರಿದೀಪವಾಗಬಲ್ಲುದು. ಖಚಿತ ವಿಷಯ ಪರಿಜ್ಞಾನ, ಸಂದೇಹಕ್ಕೆಡೆಯಿಲ್ಲದ ನಿರೂಪಣೆ, ಸೊಗಸಾದ ಭಾಷೆ, ಅಲ್ಲಲ್ಲಿ ತಿಳಿಹಾಸ್ಯ ಇವು ಇದನ್ನು ಒಂದು ಸಂಗ್ರಹಯೋಗ್ಯ ಪುಸ್ತಕವನ್ನಾಗಿ ಮಾಡಿವೆ.

**ಕನ್ನಡ ವಿಶ್ವಕೋಶ - ಸಂಪುಟ 3 :** ಕನ್ನಡದಲ್ಲಿ ವಿಶ್ವಕೋಶವನ್ನು ತರುವ ಮಹಾಪ್ರಯತ್ನದಲ್ಲಿ ಮೂರನೆಯ ಸಂಪುಟ ಪ್ರಕಟವಾಗಿದೆ. ಇದರಲ್ಲಿ "ಎರಟೋ" ದಿಂದ "ಕರೀಲಿಯ"ದವರೆಗೆ ಅಕಾರಾದಿಯಾಗಿ ಲೇಖನಗಳು ಬಂದಿವೆ.

ಇಲ್ಲಿಯ ಲೇಖನಗಳನ್ನು ಆಯಾ ಕ್ಷೇತ್ರದಲ್ಲಿ ಪರಿಣತರಾದವರ ಕೈಯಲ್ಲಿ ಬರೆಯಿಸಿದ್ದಾರೆ. ಆದ್ದರಿಂದ ಸಹಜವಾಗಿಯೇ ಆಯಾ ಕ್ಷೇತ್ರದ ವಿದ್ವಾಂಸರು ಅವುಗಳನ್ನು ವಿಮರ್ಶಿಸಬೇಕಾಗುತ್ತದೆ. ಇತಿಹಾಸ, ಭೂಗೋಳ, ಸಾಹಿತ್ಯ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಭಾಷಾವಿಜ್ಞಾನ, ಮತಧರ್ಮ, ವಿಜ್ಞಾನದ ಬೇರೆ ಬೇರೆ ಶಾಖೆಗಳು – ಇತ್ಯಾದಿ ನೂರಾರು ವಿಷಯಕ ಲೇಖನಗಳಿವೆ. ಇದರಿಂದ ವಿಶ್ವಕೋಶದಂತಹ ಗ್ರಂಥವನ್ನು ಒಬ್ಬ ವ್ಯಕ್ತಿ ವಿಮರ್ಶಿಸಲು ಅಸಾಧ್ಯ. ಅಲ್ಲದೆ, ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳೇ ಹೆಚ್ಚಾಗಿರುವ ಇಲ್ಲಿ – ಇದು ಸಹಜ ಮತ್ತು ಅನಿವಾರ್ಯ – ಸಾಹಿತ್ಯ, ಸಂಸ್ಕೃತಿಗಳ ವಿದ್ಯಾರ್ಥಿಯಾದ ನನ್ನ ಇತಿಮಿತಿಗಳು ಸ್ಪಷ್ಟವಾಗಿ ಎದ್ದು ಕಾಣುತ್ತವೆ.

ಆದರೆ, ಇಲ್ಲಿಯ ಲೇಖನಗಳು ತಾಂತ್ರಿಕವಾಗಿರಬೇಕೆಂದಿಲ್ಲ. ವಿಶ್ವಕೋಶ ಸಂಶೋಧನ ಲೇಖನಗಳಿಗೆ ಸ್ಥಳ ಅಲ್ಲವೇ ಅಲ್ಲ. ಈಗಾಗಲೇ ಪ್ರಕಟವಾಗಿರುವ ಜ್ಞಾನವನ್ನು ಸಾರ

ವತ್ತಾಗಿ. ತಿಳಿಯಾಗಿ. ಸ್ಪಷ್ಟವಾಗಿ ನಿರೂಪಿಸುವುದು ಅದರ ಉದ್ದೇಶ. ಲೇಖನದಲ್ಲಿ ಸಾಧ್ಯವಾದಷ್ಟು ವಿವರಗಳಿರಬೇಕು: ಸಾಮಾನ್ಯ ಬಳಕೆಯಲ್ಲಿಲ್ಲದ ಪಾರಿಭಾಷಿಕ ಪದವೊಂದನ್ನು ಬಳಸಿದಾಗ ಅದನ್ನು ವಿವರಿಸಬೇಕು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ವಿಶ್ವಕೋಶದ ಎಲ್ಲ ಲೇಖನಗಳನ್ನೂ ಎಲ್ಲರೂ ಓದುವುದಿಲ್ಲ. ಯಾವುದೋ ಸಂಗತಿಯ ಬಗ್ಗೆ ತಿಳಿಯಲಪೇಕ್ಷಿಸುವವರಿಗೆ ತಕ್ಕಮಟ್ಟಿನ ವಿವರಗಳನ್ನು ಕೊಟ್ಟು, ಹೆಚ್ಚಿನ ಅಧ್ಯಯನಕ್ಕೆ ಸೂಚನೆಗಳಿರಬೇಕು. ಭಾಷೆ ಮಕ್ಕಳ ಪುಸ್ತಕದ ಭಾಷೆಯಂತೆ ಪ್ರಾಥಮಿಕವಾಗಿರಬಾರದು: ಸ್ವತಂತ್ರ ಲೇಖನಗಳಷ್ಟು ಪ್ರೌಢವೂ ಆಗಿರಬಾರದು. ವಿಶ್ವಕೋಶ ಯಾವುದೇ ನಿರ್ದಿಷ್ಟ ವಯಸ್ಸಿನ. ಶಿಕ್ಷಣದ ವ್ಯಕ್ತಿಗಳನ್ನೂ ಗಮನದಲ್ಲಿಟ್ಟುಕೊಳ್ಳುವುದಿಲ್ಲವಾದ್ದರಿಂದ, ಭಾಷೆ ಮತ್ತು ನಿರೂಪಣಾ ವಿಧಾನಗಳು ಸುವರ್ಣಮಾಧ್ಯಮದಲ್ಲಿರುವುದು ಯಾವಾಗಲೂ ಅಪೇಕ್ಷಣೀಯವಾಗಿರುತ್ತದೆ.

ಕನ್ನಡ ವಿಶ್ವಕೋಶದಲ್ಲಿ ಯಾವುದೇ ವಿಷಯ ಬಂದರೂ ಸಾಮಾನ್ಯವಾಗಿ ಮೊದಲ ವಾಕ್ಯ ಅಥವಾ ವಾಕ್ಯಗಳು ಆ ವಿಷಯವನ್ನು ಸ್ಪಷ್ಟಪಡಿಸುತ್ತವೆ; ಬಳಿಕ ಅದಕ್ಕೆ ಸಂಬಂಧಿಸಿದ ವಿವರಗಳು ಬರುತ್ತವೆ. ಉದಾಹರಣೆಗೆ – "ಕಡಲು ದರೋಡೆ: ಸಾಮಾನ್ಯವಾಗಿ ಯಾವ ದೇಶದ ಹದ್ದಿಗೂ ಒಳಪಡದ ಸಮುದ್ರ ಪ್ರದೇಶದಲ್ಲಿ ಅನಧಿಕೃತವಾಗಿ ಹಡಗುಗಳ ಮೇಲೆ ನಡೆಸಿದ ದರೋಡೆ. ಹಿಂಸಾಕೃತ್ಯ (ಪೈರೆಸಿ)". ಬಳಿಕ ಕಡಲು ದರೋಡೆಯ ಇತಿಹಾಸ, ಪ್ರಭೇದಗಳ (ಈಗಿನ ಸ್ಕೈಜಾಕಿಂಗ್ ಕೂಡ ಒಂದು ರೀತಿಯ ಕಡಲು ದರೋಡೆಯೇ) ಸಂಗತಿಗಳು ಬಂದಿವೆ. ಭಿನ್ನಾಭಿಪ್ರಾಯಗಳಿದ್ದ ಕಡೆ. ಅಲ್ಲಿ ಹೆಚ್ಚು ಚರ್ಚೆಗೆ ಹೋಗದೆ ಅದನ್ನು ಸೂಚಿಸಿ. ಬಹುಜನಸಮ್ಮತ ಅಭಿಪ್ರಾಯವನ್ನಷ್ಟನ್ನೇ ನಿರೂಪಿಸುವುದು ವಿಶ್ವಕೋಶದ ಲೇಖನಗಳ ಸಾಮಾನ್ಯಲಕ್ಷಣ. ತೀರ ವೈಯಕ್ತಿಕವಾದ ಭಾವ. ಅಭಿಪ್ರಾಯಗಳಿಗೆ ಅಲ್ಲಿ ಸಾಮಾನ್ಯವಾಗಿ ಜಾಗವಿಲ್ಲ.

ಮೇಲಿನ ಸೂಚನೆಗಳನ್ನನುಸರಿಸಿ ಕೆಲವು ಸಂಗತಿಗಳನ್ನು ಪ್ರಸ್ತಾಪಿಸ ಬಯಸುತ್ತೇನೆ. (ಈ ಪರಿಶೀಲನೆಯಲ್ಲಿ ವೈಜ್ಞಾನಿಕ ಲೇಖನಗಳನ್ನು ಬಿಟ್ಟಿದ್ದೇನೆ.)

ಪ್ರಸ್ತುತ ಸಂಪುಟದಲ್ಲಿ ಒಂದನೆಯ ಮತ್ತು ಎರಡನೆಯ ಮಹಾಯುದ್ಧಗಳಿಗೆ ಸಂಬಂಧಿಸಿದ ಲೇಖನಗಳು—ಅದರಲ್ಲೂ ಎರಡನೆಯದು—ವಿಸ್ತಾರವಾಗಿದ್ದು. ವಿಪುಲ ಸಾಮಗ್ರಿಯಿಂದ ತುಂಬಿರುವುದು ಮಾತ್ರವಲ್ಲದೆ ಸ್ವಾರಸ್ಯ ನಿರೂಪಣೆಯಿಂದಲೂ ಕೂಡಿವೆ. ಅಲ್ಲಲ್ಲಿ ಬಂದಿರುವ ಚಿತ್ರಗಳು ಯುದ್ಧದ ಚಿತ್ರವನ್ನು ಕಣ್ಣಿಗೆ ಕಟ್ಟುತ್ತವೆ. ಲೇಖನದ ಕೊನೆಯಲ್ಲಿ ಎರಡನೆಯ ಮಹಾಯುದ್ಧದ ಮುಖ್ಯ ಘಟನೆಗಳನ್ನು ಕಾಲಾನುಕ್ರಮವಾಗಿ ಕೊಟ್ಟಿದೆ. ಎಲಿಫೆಂಟ. ಎಲ್ಲೋರದ ಲೇಖನಗಳು ಸಚಿತ್ರವಾಗಿದ್ದು ಸೊಗಸಾಗಿವೆ. ಒಬ್ಬ ಕವಿಯ ಪರಿಚಯವನ್ನು ವಿಶ್ವಕೋಶದಲ್ಲಿ ಹೇಗೆ ಮಾಡಿಕೊಡಬಹುದೆಂಬುದಕ್ಕೆ ಟಿ.ಎಸ್. ಎಲಿಯಟ್ಟನ ಬಗ್ಗೆ ಬಂದಿರುವ ಬರಹ ಮಾದರಿಯಾಗಿದೆ. ಅವನ ಜೀವನ ಚರಿತ್ರೆ, ಕೃತಿ ಪರಿಚಯ, ಎಷ್ಟು ಬೇಕೋ ಅಷ್ಟು ವಿಮರ್ಶೆ. ಒಟ್ಟಿನಲ್ಲಿ ಆಧುನಿಕ ಇಂಗ್ಲಿಷ್ ಸಾಹಿತ್ಯದಲ್ಲಿ ಅವನ ಸ್ಥಾನ - ಇವು ಚೊಕ್ಕವಾಗಿ ಬಂದಿವೆ. ಎಲ್ಲಮ್ಮ ದೇವತೆಯ ಬಗ್ಗೆ ಬಂದಿರುವ ಬರಹವೂ ಕೂಡ ಅವಳ ಇತಿಹಾಸ. ಅವಳ ಬಗ್ಗೆ ದಂತಕಥೆ. ಭಕ್ತರ ಆಚರಣೆಗಳನ್ನು

ಹೊಂದಿದ್ದು ಓದಿಸಿಕೊಂಡು ಹೋಗುತ್ತದೆ. ಎಲ್ಲಿಸ್ ಫ್ರಾನ್ಸಿಸ್ ವೈಟನನ್ನು ಕುರಿತ ಬರಹ ಚೆನ್ನಾಗಿದ್ದರೂ, ದ್ರಾವಿಡ ಭಾಷಾ ವಿಜ್ಞಾನದ ಇತಿಹಾಸದಲ್ಲಿ ಅವನ ಸ್ಥಾನ ವೇನೆಂಬುದನ್ನು ಇನ್ನೂ ವಿಶದ ಪಡಿಸಬಹುದಿತ್ತು. ಐರ್ಲೆಂಡ್ ಈಚೆಗೆ ನಡೆಯುತ್ತಿರುವ ಮತೀಯ ಗಲಭೆಗಳಿಂದ ವಿಶ್ವದ ಗಮನವನ್ನು ಸೆಳೆದಿದೆ. 'ಐರ್ಲೆಂಡ್' ಕುರಿತ ಲೇಖನ ದಲ್ಲಿ ಉತ್ತರ ಐರ್ಲೆಂಡ್ ಇನ್ನೂ ಏಕೆ ಪ್ರತ್ಯೇಕವಾಗಿ ಉಳಿದಿದೆ, ಅದಕ್ಕೂ ಇಂಗ್ಲೆಂಡಿಗೂ ರಾಜಕೀಯವಾಗಿ ಸಂಬಂಧ ಎಂತಹುದು ಎಂಬುದು ಸ್ಪಷ್ಟವಾಗುವುದಿಲ್ಲ. 'ಒಗಟು' ಬಗ್ಗೆ ನಿಜವಾಗಿ ಮೂರು ಲೇಖನಗಳ ಅಗತ್ಯವಿದೆಯೇ ಎಂದು ಅನ್ನಿಸುತ್ತದೆ. ಇಷ್ಟಾ ದರೂ ಯಾವುದರಲ್ಲೂ ಅವುಗಳ ಕ್ರಮಬದ್ಧ ವಿಶ್ಲೇಷಣೆ ಇಲ್ಲ. ಓಣಂ, ಕರಗ ಹಬ್ಬ ಗಳನ್ನು ಕುರಿತ ಬರಹಗಳು ರಸವತ್ತಾಗಿವೆ. ಒರಿಸ್ಸದ ಇತಿಹಾಸ, ವಾಸ್ತುಶಿಲ್ಪ, ಭೂಗೋಳ, ಈಗಿನ ಪರಿಸ್ಥಿತಿ ಇತ್ಯಾದಿಗಳ ಬಗ್ಗೆ ಒಂಬತ್ತು ಪುಟ ಇರುವುದನ್ನು ನೋಡಿದರೆ ಒರಿಯಾ ಭಾಷಾ ಸಾಹಿತ್ಯಕ್ಕೆ ಎಂಟು ಪುಟ ಜಾಸ್ತಿ ಎಂದು ಅನ್ನಿಸುತ್ತದೆ. 'ಕಂಕ' (=ಯುಧಿಷ್ಠಿರನ ಹೆಸರು) ಎಂಬ ಪ್ರತ್ಯೇಕ ಲೇಖನದ ಅಗತ್ಯ ಕಾಣಿಸುವುದಿಲ್ಲ. ಉತ್ತರ ಪ್ರದೇಶದ ಜೈನಕ್ಷೇತ್ರ ಕಂಪಿಲ ನಗರದ ಬಗ್ಗೆ ಲೇಖನವಿಲ್ಲದಿದ್ದರೂ ನಡೆಯು ತ್ತಿತ್ತು. ಆದರೆ ಕರ್ನಾಟಕದ ಕಂಪಿಲಿ, ಕಂಪಿಲರಾಯನ ಬಗ್ಗೆ ಲೇಖನವಿಲ್ಲದಿರುವುದು ಆಶ್ಚರ್ಯವಾಗುತ್ತದೆ. 'ಏಕೋತ್ತರ ಶತಸ್ಥಲ'ದ ಬಗ್ಗೆ ತಿಳಿದುಕೊಳ್ಳಬಯಸುವವರು ಆ ಹೆಸರಿನ ಲೇಖನವನ್ನು ಓದದಿರುವುದು ಒಳ್ಳೆಯದು. ಹಾಗೆಯೇ 'ಕದಳಿ'ಯ ಬಗ್ಗೆ.

ಕನ್ನಡಕ್ಕೆ ಸಂಬಂಧಿಸಿದಂತೆ ಅನೇಕ ಲೇಖನಗಳು ಇಲ್ಲಿ ಬಂದಿವೆ. ಈ ವಿಶ್ವಕೋಶ ವನ್ನು ಪ್ರಕಟಿಸುತ್ತಿರುವ ಕನ್ನಡ ಅಧ್ಯಯನ ಸಂಸ್ಥೆಯನ್ನು ಕುರಿತಾದ ಬರಹ ಭಾವುಕ ತನದಿಂದ ಮುಕ್ತವಾಗಿ ಸಂಗತಿನಿಷ್ಠ ( factual ) ವಾಗಿದ್ದರೆ ಚನ್ನಾಗಿರುತ್ತಿತ್ತು. 'ಕನ್ನಡ ಜಾನಪದ' ಲೇಖನದಲ್ಲಿ ಲೇಖಕರು ಸಂಗತಿಗಳನ್ನು ಕೊಡುವಲ್ಲಿ ತೋರುವ ಪ್ರಬುದ್ಧತೆಯನ್ನು ವಿಮರ್ಶೆಯಲ್ಲಿ ತೋರುವುದಿಲ್ಲ. 'ಕನ್ನಡದಲ್ಲಿ ಗದ್ಯಸಾಹಿತ್ಯ' ಕೆಟ್ಟ ಮಾದರಿಗೆ ಒಂದು ನಿದರ್ಶನ. "ಸು. 11ನೇ ಶತಮಾನದಿಂದ 18ನೆಯ ಶತ ಮಾನದ ಮಧ್ಯದಲ್ಲಿ ಪದ್ಯ ಶಾಸನಗಳೇ ಹೇರಳವಾಗಿ ದೊರೆಯುತ್ತವೆ...ವೀರಗಲ್ಲು, ದತ್ತಿಶಾಸನಗಳು ವಿಶೇಷವಾಗಿ ಗದ್ಯದಲ್ಲಿಯೇ ದೊರೆಯುತ್ತವೆ" ಎಂಬ ಹೇಳಿಕೆಯಲ್ಲಿನ ವಿಸಂಗತಿ, ಪರಸ್ಪರ ವಿರೋಧಗಳು ಎದ್ದು ಕಾಣುತ್ತವೆ. ಈ ಲೇಖನದಲ್ಲಿ ವಿಶ್ವಕೋಶದ ಗದ್ಯವನ್ನೂ ಹೊಗಳಿರುವುದು ಸೋಜಿಗದ ಸಂಗತಿ. 'ಕನ್ನಡದಲ್ಲಿ ಪ್ರಬಂಧ ಸಾಹಿತ್ಯ' ಬರಹದಲ್ಲಿ "ಈ ಕ್ಷೇತ್ರಕ್ಕೆ ಅಮರ ಕೊಡುಗೆಯೆಂದರೆ ಹಾ. ಮಾ. ನಾಯಕರ 'ನಮ್ಮ ಮನೆಯ ದೀಪ'" ಎಂಬಂತಹ ಅಪ್ರಬುದ್ಧ ಹೇಳಿಕೆಗಳಿವೆ. 'ಕನ್ನಡದಲ್ಲಿ ವಚನಸಾಹಿತ್ಯ'ದ ಬಗ್ಗೆ ಬರೆಯುತ್ತ, ವಚನಗಳನ್ನು ಬೆಂಗಳೂರಿನ ಬಸವ ಸಮಿತಿಯವರೂ ಪರಿಷ್ಕರಿಸಿ ಪ್ರಕಟಿಸುತ್ತಿದ್ದಾರೆಂದು ಹೇಳಿಬಿಟ್ಟಿದ್ದಾರೆ. ವಿಮರ್ಶೆಯ ಕ್ಷೇತ್ರದಲ್ಲಿ ದೇ. ಜ. ಗೌ. ಅವರದು ಮುಖ್ಯ ಹೆಸರು ಎಂಬುದು ಇನ್ನೊಂದು ಹೇಳಿಕೆ. ಇಂತಹ ಕಡೆಗಳಲ್ಲೆಲ್ಲ, ವಿಮರ್ಶೆ ಎಷ್ಟು ಹದಗೆಡಬಹುದೆಂಬುದಕ್ಕೆ, ಸಂಯಮದ ಅಭಾವಕ್ಕೆ ನಿದರ್ಶನಗಳನ್ನು ನೋಡಬಹುದು.

ಬಹುಶಃ ಈ ರೀತಿಯ ಸಂಗತಿನಿಷ್ಠವಲ್ಲದ ಮಾತುಗಳೇ ವಿಶ್ವಕೋಶದ ಚೌಕಟ್ಟಿಗೆ ಹೊಂದಿಕೆಯಾಗುವುದಿಲ್ಲವೆಂದು ತೋರುತ್ತದೆ. 'ಕನ್ನಡದಲ್ಲಿ ನಾಟಕ ಸಾಹಿತ್ಯ', 'ಕನ್ನಡ ಪತ್ರಿಕೋದ್ಯಮ'. 'ಕನ್ನಡ ಛಂದಸ್ಸು' ಮೊದಲಾದ ತೂಕದ ಬರಹಗಳೂ ಇಲ್ಲಿವೆ.

ವಿಶ್ವಕೋಶದ ರೇಖಾಚಿತ್ರಗಳು. ಭಾವ ಮತ್ತು ವರ್ಣಚಿತ್ರಗಳು ಸುಂದರವಾಗಿವೆ. ಇಡೀ ಪುಸ್ತಕವನ್ನು ಹೊರತಂದಿರುವ ರೀತಿಯಿಂದಾಗಿ ಈ ವಿಶ್ವಕೋಶ ಕನ್ನಡ ಪ್ರಕಟಣ ಪ್ರಪಂಚದಲ್ಲಿ ಒಂದು ಮೈಲಿಗಲ್ಲಾಗಿದೆ.

ವಿಶ್ವಕೋಶ ಅನೇಕರ ಬರಹಗಳ ಸಂಗ್ರಹ. ಇವರಲ್ಲಿ ತೂಕದ್ದು. ಜಳ್ಳು ಎರಡೂ ಇರಲು ಸಾಧ್ಯ. ಜಳ್ಳನ್ನು ಕಳೆಯಲವಕಾಶವಿದ್ದರೂ, ಕೆಲಸ ಬೇಗ ಆಗಲೆಂಬ ಕಾರಣ ದಿಂದಲೋ. ಸರಿಯಾದವರು ಪರಿಶೀಲಿಸದಿದ್ದುದರಿಂದಲೋ ಉಳಿದುಬಿಡಬಹುದು. ಆದರೆ ಇಂತಹ ಒಂದು ಬೃಹತ್ ಕಾರ್ಯಕ್ಕೆ ಬೇಕಾಗುವ ಕಾರ್ಯಕೌಶಲ, ಯೋಜನೆ, ತಾಳ್ಮೆ. ಶ್ರಮಗಳು ಕಡಮೆಯವಲ್ಲ. ಇದು "ಜಗತ್ತಿನ ಆಧುನಿಕ ವಿಶ್ವಕೋಶಗಳ ಸಾಲಿನಲ್ಲಿ ನಿಲ್ಲಬೇಕೆಂಬ ಮಹದಾಶಯ" – ಸಂಪಾದಕರ ಆದರ್ಶ. ಇದರಲ್ಲಿ ಅರೆಕೊರೆಗಳಿವೆಯೆಂಬ ಅರಿವೂ ಸಂಪಾದಕರಿಗೆ ಇದೆ. ಅವುಗಳನ್ನು ಅವರು ಮುಂದೆ ತಿದ್ದಿಕೊಳ್ಳುತ್ತಾರೆ. ವಿಶ್ವಕೋಶವನ್ನು ಕನ್ನಡಿಗರು ಕಾಣುವಂತೆ ಮಾಡಿದ್ದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯವನ್ನು ಹೃತ್ಪೂರ್ವಕವಾಗಿ ಅಭಿನಂದಿಸಬೇಕಾಗಿದೆ.

## ಜಾನಪದ

**ಚಂದ್ರಶೇಖರ ಕಂಬಾರ**

ಪಶ್ಚಿಮದಂತೆ ನಮ್ಮಲ್ಲೂ ಬೇಂದ್ರೆ, ಮಧುರಚೆನ್ನ, ಮಾಸ್ತಿ, ಬಿ. ಎಂ. ಶ್ರೀ.
ಮುಂತಾದ ರಮ್ಯಕವಿಗಳೇ ಜನಪದ ಸಾಹಿತ್ಯದ ಬಗ್ಗೆ ಮೊದಲು ಆಸಕ್ತಿವಹಿಸಿ ವಿದ್ವಾಂ
ಸರ ಗಮನ ಸೆಳೆದರು. ಆದರೆ ಅವರ ಕುತೂಹಲ ಭಾಷೆಯ ಹಸಿತನಕ್ಕೇ ಸೀಮಿತ
ವಾಗಿತ್ತು. ಮುಂದೆ ಸ್ವಾತಂತ್ರ್ಯ ಸಿಕ್ಕಿದ ಮೇಲೆ ಹಳ್ಳಿಯ ಜೀವನದಲ್ಲಿ ಬದಲಾವಣೆ
ಯಾಗಿ ಜನಪದ ಸಾಹಿತ್ಯ ನಶಿಸಿಹೋಗಬಹುದೆಂಬ ಭಯ ವಿದ್ವಾಂಸರಲ್ಲಿ ಮೂಡಿದ್ದು
ಸಹಜವೇ. ಯಾಕೆಂದರೆ ಒಂದು ಸಮಾಜದಲ್ಲಿ ಬರೆವಣಿಗೆ ಪ್ರಮುಖವಾಗತೊಡ
ಗಿದಂತೆ ತೋಂಡಿ ಸಂಪ್ರದಾಯ (Oral tradition) ದ ಜನಪದ ಸಾಹಿತ್ಯ ಬೇರೆ
ತಿರುವನ್ನು ತೆಗೆದುಕೊಳ್ಳತೊಡಗುತ್ತದೆ ಅಥವಾ ನಾಶವಾಗಲೂ ಬಹುದು.
ಹೀಗಾಗಿ ಅದನ್ನು ಹಾಳಾಗಗೊಡದಂತೆ ಸಾಧ್ಯವಾದಷ್ಟು ಬರೆವಣಿಗೆಯಲ್ಲಿ ಹಿಡಿದಿಡ
ಬೇಕೆಂಬ ಪ್ರಯತ್ನದಿಂದ ಅನೇಕ ಸಂಗ್ರಹಕಾರರು ಮುಂದೆ ಬಂದರು. ಆದರೆ ಪ್ರಾರಂಭದ
ಸಂಗ್ರಹಕಾರರಿಗೂ (ಶ್ರೀ ಅರ್ಚಕ ಬಿ. ರಂಗಸ್ವಾಮಿ ಒಬ್ಬರನ್ನು ಬಿಟ್ಟು) ಇಂದಿನವರಿಗೂ
ವ್ಯತ್ಯಾಸವಿದೆ. ಮೊದಲಿನವರಿಗೆ ಅದು ಹಾಳಾಗಿಹೋಗಬಾರದೆಂಬ ಒಂದೇ ಸರಳ
ವಾದ ಉದ್ದೇಶವಿದ್ದರೆ, ಇಂದಿನ ಸಂಗ್ರಹಕಾರನ ಕುತೂಹಲ, ಪೂರ್ವತಯಾರಿ ಹೆಚ್ಚು
ಸಂಕೀರ್ಣವಾದುದು. ಜನಪದ ಸಾಹಿತ್ಯ ಸಂಸ್ಕೃತಿಯ ಒಂದಂಗವೆಂಬ ಕಲ್ಪನೆ, ಅದನ್ನು
ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಉದ್ದೇಶದಿಂದ ಇಂದಿನ ಸಂಗ್ರಹಕಾರ
ಮುಂದುವರಿಯಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಅದು ಸಾಹಿತ್ಯವೆಂಬ. ಯಾವ ಶಿಷ್ಟ
ಸಾಹಿತ್ಯಕ್ಕೂ ಕಡಮೆಯಲ್ಲವೆಂಬ ಉದ್ಗಾರಗಳಿಗೀಗ ಅವಕಾಶವಿಲ್ಲ. ಜನಪದ ಸಾಹಿತ್ಯಕ್ಕೆ
ಸಾಹಿತ್ಯ ಎಂದು ಹೇಳುವುದು ಬಹಳ ದುರ್ಬಲವಾದ ಅರ್ಥದಲ್ಲಿಯೇ ಹೊರತು ಶಿಷ್ಟ
ಸಾಹಿತ್ಯದ ಅರ್ಥದಲ್ಲಿ ಅಲ್ಲ. ಯಾಕೆಂದರೆ ಎರಡರ ಮಾಧ್ಯಮಗಳು ಬೇರೆ ಬೇರೆ. ಶಿಷ್ಟ
ಸಾಹಿತ್ಯಕ್ಕೆ ಬರೆವಣಿಗೆ ಮಾಧ್ಯಮವಾದರೆ, ಹಾಡುತ್ತಿರುವ ಧ್ವನಿ ಜನಪದ ಸಾಹಿತ್ಯದ
ಮಾಧ್ಯಮ. ಮಾಧ್ಯಮಗಳೇ ಭಿನ್ನವಾದಾಗ ಸೂಕ್ಷ್ಮ ಹೋಲಿಕೆಗೆ ಅವಕಾಶವೆಲ್ಲಿದೆ?
ಜನಪದ ಸಾಹಿತ್ಯ ತೋಂಡಿ ಸಂಪ್ರದಾಯವನ್ನು ಅನುಸರಿಸುವುದರಿಂದ ಹಿಗ್ಗಿಯೋ
ಕುಗ್ಗಿಯೋ ಬಾಯಿಂದ ಬಾಯಿಗೆ ಬೆಳೆಯುತ್ತ ಹೋಗುವಂಥದು. ಶಿಷ್ಟ ಸಾಹಿತ್ಯ
ಹಾಗಲ್ಲ. ಜನಪದ ಸಾಹಿತ್ಯ ಸಮೂಹಪ್ರಜ್ಞೆಯಿಂದ ಹುಟ್ಟಿ ಬರುವಂಥದು. ಶಿಷ್ಟ
ಸಾಹಿತ್ಯ ವೈಯಕ್ತಿಕತೆಯಿಂದ ಹುಟ್ಟುವಂಥದು. ಆದ್ದರಿಂದಲೇ ಜನಪದ ಸಾಹಿತ್ಯ
ಅನಾಮಿಕವಾಗಿರುತ್ತದೆ.

ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯಗಳ ನಡುವೆ 'ಜನಪ್ರಿಯ ಸಾಹಿತ್ಯ'
ವೆಂಬೊಂದು ವಿಭಾಗ ಕಲ್ಪಿಸುವುದು ಅಗತ್ಯವೆನಿಸುತ್ತದೆ. ಮಾಧ್ಯಮ. ಕಲೆಯ ಪ್ರಜ್ಞೆ
ಗಳನ್ನು ಗಮನದಲ್ಲಿಟ್ಟು. ಇದನ್ನು ದುರ್ಗಾ ಭಾಗವತ ತಮ್ಮ An Outline of Indian
Folklore ಎಂಬ ಪುಸ್ತಕದಲ್ಲಿ ಸೂಚಿಸಿದ್ದಾರೆ. ಕನ್ನಡದ ಸಂದರ್ಭದಲ್ಲಿ ಅದನ್ನು ಹೀಗೆ

ವ್ಯಾಖ್ಯಾನಿಸಬಹುದು: ಜನಪ್ರಿಯ ಸಾಹಿತ್ಯವನ್ನು ಅಕ್ಷರ ಬಲ್ಲವರು (ಲಿಪಿ ಬಲ್ಲವರು) ನಿರ್ಮಿಸುತ್ತಾರೆ. ಇದು ಶಿಷ್ಟಸಾಹಿತ್ಯ ಹಾಗೂ ಜನಪದ ಸಾಹಿತ್ಯಗಳ ಮಧ್ಯದ ಏಜಂಟನಂತೆ ಕೆಲಸಮಾಡುತ್ತದೆ: ಜನಪದ ಸಾಹಿತ್ಯವನ್ನು ಬಲ್ಲ ಕವಿಗಳಿಂದ ಬರೆಯಲ್ಪಟ್ಟಿರುತ್ತದೆ: ಜನಪದ ಸಾಹಿತ್ಯದಂತೆ ಬಾಯಿಂದ ಬಾಯಿಗೆ ಹರಿಯುವಾಗ ಬದಲಾವಣೆಯಾಗುವುದಿಲ್ಲ: ಪ್ರೇಕ್ಷಕರ ಅಭಿರುಚಿಯಂತೆ ಹಿಗ್ಗುವುದಿಲ್ಲ. ಕುಗ್ಗುವುದಿಲ್ಲ. ಶಿಷ್ಟ ಸಾಹಿತ್ಯ ಹಾಗೂ ಜನಪದ ಸಾಹಿತ್ಯಗಳೆರಡರಿಂದಲೂ, ಮುಖ್ಯವಾಗಿ ಜನಪದ ಸಾಹಿತ್ಯದ ಭಾವ ಪ್ರಪಂಚ ಮತ್ತು ಶಿಷ್ಟ ಸಾಹಿತ್ಯದ ಕಲಾಪ್ರಜ್ಞೆಗಳಿಂದ ಪ್ರಭಾವಿತವಾಗಿರುತ್ತದೆ. ದಾಸರ ಪದಗಳು, ಸಿನಿಮಾ ಹಾಡುಗಳು. ಬ್ರಾಹ್ಮಣ ಹೆಂಗಸರ ಹಾಡುಗಳು ಇತ್ಯಾದಿ ಉದಾಹರಣೆ ಕೊಡಬಹುದು.

ಪ್ರಸ್ತುತ ವರ್ಷದಲ್ಲಿ ಪ್ರಕಟವಾದ ಜನಪದ ಹಾಡುಗಳ ಸಂಗ್ರಹಗಳನ್ನೇ ಗಮನಿಸಿದರೆ ಡಾ॥ ಎಮ್.ಎಸ್. ಸುಂಕಾಪುರ ಅವರು ಸಂಗ್ರಹಿಸಿದ **ಜೀವನ ಜೋಕಾಲಿ ಭಾಗ 2** (ಚೌಪದಗಳು)ನ್ನೂ, ಟಿ. ಕೇಶವಭಟ್ಟರು ಸಂಪಾದಿಸಿದ **ಗೋವಿನ ಕತೆ ಹಾಡ**ನ್ನೂ ಮೇಲಿನ ಜನಪ್ರಿಯ ಸಾಹಿತ್ಯಕ್ಕೆ ಉದಾಹರಣೆಯಾಗಿ ಕೊಡಬಹುದು. ಈ ಹಾಡುಗಳಿಗೂ ಸಹಜವಾಗಿರುವ ಬೇರೆ ಹಾಡುಗಳಿಗೂ ವ್ಯತ್ಯಾಸವಿಲ್ಲವೆ? ಇಂಥ ಹಾಡುಗಳ ಆದಿಪ್ರಾಸ, ಅನುಪ್ರಾಸಗಳನ್ನು ಗಮನಿಸಿದರೆ ಇವು ಕೂತು ಬರೆದಂಥವೇ ಹೊರತು ಜಾನಪದದ ಸಹಜ ತೋಂಡಿ ಮನೋಧರ್ಮದಿಂದ ಹುಟ್ಟಿದುವಲ್ಲ ಎಂದು ಕೂಡಲೇ ಗೊತ್ತಾಗುತ್ತದೆ. ಆದ್ದರಿಂದ ಜೀವನ ಜೋಕಾಲಿಯ 1ನೇ ಭಾಗವಿಡೀ ಜನಪ್ರಿಯ ಸಾಹಿತ್ಯಕ್ಕೆ ಸೇರಬೇಕಾಗುತ್ತದೆ. ಅದೇ ಪುಸ್ತಕದ 2ನೆಯ ಭಾಗದಲ್ಲಿಯೂ ಇಂಥ ಹಾಡುಗಳು ತಲೆ ಹಾಕಿವೆ. ಕಂತುಪರನ ಧ್ಯಾನ ಸಂತಸದಿಂದಲಿ ಚಿಂತಿ ತ್ಯಜಿಸಿ ಸೀಮಂತ ಮಾಡುವ ಬನ್ನಿ (ಕಳಸವ ಬೆಳಗಿರೆ ಪು. 77): ರಂಗನ ರಾಣಿಯು ಮಂಗಳವೇಣಿಯು। ಅಂಗನೆ ಗರ್ಭದೊಳ ಪೇಕ್ಷಿಪಳು (ಬಯಕೆಯ ಕಾಟ ಪು. 72) ಇತ್ಯಾದಿ. ಇಂಥ ಹಾಡುಗಳನ್ನು ತೋಂಡಿ ಸಂಪ್ರದಾಯದಲ್ಲಿ ರಚಿಸುವುದು ಹೇಗೆ ಸಾಧ್ಯ? ಆದರೆ ಅದೇ ಸಂಗ್ರಹದಲ್ಲಿ ಜನಪದ ಹಾಡುಗಳೂ ಇವೆ. ಮದುವೆಯಿಂದ ಮಸಣದವರೆಗೆ ದಾಂಪತ್ಯಜೀವನದಲ್ಲಿ ಕಾಣುವ ಸರಸ ವಿರಸವನ್ನು ಒಂದು ಜೀವನಚಕ್ರ (Life cycle) ಪೂರ್ಣವಾಗುವ ಹಾಗೆ ಹೊಂದಾಣಿಕೆ ಮಾಡಿದ್ದಾರೆ. ಛಂದಸ್ಸಿನ. ಧ್ರುವಗಳ. ಒಟ್ಟಾರೆ ಬಂಧದ ದೃಷ್ಟಿಯಿಂದ ಕೂಡ ಈ ಹಾಡುಗಳು ಕುತೂಹಲಕರವಾಗಿವೆ. ಅಲ್ಲದೆ ಅವು ಶುದ್ಧರೂಪದಲ್ಲಿರುವುದೊಂದು ಈ ಸಂಗ್ರಹದ ವೈಶಿಷ್ಟ್ಯವಾಗಿದೆ.

ಹಾಗೆಯೇ ಎಲ್. ಆರ್. ಹೆಗಡೆಯವರು ಸಂಗ್ರಹಿಸಿದ 'ಸುವ್ವೀ ಸುವ್ವೀ ಸುವ್ವಾಲೆ' 'ಹಾಡುಂಟೇ ನನ್ನ ಮಡಿಲಲ್ಲಿ', ಸ. ಜ. ಮಹಾದೇವನಾಯಕರು ಸಂಗ್ರಹಿಸಿದ 'ನಾನೆದ್ದು ನೆನೆವೇನು', ಟಿ. ಕೇಶವಭಟ್ಟರು ಸಂಗ್ರಹಿಸಿದ 'ಹಾಡಿನ ಚೂಡಾಮಣಿ' 'ಗೋವಿನ ಕತೆ ಹಾಡು'ಗಳನ್ನೂ ಗಮನಿಸಬಹುದು.

**ಸುವ್ವೀ ಸುವ್ವೀ ಸುವ್ವಾಲೆ** ಯಲ್ಲಿ ಕಾರವಾರ. ಕೊಡಕಣಿ. ಭಟ್ಕಳ. ಹೆಗಡೆ, ಹೊಲನಗದ್ದೆ ಮುಂತಾದ ಸ್ಥಳಗಳಲ್ಲಿ ಸುಮಾರು 78 ಹಾಡುಗಾರರಿಂದ ಸಂಗ್ರಹಿಸಿದ

ಬೇರೆ ಬೇರೆ ಸಂದರ್ಭದ ಹಾಡು, ಕಥನಕವನ (ಲಾವಣಿ) ಗಳಿವೆ. ಹಾಡುಗಳು ಉಳಿದೆಲ್ಲ ಜನಪದ ಹಾಡುಗಳಂತೇ ಇವೆ. ಸಂಗ್ರಹಕಾರರು ಮಾತ್ರ ಮುಂದಿನೆಲ್ಲ ಹಾಡುಗಳ ಸ್ವಾರಸ್ಯವನ್ನು ತಮ್ಮ ಅಲಂಕಾರ ರಸಭರಿತ ಶೈಲಿಯಲ್ಲಿ ವರ್ಣಿಸಿ ಸುದೀರ್ಘವಾದೊಂದು ಪೀಠಿಕೆಯನ್ನು ಕೊಟ್ಟಿದ್ದಾರೆ. ಪೀಠಿಕೆಯಿಂದ ಈ ಹಾಡುಗಳ ತಿಳಿವಳಿಕೆಗಾಗಲಿ, ಅವುಗಳ ಸಮೀಪ ಹೋಗುವುದಕ್ಕಾಗಲಿ ನೆರವಾಗುವುದಿಲ್ಲ. ಕಾಲೇಜ ಅಧ್ಯಾಪಕನ ಅರ್ಭಟಿಸುವ, ತಂತಾನೆ ಸಂತೋಷಿಸುವ ಪದಾವಳಿಯಿಂದ – ಒಟ್ಟಿನಲ್ಲಿ ಜನಪದ ಸಾಹಿತ್ಯಕ್ಕೆ ಕೂಡ ಇಂಥ ಪೀಠಿಕೆ ಉಪಯೋಗವಾಗುವುದಿಲ್ಲ. ಬದಲು ಹಾಡು ಹೇಳಿದವರನ್ನು ಇಂಟರ್‌ವ್ಯೂ ಮಾಡಿ ಅದನ್ನಾದರೂ ಸವಿಸ್ತಾರ ವಿವರಿಸಿದ್ದರೆ, ತಮ್ಮ ಭಾಗದ ಹಾಡುಗಾರಿಕೆಯ ಸಂದರ್ಭಗಳೊಂದಿಗೆ ಹಾಡಿನ ಬಂಧಗಳನ್ನು ಸಂಬಂಧಿಸಿ ವಿಶ್ಲೇಷಿಸಿದ್ದರೆ ಕನ್ನಡ ಜಾನಪದಕ್ಕೆ ಸಹಾಯವಾಗಬಹುದಿತ್ತು. ಜನಪದ, ಜಾನಪದ ಮುಂತಾದ ಪದಗಳನ್ನು ಇಷ್ಟು ವರ್ಷಗಳಾದ ಮೇಲೆಯೂ ಸರಿಯಾಗಿ ಬಳಸದಿದ್ದರೆ ಹೇಗೆ?

**ಹಾಡುಂಟೆ ನನ್ನ ಮಡಿಲಲ್ಲಿ** ಸಂಗ್ರಹದಲ್ಲಿಯೂ ಅಷ್ಟೆ. ಆದರೆ ಈ ಪೀಠಿಕೆ ಉಪಯುಕ್ತವಾಗಿದೆ ಕೆಲವು ಮಟ್ಟಿಗೆ. ಹಿಂದೆ ಇಷ್ಟರಮಟ್ಟಿಗೆ ಟಿಪ್ಪಣಿಗಳಿರುವಾಗ ಮತ್ತೆ ಹಾಡುಗಳನ್ನು ವಿವರಿಸುವ ಅಗತ್ಯವೇನಿತ್ತು?

**ನಾನೆದ್ದು ನೆನೆವೇನು :** ಸ. ಚಿ. ಮಹಾದೇವ ನಾಯಕ್. ಇದರಲ್ಲಿ ನಂಜನಗೂಡು ತಾಲೂಕಿನ ಆಳಗಂಚಿ, ಮುಸಗೆ, ಕಳಲೆ ಮುಂತಾದ ಸ್ಥಳಗಳಲ್ಲಿ ಮತ್ತು ಹೆಗ್ಗಡದೇವನ ಕೋಟೆ ತಾಲೂಕಿನ ಮಳಲಿ, ಸೋಗಹಳ್ಳಿ, ಮಾಗಡಿಲು ಗ್ರಾಮಗಳಲ್ಲಿ ಸಂಗ್ರಹಿಸಿದ ಹಾಡುಗಳಿವೆ. ಅವನ್ನು 1) ದೇವರ ಪ್ರಾರ್ಥನೆಗಳು ಮತ್ತು ವರ್ಣನೆ, 2) ಸಂಸಾರ, 3) ಕಥನಕವನಗಳು ಎಂದು ವಿಭಾಗಿಸಲಾಗಿದೆ. ಕೊನೆಯಲ್ಲಿ ಟಿಪ್ಪಣಿ ಶಬ್ದಾರ್ಥಗಳಿವೆ. ಪ್ರಾರಂಭದ ಅರಿಕೆಯಲ್ಲಿ ಸಂಗ್ರಹಕಾರರು ತಮ್ಮ ಕಷ್ಟಗಳನ್ನು ತೋಡಿಕೊಂಡಿದ್ದಾರೆ. "ಸಂಗ್ರಹ ಕಾರ್ಯವನ್ನು ಎಡೆಬಿಡದೆ ನಡೆಸುವುದು ಎಷ್ಟು ಕಷ್ಟವೋ ಅದನ್ನು ಪ್ರಚಾರಗೊಳಿಸುವುದೂ ಅಷ್ಟೇ ಕಷ್ಟಸಾಧ್ಯವಾಗಿದೆ" ಎಂಬೊಂದು ಮಾತೂ ಇದೇ ಅರಿಕೆಯಲ್ಲಿದೆ. ಏನಿದರ ಅರ್ಥ? ಪ್ರಚಾರ ಯಾರಲ್ಲಿ?

**ಹಾಡಿನ ಚೂಡಾಮಣಿ:** ಟಿ. ಕೇಶವಭಟ್ಟ. ಇಲ್ಲಿಯ ಹಾಡುಗಳನ್ನು ಸಂವಾದಗಳು, ಮಕ್ಕಳ ಹಾಡುಗಳು, ಬಾಂಧವ್ಯದ ಹಾಡುಗಳು, ವಿವಿಧ ವಿಷಯದ ಹಾಡುಗಳು, ಜಿಡಿಹಾಡುಗಳು. ಕತೆಹಾಡುಗಳು ಇತ್ಯಾದಿಯಾಗಿ ವಿಭಾಗಿಸಿದ್ದಾರೆ. ವಿಭಾಗಕ್ರಮ ಹೇಗೂ ಇರಲಿ, ಒಂದೆರಡು ಕಡೆ ಮಾತ್ರ ಹಾಡಿದವರ ಹೆಸರಿದ್ದು ಅವರ ಬಗೆಗಿನ ಉಳಿದ ವಿವರಗಳಂತೂ ಸಿಕ್ಕುವುದೇ ಇಲ್ಲ. ಅಲ್ಲದೆ ಅತ್ಯಂತ ಭಾವುಕವಾದೊಂದು ಪ್ರಸ್ತಾವನೆಯಿದೆ. ಅದರಲ್ಲಿ ಹೇಳುತ್ತಾರೆ: ಹೇಳಿ ಕೇಳಿಯೇ ಬಾಯಿಗೆ ಬಂದ ಹಾಡುಗಳನ್ನು ಅರ್ಥಜ್ಞಾನ ಸಾಲದೆ ಹಾಡುವ, ನಿರಕ್ಷರರ ಉಚ್ಚಾರಣೆಯ ದೋಷವನ್ನು ನಿವಾರಿಸಿ, ಬರೆಯಬೇಕಾಗುತ್ತದೆ" ಎಂದು. ಜಾನಪದವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಪ್ರಯತ್ನಗಳಾಗುತ್ತಿರುವಾಗ ಇಂಥ ಮಾತು ಬರಬಹುದೆ? ಇವರು ತೋರಿದ ಸಂಪ್ರ

ದಾಯವನ್ನು ಅರ್ಥಮಾಡಿಕೊಂಡ ಕ್ರಮ ತಪ್ಪೆಂದು ಈ ಹೇಳಿಕೆಯ ಧೋರಣೆಯಿಂದಲೇ ಸ್ಪಷ್ಟವಾಗುತ್ತದೆ.

ಮೇಲಿನ ಎಲ್ಲ ಸಂಗ್ರಹಕಾರರ ಪೈಕಿ ಹೆಗಡೆಯವರು ಮಾತ್ರ ಹಾಡುಗಾರರ ಹೆಸರು ಕೊಟ್ಟಿದ್ದಾರೆ. ಅದೂ ಯಾರು ಯಾರು ಯಾವ ಯಾವ ಹಾಡು ಹೇಳಿದರೆಂಬ ವಿವರಗಳಿಲ್ಲ. ಹಾಡಿದವರ ಹೆಸರು, ವಯಸ್ಸು, ಜಾತಿ, ಊರು, ಹಾಡಿನ ಸಂದರ್ಭ, ಸಂಗ್ರಹಿಸಿದ ತಾರೀಖು, ಸ್ಥಳ, ಸಾಧ್ಯವಾದರೆ ಇನ್ನೂ ಹೆಚ್ಚು ಮಾಹಿತಿ ಕೊಡಬೇಕಾಗಿತ್ತು. ಜಾನಪದದಂಥ ಅಮೂರ್ತ ವಿಷಯವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಪ್ರಯತ್ನಗಳು ನಡೆದಿರುವ ಈ ಸಂದರ್ಭದಲ್ಲಿ ಮೇಲಿನ ವಿವರಗಳನ್ನು ಒದಗಿಸುವುದು ಕೊನೆಯ ಪಕ್ಷದ ಅಗತ್ಯವೆಂದು ಅನಿಸುತ್ತದೆ.

ಈ ವರ್ಷ ಬಂದ ಒಟ್ಟು ನಾಲ್ಕು ಜಾನಪದ ಕತೆಗಳ ಸಂಗ್ರಹಗಳನ್ನು ಗಮನಿಸಿದ್ದೇನೆ.

**ಗ್ರಾಮಾಂತರ ಕಥೆಗಳು:** ಬೋರೇಗೌಡ ಬಳದರೆ. ಇದರಲ್ಲಿ ಸಂಗ್ರಾಹಕರು ಚನ್ನರಾಯಪಟ್ಟಣ ತಾಲ್ಲೂಕಿನ ಬಳದರೆಯಲ್ಲಿ ಐವರಿಂದ ಸಂಗ್ರಹಿಸಿದ 26 ಕಥೆಗಳಿವೆ. ಶ್ರೀ ಜೀಶಂಪ ಇದಕ್ಕೊಂದು ಮುನ್ನುಡಿ ಬರೆದಿದ್ದಾರೆ. ಕಥೆಗಳನ್ನು ವಿಭಜಿಸುವ ಗೋಜಿಗೆ ಹೋಗಿಲ್ಲ. "ಗ್ರಾಮಾಂತರ ಕಥೆಗಳು ಶಾಸ್ತ್ರದೃಷ್ಟಿಯಿಂದಲೂ, ಕಲಾದೃಷ್ಟಿಯಿಂದಲೂ ಒಂದು ಉತ್ತಮ ಸಂಕಲನವಾಗಿ ಜಾನಪದ ವಿದ್ವಾಂಸರ, ಸಾಹಿತ್ಯಿಕ ಆಸಕ್ತಿಯ ಸಹೃದಯರ ಗಮನವನ್ನು ಸೆಳೆಯುವುದರಲ್ಲಿ ಸಂಶಯವಿಲ್ಲ" ಎಂದು ಮುನ್ನುಡಿಕಾರರು ಈ ಸಂಗ್ರಹದ ಮಹತ್ವವನ್ನು ಸರಿಯಾಗಿ ಗುರುತಿಸಿದ್ದಾರೆ.

ಹೆಚ್. ಜೆ. ಲಕ್ಕಪ್ಪಗೌಡರ **ಜನಪದ ಕಥಾವಳಿ** ಯಲ್ಲಿ 25 ಕಥೆಗಳಿವೆ. ಅವುಗಳನ್ನು ಕಿನ್ನರ ಕಥೆಗಳು, ನೀತಿಕಥೆಗಳು, ಅತಿಮಾನುಷ ಕಥೆಗಳು, ವಿನೋದ ಕಥೆಗಳೆಂದು ವಿಭಾಗಿಸಲಾಗಿದೆ. ಕೊನೆಯಲ್ಲಿ ಕಥೆಗಳನ್ನು ಹೇಳಿದವರ ಬಗ್ಗೆ ತುಂಬ ಉಪಯುಕ್ತವಾದ ಮಾಹಿತಿಯಿದೆ.

**ಪಡಿನೆರಳು:** ಡಿ. ಲಿಂಗಯ್ಯ. ಬೆಂಗಳೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಪ್ರಚಲಿತವಿರುವ ಹದಿನೆಂಟು ಜನಪದ ಕತೆಗಳ ಸಂಕಲನವಿದು. ಹೇಳಿದವರ ಹೆಸರು, ಜಾತಿ, ವಯಸ್ಸು ಮುಂತಾದ ವಿವರಗಳೇ ಅಲ್ಲದೆ ಕತೆ ಹೇಳಿದ ರೇವಮ್ಮ ಎಂಬವರೊಂದಿಗೆ ಸಂಗ್ರಹಕಾರರು ಮಾಡಿದ ಒಂದು ಇಂಟರ್‌ವ್ಯೂ ಕೂಡ ಇದೆ. ಜಾನಪದದ ಒಟ್ಟಾರೆ ಅಧ್ಯಯನಕ್ಕೆ ಈ ಚಿಕ್ಕ ಇಂಟರ್‌ವ್ಯೂದಿಂದ ಅತ್ಯಂತ ಉಪಕಾರವಾಗುವುದರಲ್ಲಿ ಸಂದೇಹವೇ ಇಲ್ಲ. ಜನಪದ ಸಾಹಿತ್ಯದ ಮೇಲೆ ನಗರೀಕರಣ, ಹೊಸ ಶಿಕ್ಷಣ, ಪುಸ್ತಕ, ಸಿನಿಮಾಗಳ ಪ್ರಭಾವ. ಅದರಿಂದಾಗಿ ಕತೆಗಾರಿಕೆಯ ಬಗೆಗೆ ಹೇಳುವವರಲ್ಲಿನ ಅನುಮಾನ, ಒಂದೇ ಕತೆಯನ್ನು ಎರಡು ಬಾರಿ ಹೇಳಿದಾಗ ಆಗುವ ಶೀರ್ಷಿಕೆಯ ಬದಲಾವಣೆ-ಇವೆಲ್ಲ ಜನಪದ ಸಾಹಿತ್ಯದ ಇಂದಿನ ಅವಸ್ಥೆಯ ಬಗ್ಗೆ ಬಹಳ ಹಸನಾದ ಉತ್ತರಗಳಾಗಿವೆ. ಎಲ್ಲಕ್ಕಿಂತ ಹೆಚ್ಚಾಗಿ ತಾನೇನು ಮಾಡುತ್ತಿದ್ದೇನೆ, ಏನು ಸಂಗ್ರಹಿಸುತ್ತಿದ್ದೇನೆ – ಎಂಬ ಬಹಳ ಅಪರೂಪದ ಎಚ್ಚರ ಈ ಸಂಗ್ರಹಕಾರರ ವೈಶಿಷ್ಟ್ಯವೆಂದು ಹೇಳಬೇಕು. ಈ ಮೂರು ಸಂಗ್ರಹ

ಗಳಲ್ಲಿ ಕತೆಗಳನ್ನು ಹೇಳುವವರ ಭಾಷೆಯಲ್ಲೇ ಹೇಳಿದಂತೇ ಕತೆಗಳನ್ನು ಹಿಡಿದಿಡುವ ಯತ್ನವಿದೆ. ಇಷ್ಟಂತೂ ನಿಜ. ಹಾಡುಗಳನ್ನು ಸಂಗ್ರಹಿಸುವವರಿಗಿಂತ ಕತೆಗಳನ್ನು ಸಂಗ್ರಹಿಸುವವರಲ್ಲಿ ಶಾಸ್ತ್ರೀಯತೆ ಹೆಚ್ಚು. ಆದರೂ 'ಪಡಿನೆರಳು' ಬಿಟ್ಟು ಉಳಿದಿಬ್ಬರ ಸಂಗ್ರಹಗಳಲ್ಲಿ ಕೊಟ್ಟ ಹೇಳಿದವರ ಬಗ್ಗೆನ ಮಾಹಿತಿ ಸಾಲದು. ಅವರ ಪೂರ್ತಿ ವಿಳಾಸ, ಹುಟ್ಟಿದ ಊರು, ಯಾರಿಂದ, ಹೇಗೆ ಕಲಿತರು. ಹೇಳುವ ಉದ್ದೇಶ (ಮನರಂಜನೆ ಬಿಟ್ಟು ಬೇರೆ ಅಂದರೆ ಆರಾಧನೆಯಂಥ ಉದ್ದೇಶಗಳಿದ್ದರೆ) ಯಾರು ಯಾರು ಯಾವ ಯಾವ ಕತೆ ಹೇಳಿದರು, ಹೇಳುತ್ತ ಬಂದಿರುವುದರ ಅವರ ಅನುಭವ, ಪ್ರೇಕ್ಷಕರ ಸ್ವರೂಪ, ಪ್ರತಿಕ್ರಿಯೆ – ಆ ಮೂಲಕ ಕತೆಯ ಪ್ಯಾಕಟ್ಟಿನಲ್ಲಿ ಸಂಭವಿಸಬಹುದಾದ ಬದಲಾವಣೆಗಳು, ಅವರ ಸಾಹಿತ್ಯಿಕ ಮೌಲ್ಯಗಳು ಇತ್ಯಾದಿ ವಿವರಗಳು ಅಗತ್ಯವಾಗಿ ಬೇಕು.

**ಜನಪದಕಾವ್ಯ ಕಥೆಗಳು:** ಜೀಶಂಪ. ನಾಡಿನ ಮೂಲೆ ಮೂಲೆಯಲ್ಲಿ ಅಪಾರ ಸಂಖ್ಯೆಯಲ್ಲಿ ವೈವಿಧ್ಯಮಯ ವಾದ್ಯಗಳನ್ನು ನುಡಿಸುತ್ತ ಹೇಳುವ ಲಾವಣಿಕಾರರ ಲಾವಣಿಗಳನ್ನು ಅವರ ಸಂಪ್ರದಾಯದೊಂದಿಗೆ ಗದ್ಯದಲ್ಲಿ ಸಂಗ್ರಹಿಸಿದ ಕೃತಿಯಿದು. ಮೂಲದ ಸೊಗಡನ್ನು ಅದರ ನೈಜ ರೂಪಕ್ಕೆ ಧಕ್ಕೆಬಾರದಂತೆ ವಿವರಿಸಿದ್ದಾರೆ. ಲಾವಣಿಗಳನ್ನು ಅವಿದ್ದ ರೂಪದಲ್ಲೇ ಪ್ರಕಟಿಸಬಹುದಿತ್ತು. ನಿಜ. ಆದರೆ ಇದೊಂದು ಜನಪದ ಲಾವಣಿ ಸಂಗ್ರಹವೆಂದೇನೂ ಅಲ್ಲ, ಸಾಹಿತ್ಯಿಕ ಕೃತಿಯಾಗಿ ಪರಿಗಣಿಸಬೇಕೆಂದು ಲೇಖಕರು ಹೇಳಿದ್ದಾರೆ. ಜೊತೆಯಲ್ಲೇ ಲಾವಣಿಗಳ ಸ್ವರೂಪ, ಹಿನ್ನೆಲೆ, ಪ್ರಚಲಿತ ನೆಲೆಗಳು, ಮೇಳಗಳ ವಿವರಗಳನ್ನು ಕೊಟ್ಟಿದ್ದಾರೆ. ಹೀಗಾಗಿ ಇದಕ್ಕೆ ಜಾನಪದೀಯವಾದ ಮಹತ್ವವೂ ಇದೆ. ಪ್ರಾರಂಭದಲ್ಲಿ ಲಾವಣಿಗಳ ಬಗ್ಗೆ ಬರೆದ ಪ್ರಸ್ತಾವನೆಯೊಂದಿದೆ. ಇಂಗ್ಲಿಷಿನ Ballad ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದ ಲಾವಣಿ ಎಂಬ ಪದವನ್ನು ಬಳಸಿದ್ದು ಅಥವಾ ಅಷ್ಟಕ್ಕೇ ಮಿತಿಗೊಳಿಸಿದ್ದು ಒಳ್ಳೆಯದು. ಯಾಕಂದರೆ ನಮ್ಮಲ್ಲಿ ಲಾವಣಿ ಪದದ ಅರ್ಥ ಹೆಚ್ಚು ವ್ಯಾಪಕವಾಗಿದೆ. ಇಂಗ್ಲಿಷಿನ Ballad ನಂತೇ ಹಸ್ತಿನಿ, ಚಿತ್ತಿನಿ, ಪದ್ಮಿನಿ ಮುಂತಾದ ಸ್ತ್ರೀ ಲಕ್ಷಣಗಳನ್ನು ಹೇಳುವ, ಕಥೆಯೇ ಇಲ್ಲದ ಪದಗಳೂ ಲಾವಣಿಗಳೇ. ಕೆರೆಗೆ ಹಾರ, ಕಿತ್ತೂರ ಚೆನ್ನಮ್ಮನ ಹಾಡು, ಗೋವಿನ ಹಾಡು ಮುಂತಾದವೂ ಲಾವಣಿಗಳೇ. ಕಲ್ಗಿತುರಾ ಹಾಡುಗಳೂ ಲಾವಣಿಗಳೇ. ಕನ್ನಡದ ಲಾವಣಿಗೆ ಕಥಾಂಶ ಮುಖ್ಯವಲ್ಲ. ಅರ್ಥಾತ್ ಜನಪದ ಹಾಡುಗಳಿಗೆಲ್ಲ ಸಂವಾದಿಯಾಗಿ 'ಲಾವಣಿ' ಪದವನ್ನು ಬಳಸುವಂತಾಗಿದೆ. ಸಧ್ಯ ಕತೆಯನ್ನು ಹಾಡಿನ ಮೂಲಕ ಹೇಳುವುದೇ ಲಾವಣಿ ಎಂದಿಷ್ಟು ಮಾತ್ರ ಅರ್ಥವ್ಯಾಪ್ತಿಯನ್ನು ಇಟ್ಟುಕೊಂಡರೆ ಸಾಕು.

ಆದರೆ ಪ್ರಸ್ತಾವನೆಯಲ್ಲಿ "ಉತ್ತರ ಕರ್ನಾಟಕದ 'ಹರದೇಶಿ' 'ನಾಗೇಶಿ' ಸಂಪ್ರದಾಯದ ಲಾವಣಿಗಳೂ...ಸ್ತ್ರೀ ಪುರುಷರು ಹಾಡುವ ಇತರ ಕಿರುಲಾವಣಿಗಳೂ ಈ ಸ್ವರೂಪಕ್ಕೆ ಅಳವಡುತ್ತವೆ" (ಪು. 15) ಎಂದು ಹೇಳಿ, ಮುಂದಿನ ವಾಕ್ಯದಲ್ಲಿ "ಸರಳವಾದ ಶಕ್ತಿಯುತವಾದ ಸಣ್ಣಸಣ್ಣ ಪದ್ಯಗಳಿಂದ ಕೂಡಿದ ಜನಪ್ರಿಯ ಕತೆಯೊಂದನ್ನು ಹೇಳುವ ಹಾಡುಗಳೇ ಲಾವಣಿಗಳು ಎಂಬ ಮಾತು ಕನ್ನಡದ ಈ ಬಗೆಯ ಸರಳ ರಚನೆಗಳಿಗೂ ಅನ್ವಯವಾಗುತ್ತದೆ" ಎಂದು ಹೇಳಿದ್ದಾರೆ. ಆದರೆ ಹರದೇಶಿ. ನಾಗೇಶಿ

ಹಾಡುಗಳಲ್ಲಿ (ಇವೇ ಕಲ್ಗಿತುರಾ ಹಾಡುಗಳು) ಕತೆ ಇರುವುದಿಲ್ಲ. ಈ ಹಾಡುಗಾರಿಕೆಯಲ್ಲಿ ಹರದೇಶಿಯುವರು, ನಾಗೇಶಿಯುವರು ಎಂದು ಎರಡು ಪಂಗಡಗಳಿದ್ದು ಒಬ್ಬರು ಗಂಡಿನ ಅಥವಾ ಪುರುಷನ ಹೆಚ್ಚುಗಾರಿಕೆಯನ್ನು ಇನ್ನೊಬ್ಬರು ಶಕ್ತಿ ಅಥವಾ ಹೆಣ್ಣಿನ ಹೆಚ್ಚುಗಾರಿಕೆಯನ್ನು ಪ್ರತಿಪಾದಿಸುತ್ತ, ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ. ಇದಿಷ್ಟನ್ನು ಬಿಟ್ಟರೆ ಈ ಪುಸ್ತಕ ಅನೇಕ ದೃಷ್ಟಿಗಳಿಂದ ಮಹತ್ವದ್ದಾಗಿದೆಯೆಂದು ಹೇಳಬಹುದು.

**ಕರ್ನಾಟಕ ಜಾನಪದ ರಂಗಭೂಮಿ:** ಎಸ್. ಟಿ. ಧೂಪದ್. ಕರ್ನಾಟಕ 'ಜಾನಪದ' ರಂಗಭೂಮಿಯ ಆಟಗಳನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಭ್ಯಸಿಸುವ ಒಂದು ಕ್ಷೇತ್ರ ಸಂಶೋಧನೆಯ ಪ್ರಾಮಾಣಿಕ ಪ್ರಯತ್ನವಿದು – ಎಂದು ಲೇಖಕರು ಹೇಳಿಕೊಂಡಿದ್ದಾರೆ. ಮೊದಲು ಭಾರತ ಸರಕಾರದ ನೆರವಿನಿಂದ ಇಂಗ್ಲಿಷಿನಲ್ಲಿ ಬರೆದ ಈ ಪ್ರೌಢ ಪ್ರಬಂಧವನ್ನು ಮೈಸೂರು ಸರಕಾರದ ನೆರವಿನಿಂದ ಕನ್ನಡದಲ್ಲಿ ಪ್ರಕಟಿಸಿದ್ದಾರಂತೆ. ಮಾತ್ರವಲ್ಲ, ಜಾನಪದ ಆಟದಂತಹ ಒಂದು ವಿಷಯದ ವೈಜ್ಞಾನಿಕ ಸಂಶೋಧನೆಯು ನಡೆದುದು ಇದು ಮೊದಲನೆಯದೆಂದು ತಿಳಿದವರು ಅಭಿಪ್ರಾಯಪಟ್ಟಿದ್ದಾರಂತೆ. ಡಾ॥ ಶಿವರಾಮ ಕಾರಂತ, ಡಾ॥ ಹೆಚ್. ಕೆ. ರಂಗನಾಥ್ ಅವರ ಪುಸ್ತಕಗಳು ಅವೈಜ್ಞಾನಿಕವೆಂದು ಈ ತಿಳಿದವರು ತಿಳಿದುಕೊಂಡರೋ ಏನೊ. ಅದೇನೇ ಇರಲಿ, ಸಂಶೋಧನೆಯ ಹೆಸರಿನಲ್ಲಿ ಇಷ್ಟೊಂದು ಹಾಸ್ಯಾಸ್ಪದವಾದ ಪುಸ್ತಕವನ್ನು ನಾನು ಇದೇ ಮೊದಲ ಸಲ ನೋಡಿದ್ದು. ಸ್ಯಾಂಪಲ್ ನೋಡಿ:

ಮೂಡಲಪಾಯ: ಮೂಡಲವಾಗುವವರೆಗೂ ಅಂದರೆ ಸೂರ್ಯೋದಯವಾಗುವವರೆಗೂ ಸಾಗುವ ಆಟ ... ದೊಡ್ಡಾಟವೆಂದರೆ ನೀನು ಯಾವ ಆಟದಿಂದ ಉದ್ಧಾರವಾಗುವಿಯೋ ಅದು ದೊಡ್ಡಾಟ (ಪು. 197).

ದಾಸರಾಟ: ಕೆಲವು ಸಂಸ್ಕೃತ ಗ್ರಂಥಗಳಲ್ಲಿ ದಾಸರನ್ನು ದಸ್ಯುಗಳೆಂದು ವರ್ಣಿಸಿದ್ದಾರೆ. ಈ ದಸ್ಯುಗಳ–ದಾಸರ ಆಟವೇ ದಾಸರಾಟ. (ಪು. 217)

ರಾಧಾನಾಟ: ಇದಕ್ಕೆ ರಾಜಾನಾಟವೆಂದೂ ಹೆಸರು. ಈ ಹೆಸರು ಬಂದದ್ದು ಹೇಗೆ? ಕೇಳಿ –

"ಇಡೀ ಆಟವನ್ನು ನೋಡಿ ಹರ್ಷಿಸಿದ ಜನ, ಅದರ ತತ್ವಜ್ಞಾನದ ಛಾಯೆಯಿಂದಲೂ ಜನಪ್ರಿಯವಾದ ಸಂಗೀತದಿಂದಲೂ ಆಟ ನೋಡುವುದು ಬಹು ಸಂತಸವಾಗಿದ್ದು 'ರಾಜನಂತೆ' ಅದನ್ನು ಅನುಭವಿಸಬಹುದೆಂದು ಅದಕ್ಕೆ ರಾಜಾನಾಟವೆಂಬ ಉಪನಾಮವನ್ನೂ ಕೊಟ್ಟರು. ರಾಜಾನಾಟವೆಂದರೆ ಯಾವ ತೊಂದರೆ, ಮನಸ್ಸಿನ ತೊಳಲಾಟವಿಲ್ಲದೆ ರಾಜನಂತೆ ಕಾಲ ಕಳೆಯಬಹುದಾದ ಅನುಭವಿಸಬಹುದಾದ ಆಟವೆಂದರ್ಥ." (ಪು. 225)

"ಯಕ್ಷಗಾನ ಆಟದ ವೈಶಿಷ್ಟ್ಯವೆಂದರೆ ಇಲ್ಲಿ ಗೀತ ಮತ್ತು ನೃತ್ಯವು ಪ್ರಧಾನವಾಗಿದೆ. ಗದ್ಯ ಮಾತುಗಳು ಇಲ್ಲವೆನ್ನುವಷ್ಟು ಕಡಿಮೆ ಪ್ರಮಾಣದಲ್ಲಿವೆ." (ಪು. 246)

ಇಷ್ಟೇ ಅಲ್ಲ, ಇಂಥ ಅನೇಕ ವಿಪರೀತ ಧೈರ್ಯದ ಮಾತುಗಳಿವೆ, ಪುಟಪುಟಗಳಲ್ಲಿ. ಮತ್ತು ಪುಸ್ತಕದಲ್ಲಿ ಒಟ್ಟು 335 ಪುಟಗಳಿವೆ. ಹೆಚ್ಚೇಕೆ, ಈ ಪುಸ್ತಕದ ಬಗ್ಗೆ ಗಂಭೀರವಾದ ಗಮನ ಕೊಡುವುದು ಸಾಧ್ಯವಿಲ್ಲ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಕೀರ್ತಿ ತರುವ ಪುಸ್ತಕವಂತೂ ಇದು ಖಂಡಿತ ಅಲ್ಲ.

**ಹೆಸರ ಹೇಳ್ತೇನಿ ಒಡಪ ಕಟ್ಟಿ:** ಜ್ಯೋತಿ ಹೊಸೂರ. ಇದೊಂದು ಒಡಪುಗಳ ಸಂಗ್ರಹ, ಉಪಯುಕ್ತವಾದೊಂದು ಪ್ರಸ್ತಾವನೆಯಿದೆ. ಅದರಲ್ಲಿ ಒಡಪು ಹೇಳುವ ಸಂದರ್ಭ, ಅದರ ಬಾಹ್ಯರೂಪಗಳನ್ನು ಚರ್ಚಿಸಿದ್ದಾರೆ. ವಚನಗಳಿಗೆ ತ್ರಿಪದಿ ಮೂಲವಾಗಿರಬಹುದೆಂದ ಡಾ॥ ಚಿದಾನಂದಮೂರ್ತಿಗಳ ಮತ್ತು ಗಾದೆ ಒಗಟುಗಳು ಪ್ರೇರಕವಾಗಿರಬಹುದೆಂದ ಶ್ರೀ ಸುಧಾಕರ ಅವರ ವಾದವನ್ನು ಅಲ್ಲಗಳೆಯುತ್ತ ಲೇಖಕರು "ವಚನ ಸಾಹಿತ್ಯದ ಉಗಮಕ್ಕೆ ಜನಪದ ಸಾಹಿತ್ಯದ ಯಾವೊಂದು ಬಿಡಿರೂಪ (ಪ್ರಕಾರ) ಪ್ರೇರಣೆ ನೀಡಿರಬಹುದೆನ್ನದೇ ಇಡಿಯಾಗಿ ಅದರ ಎಲ್ಲ ಪ್ರಕಾರಗಳೂ ಪ್ರೇರಕವಾಗಿರಬಹುದೆಂದು ಹೇಳುವುದು ಸೂಕ್ತ" ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳಿಗೆ (ಅಂದರೆ ಕಥೆ ಬಿಟ್ಟು) ಹಾಡು ಒಗಟು, ಒಡಪು, ಗಾದೆ ಮುಂತಾದವುಗಳಿಗೆಲ್ಲ ಒಂದೇ ರೂಪ-ತ್ರಿಪದಿ ಪ್ರೇರಕವಾಗಿರಬಹುದೆಂದು ಸಾಧಿಸುವುದು ಹೆಚ್ಚು ಸುಲಭ. ಹೀಗಿದ್ದಾಗ ವಚನಸಾಹಿತ್ಯಕ್ಕೆ ತ್ರಿಪದಿಯೆ ಮೂಲವೆಂಬ ಅಭಿಪ್ರಾಯದಲ್ಲಿ ಹೆಚ್ಚು ಸತ್ವವಿದ್ದಂತೆ ತೋರುತ್ತದೆ.

ಮತ್ತೆ ಒಡಪುಗಳನ್ನು ಹೆಣ್ಣುಮಕ್ಕಳ ಒಡಪು, ಗಂಡುಮಕ್ಕಳ ಒಡಪು ಎಂದು ವಿಭಾಗಿಸಿದ್ದೇನೋ ಸರಿಯೆ. ಆದರೆ ಒಂದೊಂದರಲ್ಲಿ "ಸುಲಗಾಯ ಮುಂದ ಸುಳದಾಡತಾನ" "ಆಡತಾನ ನೋಡತಾನ" ಮುಂತಾದ ಉಪವಿಭಾಗಗಳನ್ನು ಮಾಡಿದ್ದು ಸರಿಯಲ್ಲ. ಒಂದು ಭಾಗಕ್ಕೂ ಇನ್ನೊಂದು ಭಾಗಕ್ಕೂ ಸ್ಪಷ್ಟ ವ್ಯತ್ಯಾಸಗಳಿಲ್ಲದಾಗ ಇಂಥ ಉಪವಿಭಾಗೀಕರಣ ಕೃತಕವಾಗುತ್ತದೆ. ಇಷ್ಟೆಲ್ಲಾ ಆಗಿಯೂ ಶ್ರೀ ಜ್ಯೋತಿ ಹೊಸೂರ ಬಹಳ ಅಪರೂಪದ ಕೆಲಸ ಮಾಡಿದ್ದಾರೆಂದು ಒಪ್ಪಲೇಬೇಕು.

**ತುಳು ಗಾದೆಗಳು:** ಬಿ. ಎ. ವಿವೇಕ ರೈ. ಸುಮಾರು ಏಳುನೂರು ತುಳು ಗಾದೆಗಳ ಈ ಸಂಕಲನಕ್ಕೆ ಪ್ರೊ॥ ಎಸ್. ವಿ. ಪರಮೇಶ್ವರ ಭಟ್ಟರು ಮುನ್ನುಡಿ ಬರೆದಿದ್ದಾರೆ. ಅಲ್ಲದೆ ತುಳು ಗಾದೆಗಳಿಗೆ ಸಂವಾದಿಯಾದ ಕನ್ನಡ ಗಾದೆಗಳಿವೆ; ಅಥವಾ ಭಾಷಾಂತರವಿದೆ. ಕೊನೆಗೊಂದು ಶಬ್ದಕೋಶವಿದೆ. ಸಂಗ್ರಹಕಾರರೇ ಸುಮಾರು 17 ಇಂಗ್ಲಿಷ್ ಪುಸ್ತಕಗಳನ್ನು ನೋಡಿ ಮುನ್ನುಡಿಕಾರರ ಮಾತಿನಲ್ಲಿ "ತಿಲಕವಾಗಿರುವಂತೆ" ಒಂದು ಸುದೀರ್ಘ ಪ್ರಸ್ತಾವನೆ ಬರೆದಿದ್ದಾರೆ. ಈಗಾಗಲೇ ಅನೇಕ ಗಾದೆಯ ಸಂಗ್ರಹಗಳೂ ಅವುಗಳನ್ನು ಕುರಿತ ಲೇಖನಗಳೂ ಅಚ್ಚಾಗಿವೆ. ಎ. ಕೆ. ರಾಮಾನುಜನ್ನರ "ಗಾದೆಗಳು" ಎಂಬ ಪುಸ್ತಿಕೆಯಿದೆ. ಇವೆಲ್ಲವುಗಳಿಗಿಂತ ಇದು ಹೇಗೆ ಭಿನ್ನವಾಗಿದೆಯೆಂದು ಅರ್ಥವಾಗುವುದಿಲ್ಲ. ಆಶ್ಚರ್ಯವೆಂದರೆ ಪಶ್ಚಿಮದ ಗಾದೆಗಳ ಸಂಪ್ರದಾಯವನ್ನು ಸುಲಭವಾಗಿ ಗುರುತಿಸಿದ ಲೇಖಕರು ಭಾರತದ ಸಂಪ್ರ

ದಾಯದ ಬಗ್ಗೆ–ಗಾಥೆಯಿಂದ ಗಾದೆ ಬಂತೆಂಬ ಮಾತು ಬಿಟ್ಟು ಏನೂ ಹೇಳುವುದಿಲ್ಲ. ಕಾರಣ: ಆ ಗಾದೆಗಳ ಬಗ್ಗೆ ಪುಷ್ಕಳ ಪುಸ್ತಕ ಸಿಗುತ್ತವೆ ಎಂದೊ? ಮುನ್ನುಡಿಯಲ್ಲಿ ಲೇಖಕರನ್ನು ಹಾಡಿ ಕೊಂಡಾಡಿದ ಪ್ರೊ|| ಪರಮೇಶ್ವರ ಭಟ್ಟರು ಗಾದೆ ಒಗಟುಗಳ ಹತ್ತಿರದ ನಂಟನ್ನು ಚೆನ್ನಾಗಿ ಗಮನಿಸಿದ್ದಾರೆ. "ಊಡದ ಆವು ಉಣ್ಣದ ಕರು ಎಂದಿಷ್ಟೇ ಇದ್ದರೆ ಅದು ಒಗಟಾದೀತು. ಊಡದ ಆವಿಗೆ ಉಣ್ಣದ ಕರುವ ಬಿಟ್ಟಂತೆ ಎಂದರೆ ಅದು ಗಾದೆಯಾದೀತು." ಈ ಮಾತಿನ ವಿಶ್ಲೇಷಣೆ ಗಾದೆ ಒಗಟುಗಳ ನಂಟಿನ ರಹಸ್ಯಕ್ಕೆ ಬಹಳ ಹತ್ತಿರ ಒಯ್ಯಬಲ್ಲುದು. ಆದರೆ "ಗಾದೆಗಳ ವಿಷಯಕ್ಕೆ 'ರೈ ಮಾತೇ ಸೈ' ಎಂಬುದೂ ಒಂದು ಗಾದೆಯಾಗಲಿ" ಎಂಬ ಆವರ ಆಸೆ ಮಾತ್ರ ಅತಿಯಾಸೆ.

**ಜಾನಪದ ಮೈಲಿಕಲ್ಲುಗಳು**: ಶ್ರೀ. ಸಂ. ಶಂಕರನಾರಾಯಣ. ಜಾನಪದ ಸಂಶೋಧನೆಯ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧವಾದ ಕಲೇವಾಲ, ಮತ್ತು ಗೋಲ್ಡನ್ ಬೋಗಳನ್ನು ಲೇಖಕರು ಈ ಕೃತಿಯಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ಜಾನಪದವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದಕ್ಕೆ ನಮಗಿರುವ ಮಾದರಿಗಳೆಲ್ಲ ಪಶ್ಚಿಮದ್ದೆ. ಥಿಯರಿಗಳನ್ನು ನೇರವಾಗಿ ಅನ್ವಯಿಸಿ ಅಧ್ಯಯನ ಮಾಡುವ ಈ ಕೃತಿ ಪಶ್ಚಿಮದವರ ಜಾನಪದದ ಬಗೆಗಿನ ಗಂಭೀರ ಧೋರಣೆಯನ್ನು ಸಮರ್ಥವಾಗಿ ಹೇಳಿದೆ. ನಮ್ಮಲ್ಲಿ ಇಂಥ ಅಧ್ಯಯನ ಮಾಡುವವರಿಗೊಂದು ಮಾದರಿಯಾಗಿದೆ. ಆದರೆ ಲೇಖಕರು ಹೇಳಿರುವುದರಲ್ಲಿ ಯಾವುದು ಸ್ವಂತ, ಯಾವುದು ಗ್ರಂಥಋಣ ಎಂದು ಅರ್ಥವಾಗುವುದಿಲ್ಲ. ಪರದೇಶದ ಜಾನಪದ ಕೃತಿಯೊಂದರ ಬಗ್ಗೆ ಸ್ವತಂತ್ರ ಮಾತು ಹೇಳೇನೆನ್ನುವುದು ಅಸಾಧ್ಯವಾದ ಮಾತು. ಹಾಗೆ ಹೇಳಿದ್ದೇ ಆದರೆ ಅಂಥ ಮಾತುಗಳನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಏನೇ ಇರಲಿ. ಇದು ಪರಿಚಯ ಮಾತ್ರ ಎಂದು ಲೇಖಕರೇ ಹೇಳಿಕೊಂಡಿದ್ದಾರೆ. ಈ ದೃಷ್ಟಿಯಿಂದ ಲೇಖಕರು ಅಭಿನಂದನೀಯರಾಗಿದ್ದಾರೆ.

**ಹುಟ್ಟಿದಹಳ್ಳಿ**: ಅರ್ಚಕ ಬಿ. ರಂಗಸ್ವಾಮಿ. ಅನೇಕ ದೃಷ್ಟಿಗಳಿಂದ ಕುತೂಹಲಕರವಾದ ಈ ಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯ ಪುನರ್ಮುದ್ರಿಸಿ ಉಪಕಾರ ಮಾಡಿದೆಯೆಂದು ಹೇಳಬೇಕು. ಇದು 1933ರ ಸುಮಾರಿಗೇ ಅಂದರೆ 'ಗರತಿಯ ಹಾಡು' ಪ್ರಕಟವಾಗಿ ಎರಡು ವರ್ಷದ ಮೇಲೆ ಅಚ್ಚಾಯಿತು. ಆದರೆ ಗರತಿಹಾಡಿಗೂ ಇಲ್ಲದ ಒಂದು ವಿಶೇಷ ಈ ಕೃತಿಗಿದೆ. ಶ್ರೀ ರಂಗಸ್ವಾಮಿಯವರು ತಮ್ಮ ಹುಟ್ಟೂರಾದ ಬಂಡಿಹೊಳೆಯ ಜನಪದ ಕತೆ, ಗೀತೆ, ಲಾವಣಿ, ಗಾದೆ, ಹಬ್ಬ ಹರಿದಿನ, ಜನರ ನಡೆನುಡಿ, ಯಕ್ಷಗಾನ, ಬಯಲಾಟ ಮುಂತಾದ ಜನಪದ ಕಲೆಯನ್ನು ಇದರಲ್ಲಿ ಅಳವಡಿಸಿದ್ದಾರೆ. ಹಾಡಿನ ಸಂಪ್ರದಾಯ, ಹಾಡಿದವರ ಹೆಸರು, ಮಕ್ಕಳಾಟದ ಹಿನ್ನೆಲೆ, ನ್ಯಾಯ ತೀರ್ಮಾನದ ವೈಖರಿ, ಮೇಳಗಳ ಸೊಗಸು ಇವುಗಳನ್ನೆಲ್ಲ ಕೊಟ್ಟಿದ್ದಾರೆ. ಅಂತೆಯೇ "ಜಾನಪದ (Folklore) ದ ವ್ಯಾಪಕ ದೃಷ್ಟಿಯ ಪರಿಚಯವಿಲ್ಲದೆಯೂ ಎಲ್ಲ ಜಾನಪದ ಪ್ರಕಾರಗಳನ್ನೂ ಸಂಗ್ರಹಿಸಿ ಅಷ್ಟು

ಹಿಂದೆಯೇ ಪ್ರಕಟಿಸಿರುವುದು ಆಶ್ಚರ್ಯಕರ ವಿಷಯವಾಗಿದೆ. ಈ ವ್ಯಾಪಕ ದೃಷ್ಟಿಯಿಂದ ಶ್ರೀ ರಂಗಸ್ವಾಮಿಯವರ ಕೃತಿ ನಮ್ಮ ಜಾನಪದ ಅಧ್ಯಯನದ ಮೊದಲ ಮೆಟ್ಟಿಲು ಎನ್ನಬಹುದು " ಎಂದು ಡಾ॥ ಹಾ. ಮಾ. ನಾಯಕರು ಹೇಳಿದ ಮಾತು ಅತ್ಯಂತ ಸಮರ್ಪಕವಾಗಿದೆ.

**ಜಾನಪದ ಸ್ವರೂಪ:** ಹಾ. ಮಾ. ನಾಯಕ. ಜಾನಪದವನ್ನು ವಿಶ್ವವಿದ್ಯಾಲಯದ ಮಟ್ಟಕ್ಕೆ ಏರಿಸಿದ ಮುತ್ಸದ್ದಿಗಳಲ್ಲಿ ಅಥವಾ ಜಾನಪದದ ಆರಂಭ ವಿದ್ವಾಂಸರಲ್ಲಿ ಹಾ. ಮಾ. ನಾಯಕ ಪ್ರಮುಖರು. ಅದರ ಬಗೆಗಿನ ಗಂಭೀರ ಗಮನದ ಅಗತ್ಯವನ್ನು ಕಂಡು ಕೊಂಡಾಗ ಹುಟ್ಟುವ ಸಮಸ್ಯೆಗಳು ಅನೇಕ. ವಿಶ್ವವಿದ್ಯಾಲಯಕ್ಕೇ ಒಂದು ಪ್ರತ್ಯೇಕ ಮಟ್ಟ ಇದೆ. ಅದರ ಎತ್ತರ ಇಷ್ಟಿದೆ. ಜಾನಪದದಂಥ ವಿಷಯವೇ ಅಲ್ಲದ ವಿಷಯ ವನ್ನು ವಿಶ್ವವಿದ್ಯಾಲಯದಲ್ಲಿ ಓದಿಸುವುದು ಆಭಾಸವೆಂದುಕೊಂಡವರಿಗೆ ಮೊದಲು ಉತ್ತರ ಕೊಡಬೇಕು. ಅದರ ಅಧ್ಯಯನದ ಆಳವನ್ನು ಪರಿಚಯ ಮಾಡಿಕೊಡಬೇಕು. ಅದಕ್ಕೊಂದು ವ್ಯವಸ್ಥೆ ಕಟ್ಟಬೇಕು. ಪರಿಭಾಷೆ ಹುಟ್ಟಿಸಬೇಕು. ಹಾ. ಮಾ. ನಾಯಕರ ಈ ಪ್ರಬಂಧಗಳಲ್ಲಿ ಇವೆಲ್ಲವನ್ನು ಅರಿತ ಮೊದಲಿಗನ ಜವಾಬ್ದಾರಿಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಜಾನಪದದ ಅಧ್ಯಯನ ಮಾಡಬೇಕಾದ ಕ್ರಮ, ಜನಪದ ಸಾಹಿತ್ಯದ ಸ್ವರೂಪ, ವೈಜ್ಞಾನಿಕವಾಗಿ ಅದನ್ನು ನೋಡುವ ರೀತಿ, ಅದರ ವರ್ಗೀಕರಣ ಮುಂತಾದುವನ್ನೆಲ್ಲ ವಿವರವಾಗಿ ಚರ್ಚಿಸಿದ್ದಾರೆ. ಪಶ್ಚಿಮಕ್ಕೇ ಮಾರುಹೋಗದೆ ಇಲ್ಲಿನ ಕೆಲವು ಜಾನಪದದ ಬಗೆಗಿನ ಕಲ್ಪನೆ, ಶಬ್ದಗಳನ್ನೇ ಹೇಗೆ ಹೊಂದಾಣಿಕೆ ಮಾಡಿಕೊಳ್ಳ ಬಹುದೆಂದು ಸೂಚಿಸಿದ್ದಾರೆ. ಅಥವಾ ಜಾನಪದದ ಅಧ್ಯಯನಕ್ಕೆ ಒಂದು ನಿರ್ದಿಷ್ಟ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿದ್ದಾರೆ. ಈ ಮುನ್ನಿನವರ ಬರೆಹಗಳಲ್ಲಿ ರೋಮ್ಯಾಂಟಿಕ್ ಉತ್ಸಾಹವಿದ್ದಿದ್ದರೆ ಈ ಬರೆಹಗಳಲ್ಲಿ ವಿಶೇಷ ರೀತಿಯ ವೈಜ್ಞಾನಿಕ ದೃಷ್ಟಿಯಿದೆ. ಈ ಕಾರಣದಿಂದ ಇದು ಜಾನಪದ ಅಧ್ಯಯನವನ್ನು ಉದ್ಘಾಟಿಸಿದ ಗ್ರಂಥ ಎಂದು ಹೇಳಬೇಕು.

**ದಕ್ಷಿಣಕನ್ನಡದ ಜನಪದಸಾಹಿತ್ಯ:** ಕೆ. ಶಿವರಾಮ ಐತಾಳ. ಇದರಲ್ಲಿ ದಕ್ಷಿಣ ಕನ್ನಡದ ಜನಪದ ಹಾಡುಗಳನ್ನು–ಮೂರು ಕಥನ ಗೀತಗಳು, ಜನಪದ ಸಾಹಿತ್ಯವಾಗಿ ಉಳಿದುಬಂದಿರುವ ಅಜ್ಞಾತರ ಕೃತಿಗಳು, ಮದುವೆಯ ಹಾಡುಗಳು, ತೊಟ್ಟಿಲ ತೂಗುವ ಹಾಡುಗಳನ್ನು ಸಂಗ್ರಹಿಸಿ – ಅಥವಾ ಅವರ ಶಬ್ದದಲ್ಲಿ ಹೇಳುವುದಾದರೆ ಸಂಪಾದಿಸಿ–ಕೊಟ್ಟಿದ್ದಾರೆ. ಪ್ರಾರಂಭದಲ್ಲೊಂದು ಪೀಠಿಕೆಯಿದೆ.

ಕನ್ನಡ ಜನಪದ ಸಾಹಿತ್ಯವನ್ನು ಅಧ್ಯಯನ ಮಾಡುವುದಕ್ಕೆ ಮಾರ್ಗದೇಶಿಗಳ ಕಲ್ಪನೆ ನೆರವಾಗುತ್ತದೆ, ಹೌದು. ಆದರೆ ಆ ಮೂಲಕ ಬಹಳ ದೂರಕ್ಕೆ ಹೋಗಲಿಕ್ಕಾಗು ಗುವುದಿಲ್ಲ. ಏಳುವ ಪ್ರಶ್ನೆಗಳಿಗೆಲ್ಲ ಮಾರ್ಗದೇಶಿಯಲ್ಲೇ ಉತ್ತರ ಹುಡುಕುತ್ತ ಕೂರ ಲಾಗುವುದಿಲ್ಲ. ಜಾನಪದವನ್ನು ನಾವು ಯಾವುದಕ್ಕೆ ವೈಜ್ಞಾನಿಕ ಅನ್ನುತ್ತೇವೆಯೋ ಆ

ರೀತಿ ಅಧ್ಯಯನ ಮಾಡುವುದಕ್ಕೆ ಪಶ್ಚಿಮದವರ ಧೋರಣೆಯನ್ನು ಅನುಸರಿಸಿದ್ದೇನೂ ರಹಸ್ಯವಲ್ಲ. ಹೀಗೆ ಈ ವರೆಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡುತ್ತೇವೆಂದು ಹೇಳಿಕೊಂಡವರೆಲ್ಲ ಈ ಮಾತನ್ನು ಸ್ಪಷ್ಟಪಡಿಸಿಯೂ ಇದ್ದಾರೆ. ಹೀಗಿದ್ದೂ ಐತಾಳರು ಯಾರ ಬಗೆಗೆ ಪ್ರತಿಕ್ರಿಯೆ ತೋರುತ್ತಿದ್ದಾರೆಂದು ತಿಳಿಯುವುದಿಲ್ಲ.

ಇರಲಿ ಅನ್ನೋಣ. "ಇಂದು ಲಕ್ಷಣ ಮತ್ತು ವಿಷಯಗಳೆರಡರಲ್ಲಿಯೂ ಭ್ರಷ್ಟಗೊಂಡ ತ್ರಿಪದಿಗಳೇ ನಮ್ಮ ಜನಪದ ಸಾಹಿತ್ಯದ ಶೇಕಡ 99ರಷ್ಟು ಆಗಿದ್ದರೆ ಆಶ್ಚರ್ಯವಿಲ್ಲ" ಎಂಬ ಕಾರಂತರ ಮಾತಿಗೆ ಈ ಲೇಖಕರು "ನೂರಕ್ಕೆ ನೂರು ನಿಜ" ಎಂದು ತಮ್ಮ ಒಪ್ಪಿಗೆಯನ್ನೂ ಸೂಚಿಸಿದ್ದಾರೆ. "ಜನಪದ ಸಾಹಿತ್ಯವನ್ನು ಸಂಪಾದಿಸುವುದು ಹೇಗೆ? ಎಂಬುದರ ವಿಷಯವಾಗಿ ಕನ್ನಡದಲ್ಲಿ ಇದುವರೆಗೂ ಏನೂ ಕೆಲಸವಾಗದಿರುವುದರಿಂದ ಆ ಬಗ್ಗೆ ಇಲ್ಲಿ ಸಂಕ್ಷೇಪವಾಗಿ ಪ್ರಸ್ತಾಪಿಸಲಾಗುತ್ತಿದೆ" ಎಂದು ಹೇಳಿದ್ದಾರೆ. ಕನ್ನಡದಲ್ಲಿ ಅಂಥ ಕೆಲಸ ಆಗಿಲ್ಲವೆನ್ನೋಣ. ಆ ಕೊರತೆಯನ್ನು ನೀಗಿಸುವುದಕ್ಕಾಗಿ ಈ ಲೇಖಕರು ತೋರಿದ ದಾರಿಯನ್ನು ನೋಡಿದರೆ ಇವರಿಗೆ ಜಾನಪದ ಎಂದರೆ ಏನೆಂಬುದೇ ಗೊತ್ತಿಲ್ಲವೆಂದೋ ಅಥವಾ ಇವರು ತಿಳಿದುಕೊಂಡ ಜಾನಪದವೇ ಬೇರೆ, ಇರುವ ಜಾನಪದವೇ ಬೇರೆ ಎಂದೋ ನಿಷ್ಠುರವಾಗಿ ಹೇಳಬೇಕಾಗುತ್ತದೆ. ಹೇಳುತ್ತಾರೆ: "ಗ್ರಂಥ ಸಂಪಾದಕನ ನೀತಿ ಸಂಹಿತೆಯನ್ನೇ ಜನಪದ ಸಂಪಾದಕನೂ ಇಟ್ಟುಕೊಳ್ಳಬೇಕು." (ಪು. xlviii) "ಒಂದು ಕೃತಿಯನ್ನು ಒಂದು ಪ್ರದೇಶದಲ್ಲಿ ಮೂವರು ನಾಲ್ವರಿಂದ ಹೇಳಿಸಬೇಕು. ಕೊನೆಯಪಕ್ಷ ಎರಡು ಆಕರಗಳಾದರೂ ಬೇಕು. ಈ ಒಂದೊಂದು ಆಕರವೂ ಒಂದೊಂದು ಪ್ರತಿಗೆ ಸಮನೆನಿಸುತ್ತದೆ. ಇವಿಷ್ಟರಿಂದ ಒಂದು ರೂಪವನ್ನು ಮೂಲಕ್ಕೆ ಹತ್ತಿರವಿರುವಂತೆ ಪರಿಷ್ಕಾರವಾಗಿ ಸಿದ್ಧಪಡಿಸಬೇಕು." (ಪು. xlvii) "ತಿದ್ದುಪಡಿಗಳು ಅನಿವಾರ್ಯತೆಯನ್ನೂ, ಸಮರ್ಥನೆಯನ್ನೂ ತಾನಾಗಿ ವ್ಯಕ್ತಪಡಿಸುವಂತಿರಬೇಕು." (ಪು. xlviii ) " ಇತ್ಯಾದಿ.

ಬರವಣಿಗೆಯ ಕೃತಿಯನ್ನು ಗಮನಿಸುವಂತೆಯೇ ತೋಂಡಿ ಕೃತಿಗಳನ್ನು ಗಮನಿಸಬೇಕೆಂದು ಹೇಳುವುದು ಹಾಸ್ಯಾಸ್ಪದ ವಿಚಾರ. ಜನಪದ ಸಾಹಿತ್ಯಕ್ಕೆ ಮೂಲಕೃತಿಯೊಂದಿರುವುದು ನಿಜವಾದರೂ ಅದು ಸಿಕ್ಕುವುದು ಸಾಧ್ಯವಿಲ್ಲ. ಯಾಕೆಂದರೆ ಜನಪದ ಸಾಹಿತ್ಯ ಮುಖ್ಯವಾಗಿ ತೋಂಡಿ ಸಂಪ್ರದಾಯವನ್ನು ಆಧರಿಸಿರುವಂಥದು. ಆದ್ದರಿಂದ ಹಾಡುಗಾರನಿಂದ ಹಾಡುಗಾರನಿಗೆ ಬದಲಾಗುತ್ತ ಬೆಳವಣಿಗೆಯಾಗುತ್ತ ಅಂದರೆ ಹಿಗ್ಗುತ್ತ ಕುಗ್ಗುತ್ತ ಹೋಗುವಂಥದು. ಒಬ್ಬನೇ ಕಥೆಗಾರ ಒಂದೇ ಕತೆಯನ್ನು ಎರಡು ಸಲ–ಎರಡು ರೀತಿಯ ಪ್ರೇಕ್ಷಕರೆದುರಿಗೆ. ಉದಾ – ಕಾಲೇಜ ಹುಡುಗರೆದುರಿಗೆ, ಮತ್ತು ಹಳ್ಳಿಯ ಪ್ರೇಕ್ಷಕರಿಗೆ ಹೇಳಿದರೆ – ಹೇಳುವ ರೀತಿ, ಬಳಸುವ ಪದಗಳಲ್ಲಿ ವ್ಯತ್ಯಾಸವಾಗಲೇಬೇಕು. ಈ ವ್ಯತ್ಯಾಸಗಳು ಪ್ರೇಕ್ಷಕರನ್ನು ಗಮನದಲ್ಲಿಟ್ಟು ಆದಂಥವು. ಈ ಎರಡು ಪಾಠಾಂತರಗಳಲ್ಲಿ ಯಾವುದು ಶುದ್ಧ? ಯಾವುದು ಅಶುದ್ಧ? ತಪ್ಪೆನಿಸಿದಲ್ಲಿ ತಿದ್ದೇನೆಂಬ ಹಮ್ಮಿನ ಮಾತು ತೀರ ಹಾಸ್ಯಾಸ್ಪದ. ತಿದ್ದಿದ್ದೇ ಸರಿಯೆಂದೇನು ಲೆಕ್ಕ? ಜಾನಪದರಿಗಿಂತ ತಿದ್ದುವವರಿಗೇ ಹೆಚ್ಚು ಬುದ್ಧಿಯಿದೆಯೆಂದು ಯಾರು ಹೇಳಿದವರು?

ಈ ಲೇಖಕರು ಇನ್ನೂ ಒಂದು ಮೋಜಿನ ತೀರ್ಮಾನ ಸಾರಿದ್ದಾರೆ: ವೇದದ ಪಾಠದ ಖಚಿತತೆಯಲ್ಲಿ ವಹಿಸಿದ ಅಕ್ಷರಪಾವಿತ್ರ್ಯದ ಪಾತ್ರ ಇಲ್ಲದೆ ಜನಪದ ವೇದ ಪ್ರಕ್ಷೇಪ, ಲೋಪ, ವ್ಯತ್ಯಯಗಳ ಅತಿಗೊಂದಲದಿಂದ ಹೆಚ್ಚು ವಿರೂಪಕ್ಕೆ ಅವಕಾಶವಾಯಿತೆಂದು ಹಳಹಳಿಸಿದ್ದಾರೆ. ವೇದಗಳಂತೆ ಹೇಳಿದಂತೆ ಹೇಳಲಿಲ್ಲವೆಂದೇ ಜನಪದ ಸಾಹಿತ್ಯ ಉಳಿದು ಬಂದಿದೆ. ಈಗಿದ್ದ ತ್ರಿಪದಿಗಳ 99 ಭಾಗ ಭ್ರಷ್ಟವಾದವುಗಳೆಂದು ಕಾರಂತರೊಂದಿಗೆ ಈ ಲೇಖಕರೂ ಒಪ್ಪಿದ್ದಾರೆಂದು ಹೇಳಿದೆನಲ್ಲ; ಹಾಗಿದ್ದರೆ ಅವನ್ನೆಲ್ಲ ತಿದ್ದಿದ್ದರೆ ಅರ್ಥಾತ್ ಪರಿಷ್ಕಾರಗೊಳಿಸಿದ್ದರೆ ಶುದ್ಧವಾಗುತ್ತಿದ್ದುವೆ? ಸಧ್ಯ ಎಲ್ಲಾ ತ್ರಿಪದಿಗಳನ್ನೂ ಇವರೇ ಇಬ್ಬರು ವಿದ್ವಾಂಸರು ಸಂಗ್ರಹಿಸಿದ್ದರೆ ಬಹುಶಃ ನಿಜವಾದ ಜನಪದ ತ್ರಿಪದಿಗಳು ಸಿಗುತ್ತಿದ್ದವೋ ಇಲ್ಲವೊ!

# ಶಿಶು ಸಾಹಿತ್ಯ

## ಕೃಷ್ಣ ಪರಮೇಶ್ವರ ಭಟ್ಟ

ಶಿಶು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ 1971ರಲ್ಲಿ ಪ್ರಥಮಬಾರಿಗೆ ಪ್ರಕಟವಾದ ಪುಸ್ತಕಗಳನ್ನು ಸಮೀಕ್ಷಿಸಲು ಇಲ್ಲಿ ಪ್ರಯತ್ನಿಸಿದೆ.

ಈ ಪುಸ್ತಕಗಳು ಮಕ್ಕಳಿಗೆಂದು ಬರೆಯಲಾಗಿವೆಯಾದರೂ ಅವೆಲ್ಲವೂ ಒಂದೇ ವಯಸ್ಸಿನ ಮಕ್ಕಳಿಂದ ಓದಿಸಿಕೊಂಡು ಹೋಗುವಂತಹ ಕೃತಿಗಳಲ್ಲ. ಆದ್ದರಿಂದ ವಿಷಯ ನಿರೂಪಣೆಗಳಿಗೆ ಅನುಗುಣವಾಗಿ ಅವುಗಳ ವಿಂಗಡಣೆ ಅನಿವಾರ್ಯವಾಗುತ್ತದೆ. 1) ಕವನ ಸಂಗ್ರಹ, 2) ನಾಟಕಗಳು, 3) ಕಥೆಗಳು, 4) ಸಾಹಸದ ಕಥೆಗಳು, 5) ಸ್ಥಳ ವರ್ಣನೆಗಳು, 6) ಕವಿಗಳು, 7) ಧಾರ್ಮಿಕ ಪುರುಷರು, 8) ವ್ಯಕ್ತಿಚಿತ್ರಣಗಳು, 9) ಅರಸರು ಮತ್ತು ರಾಜಮನೆತನಗಳು ಮತ್ತು 10) ಇತಿಹಾಸ — ಎಂಬ ವಿಂಗಡಣೆಯೊಂದಿಗೆ ಸಮೀಕ್ಷೆಯನ್ನು ಕೈಗೊಂಡಿದೆ. ಇವುಗಳಲ್ಲಿ ಮೊದಲ ಮೂರು ಭಾಗಗಳಲ್ಲಿ ಕಾಣಿಸಿಕೊಳ್ಳುವ ಪುಸ್ತಕಗಳು 6–10 ವರ್ಷ ವಯಸ್ಸಿನ ಮಕ್ಕಳನ್ನು ದೃಷ್ಟಿಯಲ್ಲಿಟ್ಟು ಬರೆದವುಗಳೆಂದು ಹೇಳಬಹುದು. ಇತರ ಪುಸ್ತಕಗಳು 10 ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನ ಮಕ್ಕಳು ಓದಬಹುದಾದಂಥವುಗಳು.

ಮಕ್ಕಳಿಗಾಗಿ ಬರೆದ ಪುಸ್ತಕಗಳು ಕೆಲವು ವಿಶಿಷ್ಟವಾದ ಆವಶ್ಯಕತೆಗಳನ್ನು ಗಮನದಲ್ಲಿರಿಸಿಕೊಂಡಿರಬೇಕಾಗುತ್ತದೆ. ಚಿತ್ರ, ಭಾಷೆ, ನಿರೂಪಣೆಗಳು ಇಲ್ಲಿ ಮುಖ್ಯವಾಗುತ್ತವೆ. ಚಿಕ್ಕ, ಸರಳ ವಾಕ್ಯಗಳು, ಸುಲಭವಾದ ಪದಗಳು, ಆತ್ಮೀಯವಾದ ಶೈಲಿ ಇವು ಪ್ರಾಮುಖ್ಯವಾಗುತ್ತವೆ. ಮೊದಮೊದಲು ವಿಷಯಜ್ಞಾನ ಮಾಡಿಕೊಡುವುದಕ್ಕಿಂತಲೂ ವಾಚನಾಭಿರುಚಿಯನ್ನು ಬೆಳೆಸುವುದು ಅತ್ಯವಶ್ಯಕವಾಗುತ್ತದೆ. ಇತಿಹಾಸ–ಚರಿತ್ರೆಗಳ ವಿಷಯದಲ್ಲಿ ಈ ಅಂಶ ಇನ್ನೂ ಮುಖ್ಯವಾಗುತ್ತದೆ. ವಿಷಯಗಳ ನೇರವಾದ ನಿರೂಪಣೆ ಇಲ್ಲಿ ಆವಶ್ಯಕವಾಗಬಹುದೆ ವಿನಾ ಅವುಗಳ ಬಗೆಗಿನ ಚರ್ಚೆಯಲ್ಲ. ಅಕ್ಷರಗಳ ಪ್ರಮಾಣ, ಮುಖಪುಟ, ಕಾಗುಣಿತ ದೋಷಗಳು ಮೊದಲಾದವುಗಳ ಬಗೆಗೆ ವಿಶೇಷ ಲಕ್ಷ್ಯ ಅಗತ್ಯವಾಗುತ್ತದೆ.

ಇಲ್ಲಿಯ ಕೃತಿಗಳಲ್ಲಿ ಸಮಾಜ ಪುಸ್ತಕಾಲಯ (ಧಾರವಾಡ) ದಿಂದ ಪ್ರಕಟವಾದ ಕೃತಿಗಳ ಹೊರತಾಗಿ ಇತರ ಪ್ರಕಟಣೆಗಳು ಸುಂದರವಾದ ಮುದ್ರಣ, ಹೊದಿಕೆಗಳನ್ನೊಳಗೊಂಡಿವೆ. ಹೆಚ್ಚಿನ ಪುಸ್ತಕಗಳು ಸರಳವಾದ ಭಾಷೆಯೊಂದಿಗೆ ವಿಷಯದ ಪರಿಚಯ ಮಾಡಿಕೊಡಲು ಪ್ರಯತ್ನಿಸುತ್ತವೆ. ಆದರೂ ಬಹಳ ಆತ್ಮೀಯವಾದ ಶೈಲಿಯನ್ನು ಬಳಸಿಕೊಂಡು, ಮಕ್ಕಳನ್ನು ಆಕರ್ಷಿಸುವ ರೀತಿಯಲ್ಲಿ ಬರೆಯಬಲ್ಲವರು ಕೇವಲ ಒಬ್ಬಿಬ್ಬರು ಮಾತ್ರ ಎಂದು ಹೇಳಬೇಕಾಗಿದೆ.

ಕೆಲವು ಪುಸ್ತಕಗಳು ಪ್ರಾದೇಶಿಕ ನುಡಿಗಟ್ಟುಗಳನ್ನೂ ಉದ್ದುದ್ದ ವಾಕ್ಯಗಳನ್ನೂ ಧಾರಾಳವಾಗಿ ಬಳಸಿಕೊಂಡು ಮಕ್ಕಳಿಗೆ ಬೇಸರ ತರುವಂತಹವು. ಕೆಲವು ಪವಾಡ–ದಂತ

ಕಥೆಗಳನ್ನು ಸಾಕಷ್ಟು ಬಳಸಿಕೊಂಡು ಬರೆದ ಪುಸ್ತಕಗಳು. ಇನ್ನು ಕೆಲವು ಇತಿಹಾಸದ ಪುಸ್ತಕಗಳಂತೆಯೇ ಇದ್ದು ನೀರಸವಾಗಿವೆ. ಕನ್ನಡದಲ್ಲಿ, ಮಕ್ಕಳಿಗಾಗಿ ಬರೆದ ಪುಸ್ತಕಗಳು ಸಾಕಷ್ಟು ಸಂಖ್ಯೆಯಲ್ಲಿ ಹೊರಬರುತ್ತಿದ್ದರೂ ಕಥನಶೈಲಿಯನ್ನು ಮಾತ್ರ ಇನ್ನೂ ಸಾಧಿಸಬೇಕಾಗಿದೆ ಎಂಬ ಅಂಶ ಇಲ್ಲಿ ವ್ಯಕ್ತವಾಗುತ್ತದೆ. ನಮ್ಮ ಕಾವ್ಯ–ಇತಿಹಾಸ–ವ್ಯಕ್ತಿಗಳು ಇವುಗಳನ್ನು ಕುರಿತ ಪುಸ್ತಕಗಳಿಗಿಂತ ಜಾನಪದ ಕಥೆಗಳು, ಪಂಚತಂತ್ರಶೈಲಿಯ ಕಥೆಗಳು ಹೆಚ್ಚು ಆಕರ್ಷಕವಾಗಿರುವುದಕ್ಕೆ ಅವುಗಳಲ್ಲಿರುವ ದಂತಕಥೆಗಳು ಮಾತ್ರವಲ್ಲ, ಕಥನಗುಣವೂ ಕಾರಣ ಎಂಬುದು ಗಮನಿಸಬೇಕಾದ ಸಂಗತಿ.

## ಕವನಸಂಗ್ರಹ

ತಾಳಬದ್ಧವಾದ ಗಣರಚನೆ, ಪ್ರಾಸಗಳಿಗೆ ಮಕ್ಕಳ ಕವನಗಳಲ್ಲಿ ವಿಶೇಷವಾದ ಮಹತ್ವವುಂಟಾಗುತ್ತದೆ. ಅಭಿನಯಕ್ಕೆ ಬಳಸಿಕೊಳ್ಳಬಹುದಾದ ಕವನಗಳು ಮಕ್ಕಳಿಗೆ ಹೆಚ್ಚಿನ ಆಸಕ್ತಿಯನ್ನು ಹುಟ್ಟಿಸುತ್ತವೆ. ಪ್ರಾಸ–ಅಭಿನಯಗಳ ಮಹತ್ವವಿರುವುದು ಕವನಗಳನ್ನು ಜ್ಞಾಪಕಶಕ್ತಿಯಲ್ಲಿ ಹಿಡಿದಿಡುವುದರಲ್ಲಿ. ಮಧ್ಯಸ್ಥ ಅವರ **ಪಾಪು-ಹೀಪಿ** ಎಂಬ ಕವನಸಂಗ್ರಹವನ್ನು ಈ ದೃಷ್ಟಿಯಿಂದ ನೋಡಿದಾಗ ಅವರಲ್ಲಿಯ ಕವನಗಳು ತೀರ ಸಾಮಾನ್ಯವಾದವುಗಳೆನಿಸುತ್ತವೆ. 'ಸೋಮವಾರದ ಹಾಡು' ಎಂಬ ಕವನದ ಸಾಲುಗಳನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು:

"ನಿನ್ನೆ ಭಾನುವಾರ
ಇಂದು ಸೋಮವಾರ
ನಾಳೆ ಮಂಗಳವಾರ
ನಾಡದು ಬುಧವಾರ
....................."

'ಕನ್ನಡ ಅಕ್ಷರಮಾಲೆ' ಎನ್ನುವುದೂ ಇಂಥಾದ್ದೇ ಒಂದು ಕವನ. ಕನ್ನಡದ ಅಕ್ಷರಗಳನ್ನೆಲ್ಲಾ ಒಂದೆಡೆ ಕಲೆಹಾಕುತ್ತದೆ ಅಷ್ಟೆ:

"ಅ ಆ ಇ ಈ ಉ ಊ ಋ ೠ
ಎ ಏ ಐ ಒ ಓ ಔ
ಅಂ ಅಃ
ಕ ಖ ಗ ಘ ಙ ಚ ಛ ಜ ಝ ಞ
......................." ಇತ್ಯಾದಿ.

ಇದನ್ನೇ 'ಹೀಗೆ ರಾಗವಾಗಿ' ಹಾಡಬಹುದಂತೆ!

"ಅಆ ಇಈ ಉಊ ಋೠ
................................

ಕಖಗಘಙಾ ಚಛಜಝಞಾ
.........................
ಪಾ ಫಾ ಬಾ ಭಾ ಮಾ
......................... "

'ಪಾಪು–ಪೀಪಿ', 'ದೇಶಸೇವಕರು' ಈ ಸಂಗ್ರಹದಲ್ಲಿಯ ತಕ್ಕಮಟ್ಟಿನ ಕವನಗಳು.

## ನಾಟಕಗಳು

ಕೆ. ವಿ. ಸುಬ್ಬಣ್ಣನವರ **ಕಾಡಿನ ಕಥೆ** ಪಂಚತಂತ್ರಶೈಲಿಯಲ್ಲಿ ರಚಿತವಾದ ನಾಟಕ. ತಮ್ಮ ಮರಿಗಳನ್ನು ರಕ್ಷಿಸಲು ಕಾಗೆಗಳು ಹದ್ದಿನ ಸಹಾಯವನ್ನು ಪಡೆಯುತ್ತವೆ. ಬೆಕ್ಕು ಹದ್ದಿನ ಗೆಳೆತನವನ್ನು ಸಂಪಾದಿಸಿ ಕಾಗೆಯ ಮರಿಗಳನ್ನು ಕಬಳಿಸುತ್ತದೆ. ಕಾಗೆಗಳ ರೋಷ ದಿಂದ ಹದ್ದು, ಹದ್ದಿನ ಉಪಾಯದಿಂದ ಬೆಕ್ಕು– ಇವೆರಡೂ ಸಾಯುತ್ತವೆ. ಮುಂದೆ ಕಾಕಮಂತ್ರಿಯೆ ಗೂಬೆರಾಜನ ಸ್ನೇಹಗಳಿಸಿ ಮೋಸದಿಂದ ಗೂಬೆಗಳನ್ನೆಲ್ಲ ಕೊಂದು ಕಾಗೆಯ ಮರಿಗಳಿಗಿದ್ದ ತೊಂದರೆಯನ್ನು ನಿವಾರಿಸುತ್ತದೆ. ಪಂಚತಂತ್ರದಲ್ಲಿಯಂತೆಯೆ, ಸಮಾಜದಲ್ಲಿ ವಿವಿಧ ರೀತಿಯ ಜನರನ್ನೂ ಅವರ ಅಸಹಜ ಪ್ರವೃತ್ತಿಗಳನ್ನೂ ಪ್ರಾಣಿಗಳ ಕಥೆಯ ಮೂಲಕ ತೋರಿಸುವ ಪ್ರಯತ್ನ ಇಲ್ಲಿದೆ. ಕಾರಂತರ **ಪಂಜರಶಾಲೆ** ರವೀಂದ್ರ ನಾಥ ಠಾಕೂರರ ಕಥೆಯೊಂದನ್ನು ಆಧರಿಸಿ ಬರೆದ ನಾಟಕ. ತಲೆಬುಡವಿಲ್ಲದ ಯೋಜನೆ ಗಳು, ಅದರ ಹೆಸರಿನಲ್ಲಿ ಅನೇಕರಿಗೆ ಆಶ್ರಯ, ಇವುಗಳ ಪ್ರಶಂಸಕರು, ನಿಂದಕರು – ಇವು ಗಳ ಸುತ್ತ ಹೆಣೆದಿರುವ, ಒಂದು ರೀತಿಯ ವಿಡಂಬನಾತ್ಮಕ ನಾಟಕವಿದು. ಇವೆರಡೂ ಮಕ್ಕಳ ರಂಗಭೂಮಿಯ ಬಗೆಗೆ ಕೆಲವು ಹೊಸ ಕಲ್ಪನೆಗಳನ್ನು ಒದಗಿಸಿಕೊಡುವ ಉತ್ತಮನಾಟಕಗಳು.

ಬಿ. ಶ್ರೀ. ಪಾಂಡುರಂಗರಾಯರ **ಕೋಳೂರು ಚೆನ್ನಕ್ಕ** 'ಕೋಳೂರು ಕೊಡ ಗೂಸು' ಎಂಬ ಜನಪ್ರಿಯ ಕಥೆಯನ್ನು ಆಧರಿಸಿ ಬರೆದ ನಾಟಕ. ಮಾರ್ಕಾಂಡೇಯನ ಆದರ್ಶವನ್ನು ಹೊಂದಿದ ಚೆನ್ನಕ್ಕ ತನಗೆ ಶಿವಪೂಜೆಯ ಅವಕಾಶ ದೊರೆತಾಗ, ಶಿವನನ್ನು ಒಲಿಸಿ, ನೈವೇದ್ಯವನ್ನು ಅರ್ಪಿಸಿದುದು ಈ ನಾಟಕದ ಕಥಾವಸ್ತು. ಒಂದೂವರೆ ಗಂಟೆಯ ಅವಧಿಯ ಈ ನಾಟಕ ಮಕ್ಕಳ ದೃಷ್ಟಿಯಿಂದ ಸಾಕಷ್ಟು ದೊಡ್ಡ ನಾಟಕ. 'ನಾಟಕದೊಳ ಗೊಂದು ನಾಟಕ' ವಿದೆ. ಕೆಲವೆಡೆ ಸಂಭಾಷಣೆಗಳು ಸಾಕಷ್ಟು ದೀರ್ಘವಾಗಿವೆ.

## ಕಥೆಗಳು

**ಅಮೆರಿಕದ ಜಾನಪದ ಕಥೆಗಳು** ಒಟ್ಟು ಐದು ಕಥೆಗಳನ್ನೊಳಗೊಂಡ ಚಿಕ್ಕ ಪುಸ್ತಕ. ಇದರಲ್ಲಿ 'ಮಣ್ಣಿನ ಮನುಷ್ಯ ಹಾಗೂ ಮೊಲ', 'ವಕ್ರತುಂಡರ ಪರಿವಾರ', 'ಜೈಕ ಹಾಗೂ ಯಮದೂತ' ಎಂಬ ಕಥೆಗಳು ಆಕರ್ಷಕವಾಗಿವೆ. ಕಥೆಗಳು ಸರಳವಾದ ಭಾಷೆಯಿಂದ ಕೂಡಿವೆ. ಆದರೆ 'ಅರಗು' 'ಬಾದಲಿ' ಮುಂತಾದ ಪ್ರಾದೇಶಿಕ ಪದಗಳು ಮಕ್ಕಳ ಕಥೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ತೊಂದರೆಯಾಗಿ ಪರಿಣಮಿಸುತ್ತವೆ.

ಕೈಲಾಸಂ ಅವರ 'ಪರ್ಪಸ್' (Purpose) ಎಂಬ ನಾಟಕದ ಆಧಾರದಿಂದ ಬರೆದ ಪುಸ್ತಕ **ಏಕಲವ್ಯನ ಕಥೆಗಳು**. ಬೇಡನ ಮಗನಾದ ಏಕಲವ್ಯನು ದ್ರೋಣಾಚಾರ್ಯರ ಪರೋಕ್ಷ ಶಿಷ್ಯನಾಗಿ ಉತ್ತಮ ಬಿಲ್ಗಾರನಾಗುತ್ತಾನೆ. ದ್ರೋಣರನ್ನೂ ಅರ್ಜುನನನ್ನೂ ಬಿಲ್ವಿದ್ಯೆಯಲ್ಲಿ ಮೀರಿಸುತ್ತಾನೆ. ದ್ರೋಣಾರ್ಜುನರಿಗೆ ಈ ಸಂಗತಿ ತಿಳಿದಾಗ ಅವರಿಗೆ ದುಃಖವಾಗುತ್ತದೆ. ಕಾರಣ, ಅಪ್ರತಿಮ ಬಿಲ್ಗಾರನನ್ನಾಗಿ ಮಾಡುತ್ತೇನೆಂದು ದ್ರೋಣರು ಅರ್ಜುನನಿಗೆ ಭರವಸೆ ನೀಡಿದ್ದರು. ಆಗ ಗುರುವಿನ ಮಾತನ್ನು ಉಳಿಸಲು ಏಕಲವ್ಯನೇ ಮುಂದಾಗಿ ತನ್ನ ಬಲಗೈಯ ಹೆಬ್ಬೆರಳನ್ನು ಕತ್ತರಿಸಿ ದ್ರೋಣರಿಗೆ ಗುರುದಕ್ಷಿಣೆಯಾಗಿ ಅರ್ಪಿಸುತ್ತಾನೆ. ವಿದ್ಯಾರ್ಥಿಗೆ ತನ್ನ ಗುರಿಗಿಂತಲೂ ಮುಖ್ಯವಾದದ್ದು ಅಭ್ಯಾಸತತ್ಪರತೆ ಹಾಗೂ ಗುರುಭಕ್ತಿಯೆಂಬುದನ್ನು ಲೇಖಕರು ಈ ಕಥೆಗಳ ಮೂಲಕ ಒತ್ತಿಹೇಳುತ್ತಾರೆ. ಲೇಖಕರ ಶೈಲಿ ಈ ನೀತಿಯನ್ನು ಚೆನ್ನಾಗಿ ಮನದಟ್ಟು ಮಾಡಿಕೊಡುತ್ತದೆ.

ರಾಮಾಯಣ, ಭಾರತ, ಭಾಗವತ ಮೊದಲಾದವುಗಳಿಂದ ಆಯ್ದುಕೊಂಡ ಅರವತ್ತು ನಾಲ್ಕು ಕಥೆಗಳನ್ನು **ಕಥಾಕೋಶ**ವು ಒಳಗೊಂಡಿದೆ. ಇಲ್ಲಿಯ ಕಥೆಗಳನ್ನು ಆರು ಭಾಗಗಳಾಗಿ ವಿಂಗಡಿಸಲಾಗಿದೆ. 1) ಜಯ–ವಿಜಯರ ಕಥೆಗಳು, 2) ಕರ್ಣನ ಕಥೆಗಳು, 3) ಕುರುಕ್ಷೇತ್ರದ ಕಥೆಗಳು, 4) ರಾಮಾಯಣದ ಕಥೆಗಳು, 5) ಸಂಮಿಶ್ರ ಕಥೆಗಳು, 6) ನವರಂಗ ಕಥೆಗಳು. ಜಯ–ವಿಜಯರ ಕಥೆಗಳಲ್ಲಿ ಜಯ–ವಿಜಯರು ವಿಷ್ಣುಲೋಕದಿಂದಿಳಿದು ಮೂರು ರಾಕ್ಷಸಜನ್ಮಗಳನ್ನೆತ್ತಿ, ವಿಷ್ಣುವಿನ ಅವತಾರಗಳಿಂದಲೇ ಹತರಾಗಿ ಪುನಃ ವಿಷ್ಣುಲೋಕಕ್ಕೆ ಹೋಗುವುದನ್ನು ಹೇಳಲಾಗಿದೆ. ಸರಳವಾದ ಭಾಷೆಯಲ್ಲಿ ಕಥೆಗಳನ್ನು ಹೇಳಲಾಗಿದೆ. 'ಕರ್ಣನ ಕಥೆಗಳ'ಲ್ಲಿ ತೋರುವ ಶೈಲಿ ಇಷ್ಟು ಸರಳವಾಗಿಲ್ಲ. ಇಲ್ಲಿಯ ಕಥೆಗಳಿಗೆ ಪಂಪ, ಭಟ್ಟನಾರಾಯಣ, ಕೈಲಾಸಂ – ಅವರ ಕೃತಿಗಳು ಆಧಾರವಾಗಿವೆ. ಬೇರೆ ಬೇರೆ ಆಕರಗಳಿಂದ ಇಲ್ಲಿಯ ಕಥೆಗಳು ಬಂದ ಪರಿಣಾಮವಾಗಿ ಈ ಕಥೆಗಳು ಒಂದಕ್ಕೊಂದು ಪೂರಕವಾಗಿಲ್ಲ (ಉದಾಹರಣೆಗೆ ಕಥೆ 1, 3, 9, 10 ಇವುಗಳನ್ನು ನೋಡಬಹುದು.) 'ಕುರುಕ್ಷೇತ್ರದ ಕಥೆಗಳೂ' ಕರ್ಣನ ಕಥೆಗೇ ಸಂಬಂಧಪಟ್ಟ ಕಥೆಗಳು. ಇಲ್ಲಿ ಕುಂತಿ ಕರ್ಣನಿಂದ ವಚನ ಪಡೆಯುವ ಪ್ರಸಂಗ ಬೇರೆ ರೀತಿಯದಾಗಿದೆ. ಕುಂತಿ ತನ್ನ ಪರಿಚಯವನ್ನು ಕರ್ಣನಿಗೆ ಹೇಳದೆ ಅಪರಿಚಿತಳಾಗಿಯೆ ಉಳಿಯುತ್ತಾಳೆ. ಕರ್ಣನ ಕಥೆಗಳು ಹಾಗೂ ಕುರುಕ್ಷೇತ್ರದ ಕಥೆಗಳೆರಡನ್ನೂ ಒಟ್ಟಿಗೆ ನೋಡಿದಾಗ ಕೆಲವು ವಿರೋಧಾಭಾಸವುಳ್ಳ ಅಂಶಗಳು ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ, 'ಕರ್ಣವಧೆ'ಯಲ್ಲಿ ಕರ್ಣ ಕುಂತಿಗೆ ಕೊಟ್ಟ ವಚನದ ಪ್ರಸ್ತಾಪವಿಲ್ಲ. ಆದರೆ ಕುರುಕ್ಷೇತ್ರದ ಕಥೆಗಳಲ್ಲಿ ಇದರ ಪ್ರಸ್ತಾಪವಿದೆ. ಕಥೆಗಳನ್ನು ಬಿಡಿಯಾಗಿ ನೋಡಿದಾಗ ಇದು ಗಮನಕ್ಕೆ ತೋರದಿರಬಹುದು. ಆದರೆ ಪುಸ್ತಕರೂಪದಲ್ಲಿ. ಒಟ್ಟಾಗಿ ಇವುಗಳನ್ನು ನೋಡಿದಾಗ ಈ ವಿಲಕ್ಷಣತೆ ಎದ್ದು ತೋರುತ್ತದೆ. ವಾಕ್ಯರಚನೆಯಲ್ಲಿಯೂ ಒಂದೆರಡು ಕಡೆ ಇಂಥ ಅಚಾತುರ್ಯವಾಗಿದೆ. ಉದಾ: 'ಕರ್ಣನೇನೂ ಸಾಮಾನ್ಯನಲ್ಲ. ಜರಾಸಂಧನಂಥವನನ್ನು ಕೊಂದವನು...' (ಪು. 124). ಇಲ್ಲಿ 'ಜರಾಸಂಧನಂಥವ

ನವರ' ಎಂಬುದನ್ನು 'ಜರಾಸಂಧನನ್ನು' ಎಂದು ಅರ್ಥಮಾಡಿಕೊಳ್ಳುವ ಅಪಾಯ ತಪ್ಪಿರುತ್ತಿತ್ತು.

'ರಾಮಾಯಣದ ಕಥೆಗಳ'ಲ್ಲಿ ರಾಮಾಯಣಕ್ಕೆ ಸಂಬಂಧ ಪಟ್ಟ ಒಂಬತ್ತು ಕಥೆಗಳಿವೆ. 'ಅಂಬರೀಷನ ಮಗಳು', 'ಗರುಡನ ಬಳಗ', 'ಹನುಮಂತನ ಬಾಲ' ಮೊದಲಾದವು ಆಸಕ್ತಿ ಕೆರಳಿಸುವಂತಹ ಕಥೆಗಳು.

'ಸಂಮಿಶ್ರ ಕಥೆಗಳು' ಹಾಗೂ 'ನವರಂಗ' ಕಥೆಗಳಲ್ಲಿ ಭಾಗವತ, ಪುರಾಣ, ಕಾವ್ಯ ಮೊದಲಾದವುಗಳಿಂದ ಆರಿಸಿಕೊಂಡ ಕಥೆಗಳಿವೆ. 'ಕಚ' 'ಗಿರಿಧಾರಿ' 'ತುಂಟ ಗಣಪತಿ ಮುಸಲಶಾಸ್ತ್ರಿ' 'ಕೋಳೂರ ಕೊಡಗೂಸು' ಮೊದಲಾದ ಉತ್ತಮ ಕಥೆಗಳು ಈ ಭಾಗದಲ್ಲಿ ಬರುತ್ತವೆ.

**ಗುಟ್ಟು ರಟ್ಟಾಯಿತು** ಎಂಬುದು ಬೀರ್‌ಬಲ್ಲನ ಕಥೆಗಳಿಂದ ಆಯ್ದುಕೊಂಡ ನಾಲ್ಕು ಕಥೆಗಳುಳ್ಳ ಪುಸ್ತಕ. ಬೀರ್‌ಬಲ್ಲನ ಕಥೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ನವಿರಾದ ಹಾಸ್ಯ ಇಲ್ಲಿಯೂ ಇದೆ.

ಜಪಾನೀಯರಲ್ಲಿ ಪ್ರಚಾರದಲ್ಲಿರುವ ಜಾನಪದ ಕಥೆಗಳಿಂದ ಆಯ್ದುಕೊಂಡ ಏಳು ಕಥೆಗಳನ್ನು **ಜಪಾನಿನ ಜಾನಪದ ಕಥೆಗಳು** ಎಂಬ ಪುಸ್ತಕದಲ್ಲಿ ಕಾಣುತ್ತೇವೆ. 'ದೂರದರ್ಶಿಯಾದ ತಂದೆ'. 'ಮೂರ್ಖ ಅಣ್ಣ—ಚತುರ ತಮ್ಮ', 'ಮಂಗನ ಹೃದಯ' ಎಂಬ ಕಥೆಗಳನ್ನು ಉತ್ತಮವಾದ ಕಥೆಗಳೆನ್ನಬಹುದು. ಇವು ಭಾರತೀಯ ಜಾನಪದ ಕಥೆಗಳನ್ನು ಬಹುಮಟ್ಟಿಗೆ ಹೋಲುತ್ತವೆ. 'ಉಚ್ಛೃಂಕಲ ಜೀವನ' (ಪು. 7) ಮುಂತಾದ ಕೆಲವು ಕಠಿಣಪದಗಳನ್ನು ಬಿಟ್ಟರೆ ಕಥೆಗಳ ಭಾಷೆ ಸರಳವಾಗಿದೆ.

**ತಾಮ ಮತ್ತು ಪುಟ್ಟ ಹಕ್ಕಿ** ಎಂಬುದು ಕಮಲಾ ಲಕ್ಷ್ಮಣ್ ಅವರ ಕಥೆಯ ಕನ್ನಡ ರೂಪಾಂತರ. ತಾಮ ಎಂಬ ಮರಿ ಆನೆ ತನ್ನ ತಾಯಿಯನ್ನು ಅಗಲಿ ಇರಬೇಕಾದ ಪ್ರಸಂಗ ಬಂದಾಗ ಒಂದು ಹಕ್ಕಿಯ ಗೆಳೆತನವನ್ನು ಸಂಪಾದಿಸುತ್ತದೆ. ಹಕ್ಕಿಯ ಸಹಾಯದಿಂದ ಆನೆ ಪುಟ್ಟ ಆಕಾರವನ್ನು ತಾಳಿದಾಗ ದುರ್ಬಲ ಜೀವಿಗಳಿಗೆ ಸಾಮಾನ್ಯವಾದ ಸಂಕಟಗಳೆಲ್ಲ ಆನೆಗೂ ಒದಗುತ್ತವೆ. ಇವೆಲ್ಲವುಗಳಿಂದ ಪಾರಾದ ತಾಮ ಪುನಃ ಅದೇ ಹಕ್ಕಿಯ ಸಹಾಯದಿಂದಲೇ ತನ್ನ ಮೊದಲಿನ ಆಕಾರವನ್ನು ಪಡೆಯುತ್ತದೆ. ಸಾಕಷ್ಟು ಚಿತ್ರಗಳನ್ನು ಒಳಗೊಂಡು ಸರಳವಾದ ಭಾಷೆಯಿಂದ ಕೂಡಿದ ಈ ಪುಸ್ತಕ ಮಕ್ಕಳಿಗೆ ಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.

ನೆಹರೂ ಅವರ ಜೀವನದಲ್ಲಿ ಜರುಗಿದ ರಸನಿಮಿಷಗಳಲ್ಲಿ ಕೆಲವನ್ನು **ನೆಹರೂ ಅವರ ಸವಿಗತೆಗಳು** ಎಂಬ ಪುಸ್ತಕದಲ್ಲಿ ಸಂಗ್ರಹಿಸಲಾಗಿದೆ. ದೊಡ್ಡವರ ಜೀವನದಲ್ಲಿ ಬರುವ ಸಣ್ಣ ಪ್ರಸಂಗಗಳೂ ಅವರ ವ್ಯಕ್ತಿತ್ವದ ನಾನಾ ಮುಖಗಳನ್ನು ಪರಿಚಯಮಾಡಿಕೊಡುತ್ತವೆ. ನೆಹರೂ ಅವರ ವಿನೋದ, ಸಿಟ್ಟು, ಬುದ್ಧಿವಂತಿಕೆ, ರಾಜಕೀಯ, ಚಾಣಾಕ್ಷತನ, ಧಾರ್ಮಿಕ ದೃಷ್ಟಿ, ಪ್ರಾಣಿವಾತ್ಸಲ್ಯ, ಹಟಮಾರಿತನ ಮೊದಲಾದ ಸ್ವಭಾವಗಳನ್ನು

ಎತ್ತಿತೋರಿಸುವ ಅನೇಕ ಪ್ರಸಂಗಗಳನ್ನು ಈ ಪುಸ್ತಕದಲ್ಲಿ ನಿರೂಪಿಸಲಾಗಿದೆ. ಈ ಪುಸ್ತಕದಲ್ಲಿ ತೋರುವ ಭಾಷೆ ಮಾತ್ರ ಸಪ್ಪೆಯಾಗಿದೆ. ಅನೇಕ ಕಡೆ ಪದಗಳೂ, ವಾಕ್ಯ ರಚನೆಗಳೂ ಕ್ಲಿಷ್ಟವಾಗಿವೆ. ಉದಾ: "ಸುತ್ತಮುತ್ತಲಿನ ವಾತಾವರಣ ಅಥವಾ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸುವುದು ನೆಹರೂರವರ ಮೂಲಸ್ವಭಾವವೇ ಆಗಿಬಿಟ್ಟಿದ್ದಿತು" (ಪು. 1). "ತುಸು ದಿನಗಳಲ್ಲಿಯೆ ಹದಿನಾಲ್ಕನೆ ಸಪ್ಟೆಂಬರ್ ಉಪಸ್ಥಿತವಾಯಿತು" (ಪು. 9). "...ಅವರ ಹೃದಯ ವಿದೀರ್ಣವಾಗಿಹೋಗಿದ್ದಿತು" (ಪು. 17). "ಯಾರಾದರೂ ನಮ್ಮ ನಿರ್ದಿಷ್ಟ ಪಥವನ್ನು ಬದಲು ಮಾಡಿದರೆ ಹೇಗೆ?" (ಪು. 76). "ಯಶೋನ್ಮಾದಕ್ಕೆ ಬಲಿಯಾಗಿ, ಜನತೆಗೆ ಸಲ್ಲಿಸಿದ ಆಶ್ವಾಸನೆಗಳ ವಿಸ್ಮೃತಿಯಾಗದಿರಲಿ" (ಪು. 57) ಇತ್ಯಾದಿ ವಾಕ್ಯಗಳನ್ನು ಪುಸ್ತಕದುದ್ದಕ್ಕೂ ನೋಡಬಹುದು.

ಪುಟ್ಟ ಕುನ್ನಿಯಾದ ಪಿಲ್ಲನ ಸಾಹಸದ ಕಥೆಗಳನ್ನು **ಪುಟ್ಟ ಕುನ್ನಿ ಮತ್ತು ಅದರ ಸಾಹಸಗಳು** ಎಂಬ ಪುಸ್ತಕ ಹೇಳುತ್ತದೆ. ಪಿಲ್ಲ, ಕುಂಬಾರ ಸೋನು, 'ದುಲ್ ದುಲ್' ಮಾಯಾ ಕುದುರೆ, ಪಿಟ್ಕಿಯೆಂಬ ಅಳಿಲುಮರಿ, ಗರ್ಬರ್ ಹೆಸರಿನ ಹೋತ, ಚೀಪ್ ಚೀಪ್ ಹಕ್ಕಿ—ಇವೆಲ್ಲ ಸ್ನೇಹಿತರು. ಸ್ನೇಹಿತರ ಸಹಾಯದೊಂದಿಗೆ ಬೆಕ್ಕು, ಕಪ್ಪೆ, ಕಾಗೆಗಳೊಂದಿಗೆ ಹೋರಾಡುವ ಪಿಲ್ಲನ ಸಾಹಸದ ವರ್ಣನೆ ಇಲ್ಲಿದೆ. **ಬಂಗಾಲ ದೇಶದ ಚೆರಗಿನ ಕಥೆಗಳು** ಎಂಬ ಪುಸ್ತಕದಲ್ಲಿ ನಾಲ್ಕು ಕಥೆಗಳಿವೆ. ಇವುಗಳಲ್ಲಿ 'ರಸಗುಲ್ಲಾ ರಾಜ್ಯದಲ್ಲಿ' ಹಾಗೂ 'ಪ್ರೇತಕನ್ಯೆ' ಇವೆರಡು ಉತ್ತಮವಾದ ಕಥೆಗಳು. ರಸಗುಲ್ಲಾ ರಾಜ್ಯದ ರಾಜ ಹಾಗೂ ಮಂತ್ರಿಗಳ ಮೂರ್ಖತನದಿಂದಾಗಿ ಸಾಧು-ಶಿಷ್ಯನೊಬ್ಬನು ಅಪಾಯಕ್ಕೆ ಗುರಿಯಾಗಿ ನಂತರ ಅದರಿಂದ ಪಾರಾಗುವ ಕಥೆ 'ರಸಗುಲ್ಲಾ ರಾಜ್ಯದಲ್ಲಿ'. ಪ್ರೇತ ರೂಪವನ್ನು ಪಡೆದ ಕನ್ಯೆಯೊಬ್ಬಳು ಮನುಷ್ಯ ಜೀವನದ ಸುಖ-ಸಂತೋಷಗಳನ್ನು ಪುನಃ ಪಡೆಯಲು ಪ್ರಯತ್ನಿಸಿ ಅದರಲ್ಲಿ ವಿಫಲಳಾದ ಕಥೆ 'ಪ್ರೇತಕನ್ಯೆ'ಯಲ್ಲಿ ಬರುತ್ತದೆ. **ಬಂಗಾಳ ದೇಶದ ಹಾಸ್ಯ ಕಥೆಗಳು** ಎಂಬ ಪುಸ್ತಕದಲ್ಲಿ ಒಟ್ಟು ಐದು ಕತೆಗಳಿವೆ. 'ಹಾಸ್ಯಕತೆಗಳು' ಎಂಬ ಶೀರ್ಷಿಕೆಯ ಔಚಿತ್ಯ ಅರ್ಥವಾಗುವುದಿಲ್ಲ. ಇದರಲ್ಲಿಯ 'ಹೆಡ್ಡನ ದುರದೃಷ್ಟ' ಎಂಬ ಕಥೆ ಮಾತ್ರ ಶೀರ್ಷಿಕೆಯನ್ನು ಸಾರ್ಥಕಗೊಳಿಸುವಂತೆ ಹಾಸ್ಯಪೂರ್ಣವಾಗಿದೆ. ಉಳಿದ ನಾಲ್ಕು ಕತೆಗಳು 'ಅಜ್ಜಿಯ ಕತೆ'ಯ ಮಾದರಿಯವು. ಕತೆಗಳನ್ನು ಹೇಳುವ ಭಾಷೆ ಚಿತ್ತಾಕರ್ಷಕವಾಗಿದೆ. **ಭಾರತದ ಅರಸರು ಮತ್ತು ಶ್ರೀಸಾಮಾನ್ಯನ ಕಥೆಗಳ** ಪುಸ್ತಕದಲ್ಲಿ 'ಜಿಪುಣ ಕನ್ಹಯ್ಯಲಾಲ', 'ಗರ್ವಭಂಗ', 'ಅಕ್ಬರ ಚಕ್ರವರ್ತಿಯ ಬುದ್ಧಿವಂತಿಕೆ', 'ದೊರೆ ಪ್ರತಾಪ ಮತ್ತು ರಾಮದಾಸ,' 'ಮೂರು ಉಂಗುರ' ಎಂಬ ಐದು ಕತೆಗಳಿವೆ. ಎಲ್ಲ ಕಥೆಗಳೂ ಸುಲಭವಾಗಿ ಓದಿಸಿಕೊಂಡು ಹೋಗುವ ಗುಣವನ್ನೊಳಗೊಂಡಿವೆ.

ಕೊಟ್ಟಲಗಿ ಅವರ **ವೇತಾಳ ಹೇಳಿದ ಕಥೆಗಳು** ಎಂಬುದು ಪ್ರಾಕೃತದ 'ವೇತಾಳ ಪಂಚವಿಂಶತಿ' ಎಂಬ ಕೃತಿಯ ಅನುವಾದ. ಇದರಲ್ಲಿ ಬೇತಾಳ ಹೇಳಿದ ಇಪ್ಪತ್ತೈದು ಕಥೆಗಳನ್ನು ಕೊಡಲಾಗಿದೆ. ಪ್ರತಿಷ್ಠಾನ ರಾಜ್ಯದ ದೊರೆ ವಿಕ್ರಮಸೇನನು ಒಬ್ಬ ಭಿಕ್ಷುವಿನ

ಯಾಗಕ್ಕೆ ಬಲಿಯಾಗುವುದನ್ನು ತಪ್ಪಿಸಲು ಬೇತಾಳವು ರಾಜನಿಗೆ ಕಥೆಗಳನ್ನು ಹೇಳುತ್ತಾ ಕಾಲಹರಣವನ್ನುಂಟು ಮಾಡುತ್ತದೆ. ಬೇತಾಳನ ಕಥೆಗಳು ಜಾನಪದ ಕಥೆಗಳಿಗಿಂತ ರಚನೆಯಲ್ಲಿ ಕೆಲಮಟ್ಟಿಗೆ ಭಿನ್ನವಾಗುತ್ತವೆ. ಬೇತಾಳನ ಕಥೆಗಳು ಒಂದು ರೀತಿಯಲ್ಲಿ ಪೂರ್ವ ನಿಯೋಜಿತವಾದವುಗಳು; ಚಮತ್ಕಾರದಿಂದ ಕೂಡಿದವುಗಳು. ಜಾನಪದ ಕಥೆಗಳಲ್ಲಿ ಕೊನೆಯಲ್ಲಿ ಸಮಸ್ಯೆಯಿರುವುದಿಲ್ಲ. ಈ ದೃಷ್ಟಿಯಿಂದ ಅವು ನೀತಿಕಥೆಗಳಿಗೆ ಬಹು ಹತ್ತಿರವಾಗಿರುತ್ತವೆ. ಆದರೆ ಬೇತಾಳನ ಕಥೆಗಳಲ್ಲಿ ಕಥೆಗಿಂತ ಕೊನೆಯಲ್ಲಿ ಸಮಸ್ಯೆಯನ್ನು ತರುವುದೇ ಮುಖ್ಯವಾಗಿರುತ್ತದೆ. ಆದರೆ ಈ ಸಮಸ್ಯೆಗಳು ಕಥೆಗಳಲ್ಲಿ ಸ್ವಾಭಾವಿಕವಾಗಿ ತಲೆದೋರುವಂಥವುಗಳೆಂದು ಹೇಳಲು ಸಾಧ್ಯವಿಲ್ಲ; ಬಹುಮಟ್ಟಿನ ಕಥೆಗಳಲ್ಲಿ ಸಮಸ್ಯೆಗಳಿಗಾಗಿಯೇ ಕಥೆಗಳು ರಚಿತವಾದಂತೆ ತೋರುತ್ತದೆ. ಪರಸ್ಪರ ಸಂಬಂಧವಿಲ್ಲದ ಕಥೆಗಳನ್ನು ಒಂದೆಡೆ ಜೋಡಿಸುವ ತಂತ್ರವಾಗಿ ಇಲ್ಲಿಯ ಸಮಸ್ಯೆಗಳು ಹಾಗೂ ರಾಜನ ಉತ್ತರಗಳು ಬರುತ್ತವೆ. ಬೇತಾಳನ ಕಥೆಗಳಲ್ಲಿ ಕಂಡುಬರುವ ವಿಶೇಷವೆಂದರೆ ಈ ತಾಂತ್ರಿಕ ಕೌಶಲ.

ಮಹಾಕಾವ್ಯ ಪುರಾಣಗಳಲ್ಲಿ ಬರುವ ಉಪಕಥೆಗಳು, ಸಾಮಾನ್ಯ ಪಾತ್ರ ಸನ್ನಿವೇಶಗಳು ಕಾವ್ಯದ ಕಥೆಯೊಂದಿಗೆ ನೇರವಾದ ಸಂಬಂಧವನ್ನಿಟ್ಟುಕೊಂಡಿದ್ದರೂ ಅವುಗಳನ್ನು ಸ್ವತಂತ್ರವಾಗಿ ತೆಗೆದುಕೊಂಡು ನೋಡಿದರೂ ಅವು ಒಂದು ಭಾವವನ್ನು ಸ್ಫುರಿಸಬಹುದು ಅಥವಾ ಒಂದು ನೀತಿಯನ್ನು ಹೇಳಬಹುದು ಅಥವಾ ಒಂದು ನಂಬಿಕೆಯ ಪ್ರತೀಕವಾಗಿ ಬರಬಹುದು. **ಜಟಾಯು–ಹನುಮಂತ** ದಲ್ಲಿ ಬರುವ ಜಟಾಯುವಿನ ಕಥೆ ಇಂತಹ ಒಂದು ಕಥೆ. ಇದು ರಾಮಾಯಣದಿಂದ ಆಯ್ದುಕೊಂಡ ಕಥೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಒಯ್ಯುತ್ತಿರುವಾಗ ಜಟಾಯು ತನಗೂ ದಶರಥನಿಗೂ ಇದ್ದ ಗೆಳೆತನವನ್ನು ಸ್ಮರಿಸಿಕೊಂಡು, ತನ್ನ ವಿಶ್ವಾಸದ ಕುರುಹಾಗಿ ಸೀತೆಯನ್ನು ರಕ್ಷಿಸಲು ರಾವಣನೊಡನೆ ಕಾದಾಡಿತು. ಕಥೆಯ ಇತಿಮಿತಿಗಳನ್ನರಿತು ಲೇಖಕರು ಇದನ್ನು ಚೊಕ್ಕಟವಾಗಿ ನಿರೂಪಿಸಿದ್ದಾರೆ. ಕಿಷ್ಕಿಂಧೆಯಲ್ಲಿ ರಾಮ–ಹನುಮಂತರ ಪರಿಚಯವಾದಂದಿನಿಂದ ರಾಮ–ರಾವಣರ ಯುದ್ಧವಾಗುವವರೆಗೆ ಹನುಮಂತ ವಹಿಸಿದ ಪಾತ್ರವನ್ನು ಕುರಿತು ಸಂಕ್ಷಿಪ್ತವಾಗಿ ಹೇಳುವುದು 'ಹನುಮಂತನ ಕಥೆ'ಯ ಹಿಂದಿರುವ ಉದ್ದೇಶ. ಈ ಕಥೆಗಳ ಹಿಂದೆ ವಿಶೇಷವಾಗಿ ಕಂಡುಬರುವ ಅಂಶವೆಂದರೆ ಸೇವಾ ಮನೋಭಾವ ಹಾಗೂ ರಾಮಭಕ್ತಿ.

**ಭಾರತದ ಜಾನಪದ ಕಥೆಗಳು** ಹದಿನಾಲ್ಕು ಜಾನಪದ ಕಥೆಗಳಿಂದ ಕೂಡಿದ ಪುಸ್ತಕ. ತಿಸ್ಲೆರೋವಾ ಅವರ ಕೃತಿಯ ಕನ್ನಡ ರೂಪಾಂತರವಿದು. ರೂಪಾಂತರ ಚೆನ್ನಾಗಿದೆ. ಇದರಲ್ಲಿಯ ಕೆಲವು ಕಥೆಗಳು, ಉದಾಹರಣೆಗೆ, 'ಕೆಂಪು ಆಮೆಯ ಕಥೆ,' 'ನಳ್ಳಿಯ ಮಾಂಸ ರುಚಿ ಹತ್ತಿದ ನೀರುಕೊಂಚೆ', 'ನಾಲ್ವರು ಗೆಳೆಯರು' ಮೊದಲಾದವು ಪಂಚತಂತ್ರಕಥೆಯ ಶೈಲಿಯಲ್ಲಿ ರಚಿಸಲಾದ ಕಥೆಗಳು.

ಕೃಷ್ಣಚೈತನ್ಯ ಅವರ ಕೃತಿಯ ಕನ್ನಡ ರೂಪಾಂತರ **ವಾಸವದತ್ತೆ.** ವತ್ಸದೇಶದ ದೊರೆ ಉದಯನ. ಆತನ ಪತ್ನಿ ವಾಸವದತ್ತೆ. ಒಮ್ಮೆ ವತ್ಸದೇಶದ ಮೇಲೆ ನೆರೆಯ

ರಾಜ್ಯದ ಅರಸನು ದಾಳಿ ಮಾಡಿದಾಗ ಅದನ್ನು ಎದುರಿಸಲು ಉದಯನನು ಸಮರ್ಥ ನಲ್ಲವೆಂಬುದನ್ನು ಕಂಡುಕೊಂಡ ಉದಯನನ ಮಂತ್ರಿ ಒಂದು ಉಪಾಯ ಹೂಡುತ್ತಾನೆ. ಮಗಧದ ರಾಜಕುಮಾರಿಯನ್ನು ಉದಯನನಿಗಾಗಿ ತಂದು ಮಗಧರಾಜನ ಸಹಾಯ ಪಡೆಯುವುದು ಅವನ ಯೋಚನೆ. ಆದರೆ ವಾಸವದತ್ತೆ ಜೀವಂತವಾಗಿರುವವರೆಗೆ ಉದಯನ ಈ ಸಲಹೆಯನ್ನು ಒಪ್ಪಲಾರ. ಆದ್ದರಿಂದ ತನ್ನನ್ನೂ ವಾಸವದತ್ತೆಯನ್ನೂ ಅಡಗಿಸಿಟ್ಟು, ತಾವಿಬ್ಬರೂ ಸತ್ತರೆಂದು ಪ್ರಚಾರಮಾಡಿ, ಮಗಧದ ರಾಜಕುಮಾರಿ ಹಾಗೂ ಉದಯನನ ಮದುವೆಯಾಗುವಂತೆ ಮಾಡುತ್ತಾನೆ. ಈ ಮಧ್ಯೆ ಬರುವ ವಾಸವದತ್ತೆಯ ವಿರಹ, ಕಷ್ಟ, ಪತಿಭಕ್ತಿ, ಮೊದಲಾದವುಗಳನ್ನು ಈ ಪುಸ್ತಕ ಪ್ರಧಾನ ವಾಗಿ ಚಿತ್ರಿಸುತ್ತದೆ. ಪುಸ್ತಕ ಸೊಗಸಾದ ನಿರೂಪಣೆ ಹಾಗೂ ಚಿತ್ರಗಳಿಂದ ಕೂಡಿದೆ.

**ಇಲಿಗಳ ಮದುವೆ** ಒಂದು ಕಥಾಸಂಗ್ರಹ. ಇದರಲ್ಲಿ ಒಟ್ಟು ಏಳು ಕಥೆಗಳಿವೆ. 'ಇಲಿಗಳ ಮದುವೆ', 'ಪೆದ್ದ ಸುಬ್ಬು', 'ದೊಣ್ಣೆಯಪ್ಪ ಗಿಡ್ಡಪ್ಪ' ಇವುಗಳನ್ನು ಈ ಸಂಗ್ರಹದ ಉತ್ತಮ ಕಥೆಗಳೆನ್ನಬಹುದು.

**ಕಾವ್ಯಕಥೆ–ಸಾಹಸಕಥೆಗಳು**

**ಕಾಳಿದಾಸನ ಕಾವ್ಯಕಥೆಗಳು** ಎಂಬುದು ಕಾಳಿದಾಸನ ಕಾವ್ಯಗಳಾದ 'ರಘು ವಂಶ', 'ಕುಮಾರಸಂಭವ' ಹಾಗೂ 'ಮೇಘದೂತ' – ಇವುಗಳ ಕಥೆಯ ಸಾರಾಂಶವನ್ನೊಳ ಗೊಂಡ ಸಂಗ್ರಹ. ದಿಲೀಪನಿಂದ ಪ್ರಾರಂಭವಾಗಿ ಆ ವಂಶದ ಅಗ್ನಿವರ್ಣನ ವರೆಗಿನ ಕಥೆ ಸಂಕ್ಷೇಪವಾಗಿ 'ರಘುವಂಶದ ಕಥೆ'ಯಲ್ಲಿ ಬರುತ್ತದೆ. ಶಿವ–ಪಾರ್ವತಿಯರಿಗೆ ಜನಿಸಿದ ಕುಮಾರನು ತಾರಕಾಸುರನನ್ನು ಕೊಲ್ಲುವುದೇ 'ಕುಮಾರಸಂಭವ'ದ ಕಥೆ. 'ಮೇಘ ದೂತ'ದಲ್ಲಿ ಶಾಪಗ್ರಸ್ತನಾಗಿ ಭೂಮಿಯಲ್ಲಿ ಹುಟ್ಟಿದ ಯಕ್ಷನೊಬ್ಬನು ಆಕಾಶದಲ್ಲಿ ತೇಲುತ್ತಿರುವ ಮೋಡದೊಡನೆ ತನ್ನ ನಲ್ಲೆಯ ಅಗಲಿಕೆಯಿಂದ ಉಂಟಾದ ವಿರಹವೇದನೆ ಯನ್ನು ತೋಡಿಕೊಳ್ಳುವ ಕಥೆ ಬರುತ್ತದೆ.

ಕಥೆಯ ಭಾಷೆ ಇನ್ನೂ ಉತ್ತಮವಾಗಿರಬಹುದಾಗಿತ್ತು. ಅನೇಕ ಕಡೆ ಮೂಲದ ಪದ್ಯಗಳನ್ನು ಹಾಗೆಯೆ ಅನುವಾದಿಸಿಕೊಟ್ಟಿರುವುದರಿಂದ ಉದ್ದುದ್ದ ವಾಕ್ಯಗಳು ತಲೆ ಹಾಕುತ್ತವೆ. ಕ್ಲಿಷ್ಟ ಶಬ್ದಗಳು ಬರುತ್ತವೆ. "...ಮೂಲ್ಯವಾನ್ ವಸ್ತುಗಳು ಇರುವವು..." "ರತ್ನಜಟಿತವಾದ ಹರ್ಮ್ಯಗಳು ... ಮಳೆಯನ್ನು ಕರೆಯಲುದ್ಯುಕ್ತವಾಗುವುವು" ಇಂತಹ ವಾಕ್ಯಗಳನ್ನು ಬಳಸದಿದ್ದರೆ ಕೃತಿ ಇನ್ನೂ ಹೆಚ್ಚು ಆಕರ್ಷಕವಾಗಬಹು ದಿತ್ತು.

**ಆಲಿವರ ಟ್ವಿಸ್ಟ್** ಎಂಬುದು ಚಾರ್ಲ್ಸ್ ಡಿಕನ್ಸ್‌ನ ಇಂಗ್ಲಿಷ್ ಕಾದಂಬರಿಯ ಅನು ವಾದ. ಅನಾಥಾಲಯದಿಂದ ತಪ್ಪಿಸಿಕೊಂಡು ಟ್ವಿಸ್ಟ್ ಲಂಡನ್ನಿಗೆ ಬರುತ್ತಾನೆ. ಅಲ್ಲಿ ಕಳ್ಳರ ಗುಂಪಿನಲ್ಲಿ ಸಿಕ್ಕಿಕೊಳ್ಳುತ್ತಾನೆ. ಫ್ಯಾಗಿನ್. ಬಿಲ್ ಮೊದಲಾದ ಕಳ್ಳರು ಇವನನ್ನು ತಮ್ಮ ದಾರಿಗೆ ಎಳೆಯಲು ಪ್ರಯತ್ನಿಸುತ್ತಾರೆ. ನ್ಯಾನ್ಸಿ ಎಂಬ ತರುಣಿ ಮಾತ್ರ ಇವರ

ಗುಂಪಿನಲ್ಲಿ ಸೇರಿದ್ದರೂ ಅಂತರ್ಯದಲ್ಲಿ ಒಳ್ಳೆಯವಳು. ಅವಳು ಟ್ವಿಸ್ಟ್‌ನ ಬಿಡು ಗಡೆಗೆ ಕಾರಣಳಾಗುತ್ತಾಳೆ. ಮಲಅಣ್ಣನಾದ ಮಂಕ್ಸ್‌ನಿಂದ ಬರಬೇಕಾಗಿದ್ದ ಆಸ್ತಿ ಕಾರ ಣಾಂತರದಿಂದ ದೊರಕದೆ ಇದ್ದದ್ದು ಪುನಃ ಟ್ವಿಸ್ಟ್‌ಗೆ ದೊರಕುತ್ತದೆ. ಕಾದಂಬರಿಯ ಅನುವಾದ ಅಷ್ಟೇನೂ ಉತ್ತಮವಾಗಿಲ್ಲವೆನ್ನಬಹುದು. ವಾಕ್ಯಗಳನ್ನು ಯಥಾವತ್ತಾಗಿ ಅನುವಾದಿಸಿರುವುದರಿಂದ ಅವು ಕನ್ನಡಕ್ಕೆ ಅಪರಿಚಿತವಾಗಿ ತೋರುತ್ತವೆ. ಉದಾ, "ರವಿವಾರ ಏನು ತರುತ್ತದೆಯೊ ನೋಡೋಣ" (ಪು. 90), "...ಹೊರಗೆ ಹೋದಾಗ. ನೀನು ಬ್ರ ಎಂದು ಮಾತಾಡಿದೆಯಾದರೆ...ಈ ಗುಂಡಿನಿಂದಲೇ ನಿನ್ನನ್ನು ತೀರಿಸಿಬಿಡುವೆ" (ಪು. 49) ಇತ್ಯಾದಿ. 'ಸಮೀಪಗತವಾಯಿತು', 'ಪೃಚ್ಛಿಸಿದಳು', 'ಹರ್ಮ್ಯಸಮಾನ ಮನೆ ಗಳು' ಮುಂತಾದ ಪಂಡಿತಶೈಲಿಯ ಪದಗಳು ಪುಟ ತಿರುವಿದಲ್ಲಿ ಸಿಗುತ್ತವೆ.

**ಡಾನ್ ಕ್ವಿಕ್‌ಝೊಟ್** ಎಂಬುದು ಬಹು ಪ್ರಸಿದ್ಧವಾದ ಹಾಸ್ಯಕೃತಿ. ಇದರ ಮೂಲ ಸ್ಪ್ಯಾನಿಶ್. ಕ್ವಿಕ್‌ಝೊಟ್ ಎಂಬಾತ ಅನೇಕ ಸಾಹಸಭರಿತವಾದ ಕಥೆಗಳ ನ್ನೋದಿ ಬುದ್ಧಿಭ್ರಮಣೆ ಹೊಂದುತ್ತಾನೆ. ತಾನೂ ಸುಪ್ರಸಿದ್ಧ ವೀರನೆಂದು ತಿಳಿದು. ಎದುರಾದ ಹಾದಿಹೋಕರು, ಕುರಿ. ಎತ್ತು ಮೊದಲಾದವುಗಳನ್ನು ತನ್ನ ವೈರಿಗಳೆಂದು ತಿಳಿದು ಅವುಗಳೊಡನೆ ಯುದ್ಧ ಮಾಡುತ್ತಾನೆ; ಸೋಲುತ್ತಾನೆ. ಸಾಯುವಾಗ ಅವ ನಿಗೆ ತನ್ನ ಮೂರ್ಖತನದ ಅರಿವಾಗುತ್ತದೆ. ಉದ್ದಕ್ಕೂ ಬರುವ ಹಾಸ್ಯಪೂರ್ಣವಾದ ಸನ್ನಿವೇಶಗಳೇ ಈ ಕಾದಂಬರಿಯ ವಿಶೇಷ. ಕೊಟ್ಟಲಗಿಯವರ ಅನುವಾದ ಕೃತಿ ಮೂಲದ ಲಕ್ಷಣಗಳನ್ನು ಬಹುಮಟ್ಟಿಗೆ ಉಳಿಸಿಕೊಂಡಿದೆ. ಪ್ರಾದೇಶಿಕ ಪದಗಳ ತೊಂದರೆ ಯೊಂದು ಇಲ್ಲದಿದ್ದರೆ ಮಕ್ಕಳಿಗೆ ಇದು ತುಂಬ ಇಷ್ಟವಾಗುವ ಕೃತಿ.

**ವೀರ ಯೋಧರು** ಎಂಬುದು ವಾಲ್ಟರ್ ಸ್ಕಾಟ್‌ನ 'ಐವಾನ್ ಹೋ' ಎಂಬ ಕೃತಿಯ ಅನುವಾದ. ಇಂಗ್ಲೆಂಡಿನ ರಾಜ್ಯಭಾರವೆಲ್ಲ ನಾರ್ಮನ್ನರ ವಶವಾಗಿದ್ದಾಗ ಅವರು ಸೆಕ್ಸನ್ ಜನರನ್ನು ಕೀಳಾಗಿ ನೋಡುತ್ತಿದ್ದರು. ಆದರೆ ಸೆಕ್ಸನ್ನರು ತುಂಬ ಸ್ವಾಭಿಮಾನಿ ಗಳು. ಗಿಲ್ಬರ್ಟ್ ಎಂಬಾತ ಜೆರೂಸಲೆಂ ಯುದ್ಧದಲ್ಲಿ ಭಾಗವಹಿಸಿ ತನ್ನ ಪರಾಕ್ರಮ ತೋರಿದ ಸಾಹಸಿ (ನಾರ್ಮನ್) ಯೋಧ. ಆಯವನ್ಹೊ ಎಂಬ ಸೆಕ್ಸನ್ ತರುಣನಿಗೂ ಈತನಿಗೂ ಪಂದ್ಯವಾಗಿ ಎಸ್ಬಿಯಾದಲ್ಲಿ ಅವರಿಬ್ಬರ ಮಧ್ಯೆ ಕಾಳಗ ನಡೆದಾಗ ಗಿಲ್ಬರ್ಟ್ ಸೋಲುತ್ತಾನೆ. ಆಮೇಲೆ ಆಯವ್ಹನೋನನ್ನು ಕೊಲ್ಲಲು ಪ್ರಯತ್ನಿಸಿ ವಿಫಲನಾಗಿ ತಾನೆ ಸಾಯುತ್ತಾನೆ. ರಾಮಚಂದ್ರ ಅವರು ಮೂಲಕೃತಿಯ ಸ್ವಾರಸ್ಯವನ್ನರಿತು ಅದನ್ನು ಉತ್ತಮವಾಗಿ ಅನುವಾದಿಸಿದ್ದಾರೆ.

**ಹವಳದ ದ್ವೀಪ** ಎಂಬುದು ಬೆಲೆಂಟಾಯಿನ್ ಅವರ ಕಾದಂಬರಿಯ ಅನುವಾದ. ರಾಲ್ಫ್, ಜ್ಯಾಕ್ ಮಾರ್ಟಿನ್, ಪೆಟರ್‌ಕಿನ್ ಎಂಬ ಸಾಹಸೀ ತರುಣರು ಶಾಂತ ಮಹಾ ಸಾಗರದಲ್ಲಿರುವ ಹವಳದ ದ್ವೀಪ ಹಾಗೂ ಅದಕ್ಕೆ ಹತ್ತಿರದ ಶೆಬೂ ದ್ವೀಪಗಳಿಗೆ ಹೋಗಿ ಅಲ್ಲಿಯ ಆದಿನಿವಾಸಿಗಳೊಡನೆ, ಕಡಲುಗಳ್ಳರೊಡನೆ ಹೋರಾಡಿ ಯಶಸ್ವಿಯಾಗಿ ಹಿಂದಿ ರುಗಿದ ಕಥೆ ಇದರಲ್ಲಿದೆ. ಇದು ಮಕ್ಕಳಿಗೆ ತುಂಬ ಉತ್ತಮವಾದ ಕೃತಿ. ಆದರೆ ಅನು ವಾದದಲ್ಲಿಯ 'ಸೋಬತಿ', 'ನಿವಾಂತ', 'ಘುಸಿ', 'ರಹವಾಸಿ' ಮುಂತಾದ ಪ್ರಾದೇಶಿಕ

ಪದಗಳು, ಕ್ಲಿಷ್ಟ ಪದಗಳು, ಕರ್ಮಣಿವಾಕ್ಯಗಳು ಕೃತಿಯ ಸ್ವಾರಸ್ಯವನ್ನು ತಿಳಿಯಲು ಅಡ್ಡಿಯಾಗುತ್ತವೆ.

**ಹೊಸನಾಡ ಶೋಧಕರು** ಎಂಬ ಕೃತಿಯಲ್ಲಿ ಐವರು ಶೋಧಕರ ಸಾಹಸಪೂರ್ಣವಾದ ಜೀವನವನ್ನು ಕುರಿತು ಹೇಳಲಾಗಿದೆ. ಕೊಲಂಬಸ್, ಮಂಗೋಪಾರ್ಕ್, ಮ್ಯಾಗಲಿನ್, ಲಿವ್ಹಿಂಗ್‌ಸ್ಟನ್, ಮತ್ತು ಕ್ಯಾಪ್ಟನ್ ಕುಕ್ ಇವರೇ ಆ ಶೋಧಕರು. ಕೊಲಂಬಸನು ಹಿಂದೂಸ್ಥಾನವನ್ನು ನೋಡಬೇಕೆಂದು, ಸ್ಪೇನದ ರಾಜನ ಸಹಾಯ ಪಡೆದು, ಅನೇಕ ತಿಂಗಳವರೆಗೆ ಸಮುದ್ರ ಪ್ರಯಾಣ ಮಾಡಿ ಕೊನೆಗೆ 'ವೆಸ್ಟ್ ಇಂಡೀಜ್'ಗೆ ಬರುತ್ತಾನೆ. ಮಂಗೋಪಾರ್ಕನು ನೈಝರ್ ನದಿಯ ಮೂಲವನ್ನು ಕಂಡುಹಿಡಿಯಬೇಕೆಂದು ಹೊರಟವನು. ತನ್ನ ಪ್ರಯತ್ನದಲ್ಲಿರುವಾಗಲೇ ಕಾಡುಜನರ ದಾಳಿಗೆ ತುತ್ತಾಗಿ, ನದಿಗೆ ಹಾರಿ ಪ್ರಾಣವನ್ನು ತ್ಯಜಿಸಿದನು. ಮ್ಯಾಗಲನ್‌ನು ದಕ್ಷಿಣ ಅಮೇರಿಕೆಯನ್ನು ಸುತ್ತುಹಾಕಿ ಪೂರ್ವದಿಕ್ಕಿನಲ್ಲಿದ್ದ ಮಸಾಲೆ ದ್ವೀಪವನ್ನು ಹುಡುಕಲು ಹೋಗುವ ಸಾಹಸಮಾಡಿದವನು. ಲಿವ್ಹಿಂಗ್‌ಸ್ಟನ್ನನು ಅಜ್ಞಾತಖಂಡವಾಗಿದ್ದ ಆಫ್ರಿಕಾಖಂಡವನ್ನು ಶೋಧಿಸಲು ಇಂಗ್ಲೆಂಡಿನಿಂದ ಹೊರಟ ಸಾಹಸಿ; ತನ್ನ ಶೋಧನೆ ಕಾರ್ಯದಲ್ಲಿರುವಾಗಲೇ ಮಡಿಯುತ್ತಾನೆ. ಆಸ್ಟ್ರೇಲಿಯಾ, ನ್ಯೂಝಿಲೆಂಡ್‌ಗಳನ್ನು ಶೋಧಿಸಿದ ಕೀರ್ತಿ ಕ್ಯಾಪ್ಟನ್ ಕುಕ್‌ನದು. ಇವನು ಇತರ ಶೋಧಕರಂತಲ್ಲದೆ, ಕೇವಲ ಶಾಸ್ತ್ರೀಯ ಜ್ಞಾನದ ಲಾಲಸೆಯಿಂದ ಜಗತ್ತನ್ನು ಮೂರುಬಾರಿ ಪ್ರದಕ್ಷಿಣೆ ಹಾಕಿದವನು. ಕೃತಿಯ ನಿರೂಪಣೆ ಸರಳವಾಗಿದೆ. ಆದರೆ 'ಸ್ವಾರ' 'ಹೈರಾಣ' 'ನಾದ' 'ಜಮಾತಿ' ಮುಂತಾದ ಪ್ರಾದೇಶಿಕ ಪದಗಳು ಹಾಗೂ 'ರಾಜ್ಯ ಕರ್ತಿಸಿ' 'ಸುದ್ದಾ' ಮುಂತಾದ ಶಬ್ದಪ್ರಯೋಗಗಳು ಸಾಕಷ್ಟು ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ.

"ಈ ದೇಶದಲ್ಲಿ ಏನಿದ್ದಿರಬಹುದಾಗಿದೆ?"

"ಬೆಳ್ಳಿ–ಬಂಗಾರ... ಇವಂತೂ ಬೇಕಾದಷ್ಟು ಸಿಗಬಹುದಾಗಿದೆ."

"ಏತರ ಮೇಲಿಂದ?"

–ಇದು ಈ ಪುಸ್ತಕದಲ್ಲಿ ಬರುವ ಸಂಭಾಷಣೆಯ ರೀತಿಗೆ ಒಂದು ಉದಾಹರಣೆ ಮಾತ್ರ (ಪು. 79).

## ಸ್ಥಳ ವರ್ಣನೆಗಳು

ಕರ್ನಾಟಕದ ಕೆಲವು ಮಹತ್ವದ ಐತಿಹಾಸಿಕ ಸ್ಥಳಗಳನ್ನು ಪರಿಚಯ ಮಾಡಿಕೊಡುವ ಒಟ್ಟು ಹದಿಮೂರು ಪುಸ್ತಕಗಳಿವೆ. ಸ್ಥಳದ ಐತಿಹಾಸಿಕ ವಿಶೇಷತೆ, ರಾಜಕೀಯಕ್ಕೆ, ಧಾರ್ಮಿಕತೆಗೆ ಅಥವಾ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಆಯಾ ಸ್ಥಳಗಳ ಹಾಗೂ ಅಕ್ಕಪಕ್ಕದ ಊರುಗಳ ಮಹತ್ವವನ್ನು ಕುರಿತು ಈ ಪುಸ್ತಕಗಳಲ್ಲಿ ಹೇಳಲಾಗಿದೆ. ಕೆಲವು ಪುಸ್ತಕಗಳಲ್ಲಿ ನಿರೂಪಣೆ ಸರಳವಾಗಿ, ನೇರವಾಗಿದ್ದು ವಿಷಯವನ್ನು ವರ್ಣಿಸುವುದರಲ್ಲಿ ಅವು ತೃಪ್ತವಾಗಿದ್ದರೆ ಇನ್ನು ಕೆಲವು ಪುಸ್ತಕಗಳಲ್ಲಿ, ಅವು ಮಕ್ಕಳ ಪುಸ್ತಕವೆಂಬುದನ್ನು ಮರೆತು ಲೇಖಕರು ವಿಷಯದ ಜಿಜ್ಞಾಸೆಗೆ ತೊಡಗುತ್ತಾರೆ.

ಉಡುಪಿ ಹಾಗೂ ಅದರ ಸುತ್ತಲಿನ ಕೆಲವು ಕ್ಷೇತ್ರಗಳ ಪರಿಚಯವನ್ನು **ಉಡುಪಿ** ಎಂಬ ಪುಸ್ತಕದಲ್ಲಿ ಮಾಡಿಕೊಡಲಾಗಿದೆ. ಉಡುಪಿಯ ಸ್ಥಳಪುರಾಣದಿಂದ ಪ್ರಾರಂಭ ವಾಗಿ ಆಧುನಿಕ ಉಡುಪಿಯ ವರ್ಣನೆಯ ವರೆಗೆ ವಿಷಯ ಹರಡಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಉಡುಪಿಯು ಅನುಭವಿಸಿದ ಏರಿಳಿತಗಳ ಪರಿಚಯ ಮಾಡಿಕೊಡಲಾಗಿದೆ. ಶ್ರೀಕೃಷ್ಣನ ದೇವಾಲಯ ಹಾಗೂ ಎರಡು ವರ್ಷಕ್ಕೊಮ್ಮೆ ನಡೆಯುವ ಪರ್ಯಾಯ ಉಡುಪಿಯ ಪ್ರಮುಖ ಆಕರ್ಷಣೆಗಳು. ಆಧುನಿಕ ಉಡುಪಿ ಹಾಗೂ ಹತ್ತಿರದ ಮಣಿಪಾಲ -- ಇವು ಪ್ರಸಿದ್ಧವಾದ ವಿದ್ಯಾಸಂಸ್ಥೆಗಳಿಂದ ಕೂಡಿವೆ. ಉಡುಪಿಯ ಸುತ್ತುಮುತ್ತಲೂ ಕಡಿಯಾಳು, ಬೈಲೂರು, ಅಂಬಲಪಾಡಿ, ವಡಭಾಂಡೇ ಶ್ವರ ಮುಂತಾದ ಅನೇಕ ಊರುಗಳಲ್ಲಿ ಇತಿಹಾಸ ಪ್ರಸಿದ್ಧ ದೇವಾಲಯಗಳಿವೆ. ಅವುಗಳ ಸ್ಥೂಲ ಪರಿಚಯ ಈ ಪುಸ್ತಕದಲ್ಲಿ ಬರುತ್ತದೆ. ಜೊತೆಗೆ ಸಾಕಷ್ಟು ಚಿತ್ರಗಳನ್ನು ಕೊಡ ಲಾಗಿದೆ. ಆದರೆ ನಿರೂಪಣೆ ಮಾತ್ರ ನೀರಸವಾಗಿದೆ.

ಉತ್ತರಕನ್ನಡ ಜಿಲ್ಲೆಯ ದಾಂಡೇಲಿಯಿಂದ ಏಳೆಂಟು ಮೈಲಿ ದೂರದಲ್ಲಿರುವ ಉಳವಿ ವೀರಶೈವರಿಗೆ ಪವಿತ್ರಕ್ಷೇತ್ರ. ಈ ಸ್ಥಳಕ್ಕೆ ಮಹತ್ವ ಬಂದುದು ಚೆನ್ನಬಸವಣ್ಣ ನವರಿಂದ. ಕಲ್ಯಾಣದಲ್ಲಿ ಬಿಜ್ಜಳನ ಕೊಲೆಯಾದ ನಂತರ ಚೆನ್ನಬಸವಣ್ಣನವರು ಇತರ ಅನೇಕ ಶರಣರೊಂದಿಗೆ ಉಳವಿಗೆ ಬಂದು ನೆಲಸಿದರು. ಅಲ್ಲಿಯೇ ಸಮಾಧಿ ಹೊಂದಿದರು. ಚೆನ್ನಬಸವಣ್ಣನವರ ಗುಡಿ, ಆಕಳಗವಿ, ರುದ್ರಾಕ್ಷಿಮಂಟಪ ಮೊದಲಾ ದವು ಇಲ್ಲಿಯ ಪ್ರೇಕ್ಷಣೀಯ ಸ್ಥಳಗಳು **ಮುಕ್ತಿಕ್ಷೇತ್ರ ಉಳವಿ** ಎಂಬ ಪುಸ್ತಕದಲ್ಲಿ ಉಳ ವಿಯ ವರ್ಣನೆ ಬರುತ್ತದೆ. ಚೆನ್ನಬಸವಣ್ಣನವರು ಕಲ್ಯಾಣದ ವರ್ಣನೆ ಮಾಡಿದ ವಚನ ಗಳನ್ನು ಲೇಖಕರು ಇಲ್ಲಿ ದೀರ್ಘವಾಗಿ ಉದ್ಧರಿಸಿದ್ದಾರೆ. ಇದು ಅನವಶ್ಯಕವೆನಿಸು ತ್ತದೆ. ಚನ್ನಬಸವಣ್ಣನವರು ಇತರ ಶರಣರನ್ನು ಹೊಗಳಿದ, ಹಾಗೂ ಇತರರು ಚೆನ್ನ ಬಸವಣ್ಣನವರನ್ನು ಕುರಿತು ಹೇಳಿದ ವಚನಗಳನ್ನೂ ಇದರಲ್ಲಿ ಸಂಗ್ರಹಿಸಿಕೊಡಲಾಗಿದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಹಾಗೂ ಆನಂತರದ ಕೆಲವು ಕಾಲ ದಕ್ಷಿಣ ಕನ್ನಡ ಪ್ರದೇಶವನ್ನಾಳಿದವರು ಭೈರವ ಅರಸರೆಂಬ ಜೈನರಾಜರು. ಕಾರ್ಕಳ ಅವರ ರಾಜ ಧಾನಿ. ಕಾರ್ಕಳದಲ್ಲಿ ನಲವತ್ತೆರಡು ಅಡಿ ಎತ್ತರದ ಗೊಮ್ಮಟ ವಿಗ್ರಹವಿದೆ. ಹದಿ ನೆಂಟು ಜೈನ ಬಸದಿಗಳಿವೆ. ಇತರ ಅನೇಕ ದೇವಾಲಯಗಳೂ ಇವೆ. ವೇಣೂರು ಕಾರ್ಕ ಳದ ಹತ್ತಿರದ ಇನ್ನೊಂದು ಪ್ರಸಿದ್ಧ ಸ್ಥಳ. ಇಲ್ಲಿಯೂ ಒಂದು ಗೊಮ್ಮಟ ವಿಗ್ರಹವಿದೆ. ಕಾರ್ಕಳವನ್ನು ಭೈರವ ಅರಸರು ಆಳುತ್ತಿದ್ದ ಕಾಲದಲ್ಲಿ ವೇಣೂರನ್ನು ಅಜಿಲ ಅರಸರು ಆಳುತ್ತಿದ್ದರು. ಅಜಿಲ–ಭೈರವ ಅರಸರ ಕಾಲದಲ್ಲಿಯೆ ರತ್ನಾಕರವರ್ಣಿ ಎಂಬ ಕವಿ ಆಗಿಹೋದನು. **ಕಾರ್ಕಳ–ವೇಣೂರು** ಎಂಬ ಪುಸ್ತಕದಲ್ಲಿ ಈ ಕ್ಷೇತ್ರಗಳ ಸ್ಥಳ ಪರಿ ಚಯ, ಐತಿಹಾಸಿಕ ಹಿನ್ನೆಲೆಗಳನ್ನು ಕೊಡಲಾಗಿದೆ.

ಹೊನ್ನಾವರ ತಾಲೂಕಿನ ಗೇರಸೊಪ್ಪೆಯ ಪರಿಚಯ **ಗೇರಸೊಪ್ಪೆ** ಎಂಬ ಪುಸ್ತಕ ದಲ್ಲಿ ಬರುತ್ತದೆ. ಪಶ್ಚಿಮ ಘಟ್ಟದ ಮಧ್ಯದಲ್ಲಿರುವ ಈ ಹಳ್ಳಿ ಪ್ರಾಕೃತಿಕ ಸೌಂದರ್ಯ ದಿಂದ ಕೂಡಿ ಆಕರ್ಷಣೀಯವಾಗಿದೆ. ಸುಮಾರು ಐದುನೂರು ವರ್ಷಗಳ ಹಿಂದೆ ಇವನ್ನು

ಸಾಳುವರೆಂಬ ಜೈನರಾಜರು ಆಳುತ್ತಿದ್ದರು. ಇದಕ್ಕೆ 'ನಗಿರೆ' ಎಂಬ ಇನ್ನೊಂದು ಹೆಸರೂ ಇತ್ತು. ಭೈರವ ಅರಸರೂ ನಗಿರೆಯನ್ನು ಆಳಿದರು. ಭೈರವ ಇಮ್ಮಡಿ ದೇವರಾಯನ ಕಾಲದಲ್ಲಿ ಕವಿ ಸಾಳ್ವನು ಆಗಿಹೋದನು. ಮುಂದೆ ಚೆನ್ನಭೈರಾದೇವಿಯ ಕಾಲದಲ್ಲಿ ಗೇರಸೊಪ್ಪೆ ಇಕ್ಕೇರಿಯ ಅರಸರ ವಶವಾಯಿತು. ವರ್ಧಮಾನ ಬಸದಿ, ಚತುರ್ಮುಖ ಬಸದಿ ಮುಂತಾದ ಅನೇಕ ಬಸದಿಗಳಿಂದ ಕೂಡಿ ಗೇರಸೊಪ್ಪೆ ಈಗಲೂ ಪ್ರೇಕ್ಷಣೀಯ ವಾದ ಸ್ಥಳವಾಗಿದೆ.

ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ ಒಂದು ಇತಿಹಾಸ ಪ್ರಸಿದ್ಧ ಸ್ಥಳ. ಇಲ್ಲಿ ಅನೇಕ ಶಾಸನಗಳು ದೊರೆತಿವೆ. **ಬಳ್ಳಿಗಾವೆ** ಎಂಬ ಪುಸ್ತಕ ಈ ಸ್ಥಳದ ವರ್ಣನೆಯನ್ನು ಮಾಡಿ ಕೊಡಲು ಉದ್ದೇಶಿಸಿದೆ. ಬಳ್ಳಿಗಾವೆ ಹಿಂದೆ ಒಂದು ರಾಜ್ಯವಾಗಿತ್ತು. ಬನವಾಸಿ ಅದರ ರಾಜಧಾನಿ. ಚಾಲುಕ್ಯ–ಹೊಯ್ಸಳರಿಂದ ನಿರ್ಮಿತವಾದ ದೇವಾಲಯಗಳು ಇಲ್ಲಿವೆ. ಬೌದ್ಧಧರ್ಮ ಇಲ್ಲಿ ನೆಲೆಯೂರಿದ ಕುರುಹುಗಳಿವೆ. ಹಿಂದೆ ಇದು ಒಂದು ದೊಡ್ಡ ಧಾರ್ಮಿಕ ಹಾಗೂ ವಿದ್ಯಾಕೇಂದ್ರವಾಗಿತ್ತು. ಔಷಧಿಗಳ ತಯಾರಿಕೆಯೂ ಇಲ್ಲಿ ನಡೆಯು ತ್ತಿತ್ತು. ತಾರಾ–ಭಗವತಿಯ ವಿಗ್ರಹ ಹಾಗೂ ಮೂವತ್ತೆರಡು ಅಡಿಗಳೆತ್ತರದ ಗಂಡಭೇರುಂಡ ವಿಗ್ರಹಗಳು ಇಲ್ಲಿಯ ಪ್ರಮುಖ ಆಕರ್ಷಣೆಗಳು. ಹತ್ತಿರದ ತಾಳಗುಂದ (ಈಗಿನ ತಾಳಗುಪ್ಪೆ) ಕದಂಬರ ಕಾಲದಲ್ಲಿ ಪ್ರಖ್ಯಾತವಾದ ಊರು. ಸರಳವಾದ ಭಾಷೆ ಯೊಂದಿಗೆ ಲೇಖಕರು ಬಳ್ಳಿಗಾವೆಯ ಪರಿಚಯ ಮಾಡಿಕೊಡುತ್ತಾರೆ.

**ಬಾದಾಮಿ** ಯಲ್ಲಿ ಗೋಪಾಲ್ ಅವರು ಬಾದಾಮಿಯ ಸ್ಥಳ ಪರಿಚಯ, ಅಲ್ಲಿಯ ಶಿಲ್ಪಕಲೆಯ ಪರಿಚಯ, ಅದನ್ನಾಳಿದ ರಾಜವಂಶಗಳ ಪರಿಚಯವನ್ನು ಮಾಡಿ ಕೊಡಲು ಪ್ರಯತ್ನಿಸಿದ್ದಾರೆ. ಕನ್ನಡಿಗರ ಕಲಾವೈಭವವನ್ನು ಮೆರೆಸುವ ಐತಿಹಾಸಿಕ ಕ್ಷೇತ್ರ ಗಳಲ್ಲಿ ಬಾದಾಮಿ ಪ್ರಮುಖವಾದದ್ದು. ವಾತಾಪಿ ಎಂಬುದು ಇದರ ಹಿಂದಿನ ಹೆಸರು. ಕ್ರಿ. ಶ. 2ನೇ ಶತಮಾನದಷ್ಟು ಹಿಂದೆಯೆ ವಾತಾಪಿಯ ಉಲ್ಲೇಖ ದೊರೆಯುತ್ತದೆ. ಆದರೆ ಇದರ ಖಚಿತವಾದ ಇತಿಹಾಸ ದೊರೆಯುವುದು ಚಾಲುಕ್ಯರ ಕಾಲದಿಂದ. ಇಮ್ಮಡಿ ಕೀರ್ತಿವರ್ಮನ ಕಾಲಕ್ಕೆ ಚಾಲುಕ್ಯರ ಆಳ್ವಿಕೆ ಮುಗಿದು ರಾಷ್ಟ್ರಕೂಟರ ಆಧಿ ಪತ್ಯ ಪ್ರಾರಂಭವಾಗುತ್ತದೆ.

ಬಾದಾಮಿಯ ನಾಲ್ಕು ಗುಹೆಗಳು ಪ್ರಸಿದ್ಧವಾಗಿವೆ. ಹತ್ತಿರದ ಐಹೊಳೆ, ಪಟ್ಟದ ಕಲ್ಲುಗಳೂ ಹಿಂದೆ ಪ್ರಸಿದ್ಧವಾದ ಸ್ಥಳಗಳಾಗಿದ್ದವು. ಕರ್ನಾಟಕ ವಾಸ್ತುಶಿಲ್ಪದ ಮೊದಲ ಹೆಜ್ಜೆಗಳು ಈ ಸ್ಥಳಗಳಲ್ಲಿ ಕಾಣಿಸಿಕೊಳ್ಳುತ್ತವೆ. ವಾತಾಪಿಯ ಪ್ರಜೆಗಳ ಅಭಿಮಾನ, ಶೂರತ್ವಗಳ ಕುರುಹಾಗಿ 'ಕಪ್ಪೆ ಅರಭಟ್ಟ'ನ ಶಾಸನ ನಿಂತಿದೆ. ಈ ಪುಸ್ತಕದ ಭಾಷೆ ತುಂಬ ಕ್ಲಿಷ್ಟವಾದದ್ದು. ಅನೇಕ ಕಡೆ ಲೇಖಕರು ಐತಿಹಾಸಿಕ ಘಟನೆ, ಕಾಲಗಳ ಬಗೆಗೆ ಗಂಭೀರ ವಾದ ಚರ್ಚೆಗೆ ತೊಡಗುತ್ತಾರೆ. ಮಕ್ಕಳ ಆಸಕ್ತಿಯನ್ನು ಇಲ್ಲಿಯ ನಿರೂಪಣೆ ಎಷ್ಟರ ಮಟ್ಟಿಗೆ ಉಳಿಸಿಕೊಳ್ಳುತ್ತದೆಯೆಂಬುದು ತೀರ ಸಂಶಯಾಸ್ಪದ.

ಬೀದರ ಹಾಗೂ ಅದರ ಸುತ್ತಲಿನ ಕೆಲವು ಪ್ರೇಕ್ಷಣೀಯ ಸ್ಥಳಗಳ ವರ್ಣನೆಯನ್ನು **ಬೀದರ್** ಎಂಬ ಪುಸ್ತಕದಲ್ಲಿ ಕೊಡಲಾಗಿದೆ. ಶಾತವಾಹನರು, ರಾಷ್ಟ್ರಕೂಟರು, ಕಲ್ಯಾ

ಣದ ಚಾಲುಕ್ಯರು ಮೊದಲಾದವರು ಬೀದರವನ್ನು 14ನೇ ಶತಮಾನದವರೆಗೆ ಆಳಿದರು. ಆನಂತರ ಇದು ಕನ್ನಡಿಗರ ಕೈತಪ್ಪಿ ಮುಸ್ಲಿಮರ ವಶವಾಯಿತು. ಇತ್ತೀಚಿನವರೆಗೂ ಅದು ನಿಜಾಮರ ಆಧಿಪತ್ಯದಲ್ಲಿತ್ತು.

ಬೀದರಕೋಟೆ, ಚೌಬಾರ್ ಕಟ್ಟಡ, ಅಲ್ವಲಿಯ ಗೋರಿ, ಪಾಪಾದುರ್ಗಾ ಮೊದಲಾದವುಗಳು ಬೀದರದ ಇತಿಹಾಸದ ಕುರುಹುಗಳಾಗಿ ಇಂದಿಗೂ ಪ್ರೇಕ್ಷಣೀಯ ಸ್ಥಳಗಳಾಗಿವೆ. ಇಲ್ಲಿಯ ಭಾಷೆ ಕನ್ನಡ, ಹಿಂದಿ, ಉರ್ದುಗಳ ಮಿಶ್ರಣವಾಗಿದೆ. ಈ ಪ್ರದೇಶ ಹಿಂದೆ ಶಿವಶರಣರ ಕೇಂದ್ರವಾಗಿತ್ತು. ಸರಳವಾದ ಭಾಷೆಯಲ್ಲಿ ಬೀದರ್ ಕ್ಷೇತ್ರದ ಪರಿಚಯವನ್ನು ಈ ಪುಸ್ತಕದಲ್ಲಿ ಮಾಡಿಕೊಡಲಾಗಿದೆ.

**ಮೂಡಬಿದಿರೆ**ಯಲ್ಲಿ ಮಂಗಳೂರಿನ ಸಮೀಪದಲ್ಲಿರುವ ಮೂಡಬಿದಿರೆ ಕ್ಷೇತ್ರದ ಪರಿಚಯವನ್ನು ಕೊಡಲಾಗಿದೆ. ಇದು ಜೈನರಿಗೆ ಪವಿತ್ರವಾದ ಕ್ಷೇತ್ರ. ಕ್ರಿ. ಶ, 2ನೇ ಶತಮಾನದಿಂದಲೂ ಇಲ್ಲಿ ಜೈನರು ವಾಸಿಸಿದ್ದರು. ಕ್ರಮವಾಗಿ ಹೊಯ್ಸಳರು. ಭೈರವ ಅರಸರು, ಇಕ್ಕೇರಿ ಅರಸರು, ಟೀಪು ಸುಲ್ತಾನ್ ಹಾಗೂ ಆನಂತರ ಇಂಗ್ಲಿಷರು ಈ ಪ್ರದೇಶವನ್ನು ಆಳಿದರು. ಮೂಡಬಿದಿರೆಯಲ್ಲಿ ಹದಿನೆಂಟು ಜಿನಾಲಯಗಳೂ ಹದಿನೆಂಟು ಕೆರೆಗಳೂ ಇವೆ. ಇಲ್ಲಿಯ 'ಗುರುಬಸದಿ' ಹಾಗೂ 'ತ್ರಿಭುವನತಿಲಕ ಚೂಡಾಮಣಿ ಬಸದಿ' ಅಥವಾ 'ಸಾವಿರ ಕಂಬದ ಬಸದಿ' ಗಳು ಪ್ರಸಿದ್ಧವಾಗಿವೆ. ಚೌಟವಂಶದ ಅರಸರ ಅರಮನೆಯ ಕುರುಹುಗಳು ಇಲ್ಲಿವೆ.

ಮೈಸೂರಿಗೆ ಮೂವತ್ತು ಮೈಲಿ ದೂರದಲ್ಲಿರುವ ಮೇಲುಕೋಟೆ ವೈಷ್ಣವರಿಗೆ ಪವಿತ್ರವಾದ ಕ್ಷೇತ್ರ. ಈ ಕ್ಷೇತ್ರಕ್ಕೆ ಮಹತ್ವ ಬಂದುದು ಶ್ರೀಮದ್ ರಾಮಾನುಜರಿಂದ. ರಾಮಾನುಜರು ಕ್ರಿ. ಶ. 1098ರಲ್ಲಿ ಇಲ್ಲಿಗೆ ಬಂದು, ಸುಮಾರು ಹದಿನಾಲ್ಕು ವರುಷಗಳ ಕಾಲ ಇಲ್ಲಿ ನೆಲೆಸಿದ್ದರು. ಮೇಲುಕೋಟೆಯನ್ನು ಬೆಳಗಿಸಿದವರಲ್ಲಿ ಬಿಟ್ಟಿದೇವ ಅಥವಾ ವಿಷ್ಣುವರ್ಧನನು ಅಗ್ರಗಣ್ಯ. ವೇದಾಂತದೇಶಿಕರು ಇಲ್ಲಿ ಕೆಲವುಕಾಲ ವಾಸಿಸಿದ್ದರು.

ಇಲ್ಲಿ ನಾರಾಯಣ ದೇವಾಲಯ, ಚೆಲುವರಾಯ ಸ್ವಾಮಿಯ ದೇವಾಲಯ ಮುಂತಾದ ದೇವಾಲಯುಗಳಿವೆ. ಅಲಮೇಲು. ಆಳ್ವಾರರುಗಳ ಮಂಟಪಗಳಿವೆ: ಸುಂದರವಾದ ಪುಷ್ಕರಣಿಗಳಿವೆ. ಗೋಪಾಲರಾಯನ ಹೆಬ್ಬಾಗಿಲು ಸುಂದರವಾದದ್ದು. ಇಲ್ಲಿ ವರ್ಷದುದ್ದಕ್ಕೂ ಉತ್ಸವಗಳ ಮೇಲೆ ಉತ್ಸವ ನಡೆಯುತ್ತಿರುತ್ತದೆ. ತೀರ ಸಾಮಾನ್ಯವಾದ ನಿರೂಪಣೆಯಿಂದ ಕೂಡಿದ ಪುಸ್ತಕ, **ಮೇಲುಕೋಟೆ.**

ವಿಜಾಪುರದ ಪರಿಚಯವನ್ನು **ವಿಜಾಪುರ** ಎಂಬ ಪುಸ್ತಕ ಮಾಡಿಕೊಡುತ್ತದೆ. ವಿಜಾಪುರದ ಹೆಸರು ಹಿಂದೆ 'ವಿಜಯಪುರ' ಎಂದಿತ್ತು. ನಮಗೆ ತಿಳಿದಂತೆ ಮೊದಲು ಈ ಪ್ರದೇಶವನ್ನು ಆಳಿದವರು ಚಾಲುಕ್ಯರು. 12ನೇ ಶ. ದಲ್ಲಿ ಇದು ದೇವಗಿರಿಯ ಯಾದವರ ವಶವಾಯಿತು. ಆನಂತರ ಮುಸಲ್ಮಾನರ ವಶವಾಯಿತು. ಅಲ್ಲಾವುದ್ದೀನ್ ಖಿಲಜಿ ಇದನ್ನು ಆಳಿದ ಮೊದಲ ಮುಸಲ್ಮಾನ ದೊರೆ. ಆನಂತರ ಕ್ರಿ. ಶ. 1489 ರಿಂದ ಆದಿಲ್

ಷಾಹಿ ಮನೆತನದ ಅರಸರ ಆಳ್ವಿಕೆ ಪ್ರಾರಂಭವಾಯಿತು. ಮುಂದೆ ಔರಂಗಜೇಬನಿಂದ ಇವರ ಪದಚ್ಯುತಿಯಾಗಿ, ಔರಂಗಜೇಬನ ಅಧಿಪತ್ಯವೂ ಮುಗಿದು ಸಾತಾರೆಯ ಅರಸರು ವಿಜಾಪುರವನ್ನು ಆಳಿದರು. ಅನಂತರ ಬ್ರಿಟಿಷರ ಕೈವಶವಾಯಿತು. ಟೇಲರ್, ಫರ್ಗ್ಯು ಸನ್ ಮುಂತಾದವರು ವಿಜಾಪುರದ ಇತಿಹಾಸವನ್ನು ಕುರಿತು ಬರೆದಿದ್ದಾರೆ.

ಜಗತ್ತಿನಲ್ಲಿ ಅತಿ ದೊಡ್ಡದಾದ ಗೋಲಗುಮ್ಮಟ, ಜುಮ್ಮಾಮಸೀದಿ, ಮೆಹರ ತಲಮಹಲ್, ಬಾರಾಕಮಾನ್, ಮಕ್ಕಾಮಸೀದಿ, ಸಾತಮಜಲಿ ಮೊದಲಾದವು ಇಲ್ಲಿಯ ಪ್ರೇಕ್ಷಣೀಯ ಸ್ಥಳಗಳು. ಪುಸ್ತಕದ ಭಾಷೆ ಸರಳವಾಗಿ, ಆಕರ್ಷಕವಾಗಿದೆ.

ನೆಲಮಂಗಲ ತಾಲ್ಲೂಕಿನ ಶಿವಗಂಗೆ ದಕ್ಷಿಣಕಾಶಿ ಎಂದು ಪ್ರಸಿದ್ಧವಾಗಿದೆ. ಇದು ಸಮುದ್ರ ಪಾತಳಿಯಿಂದ ಸುಮಾರು 4560 ಅಡಿಗಳಷ್ಟು ಎತ್ತರವಾದ ಸ್ಥಳ. ಗಂಗಾಧರೇಶ್ವರನ ದೇವಸ್ಥಾನ, ಕೆಂಪೇಗೌಡನ ಹಜಾರ, ಕೋಡುಗಲ್ ಬಸವ, ಕಣ್ವ ತೀರ್ಥ, ಹೊನ್ನಾದೇವಿ ಗುಡಿ ಮೊದಲಾದವು ಇಲ್ಲಿ ಪ್ರೇಕ್ಷಣೀಯವಾಗಿವೆ. ಗಂಗಾಧ ರೇಶ್ವರ ಗುಡಿಯಲ್ಲಿ ಹೊಯ್ಸಳರ ಶಾಸನಗಳಿವೆ. ಇಲ್ಲಿಯ ನಂದಿಮಂಟಪದಲ್ಲಿ ಕೃಷ್ಣ ದೇವರಾಯನ ಕಾಲದ ಶಾಸನವಿದೆ. ಹೊಯ್ಸಳ ರಾಣಿ ಶಾಂತಲಾದೇವಿ ಮರಣ ಹೊಂದಿದುದು ಶಿವಗಂಗೆಯಲ್ಲಿ. ಹಿಂದೆ ಇಲ್ಲಿ 64 ವೀರಶೈವ ಮಠಗಳಿದ್ದವೆಂದು ತಿಳಿದುಬರುತ್ತದೆ. ಈಗ ಎರಡು ಮಠಗಳು ಮಾತ್ರ ಉಳಿದಿವೆ. ಶೃಂಗೇರಿಯ ಪೀಠವೂ ಇಲ್ಲಿದೆ. ಮೈಸೂರಿನ ಅರಸರಿಗೆ ಶಿವಗಂಗೆ ಪವಿತ್ರ ಕ್ಷೇತ್ರವಾಗಿತ್ತು. ಚೋಳ, ಹೊಯ್ಸಳ ಹಾಗೂ ಗಂಗರು ಈ ಕ್ಷೇತ್ರದ ನಿರ್ಮಾಣದಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. **ಶಿವ ಗಂಗೆ** ಎಂಬ ಪುಸ್ತಕದಲ್ಲಿ ಶಿವಗಂಗೆ ಕ್ಷೇತ್ರದ ಪರಿಚಯವಿದೆ. ಭಾಷೆ ಸರಳವಾಗಿದೆ.

**ಶ್ರೀರಂಗಪಟ್ಟಣ** ಎಂಬ ಪುಸ್ತಕ ಮೈಸೂರಿನಿಂದ ಹತ್ತು ಮೈಲು ದೂರದಲ್ಲಿ ರುವ ಶ್ರೀರಂಗಪಟ್ಟಣದ ಐತಿಹಾಸಿಕ ವಿಶೇಷತೆಯನ್ನು ಪರಿಚಯ ಮಾಡಿಕೊಡುತ್ತದೆ. ವಿಜಯನಗರದ ಆಳ್ವಿಕೆಯಲ್ಲಿ ಶ್ರೀರಂಗಪಟ್ಟಣವು ವಿಜಯನಗರದ ಅರಸರಿಗೆ ಸೇರಿತ್ತು. ಅವರ ಪ್ರತಿನಿಧಿಯಾದ ಶ್ರೀರಂಗರಾಯನು ಇಲ್ಲಿಯ ರಂಗನಾಥ ದೇವಾಲಯವನ್ನು ಕಟ್ಟಿಸಿದನು. ಕ್ರಿ. ಶ. 1610ರಲ್ಲಿ ಮೈಸೂರಿನ ಒಡೆಯರು ಇದನ್ನು ಆಳಿದರು. 1767 ರಿಂದ ಹೈದರಾಲಿ–ಟೀಪೂಸುಲ್ತಾನರ ಆಧಿಪತ್ಯಕ್ಕೆ ಸೇರಿತು. ಶ್ರೀರಂಗಪಟ್ಟಣದಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯ ಚೋಳರ ಕಾಲದ್ದೆಂದು ಹೇಳುತ್ತಾರೆ. ಹೈದರಾಲಿಯ ಕಾಲದ ಅರಮನೆಯ ಅವಶೇಷಗಳಿವೆ. ಗಂಗಾಧರೇಶ್ವರ ದೇವಾಲಯ, ಮಸೀದಿ, ದರಿಯಾ ದೌಲತ್, ಸಂಗಮ, ಗುಂಬಜ್, ಶ್ರೀರಂಗನ ದೇವಾಲಯ ಇವು ಶ್ರೀರಂಗ ಪಟ್ಟಣದಲ್ಲಿ ನೋಡತಕ್ಕ ಸ್ಥಳಗಳು.

ದಕ್ಷಿಣದಲ್ಲಿ ಹೊಯ್ಸಳರ ನಂತರ ಮುಸಲ್ಮಾನರ ದಾಳಿಗಳನ್ನು ಎದುರಿಸಿದವರು ವಿಜಯನಗರ ಅರಸರು. ಕ್ರಿ. ಶ. 1336 ರಲ್ಲಿ ಹರಿಹರನು ಈ ಸಾಮ್ರಾಜ್ಯವನ್ನು ಸ್ಥಾಪಿಸಿ ದನು. ಸಂಗಮವಂಶದ ಈ ಆಳ್ವಿಕೆ ಮಲ್ಲಿಕಾರ್ಜುನನೊಂದಿಗೆ ಕೊನೆಗೊಂಡಿತು (ಕ್ರಿ.ಶ. 1485). ಆಮೇಲೆ ಸಾಳ್ವರು ತುಳು ವಂಶದವರು ಪಟ್ಟಕ್ಕೆ ಬಂದರು. ಇವರಲ್ಲಿ ಕೃಷ್ಣ ದೇವರಾಯನ ಹಿರಿಮೆ ದೊಡ್ಡದು. ರಾಮರಾಯನೊಂದಿಗೆ ಸಾಳ್ವರ ಆಳ್ವಿಕೆಯೂ

ಮುಗಿಯಿತು. ವಿಜಯನಗರದ ಅರಸರು ವೈಭವಪೂರ್ಣವಾದ ಸಾಮ್ರಾಜ್ಯವನ್ನು ಕಟ್ಟಿದ್ದರು. ಗಂಗಾಂಬಿಕೆ, ಕನಕದಾಸರು ಮೊದಲಾದವರು ತಮ್ಮ ಕಾವ್ಯಗಳಲ್ಲಿ ಹಂಪೆಯನ್ನು ವರ್ಣಿಸಿದ್ದಾರೆ. ಪರದೇಶದ ಪ್ರವಾಸಿಗಳಾದ ನಿಕೋಲೊ ಕೊಂಟೆ, ರಜಾಕ್, ಪೋಯೊಸ್ ಮೊದಲಾದವರು ಹಂಪೆಯನ್ನು ಕುರಿತು ಹೊಗಳಿದ್ದಾರೆ.

ಈಗಿನ ಹಂಪೆಯಲ್ಲಿ ಹಿಂದಿನ ಅವಶೇಷಗಳು ಮಾತ್ರ ಉಳಿದಿವೆ. ವಿರೂಪಾಕ್ಷ ದೇವಾಲಯ, ವಿಜಯವಿಠ್ಠಲನ ಗುಡಿ, ಕಲ್ಲಿನ ತೇರು, ಪಾತಾಳೇಶ್ವರ, ಉಗ್ರನರಸಿಂಹನ ಮೂರ್ತಿ, ಹಜಾರರಾಮನಗುಡಿ, ಅರಮನೆ, ಸಭಾಮಂದಿರ, ಮಹಾನವಮಿಯ ದಿಬ್ಬ, ಗಜಶಾಲೆ, ಕಮಲ ಮಹಲ್, ಕಲ್ಲಿನ ನಾಲೆಗಳು ಮೊದಲಾದವುಗಳು ಆಗಿನ ಸಾಮ್ರಾಜ್ಯದ ಕಲ್ಪನೆಯನ್ನು ಮಾಡಿಕೊಡುತ್ತವೆ.

**ಹಂಪೆ** ಎಂಬ ಪುಸ್ತಕದಲ್ಲಿ ಲೇಖಕರು ವಿಜಯನಗರದ ರಾಜವಂಶ, ಆಗಿನ ಸಾಮ್ರಾಜ್ಯದ ವೈಭವ – ಇವುಗಳ ಪರಿಚಯ ಮಾಡಿಕೊಡುತ್ತಾರೆ. ಹೇಳಬೇಕಾದುದನ್ನು ಮನಮುಟ್ಟುವ ಶೈಲಿಯಲ್ಲಿ ಲೇಖಕರು ಹೇಳಬಲ್ಲರು.

## ಕವಿಗಳು

ಕನ್ನಡದಲ್ಲಿ ಕಾವ್ಯರಚನೆ ಮಾಡಿದ ಕವಿಗಳನ್ನು ಕುರಿತ ಒಂಬತ್ತು ಪುಸ್ತಕಗಳಲ್ಲಿ ಆಯಾ ಕವಿಗಳ ಜೀವನ ಪರಿಚಯ ಹಾಗೂ ಕಾವ್ಯಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಈ ಕವಿಗಳಲ್ಲಿ ಕೆಲವರು ರಾಜಾಶ್ರಯವನ್ನು ಪಡೆದ ಆಸ್ಥಾನಕವಿಗಳು; ಕೆಲವರು ಕಾವ್ಯವನ್ನು ರಚಿಸುವ ಉದ್ದೇಶವಿಲ್ಲದೆ, ಗುರುಸ್ಮರಣೆಯ ಅಂಗವಾಗಿ, ಭಕ್ತಿಯಿಂದ ಹಾಡಿಕೊಳ್ಳುತ್ತಾ ಕೀರ್ತನೆ–ಪದಗಳನ್ನು ರಚಿಸಿದವರು; ಮತ್ತೆ ಕೆಲವರು ಉದ್ದೇಶ ಪೂರ್ವಕವಾಗಿ ಕಾವ್ಯಗಳನ್ನು ರಚಿಸಿದವರು.

ಅನೇಕ ಸ್ವತಂತ್ರ ಹಾಗೂ ಅನುವಾದ ಕೃತಿಗಳನ್ನು ರಚಿಸಿದ ಬಸವಪ್ಪ ಶಾಸ್ತ್ರಿಗಳು 19ನೇ ಶತಮಾನದ ಕನ್ನಡ ಕವಿಗಳು. ಮೈಸೂರಿನ ಅರಸರ ರಾಜಾಶ್ರಯ ದೊರಕಿಸಿಕೊಂಡ ಕವಿಗಳಲ್ಲಿ ಶಾಸ್ತ್ರಿಗಳು ಒಬ್ಬರು. ಒಟ್ಟು ಇಪ್ಪತ್ತೆಂಟು ಕೃತಿಗಳನ್ನು ರಚಿಸಿದ್ದರೂ, ಇವರು ಪ್ರಸಿದ್ಧರಾದುದು ತಮ್ಮ 'ಕರ್ಣಾಟಕ ಶಾಕುಂತಲ' ನಾಟಕದಿಂದ. ಇದು ಕಾಳಿದಾಸನ 'ಶಾಕುಂತಲ'ದ ಅತ್ಯುತ್ತಮ ಅನುವಾದ ಕೃತಿ. 'ಶೂರಸೇನ' ಎಂದು ಹೆಸರಿಟ್ಟು ಶೇಕ್ಸಪಿಯರನ ನಾಟಕವನ್ನು ಕನ್ನಡ–ಸಂಸ್ಕೃತ ಪಂಡಿತರಾದ ಶಾಸ್ತ್ರಿಗಳು ಅನುವಾದ ಮಾಡಿದ್ದು ಆ ಕಾಲದ ದೃಷ್ಟಿಯಿಂದ ಒಂದು ಸಾಹಸವೆಂದೇ ಹೇಳಬೇಕು. ಬಸವಪ್ಪ ಶಾಸ್ತ್ರಿಗಳ ಜೀವನ–ಕೃತಿಗಳ ಪರಿಚಯವನ್ನು **ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿ** ಎಂಬ ಪುಸ್ತಕ ಮಾಡಿಕೊಡುತ್ತದೆ. ಅವರ ಕೃತಿಗಳಿಂದ ಪದ್ಯಗಳನ್ನು ಅಲ್ಲಲ್ಲಿ ಉದ್ಧರಿಸಿ ಕೊಡಲಾಗಿದೆ. ಆದರೆ ಅವುಗಳ ಅರ್ಥವನ್ನು ಕೊಡದೆ ಇದ್ದುದರಿಂದ ಮಕ್ಕಳಿಗೆ ಈ ಭಾಗಗಳು ನೀರಸವಾಗುತ್ತವೆ. ಕೆಲವಡೆ ವಾಕ್ಯಗಳು ಮಕ್ಕಳಿಗೆ ಅರ್ಥವಾಗುವಂತಿಲ್ಲ. ಉದಾ: "ಶಾರದಾ ಉಪಾಸಕರಾದ ಶಾಸ್ತ್ರಿಗಳು ರಚಿಸಿರುವ 'ಶಾರದಾಪಂಚಕ' 'ಶ್ಯಾಮ

ಲಾದಂಡಕಕ್ಕೆ ಹೊಯ್‌ಕಯ್ಯಾಗಿದೆ" (ಪು. 45): "ಶ್ರೀಮತಿ ಬಸವಮ್ಮನವರ ಬಯು ಕೆಯ ಕಡಲು ಬಾಲಸೂರ್ಯನಿಗೆ ಜನ್ಮವಿತ್ತಿತು" (ಪು. 9) ಇತ್ಯಾದಿ.

**ಕುಮಾರವ್ಯಾಸ** ಪುಸ್ತಕದಲ್ಲಿ ಕುಮಾರವ್ಯಾಸನ ಜೀವನ ಪರಿಚಯ ಹಾಗೂ ಅವನ ಕಾವ್ಯವಾದ 'ಕರ್ಣಾಟಕ ಭಾರತ ಕಥಾಮಂಜರಿ' ಅಥವಾ 'ಗದುಗಿನ ಭಾರತ'ದ ಪರಿಚಯ ಮಾಡಿಕೊಡಲು ಪ್ರಯತ್ನಿಸಲಾಗಿದೆ. 'ಗದುಗಿನ ಭಾರತ' ಅನೇಕ ಕಥೆ, ಉಪಕಥೆ, ವರ್ಣನೆಗಳಿಂದ ಕೂಡಿದ ವಿಸ್ತಾರವಾದ ಕೃತಿ. ಈ ಪುಟ್ಟ ಪುಸ್ತಕದಲ್ಲಿ 'ಭಾರತ'ದ ಸಂಕ್ಷಿಪ್ತ ಪರಿಚಯ ಮಾತ್ರ ಸಾಧ್ಯ. ಆದ್ದರಿಂದ 'ಭಾರತ'ದಲ್ಲಿ ಬರುವ ಅತಿಮುಖ್ಯವಾದ ಸಂದರ್ಭಗಳನ್ನು ಮಾತ್ರ ಇಲ್ಲಿ ವರ್ಣಿಸಲಾಗಿದೆ. ಅಲ್ಲಲ್ಲಿ ಕುಮಾರವ್ಯಾಸನ ಕೆಲವು ಪದ್ಯಗಳ ಪರಿಚಯ ಮಾಡಿಕೊಡಲಾಗಿದೆ. ಪದ್ಯಗಳ ಜೊತೆಗೆ ಅರ್ಥವನ್ನೂ ಕೊಟ್ಟಿದ್ದರೆ ಇನ್ನೂ ಉತ್ತಮವಾಗಿರಬಹುದಾಗಿತ್ತು. ಇಲ್ಲಿ ಉದ್ಧರಿಸಿದ ಪದ್ಯಗಳು ಕವಿಯ ಪ್ರತಿಭೆಗೆ ನಿದರ್ಶನವಾಗುವಂತಹ ಪದ್ಯಗಳೂ ಅಲ್ಲ: ತೀರ ಸಾಮಾನ್ಯವಾದವುಗಳು.

ಪಂಪ ಹಾಗೂ ರನ್ನ ಕನ್ನಡದ ಇಬ್ಬರು ಮಹಾಕವಿಗಳು. ಪಂಪ ಕನ್ನಡದ ಆದಿ ಕವಿಯೆನಿಸಿಕೊಂಡವನು. ಪಂಪನ ಅನಂತರ ಬಂದ ರನ್ನ ಪಂಪನನ್ನು ಅನುಸರಿಸಿ ಎರಡು ಕಾವ್ಯಗಳನ್ನು ರಚಿಸಿದನು. **ಪಂಪ** ಹಾಗೂ **ರನ್ನ** ಎಂಬ ಪುಸ್ತಕಗಳು ಈ ಇಬ್ಬರು ಮಹಾಕವಿಗಳ ಪರಿಚಯವನ್ನು ಮಾಡಿಕೊಡುತ್ತವೆ. ಪಂಪನ ಆದಿಪುರಾಣದ ಕಥೆಯನ್ನು ಹೇಳುವಾಗ ಲೇಖಕರು ಪುರುದೇವನ ಭವಾವಳಿ. ನೀಲಾಂಜನೆಯ ನೃತ್ಯಸಂದರ್ಭಗಳನ್ನು ಪ್ರಸ್ತಾಪಿಸಿ ಭರತ–ಬಾಹುಬಲಿಯರ ಯುದ್ಧಪ್ರಸಂಗಕ್ಕೆ ವಿಶೇಷ ಗಮನ ಕೊಟ್ಟು ಅದನ್ನು ವರ್ಣಿಸಿದ್ದಾರೆ. ಪಂಪನ ಇನ್ನೊಂದು ಕಾವ್ಯವಾದ 'ವಿಕ್ರಮಾರ್ಜುನ ವಿಜಯ'ದ ಪರಿಚಯ ಮಾಡಿಕೊಡುವಾಗ ಕಥೆಯನ್ನು ಪಾತ್ರಗಳ ದೃಷ್ಟಿಯಿಂದ ತುಂಡು ತುಂಡಾಗಿ ಹೇಳುತ್ತ ಹೋಗಲಾಗಿದೆ. ಈ ನಿರೂಪಣೆಯ ತೊಡಕಿನಿಂದಾಗಿ ಕಥೆ ಸ್ವಲ್ಪ ಅಸ್ಪಷ್ಟವಾಗುತ್ತದೆ. ಕರ್ಣನ ಪಾತ್ರವನ್ನು ಪ್ರತ್ಯೇಕವಾಗಿ ವಿವರಿಸಿದೆ. ಅಲ್ಲಲ್ಲಿ ಉದ್ಧರಿಸಿದ ಕೆಲವು ಉತ್ತಮವಾದ ಪದ್ಯಗಳು ಪುಸ್ತಕದ ಮೌಲ್ಯವನ್ನು ಹೆಚ್ಚಿಸಿವೆ. ರನ್ನನೂ ಪಂಪನಂತೆಯೆ ರಾಜಾಶ್ರಯವನ್ನು ಪಡೆದ ಕವಿ: ಪಂಪನಂತೆಯೆ ಒಂದು ಧಾರ್ಮಿಕ ಕಾವ್ಯ ('ಅಜಿತನಾಥ ಪುರಾಣ')ವನ್ನೂ ಇನ್ನೊಂದು ಲೌಕಿಕ ಕಾವ್ಯ ('ಸಾಹಸಭೀಮ ವಿಜಯ')ವನ್ನೂ ಬರೆದ ಕವಿ. ಲೇಖಕರು ಈ ಎರಡು ಕಾವ್ಯಗಳ ಸಂಕ್ಷೇಪಪರಿಚಯವನ್ನು 'ರನ್ನ' ಎಂಬ ಪುಸ್ತಕದಲ್ಲಿ ಮಾಡಿಕೊಡುತ್ತಾರೆ. ಹೇಳಬೇಕಾದ ವಿಷಯ ಚೊಕ್ಕಟವಾಗಿ. ಸರಳವಾಗಿ ಮೂಡಿಬಂದಿದೆ.

ಧಾರವಾಡದ ಶಿಶುನಾಳವೆಂಬಲ್ಲಿ ಹುಟ್ಟಿ, ಪ್ರಸಿದ್ಧರಾದ ಶರೀಫ್ ಸಾಹೇಬರನ್ನು ಕುರಿತ ಕೃತಿ **ಶಿಶುನಾಳ ಶರೀಫ್ ಸಾಹೇಬರು.** ಹುಟ್ಟಿನಿಂದ ಮುಸಲ್ಮಾನರಾದರೂ ಇವರು ಹಿಂದೂ–ಮುಸ್ಲಿಂಗಳೆಲ್ಲರಿಗೂ ಪ್ರಿಯರಾದ ವ್ಯಕ್ತಿಯಾಗಿ ಒಂದು ರೀತಿಯ ಸಂತಜೀವನವನ್ನು ನಡೆಸಿದವರು. ಹಾಡನ್ನು ಹೇಳುತ್ತಾ ಊರೂರಿಗೆ ತಿರುಗಿದವರು.ಅವರ ಹಾಡುಗಳು 'ಶಿಶುನಾಳಾಧೀಶ' ಎಂಬ ಅಂಕಿತಹೊಂದಿವೆ. ಸಾಮಾನ್ಯವಾಗಿ ಅವರ ಹಾಡುಗಳೆಲ್ಲ ಸಮಯಸ್ಫೂರ್ತಿಯಿಂದ ಬಂದ ಹಾಡುಗಳಾಗಿದ್ದು ಅವುಗಳಲ್ಲಿ ಅಂತಹ ಕಾವ್ಯಾಂಶ

ವೇನೂ ಇಲ್ಲ. ಅವರ ಅನೇಕ ಹಾಡುಗಳು ದಾಸರ ಕೀರ್ತನೆಗಳ ಮಾದರಿಯಲ್ಲಿವೆ. ಉದಾ:

"ಮೋಹದ ಹೆಂಡತಿ ಸತ್ತಬಳಿಕ
ಮಾವನ ಮನೆಯ ಹಂಗಿನ್ಯಾಕೊ?
ಸಾವುನೋವಿಗೆ ತರುವ ಬೀಗನ
ಮಾತಿನ ಹಂಗೊಂದೆನಗ್ಯಾಕೋ!
............................"

ಲೇಖಕರು ಸರಳವಾದ ಭಾಷೆಯೊಂದಿಗೆ ಶಿಶುನಾಳರ ಪರಿಚಯವನ್ನು ಮಾಡಿ ಕೊಡುತ್ತಾರೆ. ಆದರೆ ಅಶುದ್ಧ ವಾಕ್ಯರಚನೆಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. (ನೋಡಿ: ಪು. 6, 9, 48 ಹಾಗೂ 'ಪ್ರಶ್ನಾವಳಿ ವಿಭಾಗ')

ಜಗನ್ನಾಥದಾಸರ ಜೀವನ–ಕಾವ್ಯಗಳ ಪರಿಚಯವನ್ನು ಮಾಡಿಕೊಡುವ ಕೃತಿ **ಜಗನ್ನಾಥ ದಾಸರು**. ಹರಿದಾಸ ಪರಂಪರೆಯ ಎರಡನೆಯ ಘಟ್ಟದಲ್ಲಿ ಶ್ರೀ ವಿಜಯ ದಾಸರ ಶಿಷ್ಯರಾಗಿ ದಾಸಪರಂಪರೆಯನ್ನು ಮುಂದುವರಿಸಿದವರು ಜಗನ್ನಾಥದಾಸರು. ರಾಯಚೂರು ಜಿಲ್ಲೆಯ ಬ್ಯಾಗವಾಟ ಇವರ ಜನ್ಮಸ್ಥಳ. ಇವರು ಗೋಪಾಲದಾಸರಿಂದ ದೀಕ್ಷೆ ಪಡೆದು ಪಂಡರಾಪುರಕ್ಕೆ ಹೋಗಿ ಅಲ್ಲಿ 'ಜಗನ್ನಾಥ ವಿಠಲ' ಎಂಬ ಅಂಕಿತ ಧರಿಸಿದರು. ಇವರ ಪೂರ್ವಾಶ್ರಮದ ಹೆಸರು ಶ್ರೀನಿವಾಸಾಚಾರ್ಯ. ಜಗನ್ನಾಥದಾಸರೂ ಇತರ ಹರಿದಾಸರಂತೆಯೆ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ. 'ಹರಿಕಥಾಮೃತಸಾರ'ವೆಂಬ ಕಾವ್ಯವನ್ನು ರಚಿಸಿದ್ದಾರೆ. ದಾಸಸಾಹಿತ್ಯದಲ್ಲಿ ಈ ಕೃತಿಗೆ ಮೇಲ್ಮಟ್ಟದ ಸ್ಥಾನವಿದೆ.

ಮೈಸೂರಿನ ಚಿಕ್ಕದೇವರಾಜ ಅರಸರ ಆಶ್ರಯದಲ್ಲಿ ಸಂಚಿಯ ಊಳಿಗದವಳಾಗಿದ್ದ ಹೊನ್ನಮ್ಮ 'ಸಂಚಿ ಹೊನ್ನಮ್ಮ' ಎಂದೇ ಪ್ರಸಿದ್ಧಳಾಗಿದ್ದಾಳೆ. ದೇವಾಜಮ್ಮಣಿಯವರ ಪ್ರೋತ್ಸಾಹದಿಂದ ಅಳಸಿಂಗರಾರ್ಯರ ಶಿಷ್ಯಳಾಗಿ, ವಿದ್ಯೆ ಕಲಿತು, 'ಹದಿಬದೆಯ ಧರ್ಮ'ವೆಂಬ ಕಾವ್ಯವನ್ನು ರಚಿಸಿದಳು. ಹೆಸರೇ ಹೇಳುವಂತೆ ಇದು ವಿಶೇಷವಾಗಿ ಪತಿವ್ರತೆಯಾದವಳು ಅನುಸರಿಸಬೇಕಾದ ಧರ್ಮವನ್ನು ಕುರಿತು ಹೇಳುವ ಗ್ರಂಥ. ಹೊನ್ನಮ್ಮನ ಜೀವನ–ಕಾವ್ಯಗಳನ್ನು ಕುರಿತ ವಿಷಯಗಳನ್ನು **ಸಂಚಿ ಹೊನ್ನಮ್ಮ** ಎಂಬ ಪುಸ್ತಕದಲ್ಲಿ ಸಂಗ್ರಹಿಸಿಕೊಡಲಾಗಿದೆ.

ಕನ್ನಡ ಜನಪದ ಕವಿ ಸರ್ವಜ್ಞ. ಅವನ ನಿಜವಾದ ಹೆಸರು ಏನಿತ್ತೊ ತಿಳಿಯದು. 'ಸರ್ವಜ್ಞ' ಎಂಬ ಬಿರುದು ಹೇಗೆ ಬಂದಿತೆಂಬುದೂ ತಿಳಿಯದು. ಧಾರವಾಡ ಜಿಲ್ಲೆಯ ಅಂಬಲೂರು ಇವನ ಜನ್ಮಸ್ಥಳ. ಬಸವರಸನೆಂಬ ಬ್ರಾಹ್ಮಣ ಹಾಗೂ ಕುಂಬಾರ ಮಾಳಿ ಇವರಿಗೆ ಮಗನಾಗಿ ಜನಿಸುತ್ತಾನೆ. ಇವನ ವೈಯಕ್ತಿಕ ಜೀವನದ ಬಗೆಗೆ ಅಷ್ಟಾಗಿ ತಿಳಿದಿಲ್ಲ. **ಸರ್ವಜ್ಞ** ಎಂಬ ಪುಸ್ತಕದಲ್ಲಿ ಸರ್ವಜ್ಞನ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿದೆ.

'ಮುಂಡೆ ಬೋಳಿಸಿಕೊಂಡು ತ್ರುಂಬು ಕಂಬಳಿ ('ತುಂಡುಗಂಬಳಿ' ಎಂದಿರಬೇಕು) ಹೊದೆದು ಹಿಂಡನಗಲಿದ ಗಜದಂತೆ' ಒಂಟಿಯಾಗಿ ತಿರುಗುತ್ತ, ಸರ್ವಜ್ಞನು ತನಗೆ ಕಂಡಿದ್ದನ್ನು, ಅನಿಸಿದ್ದನ್ನು ಧೈರ್ಯವಾಗಿ ತ್ರಿಪದಿಯ ರೂಪದಲ್ಲಿ ಹಾಡುತ್ತ ಹೋಗಿದ್ದಾನೆ. ಇವನ ತ್ರಿಪದಿಗಳು ಸಂಸಾರ, ಧರ್ಮ, ದೇವರು, ಜಾತಿ, ಜ್ಞಾನ ಮುಂತಾದ ಅನೇಕ ವಿಷಯಗಳನ್ನು ಒಳಗೊಳ್ಳುತ್ತವೆ. ಅವನ ಭಾಷೆ ತೀರ ಮೊನಚಾದದ್ದು. ಸರಳವಾದ ಶೈಲಿಯಲ್ಲಿ ಲೇಖಕರು ಸರ್ವಜ್ಞನ ಪರಿಚಯ ಮಾಡಿಕೊಡುತ್ತಾರೆ. ಆದರೆ ಪುಸ್ತಕದ ಕೊನೆಯಲ್ಲಿ ಬರುವ ನೀತಿ–ತತ್ವಗಳನ್ನು ಬೋಧಿಸುವ ಸರ್ವಜ್ಞನ ತ್ರಿಪದಿ ಹಾಗೂ ಅವುಗಳ ಅರ್ಥ ಇವುಗಳ ಪಟ್ಟಿ ಮಕ್ಕಳಿಗೆ ನೀರಸವಾಗುತ್ತದೆ.

**ಮಹಾಕವಿ ರತ್ನಾಕರ** ಕವಿ ರತ್ನಾಕರರನ್ನು ಪರಿಚಯ ಮಾಡಿಕೊಡುವ ಕೃತಿ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ, ದಕ್ಷಿಣ ಕನ್ನಡವನ್ನು ಜೈನರಾದ ಭೈರವ ಅರಸರು ಆಳುತ್ತಿದ್ದರು. ಇವರಲ್ಲಿ ಒಬ್ಬನಾದ ಇಮ್ಮಡಿ ಭೈರವರಾಯನ ಕಾಲದಲ್ಲಿ ರತ್ನಾಕರ ಕವಿ ಆಗಿಹೋದನು. ಮೂಡಬಿದಿರೆ ಈತನ ಜನ್ಮಸ್ಥಳ. ಚಿಕ್ಕಂದಿನಲ್ಲಿಯೇ 'ತ್ರಿಲೋಕ ಶತಕ' 'ನಿರಂಜನ ಸ್ತುತಿ' ಮೊದಲಾದ ಕೃತಿಗಳನ್ನು ರಚಿಸಿ ಜನಪ್ರಿಯನಾಗಿ ರಾಜಮರ್ಯಾದೆಯನ್ನೂ ಸಂಪಾದಿಸಿದನು. ಅನಂತರ ಶ್ರವಣಬೆಳಗೊಳಕ್ಕೆ ಬಂದು 'ಭರತೇಶ ವೈಭವ'ವನ್ನು ರಚಿಸಿದನು. ಇದು ಅವನ ಪ್ರಸಿದ್ಧ ಕೃತಿ. ಭೈರವ ಅರಸರ ಮಗಳನ್ನು ಪ್ರೇಮಿಸಿದ ಕಾರಣ ಅರಸನಿಂದ ತಿರಸ್ಕೃತನಾಗಿ ರತ್ನಾಕರ ವೈರಾಗ್ಯ ತಾಳಿದನೆಂಬ ಕಥೆಯಿದೆ. ರತ್ನಾಕರನ ಬಾಲ್ಯ, ಪ್ರಣಯದ ಕಥೆ, ಅವನು 'ಭರತೇಶವೈಭವ'ವನ್ನು ರಚಿಸಿದ ಪ್ರಸಂಗ ಇವುಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರಕೃತ ಪುಸ್ತಕವನ್ನು ಬರೆಯಲಾಗಿದೆ. ನಿರೂಪಣೆ ಉತ್ತಮವಾಗಿದೆ. ಆದರೆ ಲೇಖಕರು ರತ್ನಾಕರನ ಕಾವ್ಯಗಳ ಪರಿಚಯ ಮಾಡಿಕೊಡುವ ಗೊಡವೆಗೆ ಹೋಗಿಲ್ಲ.

## ವ್ಯಕ್ತಿಚಿತ್ರಗಳು

**'ತಾತಯ್ಯನವರು' 'ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು' 'ಸರ್ ಮಿರ್ಜಾ ಇಸ್ಮಾಯಿಲ್'** ಹಾಗೂ **'ಬಿ.ಎಂ.ಶ್ರೀ'** ಎಂಬ ಪುಸ್ತಕಗಳು ಮಕ್ಕಳಿಗೆ ಆಯಾ ವ್ಯಕ್ತಿಗಳ ಜೀವನ ಪರಿಚಯ ಮಾಡಿಕೊಡಲು ಉದ್ದೇಶಿಸಿದ ಪುಸ್ತಕಗಳು. ಇವರೆಲ್ಲರೂ ಸಮಾಜದಲ್ಲಿ ಒಂದೇ ರೀತಿಯ ಸ್ಥಾನಮಾನಗಳನ್ನು ಪಡೆದವರಲ್ಲ. ಆದರೆ ಅವರು ಕೈಗೊಂಡ ಕಾರ್ಯಗಳಿಗೆ, ಅವರ ಧ್ಯೇಯ–ಧೋರಣೆಗಳಿಗೆ ಇದರಿಂದ ಯಾವ ಭಂಗವೂ ಒದಗಿರಲಿಲ್ಲ. ತಾತಯ್ಯನವರು ಕೇವಲ ಒಬ್ಬ ಪ್ರಾಥಮಿಕ ಶಾಲಾ ಶಿಕ್ಷಕರು. ಇವರ ನಿಜವಾದ ಹೆಸರು ವೆಂಕಟಕೃಷ್ಣಯ್ಯನೆಂದಿದ್ದರೂ ಮೈಸೂರಿನಲ್ಲಿ ತಾತಯ್ಯನೆಂದೆ ಪ್ರಸಿದ್ಧರಾದರು. ಉಪಾಧ್ಯಾಯವೃತ್ತಿಯೊಂದಿಗೆ ಸಮಾಜಸೇವೆಯನ್ನೂ ಕೈಗೊಂಡು ಮೈಸೂರಿನಲ್ಲಿ ಅನೇಕ ಸಂಘಸಂಸ್ಥೆಗಳ ಉದಯಕ್ಕೆ ಕಾರಣರಾದರು. 'ಮೈಸೂರು ಹೆರಾಲ್ಡ್', 'ಸಾಧ್ವಿ', 'ಸಂಪದಭ್ಯುದಯ' ಮುಂತಾದ ಪತ್ರಿಕೆಗಳನ್ನು ಹೊರಡಿಸಿದರು. ದಾವಣಗೆರೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿತ್ತು. ಬಿ. ಎಂ. ಶ್ರೀ. ಅವರು

ಕನ್ನಡ ಭಾಷೆ ಸಾಹಿತ್ಯಗಳಿಗಾಗಿ ಶ್ರಮಿಸಿದವರು. ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಕೆಲಸಮಾಡಿದರೂ ಇವರ ಆಸಕ್ತಿ ಕನ್ನಡದ ಕಡೆಗೇ ಇತ್ತು. ಅನೇಕ ಇಂಗ್ಲಿಷ್ ಕವನಗಳನ್ನು ಕನ್ನಡಕ್ಕೆ ಅನುವಾದಿಸಿದರು. ಇವರ 'ಇಂಗ್ಲಿಷ್ ಗೀತೆಗಳು' ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು. ಪ್ರಪ್ರಥಮವಾಗಿ ಮೈಸೂರಿನಲ್ಲಿ ಕನ್ನಡ ಎಂ.ಎ. ತರಗತಿಯನ್ನು ಪ್ರಾರಂಭಿಸಿದ ಕೀರ್ತಿ ಬಿ. ಎಂ. ಶ್ರೀ. ಅವರಿಗೆ ಸಲ್ಲುತ್ತದೆ. ಕನ್ನಡ ಭಾಷೆ–ಸಾಹಿತ್ಯಗಳಿಗಾಗಿ ಹೋರಾಡಿದ ಶ್ರೀ ಅವರಿಗೆ 'ಕನ್ನಡದ ಕಣ್ವ'ರೆಂದು ಬಿರುದು. ಶ್ರೀ ಅವರ 'ಅಶ್ವತ್ಥಾಮನ್' 'ಗದಾಯುದ್ಧ' 'ಪಾರಸಿಕರು' ನಾಟಕಗಳು ಕನ್ನಡಕ್ಕೆ ವಿಶೇಷ ಕೊಡುಗೆಗಳಾಗಿವೆ.

ಮಿರ್ಜಾ ಇಸ್ಮಾಯಿಲ್ ಮತ್ತು ವಿಶ್ವೇಶ್ವರಯ್ಯನವರು ಮೈಸೂರಿನಲ್ಲಿ ದಿವಾನರಾಗಿ ತಮ್ಮ ಸೇವೆಯನ್ನು ಸಲ್ಲಿಸಿದರು. ಇಸ್ಮಾಯಿಲರು ನಾಲ್ವಡಿ ಕೃಷ್ಣರಾಜ ಒಡೆಯರ ದಿವಾನರಾಗಿದ್ದು ಮಂಡ್ಯದ ಸಕ್ಕರೆ ಕಾರಖಾನೆ, ಬೆಳ್ಗೊಳದ ಗೊಬ್ಬರದ ಕಾರಖಾನೆ ಮುಂತಾದ ಅನೇಕ ಕಾರಖಾನೆಗಳ ಉದಯಕ್ಕೆ ಕಾರಣರಾದರು; ಮೈಸೂರು ರಾಜ್ಯದಲ್ಲಿ ಅನೇಕ ಕೆರೆ ಕಾಲುವೆಗಳನ್ನು ಕಟ್ಟಿಸಿದರು. ಇವರು ಮೈಸೂರಿನಲ್ಲಲ್ಲದೆ ಜಯಪುರ, ಹೈದರಾಬಾದ್ ಮೊದಲಾದ ಇತರೆಡೆಗಳಲ್ಲಿಯೂ ದಿವಾನರಾಗಿ ಕೀರ್ತಿ ಪಡೆದರು. ವಿಶ್ವೇಶ್ವರಯ್ಯನವರು ಇಸ್ಮಾಯಿಲರಿಗಿಂತಲೂ ಮುಂಚೆ ಮೈಸೂರಿನಲ್ಲಿ ದಿವಾನರಾಗಿದ್ದವರು. ಇವರು ಉತ್ತಮ ಆಡಳಿತಗಾರರಾಗಿರುವುದಕ್ಕಿಂತಲೂ ಹೆಚ್ಚಾಗಿ ಒಬ್ಬ ಪ್ರಸಿದ್ಧ ಇಂಜಿನಿಯರೆಂದು ಖ್ಯಾತಿ ಪಡೆದವರು. ಮೈಸೂರಿಗೆ ಇವರು ಸಲ್ಲಿಸಿದ ಸೇವೆಗಳಲ್ಲಿ ಕಾವೇರಿ ಆಣೆಕಟ್ಟಿನ ನಿರ್ಮಾಣ, ಭದ್ರಾವತಿಯ ಕಬ್ಬಿಣ ಕಾರಖಾನೆಯ ಸ್ಥಾಪನೆ, ಬೆಂಗಳೂರಿನಲ್ಲಿ ರೇಷ್ಮೆ ಗಂಧದೆಣ್ಣೆ ಕಾರ್ಖಾನೆಗಳು ಮೊದಲಾದವು ಹೆಸರಿಸುವಂತಹವು.

## ಧಾರ್ಮಿಕ ಪುರುಷರು

ಮತ–ಸಂಪ್ರದಾಯಗಳ ಕಟ್ಟುನಿಟ್ಟುಗಳಿಂದ ಹೊರಗೆ ನಿಂತು, ಜೀವನವನ್ನು ಅರ್ಥವಿಸುವ ಹಾಗೂ ಜೀವಿಗಳೊಡನೆ ನಿಕಟ ಸಂಪರ್ಕ ಪಡೆದಿರುವ ನಿಸರ್ಗದ ಪ್ರಕ್ರಿಯೆಗಳ ಹಿಂದೆ ಅಡಗಿರುವ ಸತ್ಯವನ್ನು ಶೋಧಿಸುವ ತಾತ್ವಿಕ ದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡು ಎಲ್ಲ ಧಾರ್ಮಿಕ ಪುರುಷರು ತಮ್ಮ ತಮ್ಮ ಸಿದ್ಧಾಂತಗಳನ್ನು ಮಂಡಿಸಿದುದು ಕಂಡುಬರುತ್ತದೆ. ಶಂಕರ, ರಾಮಾನುಜ, ಬಸವ ಮೊದಲಾದವರು ಇದಕ್ಕೆ ಹೊರತಲ್ಲ. ಅವರ ನಿಲುವುಗಳಲ್ಲಿ, ಸಿದ್ಧಾಂತಗಳಲ್ಲಿ ಭಿನ್ನತೆಯಿದ್ದರೂ ಸಾಮಾಜಿಕ ಜೀವನಕ್ಕೆ ಅದರಿಂದ ಯಾವ ಧಕ್ಕೆಯೂ ತಗಲುವಂತಿರಲಿಲ್ಲ (ಆದರೆ ಕೊನೆಕೊನೆಗೆ ಧರ್ಮ–ಸಂಪ್ರದಾಯ, ಕಟ್ಟುನಿಟ್ಟುಗಳು ಸಮಾನಾರ್ಥಕಗಳಾಗಿ ಸಮಾಜದಲ್ಲಿ ಏರುಪೇರಾಯಿತು). ಅವರ ಪಾಲಿಗೆ ಧರ್ಮವೆನ್ನುವುದು ವೈಯಕ್ತಿಕ ಸಾಧನೆ, ಅನುಭವ, ಅನ್ವೇಷಣೆಗಳಿಂದ ರೂಪಿಸಿಕೊಂಡ ಒಂದು ತಾತ್ವಿಕ ನಿಲುವು ಆಗಿತ್ತಷ್ಟೇ. ಪವಾಡಗಳು ಧಾರ್ಮಿಕ ಪುರುಷರ ಜೀವನ ಚರಿತ್ರೆಯಲ್ಲಿ ಒಂದು ಅಂಶವಾಗಿ ಬಂದರೂ ಅವು ಅವರ ಮಹತಿಯನ್ನು ತಿಳಿಸುವ

ಅಂಶಗಳಾಗಲಾರವು ಎಂಬುದು ತಿಳಿಯಬೇಕಾದ ವಿಷಯ. ಆದರಲ್ಲಿಯೂ ಮಕ್ಕಳಿಗೆ ಇಂತಹ ಪುರುಷರ ಚರಿತ್ರೆಯನ್ನು ಹೇಳುವಾಗ ಈ ಅಂಶ ಹೆಚ್ಚು ಗಮನಾರ್ಹವಾಗುತ್ತದೆ. ಪವಾಡಗಳ ಮೂಲಕ ಧಾರ್ಮಿಕ ಪುರುಷರ ಚರಿತ್ರೆ ಹೇಳುವ ಪ್ರಯತ್ನ ಮಾಡಿದಲ್ಲಿ ಅವರು ಮಕ್ಕಳಿಗೆ ಕೈಗೆ ಎಟುಕಲಾರದ ಆದರ್ಶಗಳಾಗಿ. ಕಾಲ್ಪನಿಕ ವ್ಯಕ್ತಿಗಳಾಗಿಯೆ ಉಳಿಯುತ್ತಾರೆ.

ಧಾರ್ಮಿಕ ಪುರುಷರನ್ನು ಕುರಿತ ಒಟ್ಟು ಹನ್ನೊಂದು ಪುಸ್ತಕಗಳಲ್ಲಿ ಆಯಾ ವ್ಯಕ್ತಿಗಳ ಸಾಧನೆ. ಅನುಭವ, ಪ್ರತಿಭೆ, ಹಾಗೂ ಅವರು ಎಸಗಿದ ಪವಾಡಗಳನ್ನು ಕುರಿತು ಸರಳವಾದ ಭಾಷೆಯಲ್ಲಿ ವರ್ಣಿಸಲಾಗಿದೆ. ಕೆಲವು ಪುಸ್ತಕಗಳಲ್ಲಿ ಮಾತ್ರ ಪವಾಡಗಳೆ ಮಹತ್ವದ ಅಂಶವೆಂದು ಅವುಗಳಿಗೆ ಹೆಚ್ಚಿನ ಆದ್ಯತೆ ಕೊಟ್ಟು ವಿವರಿಸಿದಂತಿದೆ.

ಶಂಕರಾಚಾರ್ಯರು ಸು. ೮ನೇ ಶತಮಾನದಲ್ಲಿ ಕೇರಳದ ಕಾಲಟಿಯಲ್ಲಿ ಹುಟ್ಟಿ ಬೆಳೆದವರು. ಇವರು ಕೇವಲ ಮೂವತ್ತೆರಡು ವರ್ಷ ಬಾಳಿದರು. ಈ ಅವಧಿಯಲ್ಲಿಯೆ ಭಾರತದಲ್ಲಿ ಅದ್ವೈತಮತವನ್ನು ಸ್ಥಾಪಿಸಿ ಶ್ರೇಷ್ಠರಾದರು. ಕರ್ಮಮಾರ್ಗಕ್ಕಿಂತ ಜ್ಞಾನಮಾರ್ಗವೇ ಶ್ರೇಷ್ಠವಾದದ್ದೆಂಬುದು ಶಂಕರರ ಅಭಿಪ್ರಾಯ. ಅದ್ವೈತಮತ ಪ್ರತಿಪಾದನೆಯ ಮುಖ್ಯ ಕೇಂದ್ರಗಳೆಂದಾಗಿ ಶೃಂಗೇರಿ. ಪುರಿ. ದ್ವಾರಕೆ. ಬದರಿಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿದರು. ಶ್ರೀ ನರಸಿಂಹ ಭಾರತೀ ಸ್ವಾಮಿಗಳು ಶೃಂಗೇರಿಯ ಮಠಾಧಿಪತಿಗಳಲ್ಲಿ ಒಬ್ಬರು. ಶಿವಸ್ವಾಮಿ ಎಂಬುದು ಇವರ ಪೂರ್ವಾಶ್ರಮದ ಹೆಸರು. ಕುಣಿಗಲ್ಲು ಇವರ ಊರು. ಉಗ್ರನರಸಿಂಹ ಭಾರತೀ ಸ್ವಾಮಿಗಳು ಇವರ ಗುರು. ತಮ್ಮ ಪ್ರತಿಭೆ. ಸದಾಚಾರ. ಸದ್ಗುಣಗಳಿಂದ ತುಂಬ ಪ್ರಸಿದ್ಧರಾದ ಸ್ವಾಮಿಗಳಿವರು. ಕಾಲಟಿಯಲ್ಲಿ ಇವರು ಶಂಕರಾಚಾರ್ಯ–ಶಾರದಾದೇವಿಯರ ಮಂದಿರಗಳನ್ನು ಕಟ್ಟಿಸಿದರು. ಶೃಂಗೇರಿ – ಬೆಂಗಳೂರುಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ತೆರೆಯಲು ಕಾರಣರಾದರು. ನರಸಿಂಹ ಭಾರತಿಯವರ ಶಿಷ್ಯರಾಗಿ ಶೃಂಗೇರಿ ಪೀಠವನ್ನೇರಿದವರು ಶ್ರೀ ಚಂದ್ರಶೇಖರ ಭಾರತಿಯವರು. ನರಸಿಂಹ ಎಂಬುದು ಇವರ ಪೂರ್ವಾಶ್ರಮದ ಹೆಸರು. 1892 ರಲ್ಲಿ ಹುಟ್ಟಿ ಅರವತ್ತೆರಡು ವರ್ಷಗಳ ಕಾಲ ಬದುಕಿದರು. ಬೆಂಗಳೂರಿನಲ್ಲಿ ಹಾಗೂ ಶೃಂಗೇರಿಯಲ್ಲಿ ಇವರ ಸಂಸ್ಕೃತಾಭ್ಯಾಸ ನಡೆಯಿತು. ಮುಂದೆ ಶ್ರೀ ನರಸಿಂಹ ಭಾರತಿಯವರ ಶಿಷ್ಯರಾಗಿ ಸನ್ಯಾಸದೀಕ್ಷೆ ಪಡೆದರು. ಸ್ವಾಮಿಯವರ ಬುದ್ಧಿ . ಭಕ್ತಿಗಳನ್ನು ಪರೀಕ್ಷಿಸಲು ಹೋಗಿ. ಸೋತ ಅನೇಕರ ಕಥೆಗಳನ್ನು ಲೇಖಕರು ವಿವರಿಸಿದ್ದಾರೆ. **ಶ್ರೀ ಶಂಕರಾಚಾರ್ಯರು**. **ಶ್ರೀ ನರಸಿಂಹಭಾರತೀ ಸ್ವಾಮಿಗಳು**. ಹಾಗೂ **ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು** ಎಂಬ ಪುಸ್ತಕಗಳು ಮೇಲೆ ಹೇಳಿದ ಮೂವರ ಜೀವನ–ಸಾಧನೆಗಳನ್ನು ವಿವರಿಸುತ್ತವೆ.

**ಶ್ರೀ ರಾಮಾನುಜಾಚಾರ್ಯರು** ಎಂಬುದು ವಿಶಿಷ್ಟಾದ್ವೈತ ಮತಸ್ಥಾಪಕರಾದ ರಾಮಾನುಜಾಚಾರ್ಯರನ್ನು ಕುರಿತ ಪುಸ್ತಕ. ಹೊಯ್ಸಳ ರಾಜನಾದ ಬಿಟ್ಟಿದೇವ ತನ್ನ ಮಗಳಿಗೆ ಒದಗಿದ್ದ ಭೂತದ ಚೇಷ್ಟೆಯನ್ನು ನಿವಾರಿಸಲು ಶ್ರೀರಾಮಾನುಜರನ್ನು ಕರೆಸುತ್ತಾನೆ. ಅದಕ್ಕೆ ಪೂರ್ವದಲ್ಲಿ ಅವರ ಶಿಷ್ಯರಾದ ಗೋವಿಂದಭಟ್ಟರಿಂದ ರಾಮಾನುಜರ

ಚರಿತ್ರೆಯನ್ನು ಕೇಳುತ್ತಾನೆ. ಶ್ರೀ ರಾಮಾನುಜರು ಮೊದಲು ಯಾದವಪ್ರಕಾಶರೆಂಬ ಅದ್ವೈತಿಗಳ ಬಳಿಯಲ್ಲಿ ಅಭ್ಯಾಸಮಾಡಿ ಮುಂದೆ ಅವರನ್ನೇ ತರ್ಕದಲ್ಲಿ ಸೋಲಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಾರೆ. ಕಂಚೀಪೂರ್ಣರೆಂಬ 'ಶೂದ್ರ' ಭಕ್ತರನ್ನು ತಮ್ಮ ಗುರುಗಳೆಂದು ತಿಳಿದು, ರಾಮಾನುಜರು ಅವರನ್ನು ಆರಾಧಿಸಿದರು. ಅನೇಕ ಶೂದ್ರರು ಇವರ ಪಟ್ಟದ ಶಿಷ್ಯರಾದರು. ಮೇಲುಕೋಟೆ, ಶ್ರೀರಂಗ ಮೊದಲಾದ ಕ್ಷೇತ್ರಗಳು ಇವರಿಂದಾಗಿ ಪ್ರಸಿದ್ಧ ವೈಷ್ಣವ ಯಾತ್ರಾಕ್ಷೇತ್ರಗಳಾಗಿವೆ. ಜೈನನಾದ ಬಿಟ್ಟಿದೇವ ವಿಷ್ಣು ವರ್ಧನನಾಗಿ, ಮುಂದೆ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದುದು ಇವರ ಪ್ರಭಾವ ದಿಂದಲೇ. ಆಚಾರ್ಯರ ಶಿಷ್ಯರಲ್ಲಿ ಶ್ರೀ ಕೂರೇಶರು ತುಂಬ ಪ್ರಸಿದ್ಧಿಗೆ ಬಂದವರು.

ರಾಮಾನುಜರ ನಂತರ ಬಂದ ಇನ್ನೊಬ್ಬ ಪ್ರಸಿದ್ಧ ಪುರುಷರು **ಶ್ರೀ ಮಧ್ವಾಚಾರ್ಯರು**. ಉಡುಪಿಯ ಹತ್ತಿರದ ಪಾಜಕ ಇವರ ಜನ್ಮಸ್ಥಳ. ಚಿಕ್ಕಂದಿನಲ್ಲಿಯೆ ತಂದೆ ತಾಯಿಗಳ ಮಾತನ್ನೂ ಅಲಕ್ಷಿಸಿ ಸನ್ಯಾಸ ಸ್ವೀಕರಿಸಿ ಮುಂದೆ ಪ್ರಸಿದ್ಧಯತಿಗಳಾಗಿ ದ್ವೈತಮತವನ್ನು ಸ್ಥಾಪಿಸಿದರು. ಉಡುಪಿ ಇವರ ಕಾರ್ಯಕ್ಷೇತ್ರ. ಇವರು 'ಗೀತಾ ಭಾಷ್ಯ', 'ಬ್ರಹ್ಮಸೂತ್ರಭಾಷ್ಯ', 'ಭಾರತ ತಾತ್ಪರ್ಯ ನಿರ್ಣಯ' ಮೊದಲಾದ ಮಹತ್ವದ ಗ್ರಂಥಗಳನ್ನು ರಚಿಸಿದ್ದಾರೆ.

ರಾಮಾನುಜರು ಕಾಲವಾದ ಕೆಲವು ವರ್ಷಗಳ ನಂತರ, ಅಂದರೆ 12ನೇ ಶತ ಮಾನದ ಆದಿಭಾಗದಲ್ಲಿ ಕರ್ಣಾಟಕದಲ್ಲಿ ಇನ್ನೂ ಒಂದು ಧರ್ಮ ಪ್ರಬಲವಾಗಿ ಕಾಣಿಸಿ ಕೊಂಡಿತು. ಅದೇ ವೀರಶೈವ ಧರ್ಮ. ವೀರಶೈವ ಧರ್ಮವನ್ನನುಸರಿಸಿದ ಶರಣರು ಕರ್ಣಾಟಕದ ಒಳಗಡೆ ಅಂತೆಯೇ ಹೊರಗಡೆಯೂ ಸಾಕಷ್ಟು ಸಂಖ್ಯೆಯಲ್ಲಿದ್ದರು. ಕಲ್ಯಾಣ ಈ ಧರ್ಮದ ಕೇಂದ್ರಸ್ಥಳವಾಗಿತ್ತು. ಈ ಧರ್ಮ ಪ್ರಸಿದ್ಧಿಗೆ ಬಂದದ್ದು ಬಿಜ್ಜಳನ ಮಂತ್ರಿಯಾಗಿದ್ದ ಬಸವಣ್ಣನವರಿಂದ. ಬಸವಣ್ಣನವರ ಕಾಲದಲ್ಲಿಯೆ ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದ ಅನೇಕ ಪ್ರಸಿದ್ಧ ಪುರುಷರು ಆಗಿಹೋದರು. ಸೊನ್ನಲಿಗೆ (ಈಗಿನ ಸೊಲ್ಲಾಪುರ) ಯಲ್ಲಿ ಹುಟ್ಟಿದ ಸಿದ್ಧರಾಮ 'ಕರ್ಮಯೋಗಿ ಸಿದ್ಧ ರಾಮ'ನೆಂದು ಹೆಸರಾದನು. ಶಿವಭಕ್ತನಾದರೂ ಸಿದ್ಧರಾಮನಲ್ಲಿ ಅಹಂಕಾರ ಅಳಿದಿರ ಲಿಲ್ಲ. ಅವನ ಹಣೆಗಣ್ಣಿನ ಉರಿಯನ್ನು ಅಲ್ಲಮಪ್ರಭುವು ನುಂಗಿದಾಗ ಸಿದ್ಧ ರಾಮನಿಗೆ ಜ್ಞಾನೋದಯವಾಯಿತು. ಕಲ್ಯಾಣಕ್ಕೆ ಬಂದು ಬಸವಾದಿಗಳ ಸಂಗಸುಖ ವನ್ನು ಪಡೆದು ಮರಳಿ ಸೊನ್ನಲಿಗೆಗೆ ತೆರಳಿ ಅಲ್ಲಿಯೇ ಸಮಾಧಿ ಹೊಂದುತ್ತಾನೆ. ರೇವಣಸಿದ್ಧರು ಸಿದ್ಧರಾಮನಿಗಿಂತ ಕೆಲವೆ ವರ್ಷಗಳ ಹಿಂದೆ ಬಾಳಿದವರು. ಇವರ ವಿಷಯ ದಂತಕಥೆಗಳಲ್ಲಿ ಮುಚ್ಚಿಹೋಗಿದೆ. ಇವರು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಿಂದ ಉದ್ಭವಿಸಿ ಮುಂದೆ ಅದೇ ಲಿಂಗದಲ್ಲಿಯೆ ಐಕ್ಯರಾದರೆಂದು ಪ್ರತೀತಿ. ಬಸವಣ್ಣನವರ ಬಗೆಗೂ ಪವಾಡಗಳ ರೂಪದಲ್ಲಿ ಅನೇಕ ದಂತಕಥೆಗಳು ಬೆಳೆದುಬಂದಿದ್ದರೂ ಅವರ ವಚನಗಳಿಂದಲೇ ಬಸವಣ್ಣನವರ ಸಾಧನೆ–ಸಿದ್ಧಿಗಳ ಪರಿಚಯ ಸಾಕಷ್ಟು ದೊರೆಯು ತ್ತದೆ. ಇತರ ಶರಣರ ಮೇಲೆ ಆದ ಪ್ರಭಾವವೇ ಅವರ ವ್ಯಕ್ತಿತ್ವವನ್ನು ಮನದಟ್ಟು ಮಾಡಿಕೊಡುತ್ತದೆ. ಬಿಜ್ಜಳನ ಮಂತ್ರಿಯಾಗಿದ್ದರೂ ಸಾಮಾನ್ಯನಂತೆ ನೋವು–ನಲಿವು,

ವ್ಯಥೆ–ವಿರಹ, ನಿಂದೆ–ಅಪಮಾನಗಳನ್ನು ಎದುರಿಸಿದರು. ಅನುಭವ ಮಂಟಪವನ್ನು ಸ್ಥಾಪಿಸಿ ಅಲ್ಲಮ ಪ್ರಭುವನ್ನು ಅದರ ಅಧ್ಯಕ್ಷರನ್ನಾಗಿ ಮಾಡಿದುದು ಒಂದು ಮಹತ್ಕಾರ್ಯ. ಬಸವಣ್ಣ, ಅಲ್ಲಮಪ್ರಭುಗಳಾದ ನಂತರ ಸುಮಾರು ಆರು ಶತಮಾನಗಳ ಈಚೆ ಕಲ್ಬುರ್ಗಿಯ ಅರಳಗುಂಡಿಗೆಯಲ್ಲಿ ಹುಟ್ಟಿ, ಬೆಳೆದು ಪ್ರಸಿದ್ಧರಾದವರು ಶ್ರೀ ಶರಣ ಬಸವೇಶ್ವರರು. ಚನ್ನಬಸವ, ಕಲ್ಲಿನಾಥ ಶಾಸ್ತ್ರಿ ಹಾಗೂ ಗುರುಸಿದ್ಧಲಿಂಗರು ಶ್ರೀ ಶರಣ ಬಸವೇಶ್ವರರನ್ನು ಕುರಿತು ಬರೆದ ಕವಿಗಳು. ಆದರೆ ಇವರೆಲ್ಲರೂ ಮುಖ್ಯವಾಗಿ ಪವಾಡಗಳನ್ನೆ ಹೇಳತೊಡಗುವುದರಿಂದ ಶರಣಬಸವೇಶ್ವರರ ಜೀವನಚರಿತ್ರೆ ಸೊನ್ನೆಯಾಗುತ್ತದೆ.

**'ಸಿದ್ಧರಾಮ', 'ಶ್ರೀರೇವಣಸಿದ್ಧ', 'ಶ್ರೀಶರಣಬಸವೇಶ್ವರ'**–ಈ ಪುಸ್ತಕಗಳು ಆಯಾ ವ್ಯಕ್ತಿಗಳ ಜೀವನಚರಿತ್ರೆ ಹಾಗೂ ಮಹತಿಯನ್ನು ಹೇಳಲು ಹೊರಟಿವೆ. ಮಹತಿ ಎಂದರೆ ಪವಾಡಗಳ ಪ್ರಯೋಗ ಎಂಬ ಕೃತಕ ಸಂಬಂಧವುಂಟಾಗಿ ಪುಸ್ತಕಗಳ ಉದ್ದಕ್ಕೂ ಪವಾಡಗಳನ್ನು ಮಾತ್ರವೇ ಕಾಣುವಂತಾಗಿದೆ. ಇದಕ್ಕೆ ಲೇಖಕರನ್ನು ಸಂಪೂರ್ಣವಾಗಿ ಆಕ್ಷೇಪಿಸುವಂತಿಲ್ಲ. ಆಯಾ ವ್ಯಕ್ತಿಗಳ ಬಗೆಗೆ ದೊರೆಯುವ ಇತಿಹಾಸದ ಅಭಾವವೂ ಕಾರಣವಾಗಿದೆ. **ಗುರುಸಾರ್ವಭೌಮ ಶ್ರೀ ರಾಘವೇಂದ್ರ** ಎಂಬ ಪುಸ್ತಕವೂ ಮೇಲಿನ ಆಕ್ಷೇಪಣೆಗೆ ಹೊರತಾಗಿಲ್ಲ. ವೆಂಕಟನಾಥರು ಗುರು ಸುಧೀಂದ್ರರಿಂದ ದೀಕ್ಷೆ ಪಡೆದು ರಾಘವೇಂದ್ರ ಯತಿಗಳಾದುದು, ಆನಂತರ ಮಂತ್ರಾಲಯದಲ್ಲಿ ಮಠವನ್ನು ಸ್ಥಾಪಿಸಿ, ಮುಂದೆ ಅಲ್ಲಿಯೆ ಸಮಾಧಿ ಹೊಂದಿದುದು ಈ ಪುಸ್ತಕದಲ್ಲಿಯ ಪ್ರಧಾನ ಅಂಶ. ಆದರೆ 'ಗುರು ಸಾರ್ವಭೌಮರ ದಾಸಾನುದಾಸ'ರಾದ ಲೇಖಕರು ಗುರುಗಳ ಅನುಗ್ರಹಕ್ಕಾಗಿ, ತಮ್ಮ ಮನಃಶುದ್ಧಿಗಾಗಿ ಹಾಗೂ ಮಕ್ಕಳು ಗುರುಗಳ ಸೇವೆ ಮಾಡಿ ಇಷ್ಟಾರ್ಥ ಪಡೆಯುವ ಸಲುವಾಗಿ ರಾಯರ 'ದಿವ್ಯಭವ್ಯ' ಚರಿತ್ರೆಗೆ ತೊಡಗುವುದರಿಂದ (ನೋಡಿ: 'ನನ್ನ ನಾಲ್ಕು ನುಡಿ') ಪವಾಡಗಳು ಒಂದರಮೇಲೊಂದು ಜಮಾಯಿಸುತ್ತವೆ; 'ಉದ್ಭೂತ'. 'ಅಚಿಂತ್ಯಾದ್ಭುತ ಶಕ್ತಿ' ಮುಂತಾದ ಪದಗಳು ಕಾಣಿಸಿಕೊಳ್ಳುತ್ತವೆ; ದೊಡ್ಡದೊಡ್ಡ ವಾಕ್ಯಗಳು (ವ್ಯಾಕರಣ ದೋಷಗಳೊಡನೆ) ತಲೆಹಾಕುತ್ತವೆ (ಉದಾ: ಪು. 16).

**ಬಸವ ಕಲ್ಯಾಣ** ಎಂಬ ಪುಸ್ತಕ 'ಕಲ್ಯಾಣ ಕ್ಷೇತ್ರ'ವನ್ನು ಹೆಸರಿಸಿದರೂ ಬಸವಣ್ಣನವರ ಪಾತ್ರವನ್ನು ಮುಖ್ಯವಾಗಿಟ್ಟುಕೊಂಡು ಕಲ್ಯಾಣದಲ್ಲಿ ನಡೆದುಹೋದ ಘಟನೆಗಳನ್ನು ಸಂಗ್ರಹಿಸುತ್ತದೆ. ನಿರೂಪಣೆ ಸಪ್ಪೆಯಾಗಿದೆ. **ಕೈವಾರ ನಾರಣಪ್ಪ** ಎಂಬ ಪುಸ್ತಕದಲ್ಲಿ ಲೇಖಕರು ನಾರಣಪ್ಪನ ಪರಿಚಯ ಮಾಡಿಕೊಡುತ್ತಾರೆ. ನಾರಣಪ್ಪನು ಬೆಂಗಳೂರಿನ ಹತ್ತಿರದ ಕೈವಾರದಲ್ಲಿ ಬಾಳಿದವನು. ಇವನು ತೆಲುಗಿನಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿರುವುದರಿಂದ ಕನ್ನಡಿಗರಿಗಿಂತ ಹೆಚ್ಚಾಗಿ ತೆಲುಗರಿಗೆ ಪರಿಚಯದ ವ್ಯಕ್ತಿ. 'ವೇದಾಂತ ಸಾರಾವಳಿ'ಯೆಂಬುದು ಈತನ ಕೀರ್ತನೆಗಳ ಸಂಗ್ರಹ. ಇದಲ್ಲದೆ ಕಾಲಜ್ಞಾನವನ್ನು ಕುರಿತು 'ಕಾಲಜ್ಞಾನ'ವೆಂಬ ಪದ್ಯಗ್ರಂಥವನ್ನೂ ಬರೆದಿದ್ದಾನೆ. ಸರಳವಾದ ಭಾಷೆಯಿಂದ ಕೂಡಿದ ಈ ಪುಸ್ತಕ ಮಕ್ಕಳಿಗೆ ಸುಲಭವಾಗಿ ಗ್ರಾಹ್ಯವಾಗುವಂತಹುದು.

## ಅರಸರು ಮತ್ತು ರಾಜಮನೆತನಗಳು

ಕರ್ಣಾಟಕವನ್ನು ಆಳಿದ ಬೇರೆ ಬೇರೆ ರಾಜಮಹಾರಾಜರನ್ನು ಕುರಿತು ಬರೆದ ಹದಿನಾಲ್ಕು ಪುಸ್ತಕಗಳಿವೆ. ಈ ಅರಸರಲ್ಲಿ ಕೆಲವರು ಚಿಕ್ಕ ಚಿಕ್ಕ ಪ್ರದೇಶಗಳನ್ನು ಆಳಿದ ಮಂಡಲಾಧೀಶರು. ಇನ್ನು ಕೆಲವರು ಸಮಗ್ರ ಕರ್ಣಾಟಕವನ್ನು ಆಳಿದವರು. ಅಲ್ಲದೆ ಕರ್ಣಾಟಕದ ಹೊರಗೂ ಸಾಮ್ರಾಜ್ಯವನ್ನು ವಿಸ್ತರಿಸಿ. ಪರದೇಶಗಳಲ್ಲಿಯೂ ತಮ್ಮ ಖ್ಯಾತಿಯನ್ನು ಹಬ್ಬಿಸಿದವರು. ಓಬವ್ವೆಯಂತಹ ಸ್ತ್ರೀ ಪಟ್ಟದರಾಣಿಯಾಗಿ ಮೆರೆಯ ದಿದ್ದರೂ ರಾಜ್ಯದ ರಕ್ಷಣೆಗಾಗಿ ಹೋರಾಡಿದ ಒಬ್ಬ ವೀರವನಿತೆ.

ಕದಂಬವಂಶದ ಮಯೂರಶರ್ಮನಿಂದ ಮೊದಲಾಗಿ ಮೈಸೂರು ಅರಸರವರೆಗಿನ ಕಾಲದ ಕರ್ಣಾಟಕ ಇತಿಹಾಸದಲ್ಲಿ ಕಾಣಿಸಿಕೊಳ್ಳುವ ಅನೇಕ ಪ್ರಖ್ಯಾತ ಪುರುಷರ ಪರಿಚಯವನ್ನು ಇಲ್ಲಿಯ ಪುಸ್ತಕಗಳಲ್ಲಿ ಮಾಡಿಕೊಡಲಾಗಿದೆ. **ಮಯೂರಶರ್ಮ** ಎಂಬುದು ಮಯೂರಶರ್ಮನನ್ನು ಕುರಿತ ಪುಟ್ಟ ಕೃತಿ. ಸುಮಾರು ಕ್ರಿ. ಶ. 280ರಲ್ಲಿ ಪಲ್ಲವ ಶಿವಸ್ಕಂದನನ್ನು ಸೋಲಿಸಿ ಕದಂಬವಂಶವನ್ನು ಸ್ಥಾಪಿಸಿದವನು ಮಯೂರ ಶರ್ಮ. ಬನವಾಸಿ ಕದಂಬರ ರಾಜಧಾನಿಯಾಗಿತ್ತು. ಕದಂಬವಂಶದಲ್ಲಿ ಪ್ರಖ್ಯಾತನಾದ ಅರಸು ಮಯೂರಶರ್ಮ. ರಾಜನ ಆಸ್ಥಾನ. ಆಡಳಿತ. ಅವನ ಕಾಲದ ಸಾಂಸ್ಕೃತಿಕ ಉನ್ನತಿ – ಇವುಗಳಿಗೆ ವಿಶೇಷ ಮಹತ್ವ ಕೊಟ್ಟು ಈ ಪುಸ್ತಕದಲ್ಲಿ ವರ್ಣಿಸಲಾಗಿದೆ. ಜೊತೆಗೆ ಬನವಾಸಿಯ ವರ್ಣನೆ. ಕದಂಬವಂಶದ ಸ್ಥೂಲ ಪರಿಚಯಗಳೂ ಇಲ್ಲಿವೆ. **ಪುಲಿಕೇಶಿ** ಎಂಬುದು 2ನೇ ಪುಲಿಕೇಶಿಯನ್ನು ಪರಿಚಯ ಮಾಡಿಕೊಡುವ ಪುಸ್ತಕ. ಕದಂಬರಾದ ಮೇಲೆ ಬಂದವರು ಚಾಲುಕ್ಯರು. 6–7ನೇ ಶತಮಾನದಲ್ಲಿ ಆಗಿಹೋದ ಬಾದಾಮಿ ಚಾಲುಕ್ಯರಲ್ಲಿ ಪ್ರಸಿದ್ಧನಾಗಿ ಮೆರೆದವನು 2ನೇ ಪುಲಿಕೇಶಿ. ಇವನು ಉತ್ತರಾ ಪಥೇಶ್ವರನಾದ ಹರ್ಷನನ್ನು ಸೋಲಿಸಿ ಸಮಸ್ತ ಭಾರತವನ್ನೂ ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದನು. ಪರದೇಶದ ರಾಯಭಾರಿಗಳು ಈತನಿಗೆ ಕಪ್ಪ–ಕಾಣಿಕೆಗಳನ್ನರ್ಪಿಸುತ್ತಿ ದ್ದರು. ಹುಯೆನ್‌ತ್ಸಾಂಗ್ ಎಂಬ ಚೀನಾ ಪ್ರವಾಸಿ ಈತನನ್ನು ವಿಶೇಷವಾಗಿ ಹೊಗಳಿ ದ್ದಾನೆ. ಚಾಲುಕ್ಯರಾದ ಮೇಲೆ ಬಂದವರು ರಾಷ್ಟ್ರಕೂಟರು. ನೃಪತುಂಗ ಇವರಲ್ಲಿ ಪ್ರಸಿದ್ಧನಾದವನು. ನೃಪತುಂಗನ ಸಾಹಸಮಯ ಜೀವನವನ್ನು ಕುರಿತು **ನೃಪತುಂಗ** ಎಂಬ ಪುಸ್ತಕದಲ್ಲಿ ವರ್ಣಿಸಲಾಗಿದೆ. ಸುಮಾರು ಒಂದು ಸಾವಿರದ ನೂರು ವರ್ಷಗಳ ಹಿಂದೆ ಗಂಗ, ಚಾಳುಕ್ಯ, ಪಲ್ಲವರ ದಾಳಿಗಳನ್ನು ಸತತವಾಗಿ ಎದುರಿಸಿ ಕರ್ಣಾಟಕವನ್ನು ರಕ್ಷಿಸಿ; ಬಲಿಷ್ಠಗೊಳಿಸಿದವನು ಈತ. ಸುಲೇಮಾನ್ ಎಂಬ ಅರಬ್ಬೀ ವ್ಯಾಪಾರಿ ಇವ ನನ್ನು ವಿಶೇಷವಾಗಿ ಹೊಗಳಿದ್ದಾನೆ. ನೃಪತುಂಗನ ಸಾಹಸ. ನ್ಯಾಯನಿಷ್ಠೆ. ಪ್ರಜಾಪ್ರೇಮ ಗಳನ್ನು ಕುರಿತು ಲೇಖಕರು ಸರಳವಾದ, ಅಚ್ಚುಕಟ್ಟಾದ ನಿರೂಪಣೆಯನ್ನೊದಗಿಸಿದ್ದಾರೆ. ರಾಷ್ಟ್ರಕೂಟರ ಆಳ್ವಿಕೆ ಮುಗಿದ 4–5 ಶತಮಾನಗಳ ಅನಂತರ ಅಸ್ತಿತ್ವಕ್ಕೆ ಬಂದ ವಿಜಯ ನಗರ ಸಾಮ್ರಾಜ್ಯದ ಅರಸರಲ್ಲಿ ಪ್ರಖ್ಯಾತನಾದವನು ಕೃಷ್ಣದೇವರಾಯ. **ಶ್ರೀ ಕೃಷ್ಣ ದೇವರಾಯ** ಎಂಬ ಪುಸ್ತಕ ಈತನನ್ನು ಕುರಿತದ್ದು. ವಿಜಯನಗರ ಸಾಮ್ರಾಜ್ಯ ಘನತೆಯ ತುತ್ತತುದಿಗೆ ಏರಿದುದು ಕೃಷ್ಣದೇವರಾಯನ ಕಾಲದಲ್ಲಿ. ವ್ಯಾಸತೀರ್ಥರಂತಹ

ಗುರುಗಳೂ ತಿಮ್ಮರಸುವಿನಂತಹ ಪ್ರಧಾನಿಯೂ ಕೃಷ್ಣದೇವರಾಯನಿಗೆ ದೊರೆತದ್ದು ಒಂದು ವಿಶೇಷವೆನ್ನಬಹುದು. ಕೃಷ್ಣದೇವರಾಯನ ಸಾಹಸ ವೈಭವಗಳ ಪರಿಚಯವನ್ನು ಅ. ನ. ಕೃ. ಅವರು ತುಂಬ ಸುಂದರವಾಗಿ ನಿರೂಪಿಸಿದ್ದಾರೆ.

ಕೃಷ್ಣದೇವರಾಯನ ಕಾಲವಾದ ನಂತರ ವಿಜಯನಗರ ಸಾಮ್ರಾಜ್ಯ ಇಳಿಮುಖ ವಾಯಿತು. ವಿಜಯನಗರದ ಮಾಂಡಲಿಕ ಅರಸರು ಪ್ರಬಲರಾಗಿ ಸ್ವತಂತ್ರರೆಂಬಂತೆ ವರ್ತಿಸಲು ಪ್ರಾರಂಭಿಸಿದರು. ಇಕ್ಕೇರಿ, ಕೆಳದಿ, ಸೋದೆ, ಬೀಳಗಿ ಹಾಗೂ ದಕ್ಷಿಣಕನ್ನಡದ ಅರಸರು ಪಾಳೆಯಗಾರರಲ್ಲಿ ಅಂತಃಕಲಹ ಪ್ರಾರಂಭವಾಯಿತು. ಆದರೆ ಈ ಕಾಲದ ಲ್ಲಿಯೇ ವಿಜಯನಗರದ ಅರಸರಲ್ಲಿ ನಿಷ್ಠೆಯಿಟ್ಟು, ರಾಜ್ಯವಾಳಿದ ಕೆಂಪೇಗೌಡನಂತಹ ಅರಸರು ಇದ್ದರು. **ಕೆಂಪೇಗೌಡ** ಎಂಬುದು ಈತನನ್ನು ಕುರಿತ ಪುಸ್ತಕ. ಕೆಂಪೇಗೌಡನ ವಂಶಜರು ಮೊದಲು ತಮಿಳುನಾಡಿಗೆ ಸೇರಿದವರಾಗಿದ್ದರೂ ಮುಂದೆ ಕರ್ಣಾಟಕಕ್ಕೆ ಬಂದು ಬೆಂಗಳೂರಿನ ಸುತ್ತಮುತ್ತಲಿನ ಪ್ರದೇಶವನ್ನು ಆಳಿದರು. ಕೆಂಪೇಗೌಡನಿಗೆ ವಿಜಯ ನಗರದ ಅರಸರ ಬಗೆಗೆ ಇದ್ದ ನಿಷ್ಠೆ, ಆತನ ಪ್ರಜಾಪ್ರೇಮ – ಇವುಗಳಿಗೆ ಒತ್ತುಕೊಟ್ಟು ಲೇಖಕರು ಕೆಂಪೇಗೌಡನ ಪರಿಚಯವನ್ನು ಸರಳವಾದ ಭಾಷೆಯೊಂದಿಗೆ ಮಾಡಿಕೊಡು ತ್ತಾರೆ. **ಕೆಳದಿಯ ಚೆನ್ನಮ್ಮಾಜಿ** ಎಂಬ ಕೃತಿ ಕೆಳದಿಯನ್ನಾಳಿದ, ಸೋಮಶೇಖರನ ಪತಿ ಚೆನ್ನಮ್ಮಾಜಿಯನ್ನು ಕುರಿತದ್ದು. ಇವಳು ಕನ್ನಡಿಗರಿಗೆ ವಿಶೇಷ ಪರಿಚಿತಳಾದ ಸ್ತ್ರೀ. ಮೈಸೂರಿನ ಸೈನ್ಯವನ್ನು ಈಕೆ ಎರಡು ಬಾರಿ ಸೋಲಿಸಿದಳು. ಬೀಳಗಿ, ಸೋದೆಯ ರಾಜ ರನ್ನು ಸೋಲಿಸಿದಳು. ಕೆಳದಿಯ ಲಿಂಗಣ್ಣಕವಿ ಈಕೆಯನ್ನು ಕುರಿತು ವಿಶೇಷವಾಗಿ ಹೊಗಳಿದ್ದಾನೆ. ಲಿಂಗಣ್ಣಕವಿಯ ಪದ್ಯಗಳನ್ನು ಲೇಖಕರು ಉದ್ಧರಿಸಿಕೊಟ್ಟಿದ್ದಾರೆ. ಅವು ಗಳಿಗೆ ಗದ್ಯಾನುವಾದವನ್ನೂ ಕೊಟ್ಟಿದ್ದರೆ ಉತ್ತಮವಾಗಿರುತ್ತಿತ್ತು. **ಅಬ್ಬಕ್ಕ** ಎಂಬ ಪುಸ್ತಕ ಅಬ್ಬಕ್ಕನ ಪರಿಚಯವನ್ನು ಸರಳವಾದ ಭಾಷೆಯಲ್ಲಿ ಮಾಡಿಕೊಡುತ್ತದೆ. ಸುಮಾರು ಮುನ್ನೂರು ವರ್ಷಗಳ ಹಿಂದೆ ಮಂಗಳೂರಿನ ಪಕ್ಕದ ಉಳ್ಳಾಲವನ್ನು ಆಳುತ್ತಿದ್ದ ರಾಣಿ ಅಬ್ಬಕ್ಕ. ಪೋರ್ತುಗೀಜರನ್ನು ಸೋಲಿಸಿ, ಅವರ ಪ್ರಭಾವವನ್ನು ತಗ್ಗಿಸಿದ ಆಕೆಯ ಸಾಹಸವನ್ನು ಇಟಲಿಯ ಪ್ರವಾಸಿ ಪಿತ್ರೋ ಡಲ್ಲೆವಲ್ಲೆ ಎಂಬಾತ ವರ್ಣಿಸಿದ್ದಾನೆ. **ವೀರ ವನಿತೆ ಓಬವ್ವ**ದಲ್ಲಿ ಓಬವ್ವನ ಸಾಹಸವನ್ನು ಬಣ್ಣಿಸಲಾಗಿದೆ. ಚಿತ್ರದುರ್ಗದ ಪಾಳೆಯ ಗಾರನಾದ ಮದಕರಿನಾಯಕನ ಕಾಲದಲ್ಲಿ ಹೈದರಾಲಿಯಿಂದ ದಾಳಿಯಾದಾಗ ಚಿತ್ರದುರ್ಗ ವನ್ನು ರಕ್ಷಿಸಿದ ಕೀರ್ತಿ ಓಬವ್ವೆಯದು. ಹೈದರನ ಸೈನಿಕರು ಚಿತ್ರದುರ್ಗದ ಕೋಟೆಯನ್ನು ಪ್ರವೇಶಿಸಲು ಪ್ರಯತ್ನಿಸಿದಾಗ ಓಬವ್ವೆ ಒನಕೆಯಿಂದ ಅವರ ತಲೆಗಳನ್ನೊಡೆದು ಕೋಟೆ ಯನ್ನು ರಕ್ಷಿಸುತ್ತಾಳೆ. 'ಒನಕೆಯ ಓಬವ್ವೆ' ಎಂಬುದು ಆಕೆಗೆ ಬಂದ ಸಾರ್ಥಕವಾದ ಬಿರುದು. **ವೀರಭದ್ರನಾಯಕ** ಬಿದನೂರನ್ನು ಆಳಿದ ವೀರಭದ್ರನಾಯಕನ ಪರಿಚಯ ಮಾಡಿಕೊಡಲು ಪ್ರಯತ್ನಿಸಿದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕೆಳದಿ ಯನ್ನು ಆಳುತ್ತಿದ್ದ ವೀರಭದ್ರ ನಾಯಕನು ಕೆಳದಿಯಿಂದ ಇಕ್ಕೇರಿಗೆ, ಇಕ್ಕೇರಿಯಿಂದ ಬಿದ ನೂರಿಗೆ ತನ್ನ ರಾಜಧಾನಿಯನ್ನು ಬದಲಾಯಿಸಿದನು. ನೆರೆಯ ಸೋದೆ, ಬೀಳಗಿ, ತರೀಕೆರೆಯ ರಾಜರನ್ನು ಸೋಲಿಸಿ, ಅವರನ್ನು ತನ್ನ ಅಂಕಿತದಲ್ಲಿಟ್ಟುಕೊಂಡಿದ್ದನು.

ಬಿದನೂರಿನ ಅರಸರಲ್ಲಿ ಪ್ರಖ್ಯಾತನಾದವನು ವೀರಭದ್ರನಾಯಕ. ಸರಳವಾದ ಭಾಷೆಯೊಂದಿಗೆ ಈತನ ಪರಿಚಯವನ್ನು ಲೇಖಕರು ಮಾಡಿಕೊಡುತ್ತಾರೆ. **ರಣಕಲಿ ಹೈದರಾಲಿ** ಎಂಬುದು ಕ್ರಿ. ಶ. 1761 ರಿಂದ 21 ವರ್ಷಗಳ ಕಾಲ ಮೈಸೂರನ್ನು ಆಳಿದ ಹೈದರಾಲಿಯನ್ನು ಕುರಿತ ಪುಸ್ತಕ. ಮೊದಲು ಒಬ್ಬ ಸಾಮಾನ್ಯ ಜಹಗೀರದಾರನಾಗಿದ್ದು ಸ್ವಂತ ಪರಾಕ್ರಮದಿಂದ ಮುಂದೆ ಮೈಸೂರಿನ ಸರ್ವಾಧಿಕಾರಿಯಾಗಿ ಮೆರೆದವನು ಹೈದರಾಲಿ. ಮೊದಲೊದಲು ಇಂಗ್ಲಿಷರನ್ನು ಎದುರಿಸಿ ಜಯವನ್ನು ಪಡೆದರೂ ಅನಂತರ ಮರಾಠರ ಪೇಶ್ವೆಯವರಿಂದ, ಇಂಗ್ಲಿಷರಿಂದ ಸೋಲನ್ನನುಭವಿಸಬೇಕಾಯಿತು. ಹೈದರನಿಗೂ ಇಂಗ್ಲಿಷರಿಗೂ ನಡೆದ ಯುದ್ಧಗಳು ಮೈಸೂರು ಯುದ್ಧಗಳೆಂದು ಪ್ರಸಿದ್ಧವಾಗಿವೆ. ಹೈದರನ ಮಗನಾದ ಟೀಪು 'ಮೈಸೂರಿನ ಹುಲಿ' ಎಂದು ಪ್ರಸಿದ್ಧನಾದವನು. ಇವನ ಕಾಲದಲ್ಲಿ ಮೈಸೂರು ಇನ್ನೂ ಬಲಿಷ್ಠವಾದ ರಾಜ್ಯವಾಗಿ ಮೆರೆಯಿತು. ಆದರೆ 3–4ನೇ ಮೈಸೂರು ಯುದ್ಧಗಳಲ್ಲಿ ಈತನೇ ಬ್ರಿಟಿಶರಿಂದ ಸೋಲನ್ನನುಭವಿಸಿ ಜ॥ ಹ್ಯಾರಿಸನಿಂದ ಮರಣಹೊಂದಿದನು. ಟೀಪುವಿನ ಜೀವನ ಚರಿತ್ರೆಯನ್ನು ಹಸನ್ ಅವರು ತಮ್ಮ **ಟೀಪು ಸುಲ್ತಾನ್** ಎಂಬ ಪುಸ್ತಕದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ.

ವಿಜಯನಗರದ ಕಾಲವಾದ ನಂತರ ಆ ಸಾಮ್ರಾಜ್ಯದ ಅನೇಕ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದವರು ಮೈಸೂರಿನ ಅರಸರು. '**ರಣಧೀರ**', '**ಶ್ರೀಕೃಷ್ಣರಾಜ ಒಡೆಯರು**', '**ಯುವರಾಜರು**' ಎಂಬ ಪುಸ್ತಕಗಳು ಮೈಸೂರಿನ ಒಡೆಯರ ಮನೆತನದಲ್ಲಿ ಆಗಿಹೋದ ಕೆಲವು ಪ್ರಸಿದ್ಧ ವ್ಯಕ್ತಿಗಳ ಪರಿಚಯವನ್ನು ಮಾಡಿಕೊಡುತ್ತವೆ. 'ರಣಧೀರ' ಎಂಬುದು ಸು. ಮುನ್ನೂರು ವರ್ಷಗಳ ಕೆಳಗೆ ಮೈಸೂರನ್ನು ಆಳಿದ ಕಂಠೀರವ ನರಸರಾಜ ಒಡೆಯರಿಗಿದ್ದ ಬಿರುದು, ಬಂಗಾರದೊಡ್ಡಿ ಕಾಲುವೆಯ ನಿರ್ಮಾಣ ಹಾಗೂ ಮೈಸೂರಿನಲ್ಲಿ ಟಂಕಸಾಲೆಯ ಸ್ಥಾಪನೆ – ಇವೆರಡು ಇವರ ಕಾರ್ಯಗಳಲ್ಲಿ ಹೆಸರಿಸತಕ್ಕವು. ಶ್ರೀರಂಗಪಟ್ಟಣದ ಗೋವಿಂದವೈದ್ಯನು ಬರೆದ 'ಕಂಠೀರವ ನರಸರಾಜ ವಿಜಯ' ಎಂಬ ಕೃತಿ ಇವರ ಕಾಲದ ಮೈಸೂರನ್ನು ಉತ್ತಮವಾಗಿ ಬಣ್ಣಿಸುತ್ತದೆ. ಕೃಷ್ಣರಾಜ ಒಡೆಯರು ಚಾಮರಾಜ ಒಡೆಯರ ಪುತ್ರರು. ಇವರ ಕಾಲದಲ್ಲಿ ಮೈಸೂರು ವಿಶೇಷ ಪ್ರಗತಿ ಹೊಂದಿತು. ವಿಶ್ವೇಶ್ವರಯ್ಯನವರು, ಇಸ್ಮಾಯಿಲರಂಥವರು ದಿವಾನರಾಗಿ ಸೇವೆ ಸಲ್ಲಿಸಿದರು. ಅದರ ಫಲವಾಗಿ ಮೈಸೂರಿನಲ್ಲಿ ಕನ್ನಂಬಾಡಿ ಅಣೆಕಟ್ಟು, ಭದ್ರಾವತಿಯಲ್ಲಿ ಕಬ್ಬಿಣದ ಕಾರ್ಖಾನೆ, ಬೆಂಗಳೂರಿನಲ್ಲಿ 'ತಾತಾ ವಿಜ್ಞಾನ ಮಂದಿರ', 'ಕೃಷ್ಣರಾಜೇಂದ್ರ ಟೆಕ್ನಿಕಲ್ ಇನಿಸ್ಟಿಟ್ಯೂಟ್' ಮೊದಲಾದವು ನಿರ್ಮಾಣವಾದವು. ಮೈಸೂರು ಔದ್ಯೋಗಿಕ ಕ್ರಾಂತಿಯನ್ನೆದುರಿಸಿತು. 'ಯುವರಾಜ'ರಾದ ನರಸಿಂಹರಾಜ ಒಡೆಯರು ಕೃಷ್ಣರಾಜ ಒಡೆಯರ ಸಹೋದರರು. ಯುವರಾಜರ ವಿದ್ಯಾಸಕ್ತಿ, ಕ್ರೀಡೆ ಸಂಗೀತ – ನಾಟಕ ಮೊದಲಾದವುಗಳಲ್ಲಿಯ ಆಸಕ್ತಿ ಇವುಗಳ ಕುರಿತಾದ ಸರಳವಾದ ವಿವರಣೆಯನ್ನು **ಯುವರಾಜರು** ಎಂಬ ಪುಸ್ತಕದಲ್ಲಿ ಕೊಡಲಾಗಿದೆ.

'**ಆದಿಲ್‌ಶಾಹಿ ರಾಜವಂಶ**', '**ಚಿತ್ರದುರ್ಗ ಪಾಳೆಯಗಾರರು**', '**ಬಾದಾಮಿಯ ಚಾಲುಕ್ಯರು**' ಹಾಗೂ '**ವಿಜಯನಗರದ ಸಂಗಮರು**' – ಇವು ಕರ್ನಾಟಕದಲ್ಲಿ

ಆಗಿಹೋದ ನಾಲ್ಕು ರಾಜಮನೆತನಗಳು. ಕ್ರಿ. ಶ. 1489ರಿಂದ ಇನ್ನೂರು ವರ್ಷಗಳ ಕಾಲ, ಮಧ್ಯೆ ಮಧ್ಯೆ ಏಳುಬೀಳುಗಳನ್ನು ಅನುಭವಿಸಿದರೂ, ನಿರಂತರವಾಗಿ ಉತ್ತರ ಕರ್ಣಾಟಕವನ್ನು ಆಳಿದ ರಾಜಮನೆತನ ಆದಿಲ್‌ಷಾಹಿ ವಂಶ. ಈ ವಂಶದಲ್ಲಿ ಒಟ್ಟು ಒಂಬತ್ತು ಜನ ರಾಜರು ರಾಜ್ಯಭಾರ ನಡೆಸಿದರು. ಮೊದಲನೆಯವನು ಯೂಸುಫ್ ಅದಿಲ್ ಖಾನ್. ಇವನು ತುರ್ಕಸ್ತಾನದ ಕಾನ್‌ಸ್ಟ್ಯಾಂಟಿನೋಪಲ್‌ನಿಂದ ತಲೆಮರೆಸಿಕೊಂಡು ಬಂದವನು. ವಿಜಾಪುರದಲ್ಲಿ ಬಹಮನಿ ಸುಲ್ತಾನನ ಜಹಗೀರದಾರನಾಗಿ, ಕ್ರಮೇಣ ಸ್ವತಂತ್ರರಾಜನಾದನು. ಆದಿಲ್‌ಷಾಹಿ ಮನೆತನದ ಕೊನೆಯ ಕುಡಿ ಸಿಕಂದರ್ ಆದಿಲ್ ಷಾಹ್. ಆದಿಲ್‌ಷಾಹಿ ಮನೆತನದ ರಾಜರಲ್ಲಿ ಇಬ್ರಾಹಿಂ ಆದಿಲ್‌ಷಾಹ್ ಹಾಗೂ ಮಹಮ್ಮದ್ ಆದಿಲ್‌ಷಾಹ್ -- ಇವರಿಬ್ಬರು ಪ್ರಖ್ಯಾತರಾದವರು. ಗೋಲಗುಮ್ಮಟ ನಿರ್ಮಾಣವಾದದ್ದು ಮಹಮ್ಮದ್ ಆದಿಲ್‌ಷಾಹನ ಕಾಲದಲ್ಲಿ. ಆದಿಲ್‌ಷಾಹಿ ಮನೆತನ ಮೊದಲಿನಿಂದಲೂ ವಿಜಯನಗರದವರೊಡನೆ, ಮರಾಠರೊಡನೆ, ಮೊಘಲರೊಡನೆ ಸೆಣಸಾಡುತ್ತಲೇ ಇತ್ತು. ಸಿಕಂದರನ ಕಾಲದಲ್ಲಿ ಔರಂಗಜೇಬನಿಂದ ಈ ಮನೆತನ ಕೊನೆಗೊಂಡಿತು.

ಚಿತ್ರದುರ್ಗವನ್ನು ಅನೇಕ ನಾಯಕ–ಪಾಳೆಯಗಾರರು ಆಳಿದ್ದಾರೆ. ಅವರಲ್ಲಿ ಕಾಮಗೇಟಿ ಕಸ್ತೂರಿ ಎಂಬ ಬೇಡಜಾತಿಯ ಪಾಳೆಯಗಾರರು ಪ್ರಸಿದ್ಧರು. ತಿಮ್ಮಣ್ಣ ನಾಯಕ ಇವರಲ್ಲಿ ಮೊದಲಿಗ, ವಿಜಯನಗರದ ಅರಸರನ್ನು ತನ್ನ ಪರಾಕ್ರಮದಿಂದ ಮೆಚ್ಚಿಸಿ ಪಾಳೆಯಗಾರಿಕೆಯ ಪಟ್ಟವನ್ನು ಪಡೆದ. ಅವನ ನಂತರ ಒಂದು ಶತಮಾನದ ತರುವಾಯ ಮದಕರಿ ನಾಯಕರು ಪಟ್ಟಕ್ಕೆ ಬಂದರು. ಓಬಣ್ಣ, ಚಿಕ್ಕಣ್ಣ ಮೊದಲಾದ ಅನೇಕರು ಪಾಳೆಯಗಾರರಾಗಿ ಆಳಿದರು. ದೊಣ್ಣೆ ರಂಗಪ್ಪನಾಯಕನೊಂದಿಗೆ ತಿಮ್ಮಣ್ಣ ನಾಯಕನ ವಂಶದ ಆಡಳಿತ ಕೊನೆಗೊಂಡಿತು. ಆಮೇಲೆ ಹಿರಿಯ ಮದಕರಿ ನಾಯಕ, ಭರಮಪ್ಪ ನಾಯಕ, ಮದಕರಿ ನಾಯಕ ಮೊದಲಾದವರು ಆಗಿಹೋದರು. ಚಿತ್ರದುರ್ಗದ ಪಾಳೆಯಗಾರರಲ್ಲಿ ಮದಕರಿ ನಾಯಕನು ಅತ್ಯಂತ ಶೂರನಾಗಿದ್ದನು. ಪೇಶ್ವೆ, ಹೈದರಾಲಿಯರು ಅತನ ಸ್ನೇಹವನ್ನು ಬಯಸಿದ್ದರು. ಆದರೆ ಕೊನೆಗೆ ಹೈದರಾಲಿಗೇ ಆತ ಸೆರೆಯಾಗಬೇಕಾಯಿತು. ಕ್ರಿ. ಶ. 1779ರಲ್ಲಿ ಚಿತ್ರದುರ್ಗವೂ ಪಾಳೆಯಗಾರರ ಸಂಪತ್ತೂ ಹೈದರನಿಗೆ ವಶವಾದವು. ತಿಮ್ಮಣ್ಣನಾಯಕನಿಂದ ಪ್ರಾರಂಭವಾಗಿ ಮದಕರಿ ನಾಯಕನ ವರೆಗಿನ ಪಾಳೆಯಗಾರರ ಚರಿತ್ರೆಯನ್ನು **ಚಿತ್ರದುರ್ಗದ ಪಾಳೆಯಗಾರರು** ಎಂಬ ಪುಸ್ತಕದಲ್ಲಿ ವರ್ಣಿಸಿದೆ.

ಕರ್ಣಾಟಕದಲ್ಲಿ ಕದಂಬ ಮನೆತನದವರು ಆಳಿದ ನಂತರ ಬಂದವರು ಬಾದಾಮಿ ಚಾಲುಕ್ಯರು. ಕದಂಬ ವಿಷ್ಣುಶರ್ಮ (ಕೃಷ್ಣವರ್ಮ)ನೊಂದಿಗೆ ಕದಂಬ ವಂಶ ಮುಗಿಯಿತು. ಚಾಲುಕ್ಯ ಜಯಸಿಂಹನಿಂದ ಚಾಲುಕ್ಯರ ರಾಜ್ಯಭಾರ ಪ್ರಾರಂಭವಾಯಿತು. ಆದರೆ ಈತ ಮಾಂಡಲಿಕ ಅರಸು. 1ನೇ ಪುಲಿಕೇಶಿಯಿಂದ ಚಾಲುಕ್ಯರ ಸ್ವತಂತ್ರ ಆಡಳಿತ ಪ್ರಾರಂಭ. 2ನೇ ಪುಲಿಕೇಶಿಯ ಕಾಲಕ್ಕೆ ಚಾಲುಕ್ಯವಂಶ ಘನತೆಗೇರಿತು. ಇಡೀ ಭಾರತ ಇವನ ಆಡಳಿತಕ್ಕೆ ಒಳಪಟ್ಟಿತು. ಪರದೇಶಗಳೊಡನೆ ವ್ಯಾಪಾರ ನಡೆಯಿತು. ಇವನ

ನಂತರ ಈ ವಂಶದ ಇಳಿಗಾಲ ಪ್ರಾರಂಭವಾಯಿತು. ಆದರೆ 2ನೇ ವಿಕ್ರಮಾದಿತ್ಯನ ಕಾಲಕ್ಕೆ ಮತ್ತೆ ಚಾಲುಕ್ಯರು ಪ್ರಸಿದ್ಧರಾದರು. ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಚಾಲುಕ್ಯ ವಂಶ ಕೊನೆಗೊಂಡು ರಾಷ್ಟ್ರಕೂಟರು ಪಟ್ಟಕ್ಕೆ ಬಂದರು. ಹೀಗೆ ಚಾಲುಕ್ಯರು ಕ್ರಿ. ಶ. 500ರಿಂದ ಸುಮಾರು 250 ವರ್ಷಗಳ ಕಾಲ ರಾಜ್ಯಭಾರ ಮಾಡಿದರು. ಇವರ ಸೈನ್ಯ 'ಕರ್ಣಾಟ ಬಲ' ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಕರ್ಣಾಟಕದ ವಾಸ್ತು ಶಿಲ್ಪಕ್ಕೆ ಚಾಲುಕ್ಯರು ನಾಂದಿಯನ್ನು ಹಾಡಿದರು. ಐಹೊಳೆ, ಪಟ್ಟದಕಲ್ಲು, ಬಾದಾಮಿ ಗಳಲ್ಲಿಯ ಶಿಲ್ಪ–ಕಲೆಗಳು ಅತ್ಯಂತ ಪ್ರಸಿದ್ಧವಾಗಿವೆ. **ಬಾದಾಮಿಯ ಚಾಲುಕ್ಯರು** ಎಂಬ ಪುಸ್ತಕದಲ್ಲಿ ಚಾಲುಕ್ಯವಂಶದ ಇತಿಹಾಸವನ್ನು ಹೇಳಲಾಗಿದೆ. ಲೇಖಕರು ಈ ಪುಸ್ತಕದಲ್ಲಿ ಸಂಶೋಧನಾತ್ಮಕ ದೃಷ್ಟಿಗೆ ವಿಶೇಷ ಗಮನಕೊಟ್ಟು ವಿವರಣೆಗೆ ತೊಡಗಿದ್ದ ರಿಂದ ಅವರ ನಿರೂಪಣೆ ಜಟಿಲವಾಗಿದೆ. ಮಕ್ಕಳಿಗೆ ಇಂತಹ ನಿರೂಪಣೆಗಳು ಬೇಸರ ತರುತ್ತವೆ.

**ವಿಜಯನಗರದ ಸಂಗಮರು** ಎಂಬ ಪುಸ್ತಕದಲ್ಲಿ ವಿಜಯನಗರ ಸಾಮ್ರಾಜ್ಯ ವನ್ನು ಸ್ಥಾಪಿಸಿದ **ಹರಿಹರ**ನಿಂದ ಪ್ರಾರಂಭವಾದ ಸಂಗಮ ರಾಜಮನೆತನದ ಇತಿಹಾಸ ವನ್ನು ಕೊಡಲಾಗಿದೆ. ವೀರ ಬಲ್ಲಾಳನಿಂದ ಹೊಯ್ಸಳರ ಕೊನೆಯಾದ ನಂತರ ಮುಸ ಲ್ಮಾನರ ದಾಳಿಯಿಂದ ಕರ್ಣಾಟಕವನ್ನು ರಕ್ಷಿಸಲು ಹರಿಹರ ಬುಕ್ಕರು ವಿದ್ಯಾರಣ್ಯರ ನೆರವಿನಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು (1336). ಹಂಪೆ ಅವರ ರಾಜಧಾನಿಯಾಗಿತ್ತು. ಸಂಗಮವಂಶದ ಪ್ರೌಢ ದೇವರಾಯನ ಕಾಲದಲ್ಲಿ ವಿಜಯನಗರ ಬಲಿಷ್ಠವಾದ ಸಾಮ್ರಾಜ್ಯವಾಯಿತು. ಸುಖ–ಸಂಪತ್ತಿನಿಂದ ಕೂಡಿತು. ಕೊಂಟೆ, ರಜಾಕ್ ಮುಂತಾದ ಪ್ರವಾಸಿಗರು ಆಗಿನ ಕಾಲದ ವಿಜಯನಗರದ ವೈಭವವನ್ನು ಬಣ್ಣಿಸಿದ್ದಾರೆ. ಮುಂದೆ ಮಲ್ಲಿಕಾರ್ಜುನನಿಂದ ಸಂಗಮ ವಂಶಕ್ಕೆ ಇಳಿಗಾಲ ಮೊದಲಾಯಿತು. ವಿರೂ ಪಾಕ್ಷನ ಕಾಲಕ್ಕೆ ಈ ವಂಶ ಮುಕ್ತಾಯಗೊಂಡಿತು. ಮುಸಲ್ಮಾನರು ಮತ್ತೆ ಪ್ರಬಲ ರಾದರು. ಇವರ ದಾಳಿಯನ್ನು ತಪ್ಪಿಸಲು ಸಾಳುವವಂಶದ ಅರಸರು ಪಟ್ಟಕ್ಕೆ ಬಂದರು. ಹರಿಹರನಿಂದ ಪ್ರಾರಂಭವಾದ ಈ ವಂಶ ಸುಮಾರು ನೂರೈವತ್ತು ವರ್ಷಗಳ ಕಾಲ ದಕ್ಷಿಣ ಭಾರತವನ್ನು ಮುಸಲ್ಮಾನರ ದಾಳಿಯಿಂದ ಕಾಪಾಡಿತು.

## ಇತಿಹಾಸ

ಡಾ॥ ಸುಂದರ್ ಅವರು ತಮ್ಮ **ಕರ್ಣಾಟಕದ ಪ್ರಾಗಿತಿಹಾಸ**ವೆಂಬ ಪುಸ್ತಕದಲ್ಲಿ ಕರ್ಣಾಟಕದ ವಿವಿಧ ಭಾಗಗಳಲ್ಲಿ ಸಿಗುವ ಐತಿಹಾಸಿಕ ಅವಶೇಷಗಳ ಸಹಾಯದಿಂದ ಇಲ್ಲಿ ಬಾಳಿದ ಪ್ರಾಗೈತಿಹಾಸಿಕ ಮಾನವ ಜನಾಂಗದ ಪರಿಚಯವನ್ನು ಮಾಡಿಕೊಡಲು ಪ್ರಯ ತ್ನಿಸಿದ್ದಾರೆ. ಇತಿಹಾಸಕಾಲಕ್ಕಿಂತ ಬಹು ಮುಂಚೆಯೆ ಮಾನವನು ಬದುಕಿದ ಕುರುಹು ಗಳು ಜಗತ್ತಿನ ಇತರೆಡೆಗಳಲ್ಲಿಯಂತೆಯೆ ಕರ್ಣಾಟಕದಲ್ಲಿಯೂ ದೊರೆತಿವೆ. ಇಲ್ಲಿಯ ವರೆಗಿನ ಸಂಶೋಧನೆಗಳಿಂದ ಕರ್ಣಾಟಕದಲ್ಲಿ ಮೊದಲಿನಿಂದಲೂ ಏನಡು ಜನಾಂಗಗಳು ವಾಸಿಸಿದ್ದು ಅವರಲ್ಲಿ ಒಂದು ಜನಾಂಗದವರು ಇಲ್ಲಿಯ ಮೂಲನಿವಾಸಿಗಳು ಹಾಗೂ

ಇನ್ನೊಂದು ಜನಾಂಗದವರು ಬೇರೆ ಪ್ರದೇಶದಿಂದ ಇಲ್ಲಿಗೆ ವಲಸೆ ಬಂದವರೆಂಬುದು ಖಚಿತವಾಗಿದೆ.

ಆದಿ ಶಿಲಾಯುಗ, ಮಧ್ಯ ಶಿಲಾಯುಗ, ಅಂತ್ಯಶಿಲಾಯುಗ, ತಾಮ್ರಯುಗ, ಕಬ್ಬಿಣದ ಯುಗ ಮುಂತಾದ ಯುಗಗಳು ಆದಿಮಾನವನ ಬೆಳವಣಿಗೆಯನ್ನು ಘಟ್ಟ ಘಟ್ಟವಾಗಿ ಚಿತ್ರಿಸುತ್ತವೆ. ಈ ಘಟ್ಟಗಳಲ್ಲಿ ಮಾನವನು ಉಪಯೋಗಿಸಿದ ಅನೇಕ ಸಾಮಗ್ರಿಗಳು ಕರ್ಣಾಟಕದಲ್ಲಿ ದೊರೆತಿವೆ. ಬೆಂಗಳೂರು, ನಿಟ್ಟೂರು, ಸಂಗನಕಲ್ಲು ಮೊದಲಾದ ಕಡೆಗಳಲ್ಲಿ ಆದಿಮಾನವನು ಉಪಯೋಗಿಸಿದ ಗಡಿಗೆ ಮಡಕೆಗಳು, ಆಯುಧಗಳು, ಕೋಣೆಗಳು, ಒಕ್ಕಲುತನದ ಸಲಕರಣೆಗಳು ಮೊದಲಾದವು ದೊರೆತಿವೆ. ಹಿರೇ ಬೆನಕಲ್ ನಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ಉಪಯೋಗಿಸಲಾದ ಗವಿಗಳು ದೊರೆತಿವೆ. ಕರ್ಣಾಟಕದಲ್ಲಿ ಆಗಿಹೋದ ಆದಿಮಾನವ ಜನಾಂಗದವರಿಗೆ ಇತರ ಪ್ರದೇಶದವರೊಡನೆ ಸಂಪರ್ಕವಿದ್ದಿತೇ, ಅವರು ತಮ್ಮ ಸಾಧನೆ–ಸಲಕರಣೆಗಳನ್ನು ತಾವೇ ತಯಾರಿಸಿಕೊಂಡರೆ ಅಥವಾ ಬೇರೆಯವರಿಂದ ಅದನ್ನು ಕಲಿತರೆ ಎಂದ ವಿಷಯ ಖಚಿತವಾಗಿ ತಿಳಿದಿಲ್ಲ. ಇಲ್ಲಿಯ ಆದಿಮಾನವರಲ್ಲಿ ಬೇಟೆ, ಒಕ್ಕಲುತನ, ಪಶುಪಾಲನೆ ಮೊದಲಾದ ಉದ್ಯೋಗಿಗಳು, ಧಾರ್ಮಿಕ ಕಟ್ಟಳೆಗಳು ಕ್ರಮವಾಗಿ ಹೇಗೆ ಬೆಳೆದು ಬಂದವೆಂಬುದನ್ನು ಲೇಖಕರು ವಿಸ್ತಾರವಾಗಿ ವಿವರಿಸಿದ್ದಾರೆ. ಸರಳವಾದ ಭಾಷೆ, ಸುಂದರವಾದ ಚಿತ್ರಗಳು ಪುಸ್ತಕದ ಮೌಲ್ಯವನ್ನು ಹೆಚ್ಚಿಸಿವೆ.

## ಅನ್ಯ ಸಾಹಿತ್ಯದಿಂದ

**ಹಂಪ ನಾಗರಾಜಯ್ಯ**

ಈ ವಿಭಾಗದ ವಿಮರ್ಶೆಗೆ ಬಂದಿರುವ ಒಟ್ಟು ಗ್ರಂಥಗಳು ಹತ್ತು. ಅವುಗಳಲ್ಲಿ ಇಂಗ್ಲಿಷ್ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥ ಒಂದು ಮಾತ್ರ. ಸಂಸ್ಕೃತ ಸಾಹಿತ್ಯಕ್ಕೆ ಸೇರಿದ ಕೃತಿಗಳು ಎಂಟಿವೆ. ಉಳಿದ ಒಂದು ಹೊತ್ತಗೆ ತಮಿಳು ಸಾಹಿತ್ಯಕ್ಕೆ ಸಂಬಂಧಪಟ್ಟಿದೆ.

ಈ ಅನ್ಯಸಾಹಿತ್ಯಕ್ಕೆ ಸಂಬಂಧಿಸಿದಂತೆ ರಚಿತವಾದ ಗ್ರಂಥಗಳನ್ನು ವಿಮರ್ಶೆಯ ನಿಕಷಕ್ಕೆ ಒರೆಹಿಡಿದು ನೋಡಿದಾಗ ತೃಪ್ತಿಗಿಂತ ನಿರಾಶೆಯೇ ಅಧಿಕ. ಎಲ್ಲ ಮಾನದಂಡ ದಿಂದಲೂ ನಿಲ್ಲುವ ಗ್ರಂಥವೆಂದರೆ ಕನ್ನಡ ವಾಲ್ಮೀಕಿ ರಾಮಾಯಣ. ಇದು ಎರಡು ಬೃಹತ್ ಸಂಪುಟಗಳಲ್ಲಿದೆ. ಮೂಲ ಸಂಸ್ಕೃತ ವಾಲ್ಮೀಕಿ ರಾಮಾಯಣದ ನೇರವಾದ ಕನ್ನಡ ಅನುವಾದವಿದು. ಹೊಸಗನ್ನಡ ವಾಙ್ಮಯಕ್ಕೆ ಇದು ಗಟ್ಟಿಕೊಡುಗೆ. ಎ. ಆರ್. ಕೃಷ್ಣಶಾಸ್ತ್ರಿಗಳ ವಚನ ಭಾರತದಂತೆ ಜನಪ್ರಿಯತೆಯನ್ನು ಗಳಿಸಬಲ್ಲ ಈ ಗ್ರಂಥ ವಿದ್ವಾಂಸರಿಗೂ ಉಪಯುಕ್ತ.

ಉಳಿದ ಗ್ರಂಥಗಳಲ್ಲಿ 'ಪದ್ಮಪುರಾಣದ ಕಥೆ' ಕೂಡ ಇದೇ ಹೆದ್ದಾರಿಯನ್ನು ತುಳಿ ದಿದ್ದರೆ ಅದರ ಪ್ರಯೋಜನ ಹೆಚ್ಚುತ್ತಿತ್ತು.

'ಸಂಸ್ಕೃತ ವಾಙ್ಮಯಕ್ಕೆ ಜೈನ ಕವಿಗಳ ಕಾಣಿಕೆ' ಕೃತಿಯೂ ಇನ್ನೂ ಪರಿಷ್ಕಾರ ಗೊಳ್ಳುವುದಕ್ಕೆ ಅವಕಾಶವಿತ್ತು. ಅದರಲ್ಲಿ ಪರಿಚಯಿಸಿರುವ ಆಯಾ ಕವಿಯ ಕೃತಿಯಿಂದ ಉದಾಹರಣೆಗಾಗಿ ಆರಿಸಿಕೊಟ್ಟ ಕೆಲವಾದರೂ ಮಾದರಿ ಸಾಲುಗಳಿಲ್ಲದಿರುವುದರಿಂದ ಕವಿ–ಕೃತಿಯ ಪರಿಚಯ ಅಪೂರ್ಣವಾಗಿಯೇ ನಿಲ್ಲುತ್ತದೆ.

ಇಲ್ಲಿನ ಇನ್ನಿತರ ಗ್ರಂಥಗಳು 'ತಕ್ಕಮಟ್ಟಿಗಿವೆ' ಎಂಬ ಮಟ್ಟದಿಂದ ಮೇಲೇಳು ವುದಿಲ್ಲ.

**ಸಂಕ್ಷಿಪ್ತ ಇಂಗ್ಲಿಷ್ ಸಾಹಿತ್ಯ ಚರಿತ್ರೆ:** "ಆದಷ್ಟು ಪ್ರಯತ್ನಪಟ್ಟು ಆಂಗ್ಲ ಸಾಹಿತ್ಯದ ಪ್ರಾರಂಭದ ಕಾಲದಿಂದ ಆಧುನಿಕ ಮನ್ವಂತರದವರೆಗೆ ಇಲ್ಲಿ ಅನೇಕ ಪ್ರಚಲಿತ ಗ್ರಂಥಗಳ ಆಧಾರದಿಂದ ಬರೆಯಲು ಹೆಣಗಲಾಗಿದೆ" – ಎಂದು ಎಸ್. ರಮಾನಂದರು ಸರಿಯಾಗಿಯೇ ಹೇಳಿದ್ದಾರೆ. ಅವರ ಹೆಣಗಾಟ ಪುಸ್ತಕದ ಪುಟಪುಟದಲ್ಲೂ ಪುಟಿಯುತ್ತದೆ. ಲೇಖಕರು ತಮ್ಮ ಈ ಗ್ರಂಥದ ಹಸ್ತಪ್ರತಿ ಸಿದ್ಧವಾದೊಡನೆಯೇ ಅಚ್ಚಿಗೆ ಕೊಡಲು ಮೊದಲು (ಅಥವಾ ಬದಲು) ಕನ್ನಡ ಬಲ್ಲವರಿಗೆ ಹಾಗೂ ಇಂಗ್ಲಿಷ್ ಸಾಹಿತ್ಯ ಚೆನ್ನಾಗಿ ತಿಳಿದವರಿಗೆ ತೋರಿಸಿ. ತಿದ್ದಿಸಿ. ಪರಿಷ್ಕರಿಸಿ ಪ್ರಕಟಿಸಿದ್ದರೆ ಮಹದುಪಕಾರ ಮಾಡಿದಂತೆ ಆಗುತ್ತಿತ್ತು.

"ಸಾಮಾನ್ಯ ಓದುಗನಿಗಲ್ಲದೆ (ಮುಖ್ಯವಾಗಿ ಕನ್ನಡ) ಇತರ ವಿದ್ಯಾರ್ಥಿಗಳಿಗೂ ಈ ಹೊತ್ತಗೆ ಗ್ರಾಹ್ಯವೆನಿಸುವುದೆಂದು ನಂಬುಗೆ ಇದೆ. ಕಾಲೇಜು ವಿದ್ಯಾರ್ಥಿಗಳಿ

ಗಂತೂ ಇದು ಒಳ್ಳೆ ಉಪಯುಕ್ತವಾಗಿದೆಯೆಂದು ಹೇಳದಿರೆವು" – ಎಂಬ ತಪ್ಪುಗ್ರಹಿಕೆ ಬೇರೆ ಲೇಖಕರು ತಳೆದಿರುವುದು ವಿಷಾದನೀಯ. ಇದು ಒಳ್ಳೆ ನಿರುಪಯುಕ್ತವಾಗಿರುವುದಷ್ಟೇ ಅಲ್ಲ. ಓದುಗರನ್ನು ತಪ್ಪುದಾರಿಗೆಳೆದು ಇಕ್ಕಟ್ಟಿನಲ್ಲಿ ಸಿಕ್ಕುಹಾಕುವ ಭೀತಿಯಿದೆ.

ಇಲ್ಲಿಯ ಚಾರಿತ್ರಿಕ ಅಂಶಗಳು ರಸಿಕ ಓದುಗರಿಗೆ ತುಂಬ ಹಿಡಿಸೀತು – ಎನ್ನುತ್ತಾರೆ. ಇದೆಂಥ ಆಭಾಸದ ಹೇಳಿಕೆಯೆಂಬ ಸ್ವಲ್ಪ ಕಲ್ಪನೆಯೂ ಲೇಖಕರಿಗೆ ಇದ್ದಂತೆ ತೋರುವುದಿಲ್ಲ. ಮೊದಲನೆಯದಾಗಿ ಇದು ಸಾಹಿತ್ಯ ಚರಿತ್ರೆ. ಎರಡನೆಯದಾಗಿ ಸಾಹಿತ್ಯಕ್ಕೇ ಇಲ್ಲಿ ಮುಖ್ಯ ಪ್ರಾಶಸ್ತ್ಯ. ಹೀಗಿರುವಾಗ ಚಾರಿತ್ರಿಕ ಅಂಶಗಳು–ಸಾಹಿತ್ಯ ಚರಿತ್ರೆ–ರಸಿಕ ಓದುಗರು–ಇವುಗಳು ಧ್ರುವಗಳ ಅಂತರವನ್ನು ಸಾರುತ್ತವೆ. ಚಾರಿತ್ರಿಕಾಂಶಗಳು ರಸಿಕ ಓದುಗರಿಗೆ ತುಂಬ ಹಿಡಿಸುವುದು ಹೇಗೆ ಎಂಬುದು ಅರ್ಥವಾಗದು.

ಲೇಖಕರಿಗೆ ಕನ್ನಡದ ಪರಿಚಯ ಏನೇನೂ ಸಾಲದು. ಆದುದರಿಂದ ಅದರ ವಿಚಾರ ಪ್ರಸ್ತಾಪಿಸುವುದು ಅನಗತ್ಯ. ಇಂಗ್ಲಿಷಿನ ಪರಿಚಯವೂ ಸರಿಯಾಗಿ ಇದ್ದಂತೆ ತೋರದು. ಸಂಸ್ಕೃತ ಶಬ್ದಗಳ ಬಳಕೆಯಲ್ಲಿ ಹವಣು ಇಲ್ಲ. ಶಬ್ದಗಳ ದುಂದುಗಾರಿಕೆ ದಂಗುಬಡಿಸುತ್ತದೆ. ಹೆಕ್ಕಿದಲ್ಲಿ ಸಿಕ್ಕುವ ಮುದ್ರಣ ಸ್ಖಾಲಿತ್ಯಗಳ ಮಾತಂತಿರಲಿ, ಪ್ರತಿ ಪುಟದಲ್ಲೂ ಪ್ರಯೋಗವಾಗಿರುವ ಶಿಥಿಲ ವಾಕ್ಯಗಳೂ. ಅಪಶಬ್ದಗಳೂ ಕಣ್ಣಿಗೆ ರಾವು ಬಡಿಯುತ್ತವೆ: ಉದಾ: ಪ್ರಾಶಸ್ತಿ, ಕೆಲವುಗಳಂತೂ, ಶತಮಾನುಸಾರ, ಆಲ್ಫ್ರೇಡ, ರಸಮಾಧುರಿ. ಹೇಳಿಕೆಗಳಲ್ಲಿ ಹಾಳೆಯಿಂದ ಹಾಳೆಗೆ (ಒಮ್ಮೊಮ್ಮೆ ಒಂದೇ ಹಾಳೆಯಲ್ಲಿ) ವಿರೋಧಾಭಾಸಗಳು ಹೇರಳ.

ಅಸ್ಪಷ್ಟತೆ ಲೇಖಕರ ದೀರ್ಘ ವಾಕ್ಯಗಳ ವೈಶಿಷ್ಟ್ಯ. ವಾಕ್ಯದಿಂದ ವಾಕ್ಯಕ್ಕೆ ಇದ್ದಿರಬಹುದಾದ ಹೊಂದಾಣಿಕೆಯನ್ನು ಹುಡುಕಬೇಕಾಗುತ್ತದೆ. ಅವರು ಒಟ್ಟಾರೆ ಏನು ಹೇಳುವರೆಂಬುದೇ ಹಲವು ಸಲ ತಿಳಿಯಲಾಗುವುದಿಲ್ಲ.

ಇದ್ದಕ್ಕಿದ್ದ ಹಾಗೆ ಆಶ್ಚರ್ಯ ಸೂಚಕ ಚಿಹ್ನೆಗಳು ರಾರಾಜಿಸುತ್ತವೆ. ಪುನರುಕ್ತಿಯಂತೂ ವಿಪರೀತ. "14 ನೆಯ ಶತಮಾನದಲ್ಲಿ ಎಂದರೆ ಆಂಗ್ಲಭಾಷೆಗೊಂದು ಸುವ್ಯವಸ್ಥಿತ ಸ್ವರೂಪ ಉಂಟಾಯಿತು" (ಪು. 1). ಇಲ್ಲಿ 'ಎಂದರೆ' ಎಂಬ ಶಬ್ದಪ್ರಯೋಗದ ಅಗತ್ಯವೇನು? "ಅಂತೆಯೆ ಒಂದು ತೂಕ ಅವನು ಹಿಡಿದದ್ದು ನಮಗೆ ಗೋಚರಿಸುವುದು" (ಪು. 10) – ಈ ವಾಕ್ಯ ಅರ್ಥವಾಗದು. "ಬೇಜಾರು ಸೋಕಾಂಶದಲ್ಲಿಯೂ ತಲೆದೋರದು" (ಪು. 14), 'ನಿಷ್ಕೃಹಿ ನಾಟಕೀಯತೆ' (ಪು. 15), 'ಪುರೂಥಪ್ರದೀರ್ಘ' –ಎಂಬ ರೂಪ ಇವರಿಗೆ ಪ್ರಿಯ. ಅಂತೂ ದೋಷಗಳ ರಾಶಿ ಹೊತ್ತು ಗ್ರಂಥ ನೀರಸವೂ, ಕೊರತೆಗಳ ಒರತೆಯೂ ಆಗಿದೆ. ಈ ಪುಸ್ತಕ ಓದಿ ಮುಗಿಸಿದ ವಿಮರ್ಶಕನಿಗೆ ಅನ್ನಿಸುವುದು: ಲೇಖಕರು ಯಾವುದಾದರೂ ಒಂದು ಉತ್ತಮವೆಂದು ಮಾನ್ಯವಾದ ಇಂಗ್ಲಿಷಿನಲ್ಲೇ ರಚಿತವಾದ ಸಾಹಿತ್ಯ ಚರಿತ್ರೆಯನ್ನು ನೇರವಾಗಿ ಅನುವಾದ ಮಾಡಿ. ಅನುವಾದವನ್ನು ಕನ್ನಡ ಬಲ್ಲವರಿಗೊಮ್ಮೆ ಆಮೂಲಾಗ್ರ ತೋರಿಸಿ ಪ್ರಕಟಿಸಬೇಕಿತ್ತು.

**ಸಂಸ್ಕೃತವಾಙ್ಮಯಕ್ಕೆ ಜೈನ ಕವಿಗಳ ಕಾಣಿಕೆ:** ಕನ್ನಡ ಸಾಹಿತ್ಯದ ಮೊದಲ ಕೆಲವು ಶತಮಾನಗಳ ಸಾಹಿತ್ಯ ಕೃಷಿಯೆಲ್ಲ ಜೈನ ಕವಿಗಳಿಂದಲೇ ನಡೆದಿರುವುದನ್ನು ಕುರಿತು ಸಾಕಷ್ಟು ಬರೆಹ ಬಂದಿದೆ. ಇದರಂತೆ ತಮಿಳು ಸಾಹಿತ್ಯದಲ್ಲೂ ನಡೆದಿದೆ. ಆದರೆ ಸಂಸ್ಕೃತ ಸಾಹಿತ್ಯಕ್ಕೆ ಜೈನ ಕವಿಗಳ, ಆಚಾರ್ಯರ ಕಾಣಿಕೆ ಏನೆಂಬುದರ ಬಗೆಗೆ ಹೆಚ್ಚಿನ ಬರೆಹವಿಲ್ಲ. ಕನ್ನಡದಲ್ಲಂತೂ ಅಂತಹ ಒಂದು ಹೊತ್ತಗೆಯ ಅಗತ್ಯವಿತ್ತು. ಈ ಗ್ರಂಥ ಅಂಥ ಒಂದು ಬೇಡಿಕೆಯನ್ನು ಸಮರ್ಥವಾಗಿ ಪೂರೈಸುತ್ತದೆ.

ಲೇಖಕರಾದ ಕೆ. ಭುಜಬಲಿಶಾಸ್ತ್ರಿಗಳು, ಸಿದ್ಧಾಂತಾಚಾರ್ಯ ನ್ಯಾಯಭೂಷಣ ಪಂಡಿತ ಮೊದಲಾದ ಉಪಾಧಿಪಾತ್ರರು. ಸಹಜವಾಗಿಯೇ ಬಹುಭಾಷಾ ವಿಶಾರದರಾಗಿರುವುದರ ಜೊತೆಗೆ ಜೈನಾಗಮಗಳನ್ನೂ, ಸಾಹಿತ್ಯ ಶಾಸ್ತ್ರಗಳನ್ನೂ, ಪರಂಪರೆಯ ಪದ್ಧತಿಯಲ್ಲಿ ಕ್ರಮವಾಗಿ ಕಲಿತವರು. ಜೈನಾಚಾರ್ಯರ ಬದುಕೂ ಕೃತಿಗಳೂ ಶಾಸ್ತ್ರಿಗಳಿಗೆ ಕರತಲಾಮಲಕ. ಹೀಗಾಗಿ ಈ ಹೊತ್ತಗೆ ಬರೆಯಲು ಅವರಿಗೆ ಎಲ್ಲ ಸಿದ್ಧತೆ, ಅರ್ಹತೆ ಇದೆ. ಫಲವಾಗಿ ಗ್ರಂಥ ಉಪಯುಕ್ತವಾಗಿ ರೂಪಗೊಂಡಿದೆ.

ಹಳಗನ್ನಡದ ಜೈನ ಕಾವ್ಯಗಳನ್ನು ಬೋಧಿಸುವವರಿಗೆ ಈ ಗ್ರಂಥದಿಂದ ಆಗುವ ಪ್ರಯೋಜನ ಅಪಾರ. ಸಾಮಾನ್ಯವಾಗಿ ಪ್ರತಿ ಜೈನ ಪುರಾಣದಲ್ಲೂ ಪ್ರಾರಂಭದಲ್ಲಿ ಪುರಾತನ ಜೈನಾಚಾರ್ಯರ ಸ್ತುತಿಯಿರುತ್ತದೆ. ಅವರ ಕಾಲ–ಕೃತಿಗಳನ್ನು ತಿಳಿಯಲು ಸಹಾಯಕ ಸಾಮಗ್ರಿ ತೀರ ಕಡಮೆ. ಈ ಗ್ರಂಥ ಆ ವಿಚಾರದಲ್ಲಿ ನೆರವಿಗೆ ಒದಗಿಬರುತ್ತದೆ.

ಸ್ಥೂಲವಾಗಿ ಕ್ರಿಸ್ತಶಕ ಆರಂಭದಿಂದ ಹದಿನೆಂಟನೆಯ ಶತಮಾನದ ತನಕ ಆಗಿ ಹೋದ ಪ್ರಮುಖ ಜೈನ ಸಂಸ್ಕೃತ ಲೇಖಕರ ಪರಿಚಯ ಇದರಲ್ಲಿದೆ. ಅವರಲ್ಲಿ ಕೆಲವರಿಗೆ ಸಂಬಂಧಿಸಿದಂತೆ ಹೆಚ್ಚು ಚಾರಿತ್ರಿಕ ಉಲ್ಲೇಖಗಳು ಉಪಲಬ್ಧವಿಲ್ಲ. ಕೆಲವು ಆಚಾರ್ಯರನ್ನು ಕುರಿತು ಕಥೆಗಳೂ ಕಲ್ಪನೆಗಳೂ ಕೂಡಿವರಿದಿವೆ. ಗೌರವದ ಆಧಿಕ್ಯದಿಂದ ಜನತೆ ಅವರನ್ನು ಪವಾಡಪುರುಷರನ್ನಾಗಿ ಮಾಡಿರುವುದೂ ಉಂಟು. ಇಂತಹ ಕಡೆಗಳಲ್ಲಿ ಪ್ರಮಾಣವೆಂದು ಯಾವುದನ್ನು ಅಂಗೀಕರಿಸಬೇಕೆಂಬುದು ಕಷ್ಟಸಾಧ್ಯ ತೀರ್ಮಾನ. ಈ ಗ್ರಂಥದಲ್ಲಿ ಅಂಥ ವಿಚಾರದಲ್ಲಿ ಸಂಭಾವ್ಯ ಅಂಶಗಳಿಗೆ ಆದ್ಯತೆಯಿತ್ತು; ಉಳಿದ ಉತ್ಪ್ರೇಕ್ಷೆಗಳಿಗೆ ಅದಷ್ಟೂ ಕತ್ತರಿಪ್ರಯೋಗ ಮಾಡಿರುವುದು ಸೂಕ್ತ ತೀರ್ಮಾನ.

ಲೇಖಕರೂ ನಿರೂಪಣೆ ಶುಷ್ಕವಾಗದಂತೆ ಪ್ರಯತ್ನಿಸಿದ್ದಾರೆ. ಶೈಲಿ ತಿಳಿಯಾಗಿದ್ದರೂ ಒಮ್ಮೊಮ್ಮೆ ಇಂದಿನ ಕಾಲದ್ದೆಂದು ಅನಿಸುವುದಿಲ್ಲ. ಮೂಲಕೃತಿಗಳಿಂದ ಆಯಾ ಲೇಖಕರ ಶಕ್ತಿಯನ್ನು ಬಿಂಬಿಸುವ ಉಕ್ತಿಗಳನ್ನೂ ಶ್ಲೋಕ–ಗದ್ಯಗಳನ್ನೂ ಉದಾಹರಿಸಬೇಕಿತ್ತು.

ಪ್ರತಿಯೊಂದು ಪರಿಚಯ ಲೇಖನದ ಕಡೆಯಲ್ಲೂ ಆಯಾ ಆಚಾರ್ಯರ ಒಟ್ಟು ಕೃತಿಗಳ ಅಕಾರಾದಿ ಪಟ್ಟಿಯನ್ನೂ, ಅವುಗಳಿಗೆ ಸಂಬಂಧಿಸಿದಂತೆ ಭಾರತೀಯ ಸಾಹಿತ್ಯದಲ್ಲಿ, ಕಡೆಗೆ ಕನ್ನಡದಲ್ಲಿಯಾದರೂ, ಇದುವರೆಗೆ ಬಂದಿರುವ ಸಾಹಿತ್ಯ ಕೃತಿ ಲೇಖನಗಳ

ವಿವರವನ್ನೂ ಕೊಡಬೇಕಿತ್ತು. ಮತ್ತು ಸಂಸ್ಕೃತ ಜೈನ ಕವಿಗಳ ಕೃತಿಗಳು ಪ್ರಕಟಿತ ಯಾ ಅಪ್ರಕಟಿತ ವಿವರ ಬೇಕಿತ್ತು. ಪ್ರಕಟವಾಗಿದ್ದರೆ ಪ್ರಕಾಶಕರು, ಸಂಪಾದಕರು, ಪ್ರಕಟಣೆಯಾದ ವರ್ಷ, ಬೆಲೆ ಮೊದಲಾದವನ್ನು ತಿಳಿಸಬಹುದಿತ್ತು. ಅದರಂತೆ ಗ್ರಂಥಕ್ಕೆ ಸಂಬಂಧಿಸಿದಂತೆ ಇದರ ಅಂತ್ಯದಲ್ಲಿ ಅನುಬಂಧವಾಗಿ ಇದರಲ್ಲಿ ಬಂದಿರುವ ವ್ಯಕ್ತಿ ಹಾಗೂ ಕೃತಿಗಳ ಅಕಾರಾದಿ ಅಗತ್ಯ ಬೇಕಿತ್ತು. ಗ್ರಂಥದ ಪ್ರಯೋಜನವನ್ನು ಹೆಚ್ಚಿಸುವ ದೃಷ್ಟಿಯಿಂದ ಇವೆಲ್ಲ ಗಮನಾರ್ಹ.

ಲೇಖಕರ ವೈದುಷ್ಯವನ್ನು ಗ್ರಂಥದುದ್ದಕ್ಕೂ ಕಾಣುತ್ತೇವೆ. ಸಂಸ್ಕೃತ, ಹಿಂದಿ, ಇಂಗ್ಲಿಷ್, ಕನ್ನಡ ಭಾಷೆಗಳ ಗ್ರಂಥಗಳನ್ನೂ ಶಾಸನಗಳನ್ನೂ ವಿಪುಲವಾಗಿ ಉಪಯೋಗಿಸಿಕೊಂಡಿದ್ದಾರೆ. ಸುಮಾರು ಮುವ್ವತ್ತೈದು ಜೈನ ಸಂಸ್ಕೃತ ಕವಿಗಳ ಜೀವನದ ಜೊತೆಗೆ ಸಾಹಿತ್ಯದ ಪರಿಚಯಮಾಡುವಾಗ ತನ್ಮಯರಾಗಿಬಿಡುತ್ತಾರೆ. ಅಲ್ಲದೆ ಪ್ರತಿಯೊಬ್ಬ ಜೈನ ಕವಿಯ ವಿಚಾರ ಬರೆಯುವಾಗಲೂ ಸಮಕಾಲೀನ ಆಚಾರ್ಯರ ವಿವರವೂ ಬಂದಿರುವುದು ಪ್ರಶಂಸನೀಯ. ಅದರಿಂದ ಓದುಗರಿಗೆ ಮುಂದಿನ ಆಳವಾದ ಅಭ್ಯಾಸಕ್ಕೆ ಅನುಕೂಲವಿದೆ.

ಪ್ರಾರಂಭದ ನಾಲ್ಕು ಅಧ್ಯಾಯಗಳಲ್ಲಿ ಜೈನಾಚಾರ್ಯರ ಪರಂಪರೆಯನ್ನೂ, ಸಂಘ (ಮೂಲಸಂಘ ಇತ್ಯಾದಿ) ಪರಂಪರೆಯನ್ನೂ, ಗ್ರಂಥಲೇಖನ ಪದ್ಧತಿ ಶ್ರುತಜ್ಞಾನದ ಸ್ಥಾಪನೆಯನ್ನೂ ಜೊತೆಗೆ ಶ್ರುತಜ್ಞಾನದ ವಿವರಣೆಯನ್ನೂ ತಿಳಿಸಿದ್ದಾರೆ. ಇದರಿಂದ ಉಳಿದ ಅಧ್ಯಾಯಗಳಲ್ಲಿ ಬರುವ ಕವಿಗಳನ್ನೂ ಅಲ್ಲಿನ ಪರಿಭಾಷೆಯನ್ನೂ ಅರಿತುಕೊಳ್ಳಲು ನೆರವಾಗುತ್ತದೆ.

ಪ್ರಾಸಂಗಿಕವಾಗಿ ಇತರ ಅನೇಕ ವಿಷಯಗಳ ಉಲ್ಲೇಖ ಬಂದಿದೆ. ಸಾಂಸ್ಕೃತಿಕ ಅಧ್ಯಯನದ ವಿದ್ಯಾರ್ಥಿಗಳಿಗೆ ಎದುರಾಗುವ ಸಂಘ, ಗಣ, ಗಚ್ಛ, ಪಂಥ, ಯಾಪನೀಯ ಪಂಥ – ಮೊದಲಾದವಕ್ಕೂ ಇಲ್ಲಿ ನೆರವಾಗುವ ವಿವರಣೆಯಿದೆ (ಪು. 4, 5, 6).

**ಕನ್ನಡ ವಾಲ್ಮೀಕಿ ರಾಮಾಯಣ:** ಕನ್ನಡದಲ್ಲಿ ವಾಲ್ಮೀಕಿ ರಾಮಾಯಣದ ನೇರ ಅನುವಾದ ಗ್ರಂಥಗಳು ಇದ್ದರೂ ಅವು ಅಚ್ಚಿನಿಂದ ಹೊರಗಾಗಿ ಓದುಗರಿಗೆ ಯಾವುವೂ ಸಿಗುತ್ತಿರಲಿಲ್ಲ. ಇತ್ತೀಚೆಗೆ ಮರುಮುದ್ರಣವಾದ ಅರಮನೆಯ ಪ್ರಕಟನೆಯೊಂದು ದೊರೆಯುತ್ತಿದೆ. ನಿಜ. ಆ ಪ್ರತಿಯಾಗಲಿ, ಕನ್ನಡದ ಇದುವರೆಗಿನ ಇತರ ಭಾಷಾಂತರಗಳಾಗಲಿ ವಾಲ್ಮೀಕಿ ರಾಮಾಯಣದ ಚಚು ತಪ್ಪದ ಅನುವಾದಗಳಾಗಿರಲಿಲ್ಲ. ಅಲ್ಲೋ ಇಲ್ಲೋ ಒಮ್ಮೊಮ್ಮೆ ಹೆಚ್ಚು ಇಲ್ಲವೇ ಕಡಮೆ ನಡೆದಿದೆ.

ಈ ಕನ್ನಡ ವಾಲ್ಮೀಕಿ ರಾಮಾಯಣ ಎರಡು ಬೃಹತ್ ಸಂಪುಟಗಳಲ್ಲಿದೆ. ಇದು ಮೂಲವನ್ನು ಬಹುಮಟ್ಟಿಗೆ ಯಥಾವತ್ತಾಗಿ ಗದ್ಯದಲ್ಲಿ ಅನುವಾದಿಸಿರುವ ಕೃತಿ: 'ಸರಳಾನುವಾದ' (free translation) ಅಲ್ಲ, ನಿಖರವಾದ ವಾಸ್ತವಾನುವಾದ (Strict literal translation) ಅಥವಾ ಪದಶಃ ಅನುವಾದ.' ವಿಶೇಷಾರ್ಥ ಇಲ್ಲವೇ ಅಭಿಪ್ರಾಯಗಳನ್ನು ತಿಳಿಸುವ ಅಗತ್ಯ ಕಂಡುಬಂದಾಗ, ಆಯಾ ಸಂದರ್ಭಗಳಲ್ಲಿ ಅಡಿ ಟಿಪ್ಪಣಿಗಳನ್ನೂ ವ್ಯಾಖ್ಯಾನಗಳನ್ನೂ ಕೊಟ್ಟಿದ್ದಾರೆ.

ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ಯರು ಗಣಿತಶಾಸ್ತ್ರ ಪ್ರಾಜ್ಞರು, ಅನುವಾದ ಕಲೆಯಲ್ಲೂ ನಿಪುಣರು. ಇದನ್ನು ಈ ಗ್ರಂಥವೇ ಸ್ಪಷ್ಟವಾಗಿ ಸಾರುತ್ತದೆ. ಅನುವಾದ ಮಾಡುವಾಗ ತಾವು ಹೋಗಬೇಕಾದ ಮಾರ್ಗ, ಅನುಸರಿಸಬೇಕಾದ ನಿಯಮ, ಹಾಗೂ ಪಾಲಿಸಬೇಕಾದ ಧೋರಣೆ – ಇವುಗಳ ಸರಿಯಾದ ಕಲ್ಪನೆಯಿದೆ. ಇದರ ಫಲವಾಗಿ ವಾಲ್ಮೀಕಿ ರಾಮಾಯಣವನ್ನು ಚೆನ್ನಾಗಿ ಕನ್ನಡಿಸುವ ಭಗೀರಥ ಪ್ರಯತ್ನದಲ್ಲಿ ಸಫಲರಾಗಿದ್ದಾರೆ.

ಇದು ಮೂಲ ವಾಲ್ಮೀಕಿ ರಾಮಾಯಣದ ಮಕ್ಕಿಕಾಮಕ್ಕಿ ಕುರುಡು ಅನುವಾದ ವಲ್ಲ. ಅನುವಾದಕರ ವಿದ್ವತ್ತು ವಿಚಿಕಿತ್ಸಕ ಬುದ್ಧಿ ಹಾಗೂ ಅತ್ಯಾಧುನಿಕ ವಿಚಾರಧಾರೆ ಯಿಂದಲೂ ಪರಿಶೀಲನೆ ಮಾಡುವ ವೈಜ್ಞಾನಿಕ ದೃಷ್ಟಿ – ಇವನ್ನು ಹತ್ತಾರು ಕಡೆ ಕಾಣ ಬಹುದು: ಪ್ರಥಮ ಸಂಪುಟದ ಪ್ರಥಮ ಸರ್ಗ 'ಸಂಕ್ಷೇಪ ರಾಮಾಯಣ'ದಲ್ಲಿ ಬರುವ ಮೊದಲ ಅಯ್ದು ಪುಟಗಳಲ್ಲಿನ ಅಡಿ ಟಿಪ್ಪಣಿಗಳನ್ನು ನೋಡಿದರೂ ಸಾಕು.

ರಾಮಾಯಣ ಕಥಾ ನಿರೂಪಣೆಯಲ್ಲಿ ಭೂತಕಾಲದಿಂದ ವರ್ತಮಾನಕಾಲ ಇಲ್ಲವೇ ಭವಿಷ್ಯತ್ ಕಾಲಕ್ಕೆ ಬದಲಾವಣೆ ಕಂಡುಬಂದರೂ ಅದನ್ನು ಗುರುತಿಸಿ ಸಕಾರಣವಾಗಿ ವಿವರಿಸುತ್ತಾರೆ. ರಾಮಾಯಣದ ಮಂಗಳಶ್ಲೋಕಕ್ಕೆ ಇರುವ ವಿವಿಧಾರ್ಥ ವ್ಯಾಖ್ಯಾನ ಗಳನ್ನು ವಿವರಿಸುತ್ತಾರೆ. ತೀರ ಅವಶ್ಯವೆಂದು ತೋರಿದೆಡೆಗಳಲ್ಲಿ ಮೂಲಶಬ್ದ. ಪದ ಪುಂಜ. ಕಡೆಗೆ ಶ್ಲೋಕಗಳನ್ನೇ ಕೊಟ್ಟು ಅರ್ಥೈಸುತ್ತಾರೆ.

ರಾಮಾಯಣಗಳು ಅಪಾರ: ಜೈನ ರಾಮಾಯಣ, ಅಧ್ಯಾತ್ಮ ರಾಮಾಯಣ, ಅದ್ಭುತ ರಾಮಾಯಣ. ರಾಮಾಯಣದ ಭಾಗಗಳನ್ನು ಆರಿಸಿಕೊಂಡು ಬರೆದ ಕಾವ್ಯ ಗಳೂ ವಿಪುಲ. ಕೆಲವೊಮ್ಮೆ ವಾಲ್ಮೀಕಿಯು ಹೇಳಿಕೆಗೂ ಇತರ ಕೃತಿಗಳ ಹೇಳಿಕೆಗೂ ವ್ಯತ್ಯಾಸಗಳು ಕಂಡುಬರುತ್ತವೆ. ಈ ಅನುವಾದಕರು ಅವುಗಳಲ್ಲಿ ಕೆಲವನ್ನು ಗುರುತಿಸಿ ದ್ದಾರೆ: 'ಕುಶಲವರು ರಾಮನ ಔರಸ ಪುತ್ರರು. ಸೀತಾದೇವಿಯು ಇವರನ್ನು ವಾಲ್ಮೀಕಿ ಗಳ ಆಶ್ರಮದಲ್ಲಿ ಹೆತ್ತಳು. ಮಕ್ಕಳನ್ನು ಈಗಲೇ ರಾಮನು ನೋಡುತ್ತಿರುವುದು. ರಾಮನಿಗೂ ಆತನ ಮಕ್ಕಳಿಗೂ ಸಮಾಗಮವಾಗುವುದು ಈ ಪ್ರಕಾರವೇ. ಜೈಮಿನಿ ಭಾರತ ಗ್ರಂಥದಲ್ಲಿ. ರಾಮನ ಯಜ್ಞಾಶ್ವವನ್ನು ಕುಶಲವರು ಕಟ್ಟಿ ಹಾಕಿದರೆಂದೂ, ಅದರಿಂದ ಕುಶಲವರಿಗೂ ರಾಮಾದಿಗಳಿಗೂ ಯುದ್ಧ ಜರುಗಿ, ಯುದ್ಧಾನಂತರದಲ್ಲಿ ಇವರು ಯಾರೆಂದು ತಿಳಿಯಿತೆಂದೂ ಕಥೆಯಿದೆ. ಈ ಕಥೆಯು ವಾಲ್ಮೀಕಿ ರಾಮಾಯಣ ದಲ್ಲಿಲ್ಲ. ವಾಲ್ಮೀಕಿ ರಾಮಾಯಣಕ್ಕೂ ಇತರ ರಾಮಾಯಣಗಳಿಗೂ ಎಲ್ಲೆಲ್ಲಿ ಸಮನ್ವಯ ಮಾಡಲು ಆಗುವುದಿಲ್ಲವೋ, ಅಲ್ಲೆಲ್ಲಾ ವಾಲ್ಮೀಕಿ ರಾಮಾಯಣದಲ್ಲಿರತಕ್ಕ ಕಥಾ ವಿಚಾ ರವೇ ಯಥಾರ್ಥವಾದದ್ದು ಎಂದು ತಿಳಿಯಬೇಕು" (ಅಡಿಟಿಪ್ಪಣಿ, ಪು. 22).

ವಾಲ್ಮೀಕಿಯ ಹೇಳಿಕೆಗಳನ್ನೂ. ವಾಲ್ಮೀಕಿ ರಾಮಾಯಣದ ಟೀಕಾಕಾರರ ಅಭಿ ಪ್ರಾಯಗಳನ್ನೂ ಈ ಅನುವಾದಕರು ಪೂರ್ವಗ್ರಹಪೀಡಿತರಾಗದೆ ಮುಕ್ತಮನಸ್ಸಿನಿಂದ ಪರಾಮರ್ಶಿಸಿ ತಮ್ಮ ತಿಳಿವಳಿಕೆಯನ್ನು ನಿರ್ಭಿಡೆಯಿಂದ ನಿವೇದಿಸುತ್ತಾರೆ. ವಾಲ್ಮೀಕಿ ಎಡವಿದಂತೆ ಕಂಡರೆ ಅದನ್ನು ಧಾರಾಳವಾಗಿ ಹೇಳುತ್ತಾರೆ. ಸರಿಯಿರುವುದನ್ನು

ಖಚಿತವಾದರೆ ಸಮರ್ಥಿಸುತ್ತಾರೆ. ಎರಡು ಉದಾಹರಣೆಗಳನ್ನು ನೋಡಬಹುದು:

"ವಾಲ್ಮೀಕಿಗೆ ಶ್ರೀರಾಮ ಪಟ್ಟಾಭಿಷೇಕದ ಘಟ್ಟವನ್ನು ಎಷ್ಟು ಹೊತ್ತಿಗೆ ಬರೆದೇನು ಎಂಬ ಸಡಗರವಿದ್ದಂತೆ ಭಾಸವಾಗುತ್ತದೆ. ಅನೇಕ ವಿಷಯಗಳನ್ನು ಬಿಟ್ಟು ಬಿಟ್ಟಿದ್ದಾರೆ. ಕಥಾಸಂದರ್ಭಗಳನ್ನು ಒಂದನ್ನೊಂದರೊಡನೆ ಸೇರಿಸುವ ವಾಕ್ಯಗಳನ್ನು ತಿಳಿಸಿಲ್ಲ. ಹಿಂದಿನ ಸರ್ಗದಲ್ಲಿ ಹನುಮಂತನು ಗುಹನನ್ನು ಸಂಧಿಸಿ ಮಾತನಾಡಿದಾಗ, ಗುಹನು ಏನು ಹೇಳಿದನೆಂದು ತಿಳಿಸಲಿಲ್ಲ. ಇಲ್ಲಿ ಈಗ, ಭರತ ಲಕ್ಷ್ಮಣರೂ ಜಟಾ ವಿಸರ್ಜನೆ ಮಾಡಿದರೆಂದು ನಾವೇ ತಿಳಿದುಕೊಳ್ಳಬೇಕು. ಶತ್ರುಘ್ನನನ್ನು ವಾಲ್ಮೀಕಿ ಮರೆತೇ ಬಿಟ್ಟರು". (ಸಂಪುಟ 2, ಪು. 1474, ಅಡಿಟಿಪ್ಪಣಿ). "ಸುಗ್ರೀವನು ಮಂಗಳಸ್ನಾನ ಮಾಡಿದುದನ್ನು ಹಿಂದೆಯೇ ತಿಳಿಸಿದೆ. ಉತ್ಸಾಹ ಭರದಲ್ಲಿ ವಾಲ್ಮೀಕಿಗಳು ಅದನ್ನು ಮರೆತು ಮತ್ತೆ ಹೇಳಿರುವರು" (ಅದೇ, ಪು. 1475).

ಯುದ್ಧಕಾಂಡವಲ್ಲಿ ರಣರಂಗದಲ್ಲಿ ಹೋರಾಡುತ್ತಿರುವ ರಾಮನನ್ನು ಒಂದು ಕಡೆ "ವೀರನಾದ ಕೌಸಲ್ಯಾನಂದ ವರ್ಧನನಾದ ರಾಮನು" (ಪು. 1416) ಎಂದು ಬರುತ್ತದೆ. ಇದಕ್ಕೆ ಇವರು ಅಲ್ಲೇ ಅಡಿ ಟಿಪ್ಪಣಿಯಲ್ಲಿ ಹೀಗೆ ಬರೆಯುತ್ತಾರೆ:

"ಯುದ್ಧರಂಗದ ಈ ಭೀಕರ ಸನ್ನಿವೇಶದಲ್ಲಿ. ಕೌಸಲ್ಯೆಯ ಹೆಸರೇಕೆ ಬಂದಿತು? ಪದ್ಯ ತುಂಬುವ ಅಭಿಪ್ರಾಯದಿಂದ ವಾಲ್ಮೀಕಿ ಪದಜೋಡಣೆ ಎಲ್ಲಿಯೂ ಮಾಡಿಲ್ಲ ಎಂಬುದು ವಿದ್ವಾಂಸರ ತೀರ್ಮಾನ. ರಾಮನು ವನಕ್ಕೆ ತೆರಳುವ ಮುನ್ನ ಕೌಸಲ್ಯೆ ಮಾಡಿದ ಮಂಗಳಾಶಾಸನಗಳನ್ನು ಇಲ್ಲಿ ಸ್ಮರಿಸಿಕೊಂಡಿರಬಹುದು:......ರಾಕ್ಷಸರೇ ಮೊದಲಾದವರಿಂದ ನಿನಗೆ ಭಯ ಒದಗದಿರಲಿ. ಆಗ ನಿನ್ನ ಮಾರ್ಗಗಳು ಮಂಗಳಕರವಾಗಿರಲಿ. ನಿನ್ನ ಪರಾಕ್ರಮ ಸಿದ್ಧಿಸಲಿ – ಎಂದು ಆಶೀರ್ವಾದ ಮಾಡಿದ್ದಾಳೆ." (ಅದೇ)

ಕೊರತೆ: ಅ. ರಾಮಾಯಣದಲ್ಲಿ ಬರುವ ವ್ಯಕ್ತಿ, ಊರು, ನದಿ. ಬೆಟ್ಟ, ದೇವತೆಗಳು, ಹೂಗಳು – ಮೊದಲಾದ ಹೆಸರುಗಳ ಅಕಾರಾದಿ ಇಲ್ಲ.

ಆ. ಇದರಲ್ಲಿ ಅಲ್ಲಲ್ಲಿ ಉದಾಹರಿಸಿರುವ ಗ್ರಂಥಗಳ ಅಕಾರಾದಿ ಇಲ್ಲ.

ಇ. ಇದುವರೆಗೆ ಕನ್ನಡದಲ್ಲಿ ಅನುವಾದವಾಗಿರುವ ರಾಮಾಯಣಗಳ ಉಲ್ಲೇಖ ಇಲ್ಲ.

ಮೆಚ್ಚುಗೆ: ಮುದ್ರಣ. ರಕ್ಷಾಪುಟ. ಕಾಗದ, ರಟ್ಟು–ಎಲ್ಲ ಉತ್ತಮ.

ಮೇಲ್ಪಂಕ್ತಿ: ಉಳಿದ ಅನುವಾದಕರೂ ಈ ಗ್ರಂಥವನ್ನು ಮಾದರಿಯಾಗಿಟ್ಟುಕೊಳ್ಳಬಹುದು. ಈ ವಿಭಾಗದಲ್ಲಿ ವಿಮರ್ಶಿಸಿರುವ ರವಿಷೇಣನ ಜೈನ ರಾಮಾಯಣದಲ್ಲೂ ಅವರ ಅನುವಾದಕರಾದ ಭುಜಬಲಿಶಾಸ್ತ್ರಿಗಳು ಈ ಕ್ರಮವನ್ನೇ ಅನುಸರಿಸಬಹುದಿತ್ತೆನ್ನಿಸುತ್ತದೆ.

**ಪದ್ಮಪುರಾಣದ ಕಥೆ:** ಆಚಾರ್ಯ ರವಿಷೇಣನ ಸಂಸ್ಕೃತ ಮೂಲ (ಜೈನ ಪರಂಪರೆಗೆ ಸೇರಿದ) ರಾಮಾಯಣದ ಕನ್ನಡ ಸಂಗ್ರಹಾನುವಾದವಿದು (ಅನುವಾದಕರು : ಕೆ. ಭುಜಬಲಿಶಾಸ್ತ್ರಿ).

ಪದ್ಮಪುರಾಣವೆಂದರೆ ರಾಮನ ಚರಿತೆ. ಕೆಲವು ಜೈನ ಪುರಾಣಗಳಲ್ಲಿ ರಾಮನಿಗೆ ಪದ್ಮ ಎಂಬುದು ಇನ್ನೊಂದು ಪ್ರಿಯವಾದ ಹೆಸರು. ರವಿಷೇಣ ವಿರಚಿತ ಪದ್ಮಪುರಾಣ ಸಂಸ್ಕೃತದಲ್ಲಿ ರಚಿತವಾಗಿರುವ ಸಾಕಷ್ಟು ಪ್ರಾಚೀನವೂ ಆದ ಕಾವ್ಯ.

ಜೈನ ರಾಮಾಯಣಗಳಲ್ಲಿ ಎರಡು ಪರಂಪರೆಗಳಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ: ವಿಮಲಸೂರಿ. ರವಿಷೇಣ, ಸ್ವಯಂಭೂ ಹಾಗೂ ಹೇಮಚಂದ್ರರದು ಒಂದು: ಆಚಾರ್ಯ ಗುಣಭದ್ರ ಹಾಗೂ ಪುಷ್ಪದಂತರದು ಇನ್ನೊಂದು.

ವಿಮಲಸೂರಿ ಪರಂಪರೆಗೆ ಸೇರಿದ. ಅವನ ಅನಂತರ ರಚಿತವಾದ ಕೃತಿ ಸಂಸ್ಕೃತ ಪದ್ಮಪುರಾಣ. ಇದು ಪೂರ್ಣವಾಗಿ ದಿಗಂಬರ ಸಂಪ್ರದಾಯಕ್ಕೆ ಅನುಸಾರವಾಗಿದೆ.

ಡಾ॥ ಹೀರಾಲಾಲ್ ಜೈನ್ ಅವರು ವಿಮಲಸೂರಿಯನ್ನು ಯಾಪನೀಯ ಸಂಘದ ಆಚಾರ್ಯನಿರಬಹುದೆಂದು ಊಹಿಸುತ್ತಾರೆ. ಅವರ ಊಹೆಯ ಅಭಿಪ್ರಾಯವನ್ನು ಭುಜಬಲಿಶಾಸ್ತ್ರಿಗಳು ಅನುಮೋದಿಸುತ್ತಾರೆ. ಕರ್ನಾಟಕ ಹಾಗೂ ಭಾರತದ ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಿಸಿದಂತೆ ಡಾ॥ ಹೀರಾಲಾಲರ ಈ ಸೂಚನೆ ಗಮನಾರ್ಹ.

ಅನುವಾದಕರು ಜೈನ ರಾಮಾಯಣಕ್ಕೂ ವಾಲ್ಮೀಕಿ ರಾಮಾಯಣವೇ ಮೂಲ ವೆಂಬ ಮಾತನ್ನು ಅಲ್ಲಗಳೆಯುತ್ತಾರೆ: "ಏಕೆಂದರೆ ಬೌದ್ಧ ತ್ರಿಪಿಟಕಗಳಲ್ಲಿ ಬರುವ ರಾಮ ಕಥೆಗಳು, ಮಹಾಭಾರತದಲ್ಲಿ ಅಲ್ಲಲ್ಲಿ ಉದ್ಧೃತವಾದ ರಾಮಕಥೆಗಳು, ಜೈನ ಪರಂಪರೆ ಯಲ್ಲಿ ಪ್ರಸಿದ್ಧವಾಗಿರುವ ವಿಮಲಸೂರಿಯ ಪಉಮಚರಿಯ ಹಾಗೂ ಆಚಾರ್ಯ ಗುಣಭದ್ರನ ರಾಮಕಥೆಗಳು ಮೊದಲಾದ ಎಲ್ಲಾ ರಾಮಕಥೆಗಳನ್ನು ಸೂಕ್ಷ್ಮವಾಗಿ ಗಮ ನಿಸಿದರೆ, ಪ್ರಾಚೀನ ಕಾಲದಲ್ಲಿ, ವಾಲ್ಮೀಕಿ ರಾಮಾಯಣವು ಜನ್ಮತಾಳುವ ಪೂರ್ವದಲ್ಲಿ, ಭಾರತವರ್ಷದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರಾಮಕಥೆಗಳು ಜನರಲ್ಲಿ ಪ್ರಚಾರ ದಲ್ಲಿದ್ದುವೆಂಬುದನ್ನು ನಾವು ಒಪ್ಪಲೇಬೇಕು. ಅವು ಜಾನಪದ ಕಥೆಗಳಾಗಿದ್ದು, ಜನಸಾಮಾನ್ಯರಾಡುವ ಪ್ರಾಕೃತ ಭಾಷೆಯಲ್ಲಿ ಕಥಾರೂಪದಲ್ಲಿದ್ದಿರಬೇಕು. ಇಂತಹ ಮೂಲ ಜಾನಪದ ರಾಮಕಥೆಯೊಂದರಿಂದ ಸ್ಫೂರ್ತಿಯನ್ನು ಪಡೆದು. ವಾಲ್ಮೀಕಿಯು ತನ್ನ ರಾಮಾಯಣವನ್ನು ರಚಿಸಿರಬೇಕು. ಹಾಗೆಯೇ ತ್ರಿಪಿಟಕಕಾರರೂ. ವಿಮಲಸೂರಿಯೂ. ಬೇರೆಯವರೂ ತಮ್ಮ ತಮ್ಮ ಪರಂಪರೆಗಳಲ್ಲಿ ಹಾಗೂ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ರಾಮಕಥೆಗಳನ್ನೇ ಗ್ರಂಥರೂಪವಾಗಿ ಹೆಣೆದಿರಬೇಕು. ಹೀಗೆ ಇಲ್ಲಿ ಬೇರೆ ಬೇರೆ ರಾಮಾ ಯಣಗಳು ರೂಪುಗೊಂಡವು. ಇದೇನೂ ಅಸಂಭವವಲ್ಲ. ಹೀಗಿರುತ್ತಾ ಎಲ್ಲಾ ರಾಮಾ ಯಣಗಳಿಗೂ ವಾಲ್ಮೀಕಿ ರಾಮಾಯಣವೇ ಮೂಲವೆಂದು ವಾದಿಸುವುದು ಯುಕ್ತಿ ಸಂಗತವಲ್ಲ" (ಪು. 4).

ಮೇಲಿನ ಹೇಳಿಕೆಯನ್ನು ಸಮರ್ಥಿಸಲು ಆಧಾರಗಳನ್ನಿತ್ತಿದ್ದಾರೆ. ಅಲ್ಲದೆ ಅನು ವಾದಕರು ಜೈನ ಕಾವ್ಯ ಪುರಾಣ ಶಾಸ್ತ್ರಗಳಲ್ಲಿ ವಿಶಾರದರು. ಹಿಂದಿಯಲ್ಲಿ ಜೈನರಾಮಾ ಯಣಕಾ ರಾವಣ, ಜೈನ ರಾಮಾಯಣಕೇ ವಿವಿಧ ರೂಪ – ಎಂಬ ಲೇಖನಗಳನ್ನೂ, ಕನ್ನಡದಲ್ಲಿ ಜೈನ ರಾಮಾಯಣದ ವಿವಿಧ ರೂಪಗಳು ಎಂಬ ಲೇಖನವನ್ನೂ ಸಂಶೋಧ

ನಾತ್ಮಕ ದೃಷ್ಟಿಯಿಂದ ಬರೆದಿದ್ದಾರೆ. ಅವುಗಳಲ್ಲಿ ಜೈನ ರಾಮಾಯಣಗಳು ವಿದ್ಯಾಧರರಿಗಿತ್ತಿರುವ ಮಹತ್ವಪೂರ್ಣವಾದ ಸ್ಥಾನವನ್ನು ಉಲ್ಲೇಖಿಸಿದ್ದಾರೆ. ಅದರಂತೆ ಈ ಪದ್ಮಪುರಾಣದ ಕಥೆ ಕೂಡ ವಾಲ್ಮೀಕಿ ರಾಮಾಯಣದಿಂದ ಭಿನ್ನ ಹಾಗೂ ಸ್ವತಂತ್ರವೆಂದು ತಿಳಿಸುತ್ತಾರೆ.

"ಭಾರತೀಯ ಸಂಸ್ಕೃತಿಯ ಸ್ವರೂಪವನ್ನೂ ಇದು ಬೇರೆಯೇ ರೂಪದಲ್ಲಿ ಚಿತ್ರಿಸಿದೆ. ವಾಸ್ತವಿಕವಾಗಿ ಜೈನಧರ್ಮವು ಭಾರತವರ್ಷಕ್ಕಿತ್ತ ಇದೊಂದು ವಿಶಿಷ್ಟ ಕಾಣಿಕೆಯಾಗಿದೆ." ಆದುದರಿಂದ ಜೈನರಾಮಾಯಣದ ಮೇಲೆ ವಾಲ್ಮೀಕಿ ರಾಮಾಯಣದ ಪ್ರಭಾವ ಬಿದ್ದಿಲ್ಲ; ಬದಲು, ವಾಲ್ಮೀಕಿ ರಾಮಾಯಣದ ಹಲ ಕೆಲವು ವಿಷಯಗಳನ್ನು ನಿರಾಕರಿಸುವುದಕ್ಕೋಸ್ಕರ ಜೈನ ರಾಮಾಯಣ ಪ್ರಯತ್ನಿಸಿದೆ – ಎಂದು ಲೇಖಕರು ಹೇಳಿರುವುದು ಪರಿಭಾವನಾರ್ಹ. ಅದು ನಿಜವಿದ್ದಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ವಿಮರ್ಶೆಗಳಲ್ಲಿ ಕೆಲವೆಲ್ಲ ಪುನರ್ ಪರಿಶೀಲನೆಗೆ ಪಕ್ಕಾಗುತ್ತವೆ. ಇದರಲ್ಲಿ ಮುದ್ರಣ ದೋಷಗಳು ಸಾಕಷ್ಟಿವೆ. ಅನುವಾದಕರು ಭಾಷಾಂತರದಲ್ಲಿ ಬಿಗಿ ತೋರದೆ ಸ್ವಲ್ಪ ಸಲೀಸುತನದ ಸ್ವಾತಂತ್ರ್ಯ ತಳೆದು ಇದನ್ನು ಇನ್ನೂ ಸ್ವತಂತ್ರ ಕೃತಿಯಾಗಿ ಮೈತಳೆಯುವಂತೆ ಮಾಡಬಹುದಿತ್ತು.

ಓದುಗರು ಈ ಅನುವಾದವನ್ನು ಮಿರ್ಜಿ ಅಣ್ಣಾರಾಯರ 'ರವಿಷೇಣನ ರಾಮಾಯಣ' ಗ್ರಂಥದೊಡನೆ ತುಲನೆ ಮಾಡಿ ನೋಡಬಹುದು. ಒಂದಕ್ಕೊಂದು ಇವು ಪೂರಕವಾಗಿದ್ದರೂ ರಾಮಾಯಣಗಳ ತೌಲನಿಕ ವ್ಯಾಸಂಗಕ್ಕೆ ಅಣ್ಣಾರಾಯರ ಮುನ್ನುಡಿ ಉಪಯುಕ್ತ.

**ದಶಕುಮಾರ ಕಥೆ**: ದಂಡಿ ಸಂಸ್ಕೃತ ಗದ್ಯಸಾಹಿತ್ಯದ ರತ್ನತ್ರಯರಲ್ಲಿ ಒಬ್ಬ. ಏಳನೆಯ ಶತಮಾನದ ಈ ವಿದ್ವತ್ಕವಿ ಪದಲಾಲಿತ್ಯಕ್ಕೆ ಹೆಸರಾದವನು. ಈತನ ಪ್ರಸಿದ್ಧ ಗದ್ಯಕಾವ್ಯ 'ದಶಕುಮಾರ ಚರಿತೆ'. ಪ್ರಸ್ತುತ ಪುಸ್ತಕ ಈ ದಶಕುಮಾರ ಚರಿತೆಯ (ಕನ್ನಡ) ಸಂಗ್ರಹಾನುವಾದ. (ಅನುವಾದಕರು : ಎಂ. ಕೇಶವಭಟ್.)

ಕನ್ನಡಕ್ಕೆ ಈ ಅನುವಾದ ಹೊಸದಲ್ಲ. ಈಗಾಗಲೇ ದಶಕುಮಾರ ಚರಿತೆಯ ಅನುವಾದವನ್ನು ಚೌಂಡರಸ ಕವಿ ಚಂಪೂ ರೂಪದಲ್ಲಿ ಕನ್ನಡಕ್ಕೆ ನೀಡಿದ್ದಾನೆ, ಸುಮಾರು ಹದಿನಾಲ್ಕನೆಯ ಶತಮಾನದ ಆರಂಭದಲ್ಲಿ. ಅದರಂತೆ ಹೊಸಗನ್ನಡದಲ್ಲೂ ಅನುವಾದವಾಗಿದೆ, 'ದಂಡಿಯ ದಶಧೀರರು' ಎಂಬ ಹೆಸರಿನಲ್ಲಿ. ಇದು ಮೂರನೆಯ ಅನುವಾದ ಗ್ರಂಥ. ದಂಡಿಯ ಸಂಸ್ಕೃತ ಮೂಲವನ್ನೇ ಅನುಸರಿಸಿ ರಚಿಸಲಾಗಿದ್ದರೂ ಇದು ಕೇವಲ ಸಂಗ್ರಹಾನುವಾದ.

ಈ ಅನುವಾದದ ಅಗತ್ಯವಿತ್ತೆ ಎಂಬುದು ಮೊದಲ ಅನುಮಾನ. ಮೇಲೆ ತಿಳಿಸಿರುವಂತೆ ಹಳಗನ್ನಡದಲ್ಲೂ ಹೊಸಗನ್ನಡದಲ್ಲೂ ದಂಡಿಯ ಗದ್ಯಗ್ರಂಥ ಕನ್ನಡಕ್ಕೆ ತರ್ಜುಮೆಯಾಗಿರುವಾಗ ಇದರ ಆವಶ್ಯಕತೆ ತೋರುವುದಿಲ್ಲ. ಒಂದು ವೇಳೆ ಹಿಂದಿನ ಅನುವಾದಗಳು ಅಸಮರ್ಪಕವಾಗಿದ್ದಲ್ಲಿ ಇಂಥ ಪ್ರಯತ್ನ ಸ್ವಾಗತಾರ್ಹ: ಅಂಥ ನ್ಯೂನತೆ

ಗಳನ್ನು ಈ ಅನುವಾದಕರು ನಿರ್ದೇಶಿಸಿಲ್ಲ. ಬಹುಶಃ ಕೊರತೆಗಳು ಅವುಗಳಲ್ಲಿದ್ದಿರ ಲಾರವೆಂದು ಇದರಿಂದ ಧ್ವನಿತವಾಗುತ್ತದೆ. ಹಿಂದಿನ ಎರಡು ಭಾಷಾಂತರ ಕೃತಿಗಳಿಗಿಂತ ಭಿನ್ನವಾದ ಧಾಟಿ ಧೋರಣೆ ದಾರಿ ಹಿಡಿದು ಹೊರಟ ಗ್ರಂಥವೂ ಅಪೇಕ್ಷಣೀಯವಾಗ ಬಹುದು. ಇವರು ಅದನ್ನೂ ಹೇಳಿಲ್ಲವಾಗಿ ಇದರದೇ ಆದ ವೈಶಿಷ್ಟ್ಯವೂ ಕಂಡುಬರು ವುದಿಲ್ಲ. ಮೂಲಗ್ರಂಥದ ಸಂಪೂರ್ಣಾನುವಾದವಾಗಿದೆಯೋ ಎಂದರೆ, ಇದು ಸಂಗ್ರ ಹಾನುವಾದ; ಪಠ್ಯಪುಸ್ತಕ ಪ್ರಯೋಜನಾಪೇಕ್ಷೆಯಲ್ಲೇ ಪರ್ಯವಸಾನವಾಗುತ್ತದೆ. ಕನ್ನಡ ಚಂಪೂ ಕಾವ್ಯವಾದ ಅಭಿನವ ದಶಕುಮಾರ ಚರಿತೆಯ ಹೊಸಗನ್ನಡಾನುವಾದವಾದರೂ ಆಗಿದ್ದರೆ ಅದರಿಂದ ಹಳಗನ್ನಡ ಕಾವ್ಯವನ್ನು ಓದಿ ಆನಂದಿಸುವ ಅಪೇಕ್ಷೆಯುಳ್ಳ ಸಾಮಾನ್ಯ ಓದುಗರಿಗೆ ಸಹಾಯಕವಾಗುತ್ತಿತ್ತು.

ಕಥನಕಲೆಯಲ್ಲಿ ದಂಡಿಯ ನೈಪುಣ್ಯ ಅಪಾರವಾದದ್ದು. ಅನೇಕ ಪಾತ್ರಗಳನ್ನು ಸೃಷ್ಟಿಸಿ ವಿವಿಧ ಸನ್ನಿವೇಶಗಳ ಹರವಿನಲ್ಲಿ ಏಕಸೂತ್ರತೆಯನ್ನು ಸಾಧಿಸಬಲ್ಲ ಶಕ್ತಿ ಆವ ನದು. ಕತೆಯ ಓಟದಲ್ಲಿ ಶಿಥಿಲತೆ ಬಾರದಂತೆ, ಪಾತ್ರಗಳ ಹೊಂದಾಣಿಕೆಯಲ್ಲಿ ಸಾಮಂ ಜಸ್ಯ ತುಂಬಿರುವಂತೆ ನೋಡಿಕೊಳ್ಳುವ ಹದ ದಂಡಿಯ ವಿಶಿಷ್ಟಗುಣಗಳಲ್ಲೊಂದು.

ಮೂಲದಲ್ಲಿರುವ ಮೇಲೆ ಹೆಸರಿಸಿದ ಎಲ್ಲ ಗುಣಗಳೂ ಈ ಅನುವಾದದಲ್ಲಿ ಬಂದಿಲ್ಲ. ಬದಲಾಗಿ ಪೇಲವ ಅನುವಾದದಲ್ಲಿ ಅವೆಲ್ಲ ಸೋರಿಹೋಗಿವೆ. ಹೀಗಾಗಿ ಇದು ನೀರಸ, ಕೃತಕ ಅನುವಾದದತ್ತ ಬಾಗಿದೆ. ಶೈಲಿ ಸಾಧಾರಣ. ಸಂಸ್ಕೃತ ಕನ್ನಡಗಳ ಹವಣರಿತ ಹದವಾದ ಹೊಂದಾಣಿಕೆಯಿಲ್ಲ. ಕಿವಿಗೆ ಒಮ್ಮೊಮ್ಮೆ ಅಹಿತವೆನ್ನಿಸುವ ಇದರ ಗದ್ಯದ ಓಟದಲ್ಲಿ ಓದುಗರನ್ನು ಸೆರೆಹಿಡಿವ ಚೆಲುವಿಲ್ಲ.

ಮೂಲದ ಸೊಗಸನ್ನು ಸಂಗ್ರಹಾನುವಾದದಲ್ಲಿ ಮೂಡಿಸುವ ದಿಸೆಯಲ್ಲಿ ಅನು ವಾದಕರು ಅಲ್ಲಲ್ಲಿ ತುಂಬ ಶ್ರಮವಹಿಸಿದ್ದಾರೆಂಬುದನ್ನು ಒಪ್ಪಬಹುದಾದರೂ ಅವರು ನಿರೀಕ್ಷಿತ ಸಫಲತೆಯನ್ನು ಪಡೆದಿಲ್ಲ. ಜೊತೆಗೆ ಕವಿ, ಕೃತಿ, ಕಥನಕಲೆಗಳ ವಿವೇಚನೆ, ಪರಿ ಚಯ, ವಿಮರ್ಶೆ -- ಇವುಗಳು ಪೀಠಿಕಾರೂಪದಲ್ಲಿ ಇಲ್ಲ. ಇದರಿಂದ ಓದುಗರಿಗೆ ತುಂಬ ಅಲಾಭ.

ಯಾವುದೇ ಒಂದು ಗ್ರಂಥವನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದಿಸಿದರಷ್ಟೇ ಸಾಲದು. ಮೂಲ ಲೇಖಕನ, ಅದರಲ್ಲಿಯೂ ದಂಡಿಯಂಥ ಪ್ರೌಢ ಕವಿಯ ಜೀವನ–ಕಾವ್ಯಗಳ ವಿವರಗಳೂ ವಿಮರ್ಶೆಯೂ, ಮೂಲ ಸಾಹಿತ್ಯದಲ್ಲಿ ಅವುಗಳ ಸ್ಥಾನ ನಿರ್ದೇಶನವೂ ಅವಶ್ಯ ಇರಬೇಕು. ಇಲ್ಲಿ ಅಂಥ ಪರಿಶ್ರಮದ ಗೋಜಿಗೇ ಅನುವಾದಕರು ಹೋಗದಿರುವುದು ಅರ್ಥವಾಗುವುದಿಲ್ಲ.

**ಮಹಾಭಾರತದ ಪಾತ್ರಗಳು** (ಮೂಲ: ನಾನಾಬಾಯ್ ಭಟ್): ಗುಜರಾತಿ ಭಾಷೆಯಿಂದ ಹಿಂದಿ ಭಾಷೆಗೆ ಅನುವಾದವಾದ ಕೃತಿಯ ಕನ್ನಡ ಅನುವಾದವಿದು (ಅನು: ಪಿ. ವೆಂಕೋಬರಾವ್). ಇದರಲ್ಲಿ ಎರಡು ಭಾಗಗಳಿದ್ದು ಎರಡನೆಯ ಭಾಗದ ವಿಮರ್ಶೆಯಷ್ಟೇ ಮುಂದೆ ಕೊಟ್ಟಿದೆ. ಮೊದಲನೆಯ ಭಾಗ ಪ್ರಕಟವಾಗಿ ವರ್ಷಗಳಾಗಿವೆ.

ಈ ಎರಡನೆಯ ಭಾಗದಲ್ಲಿ ಮಹಾಭಾರತದಲ್ಲಿ ಬರುವ ದ್ರೋಣ, ಅಶ್ವತ್ಥಾಮ, ಭೀಷ್ಮ, ಧೃತರಾಷ್ಟ್ರ ಹಾಗೂ ಶ್ರೀಕೃಷ್ಣ– ಈ ಅಯ್ದು ಪಾತ್ರಗಳ ಪರಿಚಯವಿದೆ. ಪೌರಾಣಿಕ ನೆಲಗಟ್ಟಿನ ಮೇಲೆ ನಿಂತ ಮಹಾಭಾರತ ಕಥೆ, ಕಲ್ಪನೆ, ಸನ್ನಿವೇಶ, ಘಟನೆ, ಯುದ್ಧ– ಮೊದಲಾದವುಗಳನ್ನು ಆಧುನಿಕ ಯುಗಕ್ಕೆ ಹೊಂದಿಸಿಕೊಂಡು ವಿವೇಚಿಸಲೆತ್ನಿಸಿದ್ದಾರೆ, ಮೂಲ ಲೇಖಕರು. ಈ ಪ್ರಯತ್ನ ಶ್ಲಾಘ್ಯವಾದರೂ ಕೆಲವು ಕಡೆ ತುಂಬ ಆಭಾಸವಾಗಿ ತೋರುತ್ತದೆ.

ಪುಸ್ತಕದ ಒಟ್ಟು ರಚನೆ ಪೂರ್ವಗ್ರಹಪೀಡಿತವಾಗಿರುವಂತೆ ಕಾಣುತ್ತದೆ. ಒಂದು ವರ್ಗದ ಮೇಲ್ಮೆಯನ್ನೇ ಎತ್ತಿ ಹಿಡಿದು ಅದೇ ಸರಿಯೆಂದು ಸಾರುವ ಹಟವೂ ಕಂಡು ಬರುತ್ತದೆ. ಈ ಕೆಲವು ವಾಕ್ಯಗಳ ಮಾದರಿ ಮೇಲಿನ ಮಾತನ್ನು ಸಮರ್ಥಿಸುತ್ತದೆ:

> ಬ್ರಾಹ್ಮಣ ಪುತ್ರ ಯಾರೇ ಆಗಿದ್ದರೂ ನನಗೆ ವಂದನೀಯನೆ (14)
> ಬ್ರಾಹ್ಮಣ ಜೀವನದೊಡನೆ ಅಖಿಲ ವಿಶ್ವ ಸಾಮ್ರಾಜ್ಯವನ್ನೇ ತೂಗಿ ನೋಡಿದರೂ ಅದಕ್ಕೆ ಇದು (ರಾಜ್ಯ) ಸಮವೆನ್ನಿಸದು (19)
>
> ನಿನ್ನಂತಹ (ದ್ರುಪದ) ನಾಯಿಗಳು ಬೊಗಳುತ್ತಲೇ ಇರುತ್ತವೆ....ನಿಮ್ಮಂತಹ ಬ್ರಾಹ್ಮಣರು ನನ್ನ ಸ್ನೇಹದ ಯಾಚನೆ ಮಾಡಲು ಬರಬೇಕೆ? (19)
> ಜ್ಞಾನಕ್ಕೆ ಬ್ರಾಹ್ಮಣ ಆಗರವಿದ್ದ ಹಾಗೆ (20)
> ಬ್ರಾಹ್ಮಣರು ಪ್ರಸನ್ನರಾದರೆ ಲೋಕ ಕಲ್ಯಾಣ (23)

–ಇತ್ಯಾದಿ.

ಅಲ್ಲದೆ ಈ (ಮೂಲ) ಪುಸ್ತಕ ಮೂಲಭಾರತದ ಅನುವಾದವೂ ಅಲ್ಲ, ಕಥೆಗೆ ಕಥೆಯೂ ಅಲ್ಲ, ಕಾದಂಬರಿಗೆ ಕಾದಂಬರಿಯೂ ಅಲ್ಲ. ಮೂಲಭಾರತ ವಿಮರ್ಶೆಯಂತೂ ಮೊದಲೇ ಅಲ್ಲ. ಹೀಗಾಗಿ ಇದೊಂದು ಬಗೆಯ ವಿಚಿತ್ರ ರಚನೆ. ಇನ್ನು ಕನ್ನಡ ಅನುವಾದವಂತೂ ಕುಲಗೆಟ್ಟು ಹೋಗಿದೆ. ಮೊದಲಿಗೇ ಕಣ್ಣು ಕುಕ್ಕುವುದು ಮುರಿದ ಮೊಳೆಗಳ ಹಾಗೂ ಮುದ್ರಣ ಸ್ಖಾಲಿತ್ಯಗಳ ಆಸದಳ ಹಾವಳಿ. ಎರಡನೆಯದಾಗಿ ಇಲ್ಲಿನ ಭಾಷೆ, ಶೈಲಿ ಓದುಗನನ್ನು ಜಿಲ್ಲುಂ ಬೆರಗಾಗಿಸುತ್ತದೆ. ಹೆಕ್ಕಿದಲ್ಲಿ ಸಿಕ್ಕುವ 'ಸಿಕ್ಕಾಪಟ್ಟೆ' ಪ್ರಯೋಗವಾಗಿರುವ ಕೆಲವು ಶಬ್ದಗಳು ಇಂತಿವೆ: ಚಿಡಾಯಿಸಿದ್ದರಿಂದ (2) ಅಲಕ್ಶಾಗಿದ್ದೀರಿ (2) ವರಾಂಡದಲ್ಲಿ (1) ಬಾಯಿ ಇಂದ (3) ಚರಿತಾರ್ಥ (4) ತರಹಾವಾರಿ (5) ಒಳ್ಳೊಯ (5) ಆದಾಗ್ಯೂ (6) ಒಳ್ಳೇಯ (7) ಘನಿಷ್ಟ (12) ಶಭಾಸ್–ಶಾಭಾಶ್ (16) ಅಂತಸ್ಥನ್ನು (19) ಧನುಪಜ್ಞನಾಗ (21) ಸುಸ್ವಾದರು (40) ಸ್ನಾತಕಿ (35) – ಇತ್ಯಾದಿ.

ಕೆಲವು ಕಡೆ ಒಂದೇ ಶಬ್ದದ ಎರಡೆರಡು ರೂಪಗಳಿರುತ್ತವೆ; ಕೃಪಿಯೆ–ಕೃಪಿ– ಕೃಪೀ – ಈ ಮೂರೂ ರೂಪಗಳು ಮೊದಲನೆಯ ಪುಟದಲ್ಲೇ ಪ್ರಯೋಗವಾಗಿವೆ. 'ಶಾಂತನು ಮಹಾರಾಜ' ಎಂದೇ ಉದ್ದಕ್ಕೂ ಉಪಯೋಗವಾಗಿದೆ: ಪಂಪ ಭಾರತದಲ್ಲಿ ಶಂತನು ಎಂದಿದೆ.

ಪದವಿಭಾಗ ಅನೇಕ ಕಡೆಗಳಲ್ಲಿ ಸರಿಯಾಗಿಲ್ಲ: ಬಾಯಿ ಇಂದ (3), ಮಾತನಾಡ–ಬೇಕಾಗಿದೆ (9), ಉಚಿತ–ವಾದದ್ದನ್ನೆ (242) ಇತ್ಯಾದಿ.

**ಕವಿ ಭಟ್ಟನಾರಾಯಣ** (ಎಂ. ಜಿ. ನಂಜುಂಡಾರಾಧ್ಯ): ಸಂಸ್ಕೃತ ಭಾಷೆಯ ಶ್ರೇಷ್ಠ ನಾಟಕಕಾರರಲ್ಲಿ ಒಬ್ಬನೆಂದು ಮಾನ್ಯನಾದ ಭಟ್ಟನಾರಾಯಣನ ಏಳು ಅಂಕಗಳ ವೇಣೀಸಂಹಾರ ನಾಟಕದ ವಿಸ್ತಾರವಾದ ಪರಿಚಯ ಈ ಕಿರುಹೊತ್ತಗೆಯಲ್ಲಿದೆ.

ಇದರಲ್ಲಿ ಕವಿಯ ಕಾಲ ದೇಶ ಮತಗಳನ್ನು ಕುರಿತು ಒಂದು ಅಡಕವಾದ ಪ್ರವೇಶಿಕೆಯಿತ್ತು ನಾಟಕದ ಸಾರವನ್ನು ಸಂಗ್ರಹಿಸಿಕೊಟ್ಟಿದೆ. ಅನಂತರ ನಾಟಕದ ಪಾತ್ರಚಿತ್ರಣದಲ್ಲಿನ ಗಮನಾರ್ಹ ಅಂಶಗಳನ್ನೂ, ನಾಟಕದಲ್ಲಿ ಮೂಲಭಾರತದ ವಸ್ತುವನ್ನು ಅಳವಡಿಸಿಕೊಂಡಿರುವ ಕ್ರಮದ ಔಚಿತ್ಯವನ್ನೂ ವಿವೇಚಿಸಿದ್ದಾರೆ. ರಸಪ್ರತಿಪಾದನೆಯಲ್ಲಿ ಕವಿಯ ಶಕ್ತಿಯ ಪ್ರದರ್ಶನ, ಓಜಸ್ವಿಯಾದ ಶೈಲಿಯ ವೈಶಿಷ್ಟ್ಯ, ಹಾಗೂ ಅವನ ಸೊಗಸಾದ ಅಣಿಮುತ್ತಿನಂಥ ನುಡಿಕಟ್ಟುಗಳನ್ನೂ ತಿಳಿಸಿಕೊಟ್ಟಿದ್ದಾರೆ.

ಇವೆಲ್ಲಕ್ಕೂ ಮಿಗಿಲಾಗಿ ಈ ಹೊತ್ತಗೆಯ ಕಡೆಯ ಆರು ಪುಟಗಳಲ್ಲಿ ವೇಣೀಸಂಹಾರದ ಪದ್ಯಗಳನ್ನೂ ಹಾಗೂ ಅದಕ್ಕೆ ಸಮಾನವಾದ ಇಲ್ಲವೇ ಅವೇ ಮೂಲವಾಗಿರುವ ಕನ್ನಡದ ಕಾವ್ಯಗಳಾದ ವಿಕ್ರಮಾರ್ಜುನ ವಿಜಯ ಹಾಗೂ ಸಾಹಸಭೀಮ ವಿಜಯದ ಪದ್ಯಗಳನ್ನೂ ಕೊಟ್ಟಿರುವುದು ಕನ್ನಡ ಸಾಹಿತ್ಯದ ವಿಮರ್ಶಕರಿಗೆ ಬಹುಮುಖ್ಯವಾದ ಭಾಗ. ವಾಸ್ತವವಾಗಿ ಲೇಖಕರು ಈ ಭಾಗವನ್ನು ಇನ್ನೂ ವಿಶದವಾಗಿ ತೌಲನಿಕ ದೃಷ್ಟಿಯಿಂದ ಕನ್ನಡ ಕವಿಗಳು ಸ್ವೀಕರಣದಲ್ಲಿ ತೋರಿರುವ ಸ್ವೋಪಜ್ಞತೆಯನ್ನು ನಿರೂಪಿಸಿದ್ದಲ್ಲಿ ಗ್ರಂಥದ ಉಪಯುಕ್ತತೆ ಇನ್ನೂ ಹೆಚ್ಚುತ್ತಿತ್ತು. ಇದೇನೇ ಇದ್ದರೂ, ಪಂಪರನ್ನರ ಕಾವ್ಯಗಳನ್ನು ಅಭ್ಯಾಸಮಾಡುವ ಪ್ರೌಢ ವಿದ್ಯಾರ್ಥಿಗಳಿಗೆ ಈ ಕಿರುಹೊತ್ತಗೆಯ ಸಹಾಯವಿದ್ದೇ ಇದೆ.

**ಶಿಲಪ್ಪಧಿಕಾರಂ** (ದಕ್ಷಿಣಾಮೂರ್ತಿ): ಮಣಿಮೇಖಲೈ, ಜೀವಕ ಚಿಂತಾಮಣಿ, ಕುಂಡಲಕೇಶಿ, ವಳಯಾಪತಿ, ಮತ್ತು ಶಿಲಪ್ಪಧಿಕಾರಂ ಎಂಬ ಅಯ್ದು ಕಾವ್ಯಗಳು ತಮಿಳು ಸಾಹಿತ್ಯದಲ್ಲಿ ಪಂಚ ಕಾವ್ಯಗಳೆಂದು (ಐಂಪೆರುಂ ಕಾವ್ಯಂಗಳ್ = ಅಯ್ದು ಮಹಾಕಾವ್ಯಗಳು) ವಿಖ್ಯಾತವಾಗಿವೆ.

ಇವುಗಳಲ್ಲಿ ಒಂದಾದ ಶಿಲಪ್ಪಧಿಕಾರಂ ಮಹಾಕಾವ್ಯವನ್ನು ಈ ಹೊತ್ತಗೆಯಲ್ಲಿ ಪರಿಚಯಿಸಿದ್ದಾರೆ. ತಮಿಳು ಸಾಹಿತ್ಯದಲ್ಲಿ ಅದು ತುಂಬ ಜನಪ್ರಿಯವಾದ ಕಾವ್ಯ. ಸಂಘೋತ್ತರ ಕಾಲಕ್ಕೆ ಸೇರಿದ ಈ ಕಾವ್ಯವನ್ನು ಬರೆದ ಕವಿ ಇಳಂಗೋ ಅಡಿಗಳ್. ಚೇರ ರಾಜವಂಶದ ಈ ಕವಿ ಜೈನ ಮತದವನಾದರೂ ಕಾವ್ಯ ಕೇವಲ ಜೈನಮತೀಯ ಕಾವ್ಯ ಇಲ್ಲವೇ ಪುರಾಣ ಆಗಿರದೆ, ಎಲ್ಲ ಧರ್ಮೀಯರೂ ಓದಿ ಮೆಚ್ಚಬಹುದಾದ ಸಾರ್ವಕಾಲಿಕ ಕಾವ್ಯ ರಚಿಸಿದ್ದಾರೆ.

ಹಾಗೆ ನೋಡುವುದಾದರೆ ಜೈನಧರ್ಮ ಪ್ರಚಾರದ ಅಂಶವೇ ಇದರಲ್ಲಿ ಇಲ್ಲ ವೆಂಬಷ್ಟು ಕಡಮೆ ಇದೆ. ಈ ಹೇಳಿಕೆಯ ಸತ್ಯವನ್ನು ಮನಗಾಣಬೇಕಾದರೆ ಕನ್ನಡದ ಜೈನಕವಿಗಳ ಕಾವ್ಯಗಳೊಡನೆ ಈ ಕಾವ್ಯವನ್ನೂ ಹೋಲಿಸಿ ನೋಡಬೇಕು. ಪಂಪನ ವಿಕ್ರಮಾರ್ಜುನ ವಿಜಯ ಹಾಗೂ ರನ್ನನ ಸಾಹಸಭೀಮ ವಿಜಯ ಕಾವ್ಯಗಳು ಹೊರತು ಉಳಿದೆಲ್ಲ ಕಾವ್ಯಗಳಲ್ಲೂ, ಕಡೆಗೆ ಈ ಇಬ್ಬರು ಕವಿಗಳ ಇನ್ನೆರಡು ಕೃತಿಗಳಲ್ಲೂ ಜೈನ ಧರ್ಮದ ಹಿರಿಮೆಯನ್ನು ಸಾರಿ ಸ್ಥಾಪಿಸುವ ಮನೋಧರ್ಮ ಕಂಡುಬರುತ್ತದೆ. ಆದರೆ ತಮಿಳಿನ ಈ ಜೈನಕವಿ ಬರೆದ ಕಾವ್ಯ ಎಷ್ಟು ಧರ್ಮಾತೀತವಾದ ಕೇವಲ ಶುದ್ಧ ಕಾವ್ಯ ವಾಗಿ ನಿಲ್ಲುತ್ತದೆಯೆಂದರೆ ಕನ್ನಡದ ಜೈನಕವಿಗಳೂ ಹೀಗೆ ಕಾವ್ಯಗಳನ್ನು ರಚಿಸಬಾರ ದಿತ್ತೇ ಎನಿಸುತ್ತದೆ.

ಶಿಲಪ್ಪಧಿಕಾರಂ ಪ್ರೇಮಕಾವ್ಯ, ಬಾಣನ ಕಾವ್ಯದಂತೆ (ಕಾದಂಬರಿ). ಈ ಕಾವ್ಯದಲ್ಲಿ ಕಡೆಕಡೆಗೆ ಕಾಣಿಸಿಕೊಳ್ಳುವ ಕ್ರೂರ ದುರಂತತೆಯ ತೀವ್ರ ಪರಿಣಾಮಕ್ಕೆ ಅಣಿಗೊಳಿಸು ವಂತೆ ಕಾವ್ಯದ ಮೊದಲರ್ಧ ಭಾಗದ ಶೃಂಗಾರದ ವೈಭವ ವರ್ಣಿತವಾಗಿದೆ. ಸೊಗ ಸಾದ ಈ ದೇಸೀಯ ಕಾವ್ಯದ ವರ್ಣನಾಭಾಗ ಸಾಮಾಜಿಕ ಅಭ್ಯಾಸಕ್ಕೆ ತಕ್ಕ ಕಾವ್ಯವೂ ಆಗಿದೆ.

ಸ್ವತಃ ರಾಜಕುಮಾರನಾಗಿದ್ದು ಕಡೆಗೆ ಸಿಂಹಾಸನ ತ್ಯಾಗಮಾಡಿ ಸನ್ಯಾಸಿಯಾದ ಕವಿ ಇಳಂಗೋ ಅಡಿಗಳ್. ಆದುದರಿಂದ ಅರಮನೆ–ಗುರುಮನೆಗಳ ಬದುಕನ್ನು ಸಜೀವ ವಾಗಿ ಚಿತ್ರಿಸಿದ್ದಾನೆ. ಈ ಕಾವ್ಯದ ನಾಯಕಿ ಕಣ್ಣಗಿ ಕಡೆಯಲ್ಲಿ ಮಹಾಸತಿಯಾಗುವುದು ಬಹಳ ಮುಖ್ಯವಾದ ಅಂಶ. ಬಹುಶಃ ಜಾನಪದ ವಸ್ತುವೊಂದನ್ನು ಆಯ್ದು ಅದಕ್ಕೆ ಮಹಾಕಾವ್ಯದ ಪಟ್ಟ ಕಟ್ಟಿದಂತೆ ತೋರುತ್ತದೆ.

ಈ ತಮಿಳು ಕಾವ್ಯದ ಎಲ್ಲ ರಸದ ತಾಣಗಳನ್ನೂ ಗುರುತಿಸಲೆತ್ನಿಸಲಾಗಿದೆ ಈ ಚಿಕ್ಕ ಹೊತ್ತಗೆಯಲ್ಲಿ. ಒಂದೊಂದೂ ಮುಖ್ಯ ಪಾತ್ರವನ್ನಾಯ್ದು ಪರಿಚಯಿಸಿದ್ದಾರೆ. ತನ್ನ ಪರಿಮಿತಿಯಲ್ಲಿ ಈ ಕೃತಿ ಶಿಲಪ್ಪಧಿಕಾರಂ ಕಾವ್ಯದ ಹಿರಿಮೆಯನ್ನು ತಿಳಿಸಿಕೊಡು ತ್ತದೆ.

ವಿಮರ್ಶೆಯ ಮಾನದಂಡದಿಂದ ತಮಿಳು ಸಾಹಿತ್ಯದಲ್ಲಿ ಈ ಕಾವ್ಯದ ಸ್ಥಾನವನ್ನು ಇನ್ನೂ ಚೆನ್ನಾಗಿ ನಿರ್ದೇಶಿಸಬಹುದಿತ್ತು. ಸಾಮಾನ್ಯ ಓದುಗರಿಗೆಂದೇ ವಿಶೇಷವಾಗಿ ಸಿದ್ಧ ವಾಗುವ ಪ್ರಚಾರ ಮಾಲೆಯ ಪುಸ್ತಕವಲ್ಲಿ ಅದನ್ನು ನಿರೀಕ್ಷಿಸುವುದು ಸರಿಯಾಗದೆಂದು ತೋರುತ್ತದೆ.

**ವಾಲ್ಮೀಕಿ ಮುನಿಗಳ ಹಾಸ್ಯಪ್ರವೃತ್ತಿ:** ಉಪನ್ಯಾಸವಾಗಿ ಓದಿದ ಪ್ರಬಂಧ ವಿದು. ವಾಲ್ಮೀಕಿ ಮಹಾಕವಿ ತನ್ನ ರಾಮಾಯಣದಲ್ಲಿ ತೋರಿರುವ ಹಾಸ್ಯಪ್ರವೃತ್ತಿ ಯನ್ನು ಗುರುತಿಸುವುದು ಈ ಪ್ರಬಂಧದ ಉದ್ದೇಶ. ಈ ಉದ್ದೇಶ ಸ್ವಾಗತಾರ್ಹವೇ. ಮಾತು ಕೃತಿಗಳಲ್ಲಿ ಸೂಕ್ಷ್ಮವೂ ಅಕುಟಿಲವೂ ಆದ ಹಾಸ್ಯವನ್ನು ಗುರುತಿಸುವುದಕ್ಕೂ

ಶಿಕ್ಷಣ ಸಂಸ್ಕಾರ ಚಿತ್ತವೃತ್ತಿಗಳ ಸಿದ್ಧತೆಯು ಅಗತ್ಯವಿರಬೇಕಾಗಬಹುದು. ಸುಮಾರು ಮುವ್ವತ್ತು ಪುಟಗಳ ಈ ಪುಸ್ತಿಕೆಯಲ್ಲಿ ರಂಗನಾಥಶರ್ಮರು ಹಾಸ್ಯದ ಭಾಗ ಇಲ್ಲವೆ ಪ್ರಸಂಗಗಳೆಂದು ರಾಮಾಯಣದಿಂದ ಕೆಲವನ್ನು ಉದಾಹರಿಸಿದ್ದಾರೆ.

ಆದರೆ ಅವುಗಳಲ್ಲಿ ಅರೆಪಾಲು ಹಾಸ್ಯದ ಲೇಪವೂ ಇಲ್ಲದ ಗಂಭೀರ ಸಂದರ್ಭಗಳಾಗಿರುವುದರಿಂದ ಲೇಖಕರು ಆಯ್ಕೆಯಲ್ಲಿ ವಿವೇಕ ಹಾಗೂ ಔಚಿತ್ಯ ತೋರಿಲ್ಲವೆಂದು ಸ್ಪಷ್ಟವಾಗುತ್ತದೆ. ಋಷಿಗಳಿತ್ತ ಪಾರಿತೋಷಕ, ಬ್ರಾಹ್ಮಣರ ಲೋಭ, ಹೊಟ್ಟೆಬಾಕ ವಟುಗಳು, ದಶರಥನ ಹಾಸ್ಯಪ್ರವಣತೆ, ಕಡೆಗೂ ಎದ್ದ ಕುಂಭಕರ್ಣ – ಮೊದಲಾದ ಹಲವಾರು ಉಪಶೀರ್ಷಿಕೆಗಳಡಿಯಲ್ಲಿ ಬರುವ ವರ್ಣನೆಯಲ್ಲಿ ಹಾಸ್ಯವನ್ನು ಪ್ರಯತ್ನಪೂರ್ವಕವಾಗಿ ಪಂಜು ಹಚ್ಚಿ ಹುಡುಕಬೇಕು. ಅಲ್ಲದೆ ಲೇಖಕರು ಅನಾವಶ್ಯಕವಾಗಿ ವಿವರಣೆಯನ್ನು ಜಗ್ಗಿ ಜಾಳಾಗಿಸಿಬಿಡುತ್ತಾರೆ. ಅತಿಯಾದ ಮಾತುಗಳ ಮರೆಯಲ್ಲಿ ಬರಬಹುದಾಗಿದ್ದ ಹಾಸ್ಯವೂ ಜಾರಿ ಸೋರಿಬಿಡುತ್ತದೆ. ಇದೊಂದು ಶುಷ್ಕ ಪ್ರಯತ್ನವಾದುದರಿಂದ ಇನ್ನೂ ಹೆಚ್ಚಿನ ವಿಮರ್ಶೆ ಅನಾವಶ್ಯಕ. ಇದನ್ನು ಪುಸ್ತಕವೆನ್ನುವುದಕ್ಕಿಂತ ಪ್ರಚಾರ ಪುಸ್ತಿಕೆ ಎಂದು ಕರೆಯಬಹುದು.

